॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೧೨



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1948

# ಮುನ್ನುಡಿ

ವಿವೇಕ ಮತ್ತು ವೈರಾಗ್ಯ ಇವು ದೈವಸಾಕ್ಷಾತ್ಕಾರಕ್ಕೆ ಅತ್ಯವಶ್ಯಕವಾದವುಗಳು. ಇವು ಪರಂಪರೆಯಾಗಿ ಬರುವ ಆಸೆ, ಚಾಪಲ್ಯ ಇವುಗಳನ್ನು ಹೋಗಲಾಡಿಸುವುವು. ಆಸೆ, ಚಪಲತೆಗಳನ್ನು ಬಿಡದೆ ದೇವರು ದೇವರು ಎನ್ನುತ್ತಾ ಓಡಾಡಿದರೆ ಪ್ರಯೋಜನವಿಲ್ಲ. ಮೊದಲು ದೇಹದ ದೇವಾಲಯವನ್ನು ಶುದ್ಧಿಗೊಳಿಸಬೇಕು. ಕಶ್ಮಲಭಾವವನ್ನು ಗುಡಿಸಿ ಆಚೆಗೆ ಎಸೆಯಬೇಕು. ಹೃದಯದಲ್ಲಿ ಭಕ್ತಿ, ಜ್ಞಾನಗಳ ನಂದಾದೀಪವನ್ನು ಹೊತ್ತಿಸಿಡಬೇಕು. ಆಮೇಲೆ ಇಷ್ಟದೇವರನ್ನು ಪ್ರತಿಷ್ಠಿಸಿ, ಅಲ್ಲಿಯೇ ಸಕಲ ವಿಧವಾದ ಉಪಚಾರಗಳನ್ನೂ ಪರಮಾತ್ಮನಿಗೆ ಸಲ್ಲಿಸಬೇಕು. ಬಾಯಿಯಿಂದ ಮಾಡುವ ಪ್ರಾರ್ಥನೆ, ಅಷ್ಟು ಕಾರ್ಯಕಾರಿಯಾಗಲಾರದು. ಮನಸಾ ನಡೆಸಿದ ಪ್ರಾರ್ಥನೆಗೆ ದೇವರಲ್ಲಿ ವಿಶೇಷ ಬೆಲೆಯುಂಟು. ಈ ವಿಧವಾದ ಭಗವದರ್ಚನೆಗೆ ಮಡಿ, ಮೈಲಿಗೆ, ಉಡಿಗೆತೊಡಿಗೆಗಳು, ಜಾತಿಭೇದಗಳು ಅನವಶ್ಯಕ. ಆದರೆ ವಿವೇಕ ವೈರಾಗ್ಯಾದಿಗಳಿಗೆ ಇವು ಸಹಾಯಕವಾಗುವುದಾದರೆ, ಅವು ಇದ್ದರೂ ತಪ್ಪಲ್ಲ. ಈ ಅಭಿಪ್ರಾಯವನ್ನೇ ಇಲ್ಲಿ ಪ್ರಕಟವಾಗಿರುವ ಶಿವರಹಸ್ಯ ಪಂಚಮಾಂಶದ ಕಥಾಭಾಗದಿಂದ ನಾವು ತಿಳಿಯಬಹುದು. ಈ ಗ್ರಂಥದ ಇಪ್ಪತ್ತನೆಯ ಅಧ್ಯಾಯದಲ್ಲಿ ಕಂಡುಬರುವ ಭಿಲ್ಲನ ನಡತೆಯು ಮೇಲಿನ ಅಂಶಗಳಿಗೆ ಮಾದರಿಯಾಗಿರುವುದು. ಶಿವನ ಪರೀಕ್ಷೆಯಲ್ಲಿ ಸುಲಭವಾಗಿ ಉತ್ತೀರ್ಣನಾಗುವನೆಂದರೆ ಇಲ್ಲಿ ಆ ಭಿಲ್ಲನೇ. ಜಾತಿಯಿಂದ ಭಿಲ್ಲನಾಗಿದ್ದರೂ, ವೃತ್ತಿಯಿಂದ ಪ್ರಾಣಿಹಿಂಸಕನಾಗಿದ್ದರೂ, ಆಚಾರದಲ್ಲಿ ಕೊಳಕನಾಗಿದ್ದರೂ, ತನ್ನ ವೈರಾಗ್ಯ ಅಥವಾ ಸ್ಥಿರಮನಸ್ಸಿನಿಂದ ಪರಶಿವನ ಹೃದಯದಲ್ಲಿ ತಾನು ಸ್ಥಾನ ಪಡೆದನು. ಇಂತಹ ಭಕ್ತಿಮಾರ್ಗವನ್ನು ಸುಲಭವಾಗಿ ವಿವರಿಸುವ ಇತಿಹಾಸಗಳು ಇಲ್ಲಿ ಬಹಳವಾಗಿವೆ.

ಇತಿಹಾಸಪ್ರಧಾನವಾದ ಈ ಶಿವರಹಸ್ಯದಲ್ಲಿ, ಕೇವಲ ನಾಸ್ತಿಕರಿಗೂ ಆಸ್ತಿಕತೆಯನ್ನು ಉಂಟುಮಾಡುವ ಸನ್ನಿವೇಶಗಳು ಬಹಳವಾಗಿ ಬರುತ್ತವೆ. ಈಶ್ವರಭಕ್ತನು ಸರ್ವಶ್ರೇಷ್ಠನು. ಆತನಿಗೆ ಇತರ ಸಕಲ ದೇವತೆಗಳೂ ಆಡಿಯಾಳುಗಳು. ಅವನಿಗೆ ದೊರಕದ ವಸ್ತುಗಳಿಲ್ಲ, ಸಿಲುಕದ ಲೋಕಗಳಿಲ್ಲ, ಎದುರಿಸುವ ಶತ್ರುಗಳಿಲ್ಲ ಎಂಬ ತತ್ತ್ವವನ್ನು ಸಾರುವುದೇ ಈ ಗ್ರಂಥಕಾರರ ಮುಖ್ಯ ಉದ್ದೇಶ.

ಆದರೆ ಅಲ್ಲಲ್ಲಿ ವ್ಯಾಕರಣಕ್ಕೆ ವಿರುದ್ಧವಾದ ಪದಪ್ರಯೋಗಗಳೂ, ಅನನ್ವಿತವಾಗುವ ವಾಕ್ಯಸರಣಿಗಳೂ ಕಂಡುಬರುತ್ತವೆ. ಸಹಸ್ರಾರು ಸಂಖ್ಯೆಯಲ್ಲಿ ಪದ್ಯರಚನೆ ಮಾಡಿರುವ ಮಹಾತ್ಮರಲ್ಲಿ ಅದು ದೋಷವೆನಿಸಲಾರದು. ಈ ಗ್ರಂಥದಲ್ಲಿ ಭಿನ್ನ ಭಿನ್ನ ವೃತ್ತಗಳಿಂದ ಅಲ್ಲಲ್ಲಿ ಬರುವ ಈಶ್ವರಸ್ತುತಿಪರವಾದ ಸುಲಭ ಶೈಲಿಯ ಶ್ಲೋಕಗಳನ್ನು ಓದುವುದೇ ವಾಚಕರಿಗೆ ಒಂದು ಆನಂದವಾದೀತು.

ಸನ್ಮಾರ್ಗದರ್ಶಕವಾದ ಪ್ರಾಚೀನ ಗ್ರಂಥಜ್ಯೋತಿಗಿದ್ದ ಆವರಣಗಳನ್ನೆಲ್ಲಾ ತೆಗೆಸಿಹಾಕಿ, ಮಲಿನವಾಗುತ್ತಿದ್ದ ಆ ಗ್ರಂಥಗಳ ಬೆಳಕನ್ನು ಪ್ರಪಂಚಕ್ಕೇ ಒದಗಿಸಿ ಕೊಟ್ಟ ಕರ್ಣಾಟಕಸಿಂಹಾಸನಾಧೀಶ್ವರರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುಗಳವರಿಗೂ ಅವರ ಆಪ್ತ ಕುಟುಂಬವರ್ಗಕ್ಕೂ ಜಗದೀಶ್ವರನು ಇತೋಪ್ಯತಿಶಯವಾದ ಸಕಲ ಸನ್ಮಂಗಳಗಳನ್ನೂ ಅನುಗ್ರಹಿಸಿ ರಕ್ಷಿಸಲೆಂದು ಭಗವಂತನನ್ನು ನಾನು ಪ್ರಾರ್ಥಿಸುತ್ತೇನೆ.

ಶ್ರೀ ಸರ್ವಧಾರಿ ಸಂವತ್ಸರದ
ಆಶ್ವಯುಜ ಶುದ್ಧ ಪ್ರತಿಪತ್
ಭಾನುವಾರ
3—10—1948

ಸಜ್ಜನವಿಧೇಯ,
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**
ಆಸ್ಥಾನವಿದ್ವಾನ್, ಮೈಸೂರು.

# ಶ್ರೀ ಶಿವರಹಸ್ಯದಲ್ಲಿ ಭರ್ಗನಾಮಕ ಐದನೆಯ ಅಂಶದ ವಿಷಯಾನುಕ್ರಮಣಿಕಾ

ಅಧ್ಯಾಯಗಳು ೧—೨೦

## ಹನ್ನೊಂದನೆಯ ಅಧ್ಯಾಯ



## ಹನ್ನೆರಡನೆಯ ಅಧ್ಯಾಯ



## ಹದಿಮೂರನೆಯ ಅಧ್ಯಾಯ



## ಹದಿನಾಲ್ಕನೆಯ ಅಧ್ಯಾಯ



## ಹದಿನೈದನೆಯ ಅಧ್ಯಾಯ



## ಹದಿನಾರನೆಯ ಅಧ್ಯಾಯ

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಪ್ರಥಮೋಽಧ್ಯಾಯಃ

**ಶುಂಡಾದಂಡಾಲಿಮಾಲಾವಿಲಸದುರುಮಹಾಫುಲ್ಲಪದ್ಮೈಕನಾಲಂ**
**ಶೂಲ್ಯಂಕಾಸಕ್ತಿಲೋಲಂ ಪದನತವಿಬುಧಗ್ರಾಮಸಂಗ್ರಾಮಲೀಲಂ ।**
**ವಂದೇ ವೇತಂಡಗಂಡಸ್ಫುರದರುಣರಜೋದ್ಭಾಸಿಸಿಂಧೂರಫಾಲಂ**
**ಫಾಲಾಕ್ಷಪ್ರಥಮಪ್ರಸೂತಿಮತಸೀಪುಷ್ಪೈಕಮಾಲಂ ಸದಾ ॥೧॥**

**ತತಃ ಕುಲಪತಿರ್ವೃದ್ಧಃ ಶೌನಕೋ ನಾಮ ಭೂಸುರಃ ।**
**ಪಪ್ರಚ್ಛ ವಿನಯೋಪೇತಂ ಲೋಮಹರ್ಷಣಿಮಾದರಾತ್ ॥೨॥**

### ಶ್ರೀಶಿವರಹಸ್ಯದಲ್ಲಿ ಪಂಚಮಾಂಶದಲ್ಲಿ ಮೊದಲನೆಯ ಅಧ್ಯಾಯ

ಮಹಾಗಣಪತಿಯು ದಂಡಾಕಾರವಾಗಿರುವ ತನ್ನ ಸೊಂಡಲಿನಲ್ಲಿ, ಕಮಲದ ಸೌರಭಕ್ಕೋಸ್ಕರ ಮುತ್ತಿಕೊಂಡಿರುವ ಭ್ರಮರಪಂಕ್ತಿಗಳಿಂದ ಪ್ರಕಾಶಿಸುವ ದೊಡ್ಡ ಕಮಲದ ಹೂವನ್ನು ನಾಳಸಹಿತವಾಗಿ ಧರಿಸಿರುವನು. ಶೂಲಾಯುಧಧಾರಿಯಾದ ಪರಮೇಶ್ವರನ ತೊಡೆಯಮೇಲೆ ಕುಳಿತು ಕ್ರೀಡಿಸುವುದರಲ್ಲಿ ಆಸಕ್ತಿಯುಳ್ಳವನು. ತನ್ನ ಪಾದಕ್ಕೆ ನಮಸ್ಕರಿಸುವ ಪಂಡಿತರ ಸಮೂಹಗಳ ವಾಗ್ವಾದವೆಂಬ ಯುದ್ಧದಲ್ಲಿ ಯಾವಾಗಲೂ ಅಭಿರುಚಿಯುಳ್ಳವನು. ತನ್ನ ಸೊಂಡಲಿನಲ್ಲಿಯೂ ಮತ್ತು ಗಂಡಸ್ಥಳದಲ್ಲಿಯೂ ಪ್ರಕಾಶಿಸುತ್ತಿರುವ ಕೆಂಪಾದ ರಜಸ್ಸುಗಳಿಂದಲೂ ಮತ್ತು ಹಣೆಯಲ್ಲಿ ಹೊಳೆಯುತ್ತಿರುವ ಚಂದ್ರನಿಂದಲೂ ವಿರಾಜಿಸುತ್ತಿರುವನು. ಫಾಲನೇತ್ರನೆನಿಸಿದ ಪರಮೇಶ್ವರನ ಹಿರಿಯ ಮಗನು. ಎಳ್ಳಗಸೆಯ ಹೂಗಳ ಮಾಲೆಯಿಂದ ಶೋಭಿಸುತ್ತಿರುವವನು. ಇಂತಹ ದಿವ್ಯಶರೀರವುಳ್ಳವನಾದ ವಿಘ್ನೇಶ್ವರನನ್ನು ಸರ್ವವಿಘ್ನನಿವೃತ್ತ್ಯರ್ಥವಾಗಿ ಸದಾ ನಮಸ್ಕರಿಸುವೆನು. ॥೧॥

ಒಂದು ದಿನ ವೃದ್ಧನೂ, ಕುಲಪತಿಯೂ ಆದ ಶೌನಕನೆಂಬ ಬ್ರಾಹ್ಮಣೋತ್ತ

|| ಶೌನಕ ಉವಾಚ ||

ಮಹೋದಾರಹಾರೌಘವಿಶ್ರಾಂತಿಸಾರಾ
ಹರಾಸಾರಮಾಹಾತ್ಮ್ಯಧಾರಾಸುಧಾಧೀರಸಾರಾಃ ।
ಸಮಾಕರ್ಣಯಾಸ್ಮಾನ್ನ ಕಸ್ಮಾದಹೋ ತ್ವಾಂ
ಪ್ರಪನ್ನಾವಿಪನ್ನಾ ಭವಾಬ್ಧೌ ಚರಂತಃ ||೩||

ಕಥಾಃ ಶಾಂಭವೀಃ ಸರ್ವಪಾಪಹಾರೀಃ ।
ಸಮಾಕರ್ಣಯಾಸ್ಮಾನ್ಪ್ರಭೋ ಭೂಸುರೇಂದ್ರ ||೪||

ಇತಿ ತದ್ವಾಕ್ಯಮಾಕರ್ಣ್ಯ ಭಸ್ಮರುದ್ರಾಕ್ಷಭೂಷಣಃ ।
ಸೂತಃ ಪ್ರಾಂಜಲಿರಾಹೇದಂ ಧ್ಯಾನನ್ನೀಶಾನಮವ್ಯಯಂ ||೫||

ಮನು ವಿನಯ ಯುಕ್ತನಾಗಿ ಸೂತಮಹರ್ಷಿಯನ್ನು ಕುರಿತು ಆದರದಿಂದ ಹೀಗೆ ಪ್ರಶ್ನೆ ಮಾಡಿದನು. ||೨||

ಸ್ವಾಮಿ, ಲೋಮಹರ್ಷಣ ಮುನಿಯೆ ! ಈ ಸಂಸಾರವೆಂಬ ಸಮುದ್ರದಲ್ಲಿ ಸಂಚರಿಸುತ್ತಾ ಅನೇಕ ವಿಪತ್ತುಗಳಿಗೊಳಗಾಗಿರುವ ನಾವು ದೈವವಶದಿಂದ ನಿಮ್ಮ ದರ್ಶನವನ್ನು ಈಗ ಹೊಂದಿರುವೆವು. ಮಹಾನುಭಾವನೇ ! ಮಹಾ ಪಾಪಗಳನ್ನೂ ನಾಶಮಾಡುವುದರಲ್ಲಿ ಸಮರ್ಥನಾದ ಆ ಪರಮೇಶ್ವರನ ಅಪಾರವಾದ ಮಹಿಮೆಯ ಅಮೃತ ಸಮಾನವಾದ ಸಾರವನ್ನು ಸಮರ್ಥನಾದ ನೀನು ನಮಗೆ ದಯೆಯಿಂದ ತಿಳಿಸು. ||೩||

ಆ ಪರಶಿವನ ಕಥೆಗಳು ಸಕಲಪಾಪಗಳನ್ನೂ ನಾಶಮಾಡುವುವು. ಎಲೈ ಬ್ರಾಹ್ಮಣೋತ್ತಮನಾದ ಪ್ರಭುವೇ ! ಅಂತಹ ಪರಶಿವನ ದಿವ್ಯವಾದ ಮಹಿಮೆಗಳನ್ನು ತಿಳಿಸುವ ಕಥೆಗಳನ್ನು ದಯೆಯಿಟ್ಟು ನಮಗೆ ತಿಳಿಸುವನಾಗು ಸ್ವಾಮಿ ; ಎಂದು ಶೌನಕಮುನಿಯು ಲೋಮಹರ್ಷಣ ಮುನಿಯನ್ನು ಪ್ರಾರ್ಥಿಸಿದನು. ||೪||

ಶೌನಕನು ಹೇಳಿದ ಮಾತುಗಳನ್ನು ಕೇಳಿ, ಭಸ್ಮ, ರುದ್ರಾಕ್ಷಿ, ಇವುಗಳಿಂದಲಂಕರಿಸಿಕೊಂಡಿರುವ ಸೂತಮುನಿಯು ಕೈಜೋಡಿಸಿ ನಾಶರಹಿತನಾದ ಆ ಜಗದೀಶ್ವರನನ್ನು ಧ್ಯಾನಿಸುತ್ತಾ ಹೀಗೆಂದನು. ||೫||

॥ ಸೂತ ಉವಾಚ ॥

ಶಾಂಗಾಂಗಸಂಗೋಽಮಿತಪಾಪತಾಪ
ಸಂತಾಪತಪ್ತಹೃದಯಾನ್ ಸುಖಯೇನ್ನ ಚಿತ್ರಂ।
ಯೂಯಂ ತ್ರಿನೇತ್ರಪದಪಂಕಜಭಕ್ತಿಗಾತ್ರಾಃ
ಸುತ್ರಾಮಮನ್ಯಮಪಿ ಲೋಕಮತಿತ್ಯಜಂತಃ ॥೬॥

ತ್ರಿಪುಂಡ್ರರುದ್ರಾಕ್ಷಪವಿತ್ರಗಾತ್ರಾಃ
ಪಂಚಾಸ್ಯಪಂಚಾಕ್ಷರಲೋಲಚಿತ್ತಾಃ।
ಶ್ರೀರುದ್ರಪಾರಾಯಣಧೂತಪಾಪಾಃ
ಪಾತ್ರಂ ಭವಂತಃ ಕೃಪಯಾ ಮಹೇಶಿತುಃ ॥೭॥

ವಕ್ಷ್ಯೇಽಧುನಾ ಸಂಸೃತಿಬಂಧನಾಶಿನೀಂ
ಚಿತ್ರಂ ವಿಚಿತ್ರಾರ್ಥಪದಾಂ ಕಥಾಸುಧಾಂ।
ಮಹೇಶ್ವರಸ್ಯಾಪ್ರತಿಮಾಂ ವಿಮುಕ್ತಯೇ
ಶೃಣುಧ್ವಮತ್ಯುತ್ಕಟಭಕ್ತಿಮಾನಸಾಃ ॥೮॥

ಸುಖಸ್ವರೂಪನಾದ ಆ ಪರಮೇಶ್ವರನ ಅವಯವ ಸಂಬಂಧವು ಅನಂತವಾದ ಪಾಪಗಳ ತಾಪಗಳಿಂದ ಚೆನ್ನಾಗಿ ನೊಂದಿರುವ ಮನಸ್ಸುಳ್ಳವರನ್ನು (ಆ ತಾಪಗಳೆಲ್ಲವನ್ನೂ ಹೋಗಲಾಡಿಸಿ) ಸಂತೋಷಪಡಿಸುವುದು. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಮುಕ್ಕಣ್ಣನಾದ ಆ ಮಹಾದೇವನ ಅಡಿದಾವರೆಗಳ ಭಜನೆಯಲ್ಲಿಯೇ ತತ್ಪರರಾಗಿರುವ ನೀವಾದರೋ ಆ ಇಂದ್ರನ ಸ್ವರ್ಗಲೋಕ, ಮತ್ತು ಬ್ರಹ್ಮನ ಸತ್ಯಲೋಕ, ವಿಷ್ಣುವಿನ ವೈಕುಂಠಲೋಕ ಇವುಗಳನ್ನೂ ಅಪೇಕ್ಷಿಸದವರಾಗಿರುತ್ತೀರಿ. ॥೬॥

ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲೆ ಇವುಗಳ ಧಾರಣೆಯಿಂದ ಪವಿತ್ರರಾಗಿ ಯಾವಾಗಲೂ ಐದು ಮುಖವುಳ್ಳ ಆ ಮಹೇಶ್ವರನ ಶಿವಪಂಚಾಕ್ಷರ ಮಂತ್ರಜಪದಲ್ಲಿ ತತ್ಪರರಾಗಿರುವ ನೀವು ರುದ್ರಪಾರಾಯಣಾದಿಗಳಿಂದ ಪಾಪರಹಿತರಾದವರೆನಿಸಿ, ಆ ಮಹೇಶನ ದಯೆಯಿಂದ ಅವನ ಅನುಗ್ರಹಕ್ಕೆ ಪಾತ್ರರಾಗಿರುವಿರಿ. ॥೭॥

ಶೌನಕಾದಿ ಮುನಿಗಳೇ ! ಈ ಸಂಸಾರ ಬಂಧನವನ್ನು ನಾಶಪಡಿಸಿ, ಶಾಶ್ವತವಾದ ಮೋಕ್ಷವನ್ನುಂಟುಮಾಡುವ ಮತ್ತು ಚಿತ್ರವಿಚಿತ್ರವಾದ ಅರ್ಥಕೊಡುವ ಪದ

ದೇವ್ಯೈ ದೇವೇನ ಕಥಿತಾಂ ಮಹಾಪಾಪಪ್ರಣಾಶಿನೀಂ ।
ಪುರಾ ಕೈಲಾಸಶಿಖರೇ ಸುಖಾಸೀನಂ ಮಹೇಶ್ವರಂ ॥೯॥

ಪ್ರಣಮ್ಯ ಪ್ರಾಂಜಲಿಃ ಪ್ರಾಹ ಗಿರಿಜಾ ದ್ವಿಜಸತ್ತಮಾಃ ॥೧೦॥

॥ ದೇವ್ಯುವಾಚ ॥

ಭಗವನ್ಭೂತಭವ್ಯೇಶ ಪರಾತ್ಪರತರಪ್ರಭೋ ।
ಜ್ಯೋತಿರ್ಲಿಂಗಾನಿ ತೇ ದೇವ ಕಿಯಂತಿ ವದ ಮೇ ಶಿವ ॥೧೧॥

ಮಹಿಮಾ ಚ ವಿಶೇಷೇಣ ಶ್ರೋತುಮಿಚ್ಛಾಮಿ ಶಂಕರ ।
ತದಪರ್ಣಾವಚಃ ಶ್ರುತ್ವಾ ಸ್ವರ್ಣವರ್ಣೋ ಮಹೇಶ್ವರಃ ॥೧೨॥

ತ್ರಿಯಂಬಕಸ್ತದಾ ಪ್ರಾಹ ತುಷ್ಟಸ್ತಾಂ ಜಗದಂಬಿಕಾಂ ॥೧೩॥

ಗಳಿಂದ ಯುಕ್ತವಾಗಿ ಅಸದೃಶವೆನಿಸಿರುವ ಆ ಮಹೇಶ್ವರನ ಅಮೃತಸಮಾನವಾದ ಕಥೆಗಳನ್ನು ಹೇಳುವೆನು, ಕೇಳಿರಿ. ಅತ್ಯಂತ ಶ್ರದ್ಧಾಭಕ್ತಿಯುಕ್ತವಾದ ಮನಸ್ಸುಳ್ಳವರಾಗಿ ಲಾಲಿಸಿರಿ ಎಂದು ಕಥೆಗಳನ್ನು ಸೂತರು ಹೇಳತೊಡಗಿದರು. ॥೮॥

ಮಹಾಪಾಪನಾಶಕವಾದ ಈ ಕಥೆಗಳನ್ನು ಹಿಂದೆ ಪರಮೇಶ್ವರನು ಪಾರ್ವತೀ ದೇವಿಗೆ ತಿಳಿಸಿದ್ದನು. ಅದನ್ನೇ ಈಗ ನಿಮಗೆ ವಿವರಿಸುವೆನು ಕೇಳಿರಿ. ಹಿಂದೆ ಕೈಲಾಸಪರ್ವತದಲ್ಲಿ ಸುಖವಾಗಿ ಆಸನಾರೂಢನಾಗಿ ಕುಳಿತಿದ್ದ ಮಹೇಶ್ವರನಿಗೆ ಕೈ ಮುಗಿದು ನಮಸ್ಕಾರಮಾಡಿ ಗಿರಿರಾಜಕುಮಾರಿಯು ವಿನಯದಿಂದ ಹೀಗೆ ಪ್ರಾರ್ಥಿಸಿದಳು. ॥೯-೧೦॥

ಭೂತಭವಿಷ್ಯದ್ವರ್ತಮಾನಗಳನ್ನರಿಯಲು ಸಮರ್ಥನೂ, ಸರ್ವಶ್ರೇಷ್ಠನೂ ಆದ ಪ್ರಭೋ! ಮಹಾದೇವ! ನಿನ್ನ ಜ್ಯೋತಿರ್ಲಿಂಗಗಳೆಷ್ಟು ವಿಧ? ಅದನ್ನು ನನಗೆ ತಿಳಿಸುವವನಾಗು. ॥೧೧॥

ಲೋಕಮಂಗಳಕರನಾದ ಎಲೈ ಪರಶಿವಸ್ವಾಮಿಯೇ! ಆ ಜ್ಯೋತಿರ್ಲಿಂಗಗಳ ಮಹಿಮೆಯನ್ನು ಕೇಳಬೇಕೆಂದು ನನಗೆ ಅಪೇಕ್ಷೆಯುಂಟಾಗಿರುವುದು. ಆದುದರಿಂದ ದಯೆಯಿಟ್ಟು ನನಗೆ ಈ ವಿಷಯಗಳನ್ನು ತಿಳಿಸಬೇಕೆಂದು ಪ್ರಾರ್ಥಿಸಿದಳು. ತನ್ನ ಪ್ರೇಯಸಿಯಾದ ಆ ಅಪರ್ಣೆಯು (ಅಂದರೆ ಇವಳು ಬಾಲ್ಯದಲ್ಲಿ ಅನುರೂಪವರನು ನನಗೆ ಶಿವನೇ ಎಂದು ಭಾವಿಸಿ ತಪಸ್ಸುಮಾಡುತ್ತಿದ್ದಾಗ ಕೆಲವು ದಿವಸ ಆ ಘೋರ

॥ ಶ್ರೀಮಹೇಶ್ವರ ಉವಾಚ ॥

ಶೃಣು ದೂರ್ವಾದಲಶ್ಯಾಮೇ ಶ್ಯಾಮಲೇ ಪರಮೇಶ್ವರಿ ।
ಕೇದಾರಂ ಪ್ರಥಮಂ ಲಿಂಗಮೋಂಕಾರಂ ತು ದ್ವಿತೀಯಕಂ ॥೧೪॥

ವೈದ್ಯನಾಥಂ ತೃತೀಯಂ ಸ್ಯಾದ್ಘುಸೃಣೇಶಶ್ಚತುರ್ಥಕಃ ।
ನಾಗನಾಥಃ ಪಂಚಮಃ ಸ್ಯಾನ್ಮಹಾಕಾಲಶ್ಚ ಷಷ್ಠಮಃ ॥೧೫॥

ಭೀಮೇಶಃ ಸಪ್ತಮಃ ಪ್ರೋಕ್ತಸ್ತ್ರ್ಯಂಬಕಶ್ಚಾಷ್ಟಮಃ ಸ್ಮೃತಃ ।
ವಿಶ್ವೇಶಂ ನವಮಂ ಲಿಂಗಂ ವಾರಾಣಸ್ಯಾಂ ಮಹೇಶ್ವರಿ ॥೧೬॥

ಶ್ರೀಶೈಲೋ ದಶಮಃ ಪ್ರೋಕ್ತೋ ಗೋಕರ್ಣೇಶೋ ದಶಾಧಿಕಃ ।
ಸೇತುಮೂಲೇ ತು ರಾಮೇಶೋ ದ್ವಾದಶಾನಾಮನುಕ್ರಮಃ ॥೧೭॥

ತಪೋರೂಪವಾಗಿ ಎಲೆಗಳನ್ನು ತಿಂದು ತಪಶ್ಚರ್ಯೆಯನ್ನು ಮಾಡುತ್ತಿದ್ದಳು. ಮತ್ತೆ ಕೆಲವು ದಿನ ಆ ಎಲೆಗಳನ್ನೂ ತಿನ್ನದೇ ಇನ್ನೂ ಉಗ್ರತರವಾಗಿ ತಪಸ್ಸು ಮಾಡಿದಳು. ಆದ್ದರಿಂದ ಪಾರ್ವತಿಗೆ ಅಪರ್ಣಾ ಎಂಬ ಸಂಜ್ಞೆಯುಂಟಾಗಿದೆ ಎಂದು ವರ್ಣಿಸಿರುವರು.) ಮಾತುಗಳನ್ನು ಕೇಳಿ ಚಿನ್ನದಂತೆ ನ್ಯಬಣ್ಣವುಳ್ಳವನೂ ಮುಕ್ಕಣ್ಣನೂ ಆದ ಆ ಮಹೇಶ್ವರನು ತುಂಬಾ ಸಂತೋಷಗೊಂಡು ಜಗನ್ಮಾತೆಯಾದ ಗಿರಿಜಾದೇವಿಯನ್ನು ಕುರಿತು ಇಂತೆಂದನು. ॥೧೨-೧೩॥

ಗರಿಕೆಯ ದಳದಂತೆ ಶ್ಯಾಮಲವರ್ಣವುಳ್ಳವಳೂ, ಶ್ಯಾಮಲೆಯೆನಿಸಿದವಳೂ ಆದ ಪರಮೇಶ್ವರಿಯೆ! ಕೇಳು! ನನ್ನ ಜ್ಯೋತಿರ್ಲಿಂಗಗಳಲ್ಲಿ ಮೊದಲನೆಯದು ಕೇದಾರಲಿಂಗ. ಓಂಕಾರಲಿಂಗವು ಎರಡನೆಯದು, ಮೂರನೆಯದು ವೈದ್ಯನಾಥ ಲಿಂಗವು. ಘುಸೃಣೇಶಲಿಂಗವು ನಾಲ್ಕನೆಯದು. ನಾಗನಾಥಲಿಂಗವು ಐದನೆಯದು, ಮಹಾಕಾಲೇಶಲಿಂಗವು ಆರನೆಯದು. ॥೧೪-೧೫॥

ಭೀಮೇಶಲಿಂಗವು ಏಳನೆಯದು, ತ್ರ್ಯಂಬಕಲಿಂಗವು ಎಂಟನೆಯದು. ಎಲೌ ಮಹೇಶ್ವರಿ! ಕಾಶಿಯಲ್ಲಿರುವ ವಿಶ್ವೇಶ್ವರ ಲಿಂಗವೇ ಒಂಬತ್ತನೆಯದು. ಹತ್ತನೆಯದು ಶ್ರೀಶೈಲೇಶ್ವರದ ಲಿಂಗವಾಗಿರುವುದು. ಗೋಕರ್ಣೇಶ್ವರ ಲಿಂಗವು ಹನ್ನೊಂದನೆಯದು. ಸೇತುವಿನ ಬುಡದಲ್ಲಿ ಸ್ಥಾಪಿತವಾಗಿರುವ ರಾಮೇಶಲಿಂಗವೇ ಹನ್ನೆರಡನೆ

ಶೃಣುಷ್ವಾದರತೋ ದೇವಿ ಲಿಂಗಾನಾಂ ಮುಕ್ತಿದಾಯಕಂ ।
ಜ್ಯೋತಿಷಾಂ ಮಮ ಲಿಂಗಾನಾಂ ಮಹಿಮಾನಂ ಚ ಶಾಂಕರಿ ॥೧೮॥

ಜ್ಯೋತಿರ್ಲಿಂಗಾನಿ ಮೇ ದೇವಿ ಯಃ ಪಶ್ಯೇತ್ಸಂಸ್ಮರೇತ ವಾ ।
ಜ್ಞಾನಂ ವಿನಾಪಿ ಮುಕ್ತಿಶ್ಚ ಭವತೀತ್ಯೇವ ಮೇ ಮನಃ ॥೧೯॥

ವಕ್ಷ್ಯಾಮಿ ಮಹಿಮಾನಂ ತೇ ಸೇತಿಹಾಸಂ ಮಹೇಶ್ವರಿ ।
ಕಥಾಂ ಕಲುಷಚಿತ್ತಾನಾಂ ನಿಃಶೇಷಕಲುಷಾಪಹಾಂ ॥೨೦॥

ಉಜ್ಜಯಿನ್ಯಾಂ ಮಹಾಕಾಲಕ್ಷೇತ್ರಮಸ್ತ್ಯೇಕಮುತ್ತಮಂ ।
ತತ್ರ ಲಿಂಗಂ ಮಮಾಸ್ತ್ಯೇಕಮಶೇಷಸುರಪೂಜಿತಂ ॥೨೧॥

ತಲ್ಲಿಂಗದರ್ಶನಾದೇವ ಪಾಪವೃಂದಂ ವಿನಶ್ಯತಿ ।
ತಲ್ಲಿಂಗದರ್ಶನಂ ಪ್ರಾತಃ ಸರ್ವಪುಣ್ಯಫಲಪ್ರದಂ ॥೨೨॥

---

ಯದು. ಈರೀತಿಯಾಗಿ ನನ್ನ ಹನ್ನೆರಡು ಜ್ಯೋತಿರ್ಲಿಂಗಗಳು ಕ್ರಮವಾಗಿರುವುವು. ದೇವಿ ! ಮುಕ್ತಿದಾಯಕವಾದ ಈ ನನ್ನ ಜ್ಯೋತಿರ್ಲಿಂಗಗಳ ಮಹಿಮೆಯನ್ನು ಆದರದಿಂದ ಕೇಳು. ॥೧೬-೧೭-೧೮॥

ದೇವಿ, ಈ ನನ್ನ ಜ್ಯೋತಿರ್ಲಿಂಗಗಳನ್ನು ದರ್ಶನಮಾಡುವವನೂ, ಅಥವಾ ಸ್ಮರಣೆಮಾಡುವವನೂ-ಅವನಿಗೆ ಜ್ಞಾನೋದಯವಾಗದಿದ್ದರೂ- ಮುಕ್ತಿಯನ್ನು ಪಡೆಯುವನೆಂದು ನನ್ನ ಅಭಿಪ್ರಾಯವಿರುವುದು. ॥೧೯॥

ಕಲ್ಮಷವಾದ ಮನಸ್ಸುಳ್ಳವನ ಪಾಪಗಳೆಲ್ಲವನ್ನೂ ನಿಃಶೇಷವಾಗಿ ಹೊಡೆದೋಡಿಸುವ ಆ ಜ್ಯೋತಿರ್ಲಿಂಗಗಳ ಮಹಿಮೆಗಳನ್ನು ತಿಳಿಸುವ ಕಥೆಗಳನ್ನು ಇತಿಹಾಸಗಳೊಡನೆ (ಹಿಂದೆ ನಡೆದ ಕಥೆಗಳೊಡನೆ) ನಿನಗೆ ಹೇಳುತ್ತೇನೆ ಕೇಳು. ॥೨೦॥

ಉಜ್ಜಯಿನೀ ಪಟ್ಟಣದಲ್ಲಿ ಉತ್ತಮವಾದ ಒಂದು ಮಹಾಕಾಲಕ್ಷೇತ್ರವಿರುವುದು. ಅಲ್ಲಿ ಸಕಲ ದೇವತೆಗಳಿಂದಲೂ ಪೂಜಿಸಲ್ಪಡುವ ನನ್ನ ಒಂದು ಶಿವಲಿಂಗವಿರುವುದು. ॥೨೧॥

ಆ ಲಿಂಗವನ್ನು ದರ್ಶನಮಾಡಿದ ಮಾತ್ರದಿಂದಲೇ ಪಾಪಸಮೂಹವೆಲ್ಲವೂ ನಾಶವಾಗುವುದು. ಪ್ರಾತಃಕಾಲದಲ್ಲಿ ಆ ಶಿವಲಿಂಗವನ್ನು ನೋಡಿದರೆ ಸಕಲ ಫಲಗಳೂ ದೊರೆಯುವುವು. ॥೨೨॥

ಶಕ್ರಾದಿಭಿರ್ಲೋಕಪಾಲೈಃ ಸೇವಿತಂ ಪರಯಾ ಮುದಾ ।
ಬ್ರಹ್ಮವಿಷ್ಣ್ವಾದಿಭಿರ್ದೇವೈರ್ಮುನೀಂದ್ರೈರಖಿಲೈರಪಿ ॥೨೩॥

ಗಣೇಶ್ವರೈಸ್ತಥಾ ರುದ್ರೈಃ ಸಾಧ್ಯೈರ್ವಸುಮರುದ್ಗಣೈಃ ।
ಸಿದ್ಧವಿದ್ಯಾಧರೈರ್ನಾಗೈರ್ಯಕ್ಷೈಃ ಕಿಂಪುರುಷೈರಪಿ ॥೨೪॥

ನದೀನದಸಮುದ್ರೈಶ್ಚ ಪರ್ವತೇಂದ್ರೈಶ್ಚ ಶೋಭಿತಂ ।
ಅಪ್ಸರೋಭಿಃ ಕಿಂನರೀಭಿಃ ರುದ್ರಕನ್ಯಾಭಿರಾದರಾತ್ ॥೨೫॥

ವೈಖಾನಸೈರ್ವಾಲಖಿಲ್ಯೈರ್ದ್ವಿಜೈಃ ಪರ್ಣಾಂಬುಭೋಜನೈಃ ।
ಕಾಮಧೇನುಗಣೈಶ್ಚೈವ ಸ್ರವತ್ಪಂಚಾಮೃತೈಃ ಸದಾ ॥೨೬॥

ಐರಾವತಕುಲೋತ್ಪನ್ನೈರ್ನಾಗೈರ್ಭದ್ರಮೃಗೈಸ್ತಥಾ ।
ಉಚ್ಚೈರುಚ್ಚಶ್ರವಪ್ರಖ್ಯೈರಶ್ವೈರಶ್ವಪತಿಪ್ರಿಯೈಃ ॥೨೭॥

ಇಂದ್ರನೇ ಮೊದಲಾದ ಎಂಟು ಮಂದಿ ಲೋಕಪಾಲಕರೂ ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೂ, ಸಕಲ ಮುನಿಶ್ರೇಷ್ಠರೂ, ಗಣಾಧಿಪತಿಗಳೂ, ಏಕಾದಶ ರುದ್ರರೂ, ಸಾಧ್ಯದೇವತೆಗಳೂ, ಅಷ್ಟವಸುಗಳೂ, ಸಪ್ತಮರುತ್ತುಗಳೂ, ಸಿದ್ಧರೂ, ವಿದ್ಯಾಧರರೂ, ನಾಗರೂ, ಯಕ್ಷರೂ, ಕಿಂಪುರುಷರೂ ಅತ್ಯಂತ ಸಂತೋಷದಿಂದ ಆ ಮಹಾಕಾಲೇಶಲಿಂಗವನ್ನು ಸೇವೆಮಾಡುತ್ತಿರುವರು. ॥೨೩-೨೪॥

ನದಿಗಳು, ನದ, ಸಮುದ್ರ, ದೊಡ್ಡದೊಡ್ಡ ಪರ್ವತಗಳು ಇವುಗಳಿಂದ ಆ ಮಹಾಕಾಲೇಶಲಿಂಗವು ಸೇವಿಸಲ್ಪಡುತ್ತಿದ್ದಿತು. ಅಪ್ಸರಸ್ತ್ರೀಯರೂ, ಕಿಂನರಾಂಗನೆಯರೂ, ರುದ್ರಕನ್ಯೆಯರೂ ಆದರದಿಂದ ಅದನ್ನು ಸೇವಿಸುತ್ತಿದ್ದರು. ॥೨೫॥

ವೈಖಾನಸವ್ರತವನ್ನಾಶ್ರಯಿಸಿ ಎಲೆ, ನೀರು ಇವುಗಳನ್ನೇ ಆಹಾರವಾಗಿ ಸೇವಿಸುವ ಬ್ರಾಹ್ಮಣೋತ್ತಮರೂ, ಸದಾ ಪಂಚಾಮೃತಗಳನ್ನು (ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ) ಸುರಿಸುತ್ತಿರುವ ಕಾಮಧೇನುಗಳ ಸಮೂಹವೂ ಆ ಮಹಾಕಾಲೇಶನ ಲಿಂಗವನ್ನು ಎಡಬಿಡದೆ ಸೇವಿಸುತ್ತಿದ್ದವು. ॥೨೬॥

ಶ್ರೇಷ್ಠವಾದ ಐರಾವತದ ಕುಲದಲ್ಲಿ ಹುಟ್ಟಿದ ಆನೆಗಳೂ, ಹಾಗೆಯೇ, ಭದ್ರಮೃಗಗಳೂ, ಅಶ್ವಪತಿ ಶಂಕರನಿಗೆ ಪ್ರಿಯವೆನಿಸಿರುವ ಉಚ್ಚೈಶ್ರ್ರವ

ತತ್ರ ಮಂದಾರತರವೋ ಮರಂದಸುಮವೃಷ್ಟಯಃ ।
ತತ್ರ ಬಿಲ್ವೋರುತರವೋ ಮೂಲಲಿಂಗೋಪಶೋಭಿತಾಃ ॥೨೮॥

ಸ್ವಚ್ಛದೈಶ್ಛಾದಯಂತ್ಯೇತೇ ಸೂರ್ಯಾಂಶುಂ ಲಿಂಗಮಸ್ತಕೇ ।
ಸ್ವಪಾಂಡುಪತ್ರಪತನೈಃ ಪೂಜಯಂತಿ ಮಹೇಶ್ವರಂ ॥೨೯॥

ನಾನಾವಾದಿತ್ರಘೋಷೈಶ್ಚ ಬಧರೀಕೃತದಿಕ್ತಟಂ ।
ಕುರ್ವಂತಿ ಗಣಪಾ ನಿತ್ಯಂ ಶ್ರೀಮಹೇಶಸ್ಯ ಸಂನಿಧೌ ॥೩೦॥

ನೃತ್ಯಂತ್ಯಪ್ಸರಸೋ ನಿತ್ಯಂ ರಾಗಭಾವಲಯಾನುಗಾಃ ।
ನಾರದಪ್ರಮುಖಾ ನಿತ್ಯಂ ವಿಶ್ವಾವಸುಹಹಾಹುಹೂಃ ॥೩೧॥

---

ಸ್ಸೆಂಬ ಹೆಸರುಳ್ಳ ಪ್ರಸಿದ್ಧವಾದ ಎತ್ತರವಾದ ಕುದುರೆಗಳೂ ಆ ಶಿವಲಿಂಗವನ್ನು ಸೇವಿಸುತ್ತಿದ್ದವು. ॥೨೭॥

ಅಲ್ಲಿರುವ ಮಂದಾರವೃಕ್ಷಗಳು ಮಕರಂದವಿಶಿಷ್ಟವಾದ ಹೂವುಗಳನ್ನು ಮಳೆಗರೆಯುತ್ತಿರುವುವು. ಆ ಪ್ರದೇಶದಲ್ಲಿ ಬೆಳೆದಿರುವ ದೊಡ್ಡ ದೊಡ್ಡ ಬಿಲ್ವವೃಕ್ಷಗಳು ತಮ್ಮ ಬುಡದಲ್ಲಿ ಪ್ರತಿಷ್ಠಿಸಿರುವ ಶಿವಲಿಂಗಗಳಿಂದ ಶೋಭಿಸುತ್ತಿರುವುವು. ॥೨೮॥

ಆ ಬಿಲ್ವವೃಕ್ಷಗಳು ತಮ್ಮ ಎಲೆಗಳ ಗುಂಪಿನಿಂದ ಆ ಶಿವಲಿಂಗದ ತಲೆಯ ಮೇಲೆ ಬೀಳುತ್ತಿರುವ ಸೂರ್ಯನ ಕಿರಣಗಳನ್ನು ಮರೆಮಾಡುತ್ತಿರುವುವು. ಅಲ್ಲದೇ ತಮ್ಮ ಬಿಳಿಯ ಎಲೆಗಳನ್ನು ಬೀಳಿಸುವಿಕೆಯಿಂದ ಆ ಮಹೇಶ್ವರನನ್ನು ಪೂಜೆ ಮಾಡುತ್ತಿರುವುವು. ॥೨೯॥

ಗಣಾಧಿಪತಿಗಳು ಆ ಮಹೇಶ್ವರನ ಸನ್ನಿಧಿಯಲ್ಲಿ ನಾನಾ ವಿಧವಾದ ವಾದಿತ್ರವೇ ಮುಂತಾದ ವಾದ್ಯಗಳ ಘೋಷಗಳಿಂದ ಎಲ್ಲಾ ದಿಕ್ಕುಗಳಲ್ಲಿಯೂ ಪ್ರತಿಧ್ವನಿಗೈಯುವಂತೆ ಮಾಡುತ್ತಿರುವುವು. ॥೩೦॥

ಅಪ್ಸರಸ್ತ್ರೀಯರು ಅನವರತವೂ ರಾಗ, ಭಾವ, ಮತ್ತು ಲಯ, ಇವುಗಳಿಗನುಸಾರವಾಗಿ ನರ್ತನಮಾಡುತ್ತಿರುವರು. ನಾರದ ಮುಂತಾದವರೂ, ವಿಶ್ವಾವಸು, ಹಾಹಾಹುಹೂ ಎಂಬ ಗಂಧರ್ವರೂ ನಿತ್ಯವೂ ; ॥೩೧॥

ಗಾಯಂತಿ ರುದ್ರವೀಣಾಭಿಃ ಶಿವನಾಮಾನಿ ಸಾದರಂ ।
ನಂದಿಪ್ರೋತ್ಸಾರಿತಾನೇಕಸ್ವರ್ಣವೇತ್ರಕರಾ ಗಣಾಃ ॥೩೨॥

ದೂರೀಕುರ್ವಂತಿ ಜನತಾಂ ಮಹೇಶದ್ವಾರಿ ಸರ್ವದಾ ।
ಪ್ರಣಮಂತಿ ಸುರೇಂದ್ರಾದ್ಯಾ ಮಹಾಕಾಲಂ ಮಹೇಶ್ವರಂ ॥೩೩॥

ಮಹಾಲಿಂಗಾಕೃತಿಂ ಶಂಭುಂ ಬಿಲ್ವಾಲಂಕೃತಮಸ್ತಕಂ ।
ಮಹಾಭುಜಂಗಾಂಗಧರಂ ಗಂಗಾಧರಮನುತ್ತಮಂ ॥೩೪॥

ತ್ರಿಪುಂಡ್ರಚಂದ್ರರೇಖೋತ್ಥಕಲಾಕಲಿತಶೇಖರಂ ।
ಕರ್ಪೂರದೀಪಿಕಾನೇಕದೀಪಮಾಲಾವಿರಾಜಿತಂ ॥೩೫॥

ರುದ್ರವೀಣೆಗಳನ್ನು ಬಾರಿಸುತ್ತಾ ಆ ಪರಶಿವನ ದಿವ್ಯ ನಾಮಗಳನ್ನು ಆದರ ಪೂರ್ವಕವಾಗಿ ಗಾನಮಾಡುತ್ತಿರುವರು. ನಂದಿಯಿಂದ ಪ್ರೋತ್ಸಾಹಿಸಲ್ಪಟ್ಟಿರುವ ಅನೇಕ ಶಿವಗಣಗಳು, ಕೈಯಿಂದ ಚಿನ್ನದ ಬೆತ್ತಗಳನ್ನು ಹಿಡಿದು ; ॥೩೨॥

ಯಾವಾಗಲೂ ಜನಗಳ ಸಮೂಹವನ್ನು ಆ ಮಹೇಶ್ವರನ ಆಲಯದ ಬಾಗಿಲಿನಿಂದ ಹಿಂದಕ್ಕೆ ಓಡಿಸುತ್ತಾ ಇರುವರು. ದೇವೇಂದ್ರನೇ ಮುಂತಾದ ದೇವತೆಗಳು ಆ ಮಹೇಶ್ವರಸ್ವರೂಪನಾದ ಮಹಾ ಕಾಲೇಶನನ್ನು ನಮಸ್ಕರಿಸುತ್ತಿರುವರು. ॥೩೩॥

ದೊಡ್ಡಲಿಂಗದ ಆಕೃತಿಯುಳ್ಳವನೂ, ಲೋಕಮಂಗಳಕರನೂ (ಶಂಭು) ಬಿಲ್ವಪತ್ರೆಗಳಿಂದ ಅಲಂಕರಿಸಲ್ಪಟ್ಟಿರುವ ಶಿರಸ್ಸುಳ್ಳವನೂ, ದೊಡ್ಡ ಸರ್ಪವನ್ನೇ ಆಭರಣವನ್ನಾಗಿ ಧರಿಸಿರುವವನೂ, ತನ್ನ ಜಟಾಜೂಟದಲ್ಲಿ ದೇವಗಂಗೆಯನ್ನು ಧರಿಸಿರುವನೂ, ಸರ್ವಶ್ರೇಷ್ಠನೂ ಆಗಿರುವ ಶಿವಸ್ವಾಮಿಯನ್ನು ಧ್ಯಾನಿಸುತ್ತಿರುವರು.॥೩೪॥

ತನ್ನ ಶಿರಸ್ಸಿನಲ್ಲಿರುವ ಬಾಲಚಂದ್ರನ ಕಾಂತಿಯು ಶುಭ್ರವಾದ ಭಸ್ಮತ್ರಿಪುಂಡ್ರಗಳಲ್ಲಿ ಬಿದ್ದಿರುವುದರಿಂದ ಅದು ಬಹಳವಾಗಿ ಪ್ರಕಾಶಿಸುತ್ತಿರುವುದು. ಹಾಗೆ ದಿವ್ಯವಾದ ಚಂದ್ರಕಲೆಗಳಿಂದ ಯುಕ್ತವಾದ ಜಟಾಜೂಟವುಳ್ಳವನೂ, ಕರ್ಪೂರದ ದೀಪಗಳಿಂದ ಬೆಳಗುವವನೂ ಆಗಿ ಅನೇಕ ದೀಪಗಳ ಸಮೂಹದಿಂದ ಪರಶಿವನು ಅಲ್ಲಿ ವಿರಾಜಿಸುತ್ತಿರುವನು. ॥೩೫॥

ದಿವ್ಯಗೋಘೃತಸಂಪೂರ್ಣದೀಪಪಾತ್ರಶತಾವೃತಂ ।
ಕೃಷ್ಣಾಗರೂತ್ಥಸಾವ್ರಾಣಿಧೂಮ್ಯೈರ್ಘಮಘಮಾಂತರಂ ॥೩೬॥

ಪ್ರಾತಃ ಸಂಗವಮಧ್ಯಾಹ್ನಸಾಯಂ ನಿಶಿ ಮಹೇಶ್ವರಂ ।
ಪ್ರಣಮಂತಿ ಪ್ರಸ್ತುವಂತಿ ಸುರಾಸುರಮುನೀಶ್ವರಾಃ ॥೩೭॥

ಕೇಚಿದ್ರುದ್ರೈಃ ಸ್ತುವಂತೀಶಂ ಕೇಚಿತ್ಸಾಮಭಿರೀಶ್ವರಂ ।
ಋಗ್ಭಿಶ್ಚಾಥರ್ವಣೈಶ್ಚೈವ ಸ್ತುತಿಭಿರ್ಮುನಿಸತ್ತಮಾಃ ॥೩೮॥

ಪ್ರದಕ್ಷಿಣಪರಾಶ್ಚಾನ್ಯೇ ಲುಠಂತಃ ಶಂಕರಾಲಯೇ ।
ಪ್ರಣಮಂತಿ ಚ ಸಾಷ್ಟಾಂಗಂ ಮುನಯೋ ಭಕ್ತಿತತ್ಪರಾಃ ॥೩೯॥

ಉಚ್ಚೈರ್ಹರ ಸುರೇಶೇತಿ ಮಹಾದೇವೇತಿ ಸಾದರಂ ।
ನೃತ್ಯಂತಿ ಸಾಶ್ರುನಯನಾಃ ಕರತಾಡನಪೂರ್ವಕಂ ॥೪೦॥

---

ಶಂಕರನು ದಿವ್ಯವಾದ ಹಸಿವಿನ ತುಪ್ಪದಿಂದ ಪರಿಪೂರ್ಣವಾದ ನೂರಾರು ದೀಪಪಾತ್ರೆಗಳಿಂದ ಆವರಿಸಲ್ಪಟ್ಟಿರುವವನೂ, ಕೃಷ್ಣಾಗರು (ಕಪ್ಪು ಅಗಿಲು) ಮತ್ತು ಸಾವ್ರಾಣಿ ಇವುಗಳ ಹೊಗೆಗಳಿಂದ ಘಮಘಮ ಸುವಾಸನೆಯುಳ್ಳವನೂ ಆಗಿರುವನು. ॥೩೬॥

ಇಂತಹ ಮಹೇಶ್ವರನನ್ನು ಪ್ರಾತಃಕಾಲ, ಸಂಗಮಕಾಲ, ಮಧ್ಯಾಹ್ನ, ಸಾಯಂಕಾಲ, ಮತ್ತು ರಾತ್ರಿ ಈ ವೇಳೆಗಳಲ್ಲೆಲ್ಲಾ ದೇವತೆಗಳೂ, ರಾಕ್ಷಸರೂ ಮತ್ತು ಮುನಿಶ್ರೇಷ್ಠರೂ ಇವರೆಲ್ಲರೂ ನಮಸ್ಕಾರ ಮಾಡುತ್ತಲೂ, ಮತ್ತು ಸ್ತೋತ್ರಗೈಯುತ್ತಲೂ ಸೇವೆಮಾಡುತ್ತಿರುವರು. ॥೩೭॥

ಕೆಲವರು ರುದ್ರಪಾರಾಯಣದಿಂದ ಮಹೇಶ್ವರನನ್ನು ಸ್ತುತಿಮಾಡುತ್ತಿರುವರು. ಕೆಲವರು, ಸಾಮಗಳಿಂದಲೂ, ಮತ್ತೆ ಕೆಲವರು ಋಕ್ಕುಗಳಿಂದಲೂ ಮತ್ತೆ ಕೆಲವರು, ಅಥರ್ವಣಮಂತ್ರಗಳಿಂದಲೂ ಈ ರೀತಿಯಾಗಿ ಮುನಿಶ್ರೇಷ್ಠರನೇಕರು ನಾನಾವಿಧವಾದ ಸ್ತೋತ್ರಗಳಿಂದ ಆ ಪರಶಿವನನ್ನು ಸ್ತುತಿಗೈಯುತ್ತಿರುವರು. ॥೩೮॥

ಕೆಲವು ಮಂದಿ ಮುನಿಗಳು ಭಕ್ತಿವಿಶಿಷ್ಟರಾಗಿ ಆ ಶಂಕರನ ದೇವಾಲಯದಲ್ಲಿ ಪ್ರದಕ್ಷಿಣತತ್ಪರರಾಗಿ ಸಾಷ್ಟಾಂಗಪೂರ್ವಕವಾಗಿ ನಮಸ್ಕಾರ ಮಾಡುತ್ತಿರುವರು. ॥೩೯॥

ಗಟ್ಟಿಯಾಗಿ, ಹರ ! (ಪಾಪನಾಶಕನೇ !) ದೇವದೇವನೇ; ಮಹಾದೇವ !

ಕೋಟಿಶಃ ಸಂತಿ ಮುನಯಃ ಶಿವಲಿಂಗೈಕಪೂಜಕಾಃ ।
ಭಸ್ಮರುದ್ರಾಕ್ಷವೀತಾಂಗಾಃ ಶಿವೈಕಶರಣಾಃ ಸದಾ ॥೪೧॥

ಕ್ಷಿಪ್ರಾ ನಾಮ ನದೀ ತತ್ರ ಕ್ಷಿಪ್ರಪಾತಕನಾಶಿನೀ ।
ತಸ್ಯಾಸ್ತೀರೇ ಬಿಲ್ವಮೂಲೇ ಶಿವಲಿಂಗಾರ್ಚನಪ್ರಿಯಾಃ ॥೪೨॥

ವಸಂತಿ ತತ್ರ ನಿಯತಾಃ ಶಿವನೈವೇದ್ಯಭೋಜನಾಃ ।
ತತ್ರ ರಾಜಾ ಮಹಾನಾಸೀದುಜ್ಜಯಿನ್ಯಾಂ ಮಹಾಬಲಃ ॥೪೩॥

ತಿಗ್ಮಾಂಶುವಂಶಸಂಭೂತೋ ನಾಮ್ನಾ ಚಿತ್ರರಥೋ ಯುವಾ
ತಸ್ಯೇಯಂ ಪೃಥಿವೀ ಸರ್ವಾ ವಿತ್ತಪೂರ್ಣಾಽಭವತ್ಸದಾ ॥೪೪॥

---

ಎಂಬುದಾಗಿ ಚಪ್ಪಾಳೆ ಹೊಡೆದು ಆದರಪೂರ್ವಕವಾಗಿ ನರ್ತನಮಾಡುತ್ತಾ ಆನಂದ ದಿಂದ ಕಣ್ಣುಗಳಲ್ಲಿ ನೀರುತುಂಬಿದವರಾಗಿರುವರು. ॥೪೦॥

ಸದಾ ಕೇವಲ ಶಿವಲಿಂಗವನ್ನು ಮಾತ್ರ ಪೂಜಿಸುವವರೂ, ಭಸ್ಮ, ರುದ್ರಾಕ್ಷಿ, ಇವುಗಳ ಧಾರಣೆಯಿಂದ ಪರಿಶುದ್ಧವಾದ ಅವಯವಗಳುಳ್ಳವರೂ, ಶಿವನೊಬ್ಬನನ್ನೇ ರಕ್ಷಕನೆಂದು ತಿಳಿದಿರುವರೂ ಆದ ಕೋಟ್ಯಂತರ ಮುನಿಗಳು ಅಲ್ಲಿ ವಾಸಮಾಡುತ್ತಿ ರುವರು. ॥೪೧॥

ಆ ಮಹಾಕಾಲಕ್ಷೇತ್ರದಲ್ಲಿ ಶೀಘ್ರವಾಗಿ ಸಕಲ ಪಾಪಗಳನ್ನೂ ಹೊಡೆದೋ ಡಿಸುವ ಕ್ಷಿಪ್ರಾ ಎಂಬ ಹೆಸರುಳ್ಳ ಒಂದು ನದಿಯು ಹರಿಯುತ್ತಿರುವುದು. ಆ ನದಿಯ ದಡದಲ್ಲಿ ಬೆಳೆದಿರುವ ಬಿಲ್ವವೃಕ್ಷಗಳ ಬುಡದಲ್ಲಿ ಶಿವಲಿಂಗಪೂಜೆಯಲ್ಲಿಯೇ ಪ್ರೀತಿ ಯುಳ್ಳವರೂ ; ॥೪೨॥

ನಿಯಮದಿಂದ ಕೇವಲ ಶಿವನಿಗೆ ನಿವೇದನಮಾಡಿದ ಪದಾರ್ಥಗಳನ್ನೇ ಭುಜಿಸುವರೂ ಆದ ಶಿವಭಕ್ತರನೇಕರು ವಾಸಮಾಡುತ್ತಿರುವರು. ಆ ಉಜ್ಜಯಿನೀ ಪಟ್ಟಣದಲ್ಲಿ ಮಹಾಬಲಶಾಲಿಯಾದ ಒಬ್ಬ ದೊಡ್ಡ ರಾಜನಿದ್ದನು. ॥೪೩॥

ಸೂರ್ಯವಂಶೋತ್ಪನ್ನನಾದ ಆ ರಾಜನು ಚಿತ್ರರಥನೆಂಬ ಹೆಸರಿನಿಂದ ಪ್ರಸಿದ್ಧ ನಾಗಿದ್ದನು. ಮತ್ತು ಯುವಕನಾಗಿದ್ದನು. ಈ ಭೂಮಿಯೆಲ್ಲವೂ ಅವನ ರಾಜ್ಯಭಾರ ದಲ್ಲಿ ಯಾವಾಗಲೂ ಧನಧಾನ್ಯಸಮೃದ್ಧವಾಗಿದ್ದಿತು. ॥೪೪॥

ತಸ್ಯ ದಾರಾ ಮಹೋದಾರಾ ಮಾರಸ್ಯಾಪಿ ಮನೋಹರಾಃ ।
ಶತಾಧಿಕಂ ಚ ದಶಕಂ ಸುನಾಸಂ ಪಂಕಜಾನನಂ ॥೪೫॥

ಸುರಥಾದ್ಯಂ ಪುತ್ರಶತಂ ತತಸ್ತೇ ಸೌರಥಾಃ ಸ್ಮೃತಾಃ ।
ಕ್ಷಯದ್ವೀರಪರಾಸ್ತೇತು ಶತಮುತ್ತಮಧನ್ವಿನಃ ॥೪೬॥

ತಸ್ಯ ಕೋಶಸ್ಯ ನೇಯತ್ತಾ ತಸ್ಯಾಸನ್ರತ್ನಪರ್ವತಾಃ ।
ತಿರಸ್ಕರೋತಿ ಧನದಂ ಧನಾಧಿಪಸಖಾರ್ಚನಂ ॥೪೭॥

ತಸ್ಯಾಸನ್ವಾಜಿಮಾತಂಗಗೋಗಣಾನಾಂ ಚ ಕೋಟಯಃ
ಸ ಭಾಗ್ಯೈರ್ವಿವಿಧೈರೀಶಂ ಸಭಾಗ್ಯಃ ಪೂಜಯನ್ನೃಪಃ ॥೪೮॥

---

ಆ ಚಿತ್ರರಥಮಹಾರಾಜನಿಗೆ ಮಹಾ ಉದಾರ ಸ್ವಭಾವದವರೂ, ಮನ್ಮಥನಿಗಿಂತಲೂ ಸೌಂದರ್ಯವತಿಯರೂ, ಒಳ್ಳೆಯ ಮೂಗು, ಕಮಲದಂತಿರುವ ಮುಖ ಇವುಗಳಿಂದ ಮನೋಹರರಾಗಿರುವರೂ ಆದ ನೂರಹತ್ತು (೧೧೦) ಜನ ಪತ್ನಿಯರಿದ್ದರು. ॥೪೫॥

ಸುರಥನೇ ಮೊದಲಾದ ನೂರುಮಂದಿ ಮಕ್ಕಳು ಅವರಿಗಿದ್ದುದರಿಂದ ಅವರು ಸೌರಥರೆನಿಸಿದರು. ಆ ನೂರು ಮಂದಿಯೂ ವೀರರಾದ ಶತ್ರುಗಳನ್ನು ನಾಶಮಾಡುವುದರಲ್ಲಿ ಸಮರ್ಥರಾಗಿ ಒಳ್ಳೆಯ ಧನುರ್ಧಾರಿಗಳೆಂದು ಪ್ರಖ್ಯಾತಿಪಡೆದಿದ್ದರು. ॥೪೬॥

ಅವನ ಭಂಡಾರವು ಅಪರಿಮಿತವಾದ ದ್ರವ್ಯಗಳಿಂದ ಪೂರ್ಣವಾಗಿದ್ದಿತು. ಅವನಿಗೆ ರತ್ನಮಯಗಳಾದ ಪರ್ವತಗಳೇ ಇದ್ದವು. ಈ ಚಿತ್ರರಥನು, (ಧನಾಧಿಪತಿಯಾದ ಕುಬೇರನ ಸ್ನೇಹಿತನೆನಿಸಿದ) ಪರಮೇಶ್ವರನನ್ನು ಪೂಜಿಸುತ್ತಾ ಕುಬೇರನನ್ನೂ ತನ್ನ ಐಶ್ವರ್ಯದಿಂದ ತಿರಸ್ಕರಿಸುವಂತಿದ್ದನು. ॥೪೭॥

ಅವನಿಗೆ ಕುದುರೆ, ಆನೆ, ಮತ್ತು ಗೋವುಗಳ ಸಮೂಹ ಇವು ಕೋಟಿಗಟ್ಟಲೆ ಇದ್ದವು. ಭಾಗ್ಯಶಾಲಿಯಾದ ಈ ಚಿತ್ರರಥಮಹಾರಾಜನು, ತನ್ನ ಈ ನಾನಾವಿಧವಾದ ಐಶ್ವರ್ಯ ಸಂಪತ್ತುಗಳಿಂದ ಅನೇಕಪ್ರಕಾರವಾಗಿ ಪರಮೇಶ್ವರನನ್ನು ಪೂಜಿಸುತ್ತಿದ್ದನು. ॥೪೮॥

ಮಹಾಕಾಲಾರ್ಚನಪರಃ ಕಾಲಭೀತಿವಿವರ್ಜಿತಃ ।
ತಸ್ಯಾಸನ್ಮಂತ್ರಿಣಃ ಸರ್ವೇ ಶಾಂಭವಾ ಏವ ಕೇವಲಂ ॥೪೯॥

ಅಶಾಂಭವೋ ನ ಕೋಽಪ್ಯಾಸೀತ್ತಸ್ಮಿನ್ರಾಜನಿ ಶಾಸತಿ ।
ಭಸ್ಮರುದ್ರಾಕ್ಷಸಂಪನ್ನಾಃ ಶಿವಲಿಂಗಾರ್ಚನೇ ರತಾಃ ॥೫೦॥

ಅಶಾಂಭವಂ ನರಂ ವಾಪಿ ದ್ವಿಜಂ ವಾಪಿ ನೃಪೋತ್ತಮಃ ।
ಸ ಕೋಪಿತಃ ಶಿರಸ್ತಸ್ಯ ಛೇತ್ಸ್ಯತ್ಯೇನಾತಿವೇಗತಃ ॥೫೧॥

ತದಾ ನೃಪಭಯಾತ್ಸರ್ವೇ ಶಾಂಭವಾಸ್ತನ್ಮತೇ ಸ್ಥಿತಾಃ ।
ತತ್ಪುತ್ರಾಸ್ತತ್ಕಲತ್ರಾಣಿ ಗಜವಾಜೀ ನರಾ ಅಪಿ ॥೫೨॥

ಭಸ್ಮತ್ರಿಪುಂಡ್ರರುದ್ರಾಕ್ಷಮಾಲಾಲಂಕೃತವಿಗ್ರಹಾಃ ।
ಮಹಾಕಾಲ ಮಹಾದೇವ ಚಂದ್ರಚೂಡೇತಿ ವಾದಿನಃ ॥೫೩॥

ಈ ಚಿತ್ರರಥ ಮಹಾರಾಜನು ಸದಾ ಮಹಾಕಾಲಸಂಜ್ಞಕನಾದ ಪರಶಿವನ ಪೂಜಾತತ್ಪರನಾಗಿ ಯಮನ ಭಯವೇ ಇಲ್ಲದಂತೆ ರಾಜ್ಯಭಾರಮಾಡುತ್ತಿದ್ದನು. ಇವನಿಗಿದ್ದ ಮಂತ್ರಿಗಳೆಲ್ಲರೂ ಕೇವಲ ಈಶ್ವರಭಕ್ತರಾಗಿಯೇ ಇದ್ದರು. ॥೪೯॥

ಆ ಚಿತ್ರರಥರಾಜನು ರಾಜ್ಯಭಾರಮಾಡುತ್ತಿದ್ದಾಗ ಶಂಭುವಿನ ಭಕ್ತನಲ್ಲದವರಾರೂ ಇರಲೇ ಇಲ್ಲ. ಎಲ್ಲರೂ ಭಸ್ಮ, ರುದ್ರಾಕ್ಷಿ ಇವುಗಳಿಂದ ಯುಕ್ತರಾಗಿ ಸದಾ ಶಿವಲಿಂಗಪೂಜೆಯಲ್ಲಿಯೇ ನಿರತರಾಗಿದ್ದರು. ॥೫೦॥

ಶಂಭುಭಕ್ತನಲ್ಲದವನು ಬ್ರಾಹ್ಮಣನಾಗಲೀ, ಅಥವಾ ಬೇರೆಯ ವರ್ಣದವನಾಗಲೀ, ಆ ರಾಜಶ್ರೇಷ್ಠನು ಅವರ ಮೇಲೆ ಕೋಪಗೊಂಡು ಕೂಡಲೇ ಅವನ ತಲೆಯನ್ನು ಕತ್ತರಿಸಿಹಾಕುತ್ತಿದ್ದನು. ॥೫೧॥

ಅವನ ಕಾಲದಲ್ಲಿ ಎಲ್ಲರೂ ರಾಜನ ಭಯದಿಂದ ಶಂಭುವಿನ ಭಕ್ತರಾಗಿ ಆ ಧರ್ಮದಲ್ಲಿಯೇ ನಿರತರಾಗಿದ್ದರು. ಅವನ ಮಕ್ಕಳೂ, ಪತ್ನಿಯರು, ಆನೆ, ಕುದುರೆ, ಮತ್ತು ಮನುಷ್ಯರು, ಎಲ್ಲರೂ, ಪರಶಿವನ ಭಕ್ತರೇ ಆಗಿದ್ದರು. ॥೫೨॥

ಎಲ್ಲರೂ, ವಿಭೂತಿಯಿಂದ ಭಸ್ಮತ್ರಿಪುಂಡ್ರಗಳನ್ನೂ, ರುದ್ರಾಕ್ಷಮಾಲೆಗಳನ್ನೂ ಅಲಂಕರಿಸಿಕೊಂಡವರಾಗಿ, ಮಹಾಕಾಲ, ಮಹಾದೇವ! ಚಂದ್ರಶೇಖರ! ಎಂದು ಯಾವಾಗಲೂ ಧ್ಯಾನಮಾಡುತ್ತಿದ್ದರು. ॥೫೩॥

ತತ್ಕಲತ್ರಾಣಿ ಸರ್ವಾಣಿ ವೀಣಾವಾದನತತ್ಪರಾಃ ।
ಮಹಾಕಾಲಾಲಯೇ ನಿತ್ಯಂ ತಾ ನೃತ್ಯಂತಿ ಲಯಾನುಗಾಃ ॥೫೪॥

ತತ್ಕಂಠಗೀತಮಾಧುರ್ಯಾಚ್ಛಾರಿಕಾಶ್ಚ ಪಿಕಾದಯಃ ।
ವಿಲಜ್ಜಿತಾ ವನಗತಾಃ ಕೋಕಿಲಾಃ ಸ್ವಕುಲೈಃ ಸಹ ॥೫೫॥

ದೇವಾಂಗನಾಪಿ ಮುಹ್ಯಂತಿ ತದ್ಗಾನಶ್ರವಣೋತ್ಸುಕಾಃ ।
ಮೃಗಾಶ್ಚ ಪಶವಃ ಸರ್ವೇ ಸೃಮರಾಶ್ಚಮರಾ ಅಪಿ ॥೫೬॥

ನ ವಾತಪ್ರಸರಸ್ತತ್ರ ಮಹಾಕಾಲಾಲಯೇ ತದಾ ।
ಸ ರಾಜಾ ತತ್ಕಲತ್ರಾಣಿ ತತ್ಪುತ್ರಾಶ್ಚ ಮುದಾನ್ವಿತಾಃ ॥೫೭॥

ದೃಷ್ಟ್ವಾ ಮಹೇಶಲಿಂಗಂ ತನ್ಮಹಾಕಾಲಸ್ಯ ಸಾದರಂ ।
ಭಸ್ಮತ್ರಿಪುಂಡ್ರಮಾಲಾಭಿಃ ರುದ್ರಾಕ್ಷಸಮಲಂಕೃತಃ ॥೫೮॥

ಅವನ ಪತ್ನಿಯರೆಲ್ಲರೂ ಶಿವದೇವಾಲಯದಲ್ಲಿ ಸದಾ ವೀಣೆಯನ್ನು ಬಾರಿಸುತ್ತಾ ಲಯಕ್ಕನುಗುಣವಾಗಿ ನರ್ತನಮಾಡುತ್ತಿರುವರು. ॥೫೪॥

ಆ ಚಿತ್ರರಥ ಮಹಾರಾಜನ ರಾಣಿಯರ ಕಂಠದ ಸಂಗೀತ ಮಾಧುರ್ಯವನ್ನು ಕೇಳಿ, ಶಾರಿಕಾ, ಮತ್ತು ಕೋಗಿಲೆ ಮುಂತಾದವುಗಳೆಲ್ಲವೂ ನಾಚಿಕೆಯಿಂದ ತಮ್ಮ ಗುಂಪುಗಳೊಡನೆ ಆ ಸ್ಥಳವನ್ನು ಬಿಟ್ಟು ಕಾಡಿಗೆ ಹೊರಟುಹೋಗುತ್ತಿದ್ದವು. ॥೫೫॥

ಅವರ ಸಂಗೀತವನ್ನು ಕೇಳಿ ಉತ್ಸಾಹಭರಿತರಾಗಿ ದೇವತಾ ಸ್ತ್ರೀಯರೆಲ್ಲರೂ ಮುಗ್ಧರಾಗಿರುವರು. ಚಿರತೆಗಳೂ, ಸೃಮರ, ಮತ್ತು ಚಮರೀಮೃಗಗಳೂ ಸಹ ಈ ಸಂಗೀತದಿಂದ ಮೈಮರೆತಿರುವುವು. ॥೫೬॥

ಮಹಾಕಾಲೇಶ್ವರನ ಆ ದೇವಾಲಯದಲ್ಲಿ ಗಾಳಿಯ ಹೊಡೆತವು ಸ್ವಲ್ಪವೂ ಇರಲಿಲ್ಲ. ಅಲ್ಲಿ ಆ ಚಿತ್ರರಥರಾಜನೂ, ಅವನ ಪತ್ನಿ ಮತ್ತು ಪುತ್ರರೂ ಸಂತೋಷಯುಕ್ತರಾಗಿ ಮಹಾಕಾಲೇಶನ ಆ ದಿವ್ಯಲಿಂಗವನ್ನು ಆದರದಿಂದ ನೋಡುತ್ತಿರುವರು. ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಮಾಲೆ ಇವುಗಳನ್ನು ಧರಿಸಿರುವ ಆ ಮಹಾರಾಜನು ತನ್ನ ರಾಣಿಯರ ಉದಾರವೂ ಮತ್ತು ಶ್ರೇಷ್ಠವೂ ಆದ ಗಾನ

ದಾರೋದಾರಮಹಾಗಾನಂ ನಾಟ್ಯಮತ್ಯುತ್ತಮೋತ್ತಮಂ ।
ಪಶ್ಯನ್ನಾಸ್ತೇ ಸ ಭೂಪಾಲಃ ಕಾಮುಕಃ ಕಾಮಿನೀಮಿವ ॥೫೯॥

ತದ್ಗಾನಾಮೃತಧಾರಾಭಿಃ ಸುಧಾಧಿಕ್ಕಾರಿಭಿರ್ನೃಪಃ ।
ಶಿವನಾಮಾನುಸಂಧಾನಂ ಕುರ್ವನ್ನಾಸ್ತೇ ಪ್ರಹೃಷ್ಟಧೀಃ ॥೬೦॥

ಶಾಂಭವೈರ್ಮಂತ್ರಿಭಿಃ ಸಾರ್ಧಂ ವೃದ್ಧೈರ್ಮುನಿಗಣೈರಪಿ ।
ತೇನೋರುಬಿಲ್ವತರವಃ ಸ್ಥಾಪಿತಾಃ ಶಂಕರಾಂಗಣೇ ॥೬೧॥

ತನ್ಮೂಲೇ ಬಾಣಲಿಂಗಾನಿ ಸ್ಥಾಪಯಾಮಾಸ ವೈ ನೃಪಃ ।
ಲಿಂಗಾನಿ ಪೂಜಯತ್ಯಾಶು ಬಿಲ್ವಪತ್ರೈಃ ಪ್ರತಿಕ್ಷಣಂ ॥೬೨॥

ಶಾಂಭವೈಃ ಸಹ ಸಲ್ಲಾಪಂ ಕರೋತ್ಯೇವ ಸ ಭೂಪತಿಃ ।
ಶೈವೀಮೇವ ಕಥಾಂ ನಿತ್ಯಂ ಶೃಣೋತ್ಯೇವ ಸದಾ ನೃಪಃ ॥೬೩॥

ವನ್ನು ಅಲ್ಲದೆ ಅತ್ಯುತ್ತಮವಾದ ನಾಟ್ಯವನ್ನೂ ನೋಡುತ್ತಾ ಕಾಮುಕನಾದ ಪುರುಷನು ತನ್ನ ಕಾಮಿನಿಯನ್ನು ಪ್ರೀತಿಪೂರ್ವಕವಾಗಿ ನೋಡುವಂತೆ ಆನಂದ ಭರಿತನಾಗಿರುವನು. ॥೫೭-೫೮-೫೯॥

ಅಮೃತವನ್ನೂ ತಿರಸ್ಕರಿಸುವಂತಿರುವ ಮಾಧುರ್ಯವಿಶಿಷ್ಟವಾದ ಆ ತನ್ನ ರಾಣಿಯರ ಗಾನವೆಂಬ ಅಮೃತಧಾರೆಗಳಿಂದ ಆ ಚಿತ್ರರಥರಾಜನು ಶಿವನಾಮ ಗಳನ್ನು ಅನುಸಂಧಾನಮಾಡುತ್ತಾ ಸಂತೋಷಭರಿತವಾದ ಮನಸ್ಸುಳ್ಳವನಾಗಿ ಆನಂದದಿಂದ ಕಾಲಕಳೆಯುತ್ತಿರುವನು. ॥೬೦॥

ಆ ಶಂಭುವಿನ ಭಕ್ತರಾದ ಮಂತ್ರಿಗಳು ಮತ್ತು ವೃದ್ಧರಾದ ಮುನಿಗಳ ಸಮೂಹ ಇವರುಗಳೊಡನೆ ಆ ಚಿತ್ರರಥನು ಶಂಕರನ ದೇವಾಲಯಾಂಗಣಪ್ರದೇಶ ದಲ್ಲಿ ದೊಡ್ಡ ದೊಡ್ಡ ಬಿಲ್ವವೃಕ್ಷಗಳನ್ನು ಸ್ಥಾಪಿಸಿರುವನು. ॥೬೧॥

ಆ ಬಿಲ್ವವೃಕ್ಷಗಳ ಬುಡಗಳಲ್ಲಿ ಪಂಚಲಿಂಗಗಳನ್ನು ಸ್ಥಾಪಿಸಿ ಪ್ರತಿಕ್ಷಣ ದಲ್ಲಿಯೂ ಆ ಲಿಂಗಗಳನ್ನು ಭಕ್ತಿಪುರಸ್ಸರವಾಗಿ ಬಿಲ್ವಪತ್ರೆಗಳಿಂದ ಪೂಜೆಮಾಡು ತ್ತಿರುವನು. ॥೬೨॥

ಆ ಚಿತ್ರರಥರಾಜನು ಯಾವಾಗಲೂ ಶಿವಭಕ್ತರೊಡನೆಯೇ ಸಂಭಾಷಣೆಗಳನ್ನಾ ಡುತ್ತಾ ಸದಾ ಶಿವಸಂಬಂಧವಾದ ಕಥೆಗಳನ್ನೇ ಆದರದಿಂದ ಕೇಳುತ್ತಿರುವನು. ॥೬೩॥

ಶಾಂಭವಾ ಭೋಜಿತಾಸ್ತೇನ ಶಿವನೈವೇದ್ಯರಾಶಿಭಿಃ ।
ತದ್ಗೃಹೇ ಶಿವನಾಮಾನಿ ಸದಾ ಗಾಯಂತಿ ಗಾಯಕಾಃ ॥೬೪॥

ಶುಕಾಶ್ಚ ಶಾರಿಕಾಸ್ತತ್ರ ಪಾಹಿ ಶಂಭೋ ಶಿವೇತಿ ಚ ।
ವದಂತಿ ಪ್ರೀತಿವಾಕ್ಯಾನಿ ಶೈವಾನ್ಯೇವಾಥ ಪತ್ರಿಣಃ ॥೬೫॥

ನೃತ್ಯಂತಿ ಚ ಮಯೂರಾಸ್ತೇ ಶಿವಲಿಂಗಾಗ್ರತಸ್ಸದಾ ।
ಸ್ವಪಕ್ಷಧೂನನವ್ಯಾಜೈಃ ಶೈವಾನ್ಖಿನ್ನಾನ್ಪತತ್ರಿಣಃ ॥೬೬॥

ವೀಜಯಂತಿ ಸದಾ ಹೃಷ್ಟಾಶ್ಚಂಚುಭಿಃ ಕಂಡುನಾಶಕಾಃ ।
ಬಿಲ್ವವೃಕ್ಷೇಷು ಸತತಂ ನಿವಸಂತಿ ಸದಾಂಡಜಾಃ ॥೬೭॥

ಅವನು ಶಿವನಿಗೆ ನಿವೇದನಮಾಡಿದ ಆಹಾರಸಾಮಗ್ರಿಗಳ ರಾಶಿಗಳಿಂದ ಆ ಪರಶಿವಭಕ್ತರಿಗೆ ಭೋಜನಮಾಡಿಸಿದನು. ಅವನ ಮನೆಯಲ್ಲಿ ಯಾವಾಗಲೂ ಗಾಯಕರು (ಯಾವಾಗಲೂ ಗಾನಮಾಡುವವರು) ಆ ಪರಶಿವನ ದಿವ್ಯನಾಮುಗಳನ್ನು ಹಾಡುತ್ತಿದ್ದರು. ॥೬೪॥

ಆ ರಾಜನ ಅರಮನೆಯಲ್ಲಿ ಸಾಕಿರುವ ಗಿಣಿಗಳು ಮತ್ತು ಶಾರಿಕಾ ಮುಂತಾದ ಪಕ್ಷಿಗಳೂ ಸಹ ಶಂಭೋ ! ಶಿವ ! ಎಂಬುದಾಗಿ ಆ ಪರಶಿವನ ಸಂಬಂಧವಾದ ದಿವ್ಯನಾಮುಗಳನ್ನೇ ಮುದ್ದುಮುದ್ದಾಗಿ ಆಡುತ್ತಿರುವುವು. ॥೬೫॥

ನವಿಲುಗಳು ಆ ಶಿವಲಿಂಗಗಳ ಮುಂಭಾಗದಲ್ಲಿ ಸದಾ ಸಂತೋಷದಿಂದ ನರ್ತನಮಾಡುತ್ತಿರುವುವು. ಪಕ್ಷಿಗಳು ತಮ್ಮ ರೆಕ್ಕೆಗಳನ್ನು ಕೊಡವಿಕೊಳ್ಳುವ ನೆಪದಿಂದ ಬಳಲಿಬಂದು ಕುಳಿತಿರುವ ಶಿವಭಕ್ತರಿಗೆ ಗಾಳಿ ಬೀಸುತ್ತಿರುವುವು. ಅಲ್ಲದೆ ಇನ್ನು ಕೆಲವು ಪಕ್ಷಿಗಳು ಯಾವಾಗಲೂ ಸಂತೋಷದಿಂದ ನವೆ ಬಂದು ತುರಿಸುತ್ತಿರುವ ಶಿವಭಕ್ತರ ಮೈಯನ್ನು ತಮ್ಮ ಕೊಕ್ಕುಗಳಿಂದ ಕೆರೆಯುತ್ತಿರುವುವು. ಯಾವಾಗಲೂ ಆ ಬಿಲ್ವವೃಕ್ಷಗಳಲ್ಲಿ ಪಕ್ಷಿಗಳು (ಮೊಟ್ಟೆಯಿಂದ ಮರಿಯಾಗುವ) ಸಂತೋಷದಿಂದ ವಾಸಮಾಡುತ್ತಿರುವುವು. ॥೬೬-೬೭॥

ಗೋರಸಾಪಾರಪೂರೈಶ್ಚ ಮಹಾಕಾಲಮಸೇಚಯತ್ ।
ಫಲಸಾರೈಶ್ಚ ವಿವಿಧೈಃ ಪೂಜಯಾಮಾಸ ಶಂಕರಂ ॥೬೮॥

ಗಂಧಕರ್ಪೂರಪಾಟೀರಮೃಗನಾಭಿದ್ರವ್ಯೈಃ ಶುಭೈಃ ।
ಲೇಪಯಾಮಾಸ ದೇವೇಶಂ ಸುಗಂಧೈರ್ಯಕ್ಷಕರ್ದಮೈಃ ॥೬೯॥

ಅನರ್ಘ್ಯೈರ್ಮೃದುಸೌವರ್ಣದುಕೂಲೈರತಸೀಭವೈಃ ।
ವೇಷ್ಟಯಾಮಾಸ ವಿಮಲೈರ್ನಾನಾವರ್ಣೈರ್ನೃಪೋತ್ತಮಃ ॥೭೦॥

ಶ್ವೇತಕೃಷ್ಣಾಗರೂತ್ಥೈಶ್ಚ ಧೂಪೈರ್ದೇವಮಧೂಪಯತ್ ।
ಕಪಿಲಾಗೋಘೃತಾಪಾರದೀಪೈಃ ಕರ್ಪೂರಖಂಡಜೈಃ ॥೭೧॥

ದೀಪಯಾಮಾಸ ವಿಶ್ವೇಶಂ ಸಾಯಮಾಮುದಯಂ ನೃಪಃ ।
ತದ್ದೀಪಪ್ರಭಯಾ ಲೋಕಾ ದೀಪಿತಾಸ್ತೇ ಚತುರ್ದಶ ॥೭೨॥

---

ಹಸುಗಳ ಅಪಾರವಾದ ನೊರೆಹಾಲುಗಳಿಂದ ಆ ರಾಜನು ಮಹಾಕಾಲೇಶ್ವರ ಲಿಂಗಕ್ಕೆ ಅಭಿಷೇಕ ಮಾಡಿದನು. ಮತ್ತು ಜಗನ್ಮಂಗಳಕರನಾದ ಆ ಮಹೇಶನನ್ನು ನಾನಾವಿಧವಾದ ರಸಭರಿತ ಹಣ್ಣುಗಳಿಂದ ತೃಪ್ತಿಪಡಿಸಿದನು. ॥೬೮॥

ಗಂಧ, ಕರ್ಪೂರ, ಚಂದನ, ಕಸ್ತೂರಿ ಮುಂತಾದ ಸುಗಂಧದ್ರವ್ಯಗಳಿಂದಲೂ ಯಕ್ಷಕರ್ದಮದಿಂದಲೂ ಆ ದೇವೇಶ್ವರನಾದ ಮಹಾದೇವನಿಗೆ ಗಂಧಲೇಪನಮಾಡಿದನು. ॥೬೯॥

ನಾನಾಬಣ್ಣವುಳ್ಳದ್ದು ಅಮೂಲ್ಯವೂ, ಮೃದುವೂ ಸುವರ್ಣಮಯವೂ ಆದ ಶುಭ್ರವಾಗಿರುವ ರೇಷ್ಮೆಯ ವಸ್ತ್ರಗಳನ್ನು ಆ ರಾಜಕುಲೋತ್ತಮನಾದ ಚಿತ್ರರಥ ಮಹಾರಾಜನು ಆ ಶಿವನಲಿಂಗಕ್ಕೆ ಸುತ್ತಿದನು. ॥೭೦॥

ಬಿಳಿಯ ಮತ್ತು ಕಪ್ಪು ಅಗರುವಿನ ಚಕ್ಕೆಗಳಿಂದುಂಟಾದ ಧೂಪಗಳಿಂದ ಆ ದೇವನಿಗೆ ಧೂಪಹಾಕಿದನು. ಮತ್ತು ಸಾಯಂಕಾಲದಿಂದ ಬೆಳಗಿನ ವರೆವಿಗೂ ಕಪಿಲವರ್ಣದ ಗೋವಿನ ಅಪಾರವಾದ ತುಪ್ಪದ ಮತ್ತು ಕರ್ಪೂರದ ಗೆಡ್ಡೆಗಳ ದೀಪಗಳಿಂದ ಆ ವಿಶ್ವೇಶ್ವರನಿಗೆ ದೀಪವನ್ನು ಹೊತ್ತಿಸಿದನು. ಆ ದೀಪಗಳ ಕಾಂತಿಯಿಂದ ಹದಿನಾಲ್ಕು ಲೋಕಗಳೂ ಬೆಳಕಾಗುವಂತಿದ್ದಿತು. ॥೭೧-೭೨॥

ಅತ್ಯುಜ್ವಲಮಹಾರತ್ನಭೂಷಣೈರ್ನವರತ್ನಜೈಃ ।
ನಿಷ್ಟಪ್ತಹೇಮಖಚಿತೈರ್ಭೂಷಯಾಮಾಸ ಶಂಕರಂ ॥೭೩॥

ನವರತ್ನಾನೇಕಕೃತಂ ಗೋಲಕಂ ಲಿಂಗಮಸ್ತಕೇ ।
ದಾಪಯಾಮಾಸ ನೃಪತಿರ್ಭುಜಂಗಮಣಿಭಿರ್ವೃತಂ ॥೭೪॥

ಸ ಲಕ್ಷಬಿಲ್ವಪತ್ರೈಶ್ಚ ಪೂಜಯಾಮಾಸ ಶಂಕರಂ ।
ಸಿತರಕ್ತೈಸ್ತಥಾ ಪದ್ಮೈಃ ಫುಲ್ಲಸೌಗಂಧಿಕೈಃ ಶಿವಂ ॥೭೫॥

ಪುನ್ನಾಗನಾಗಬಕುಲೈಶ್ಚಂಪಕೈಃ ಕರವೀರಕೈಃ ।
ಸ ಲಕ್ಷೈಃ ಪೂಜಯಾಮಾಸ ಮಹಾಕಾಲಮಹರ್ನಿಶಂ ॥೭೬॥

ನೀಲೋತ್ಪಲಸಹಸ್ರಾಢ್ಯಾಂ ಮಾಲಾಂ ಲಿಂಗೇ ಪ್ರಕಲ್ಪಯತ್ ।
ನೈವೇದ್ಯಗಿರಯಸ್ತೇನ ಕಲ್ಪಿತಾಃ ಕೋಟಿಶೋಽಂಬಿಕೇ ॥೭೭॥

ನವರತ್ನಗಳಿಂದಲೂ ಮತ್ತು ಅತಿಪ್ರಕಾಶಮಾನವಾದ ದೊಡ್ಡ ದೊಡ್ಡ ರತ್ನಗಳಿಂದಲೂ ಖಚಿತವಾದ ಪುಟಹಾಕಿದ ಚಿನ್ನದ ಒಡವೆಗಳಿಂದ ಆ ಶಂಕರನನ್ನು ಅಲಂಕರಿಸಿದನು. ॥೭೩॥

ಆ ಚಿತ್ರರಥಮಹಾರಾಜನು ಅನೇಕ ನವರತ್ನಗಳಿಂದಲೂ ಮತ್ತು ನಾಗಮಣಿಗಳಿಂದಲೂ ಖಚಿತವಾದ ಧಾರಾಪಾತ್ರೆಯನ್ನು ಮಾಡಿಸಿ ಆ ಶಿವಲಿಂಗದ ತಲೆಯ ಮೇಲೆ ಇರಿಸಿದನು. ॥೭೪॥

ಚಿತ್ರರಥರಾಜನು ಒಂದು ಲಕ್ಷ ಬಿಲ್ವ ಪತ್ರೆಗಳಿಂದ ಆ ಶಿವನನ್ನು ಪೂಜೆ ಮಾಡಿದನು. ಹಾಗೆಯೇ ಬಿಳಿಯ ತಾವರೆ, ಕೆಂದಾವರೆ, ಅರಳಿದ ಸೌಗಂಧಿಕಾ ಕುಸುಮ, ಪುನ್ನಾಗ, ನಾಗಸಂಪಿಗೆ, ಬಕುಲಪುಷ್ಪ, ಸಂಪಿಗೆ, ಮತ್ತು ಕಣಿಗಲೆ ಈ ಹೂವುಗಳನ್ನು ಲಕ್ಷಗಟ್ಟಲೆ ಪೂಜೆಮಾಡುತ್ತಾ ಮಹಾಕಾಲೇಶನೆನಿಸಿದ ಆ ಮಹಾದೇವನನ್ನು ಹಗಲೂ ರಾತ್ರಿ ಎಡಬಿಡದೇ ಸೇವಿಸಿದನು. ॥೭೫-೭೬॥

ಎಲೌ ಅಂಬಿಕೆಯೆ, ಸಾವಿರಕನ್ನೈದಿಲೆ ಹೂವುಗಳಿಂದ ನಿರ್ಮಿತವಾದ ಮಾಲೆಯನ್ನು ಆ ಶಿವಲಿಂಗಕ್ಕೆ ಹಾಕಿಸಿದನು. ಆ ಮಹಾರಾಜನು ನೈವೇದ್ಯಗಳ ರಾಶಿಯನ್ನು ಕೋಟಿಗಟ್ಟಲೆ ಮಹಾದೇವನಿಗೆ ಸಮರ್ಪಿಸಿದನು ॥೭೭॥

ಅಪೂಪಗಿರಯಸ್ತ್ರೇನ ಸೂಪಪಾಯಸಕರ್ದಮಾಃ ।
ದಧಿಕ್ಷೀರಪ್ರವಾಹೈಶ್ಚ ಸೋಪದಂಶಸಕೈಸ್ತಥಾ ॥೭೮॥

ಖದಿರಾಸಾರತಕ್ಕೋಲಸುಜಾತೀಫಲಪತ್ರಕೈಃ ।
ಲವಂಗೇಲಾಶುಂಠಿಯುಕ್ತೈಃ ಕರ್ಪೂರಕ್ರಮುಕೈಸ್ತಥಾ ॥೭೯॥

ಮುಕ್ತಾಚೂರ್ಣಸಮಾಯುಕ್ತನಾಗವಲ್ಲೀದಲಾರ್ಪಣೈಃ ।
ರತ್ನಛತ್ರೈರಪಾರೈಶ್ಚ ಚಾಮರೈರ್ವ್ಯಜನೈರಪಿ ॥೮೦॥

ವ್ಯಜನೈರ್ವೀಜಯಾಂಚಕ್ರೇ ಛತ್ರೈರಾಚ್ಛಾದಯಚ್ಛಿವಂ ।
ಹಂಸಕಲ್ಪೈಶ್ಚಾಮರೌಘೈರ್ದುಧಾವ ಜಗದೀಶ್ವರಂ ॥೮೧॥

ದುಂದುಭಿಪ್ರಮುಖಾನೇಕಮೃದಂಗಾನಕಗೋಮುಖೈಃ ।
ಶಂಖಕಾಹಲನಿರ್ಘೋಷೈರ್ಮಹಾಕಾಲಮಘೋಷಯತ್ ॥೮೨॥

ತೊವ್ವೆ, ಪಾಯಸ ಇವುಗಳೂ, ಪರ್ವತಕ್ಕೆ ಸಮಾನವಾದ ಅಪೂಪದರಾಶಿಗಳೂ ಹಾಲು, ಮೊಸರು ಇವುಗಳ ಪ್ರವಾಹಗಳೊಡನೆಯೂ, ಉಪ್ಪಿನಕಾಯಿಯೇ ಮುಂತಾದ ನಂಜಿಕೊಳ್ಳುವ ಪದಾರ್ಥಗಳೊಡನೆಯೂ ಆ ಶಿವನಿಗೆ ನಿವೇದನ ಮಾಡಲ್ಪಟ್ಟವು. ॥೭೮॥

ಖದಿರಾಸಾರ (ಕಾಚು) ತಕ್ಕೋಲ, ಒಳ್ಳೆಯ ಜಾಯಿಕಾಯಿ, ಜಾಪತ್ರೆ, ಲವಂಗ, ಏಲಕ್ಕಿ, ಶುಂಠಿ, ಇವುಗಳಿಂದ ಯುಕ್ತವಾದ ಕರ್ಪೂರಮಿಶ್ರಿತ ಅಡಿಕೇ ಪುಡಿ, ಮುತ್ತಿನ ಚಿಪ್ಪಿನ ಸುಣ್ಣದಿಂದ ಬೆರೆತ ವೀಳ್ಯೇದೆಲೆ ಇವುಗಳನ್ನು ಆ ಪರಶಿವ ನಿಗೆ ಸಮರ್ಪಿಸಿದನು. ಅಪಾರವಾದ ರತ್ನಛತ್ರಿಗಳಿಂದ ಆ ದೇವನಿಗೆ ನೆಳಲು ಮಾಡಿದನು. ಚಾಮರಗಳಿಂದಲೂ, ಬೀಸಣಿಗೆಗಳಿಂದಲೂ ಮತ್ತು ಹಂಸಕ್ಕೆ ಸಮಾನವಾದ ಬಿಳುಪಿನಿಂದ ಕೂಡಿರುವ ಚಾಮರಗಳ ಸಮೂಹಗಳಿಂದಲೂ, ಆ ಜಗದೀಶ್ವರನಿಗೆ ಗಾಳಿ ಬೀಸಿದನು. ॥೭೯-೮೦-೮೧॥

ದುಂದುಭಿಯೇ ಮುಂತಾದ ಅನೇಕ ಮೃದಂಗ, ತಮಟೆ, ಗೋಮುಖ, ಶಂಖ, ಕಾಹಳೆ, ಇವುಗಳ ಗಂಭೀರವಾದ ಧ್ವನಿಗಳಿಂದ ಆ ಮಹಾಕಾಲೇಶ್ವರನಿಲಯ ವನ್ನು ಶಬ್ದಾಯಮಾನವನ್ನಾಗಿ ಮಾಡಿದನು. ॥೮೨॥

ನಾನಾಪ್ಸರೋಗಣಾಸ್ತೇನ ನಾಟ್ಯಾರ್ಥಂ ಶಿವಮಂದಿರೇ ।
ಕಲ್ಪಿತಾಸ್ತೇನ ಭೂಪೇನ ನಿಷ್ಕಲಂಕ್ಯೋ ವರಾಂಗನಾಃ ॥೮೩॥

ಏವಂ ಪ್ರತಿದಿನಂ ರಾಜಾ ಮಹಾಲಿಂಗಾರ್ಚನೇ ರತಃ ।
ತಸ್ಯ ನಾನ್ಯತ್ಕೃತ್ಯಮಸ್ತಿ ಶಿವಚಿತ್ತೋ ಮಹೀಪತಿಃ ॥೮೪॥

ದಾರೋದಾರಕುಮಾರೈಶ್ಚ ವಸತ್ಯೇವ ಶಿವಾಲಯೇ ।
ಭೋಜಯಾಮಾಸ ನೈವೇದ್ಯೈಃ ಶಾಂಭವಾನೇವ ಕೋಟಿಶಃ ॥೮೫॥

ತದ್ರಾಜ್ಯೇ ಸರ್ವಥಾ ಸರ್ವೇ ಶಿವನೈವೇದ್ಯಭೋಜನಾಃ ।
ಪವಿತ್ರಗಾತ್ರಾಸ್ತೇನೈವ ತ್ರಿನೇತ್ರಪ್ರಿಯಕೃತ್ತಮಾಃ ॥೮೬॥

ತದ್ರಾಜ್ಯಮಭಿವೃದ್ಧಂ ಸ್ಯಾತ್ತನ್ಮಂತ್ರಿಪ್ರವರೈರ್ಧೃತಂ ।
ಚಾತುರ್ವರ್ಣ್ಯಂ ಶಾಂಭವಾಂಶ್ಚ ಪ್ರಜಾಪತಿರಿವ ಪ್ರಜಾಃ ॥೮೭॥

---

ಆ ಚಿತ್ರರಥರಾಜನು ಆ ಶಿವಮಂದಿರದಲ್ಲಿ ನರ್ತನಮಾಡುವುದಕ್ಕೋಸ್ಕರ ಸುಂದರವಾದ ಕತ್ತುಳ್ಳ, ಸುಂದರಾಂಗಿಯರಾದ ಅಪ್ಸರಸ್ತ್ರೀಯರ ಸಮೂಹವನ್ನೇ ಕರೆಸಿದ್ದನು. ॥೮೩॥

ಹೀಗೆ ಆ ಚಿತ್ರರಥಮಹಾರಾಜನು ಪ್ರತಿದಿನವೂ ಮಹಾಲಿಂಗ ಪೂಜೆಯಲ್ಲಿಯೇ ನಿರತನಾಗಿದ್ದನು. ಅವನಿಗೆ ಬೇರೆ ಕಾರ್ಯವೇ ಇರಲಿಲ್ಲ. ಆ ರಾಜನ ಮನಸ್ಸು ಯಾವಾಗಲೂ ಶಿವನಲ್ಲಿಯೇ ಅನುರಕ್ತವಾಗಿದ್ದಿತು. ॥೮೪॥

ಉದಾರ ಗುಣಶಾಲಿಗಳಾದ ತನ್ನ ಪತ್ನೀ ಪುತ್ರರೊಡನೆ ಆ ಚಿತ್ರರಥಮಹಾರಾಜನು ಆ ಶಿವದೇವಾಲಯದಲ್ಲಿಯೇ ವಾಸಮಾಡುತ್ತಿದ್ದನು. ಆ ಮಹಾನುಭಾವನು ಶಿವನೈವೇದ್ಯಗಳಿಂದ ಕೋಟ್ಯಂತರ ಶಂಭುಭಕ್ತರನ್ನು ಭೋಜನಮಾಡಿಸಿದನು. ॥೮೫॥

ಆ ಚಿತ್ರರಥನ ರಾಜ್ಯದಲ್ಲಿ ಸರ್ವಪ್ರಕಾರದಿಂದಲೂ ಎಲ್ಲರೂ ಆ ಪರಶಿವನ ನೈವೇದ್ಯವನ್ನೇ ಭಕ್ಷಣೆಮಾಡುತ್ತಾ, ಆದರಿಂದ ಪರಿಶುದ್ಧವಾದ ಶರೀರವುಳ್ಳವರಾಗಿ ಮುಕ್ಕಣ್ಣನಾದ ಮಹಾದೇವನಿಗೆ ಪ್ರೀತಿಪಾತ್ರರಾಗಿದ್ದರು. ॥೮೬॥

ಅವನ ಮಂತ್ರಿಶ್ರೇಷ್ಠರಿಂದ ಧರಿಸಲ್ಪಟ್ಟಿದ್ದ ಆ ಚಿತ್ರರಥಮಹಾರಾಜನ ರಾಜ್ಯವು ಮತ್ತೂ ಅಭಿವೃದ್ಧಿಹೊಂದಿತು. ಆ ರಾಜನು ಬ್ರಹ್ಮನು ತನ್ನ ಪ್ರಜೆಗಳನ್ನು

ಶಶಾಸ ನಿಹತಾರಾತಿಃ ಪುರಾರಾತಿಪ್ರಸಾದತಃ ।
ಸಂಸಾರಚಿಂತಾವಿರತೋ ನಿರತಃ ಶಿವಪೂಜನೇ ॥೮೮॥

ನೈವೇದ್ಯೈಃ ಶಿವತರ್ಪಿತೈರಘಹರೈಃ ಸಂಪೂಜ್ಯ ಶೈವಾನ್ನೃಪಃ
ಸಾರ್ಧಂ ಪುತ್ರಕಳತ್ರಮಿತ್ರಸಹಿತೋಽವಾತ್ಸೀತ್ಸದಾ ಕಾಮದೇ ।
ಕ್ಷೇತ್ರೇಽಸ್ಮಿನ್ಸತತಂ ಮಹೇಶಕಥಯಾ ಶ್ರೀಕಾಲಕಾಲಾರ್ಚನಂ
ಕುರ್ವನ್ ನಿರ್ಮಲಚಿತ್ತಮೇತದಧುನಾ ಸಂಸಾರವಾರ್ತಾಲಸಂ॥೮೯॥

ಪದಂತ್ಯೇವ ಭಾವಾಃ ಶಿವೇ ಸಕ್ತಭಾವಾ
ಭವೇಽಸಕ್ತಭಾವಾ ನೃಪೇ ಹರ್ಷಭಾವಾಃ ।
ಗತಾಸಂಗಭಾವಾಃ ಸದಾಸಕ್ತಿಭಾವಾ
ಮಹಾಕ್ಲೈರಭಾವಾ ವಸಂತ್ಯೇವ ಭಾವಾಃ ॥೯೦॥

ರಕ್ಷಿಸುವಂತೆ ಶಂಭುಭಕ್ತರಾದ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರನ್ನೂ ಪರಿಪಾಲಿಸುತ್ತಿದ್ದನು. ॥೮೭॥

ತ್ರಿಪುರಾಸುರಧ್ವಂಸಕನಾದ ಆ ಮಹೇಶ್ವರನ ಅನುಗ್ರಹದಿಂದ ಚಿತ್ರರಥ ಮಹಾರಾಜನು ಶತ್ರುಗಳನ್ನೆಲ್ಲಾ ಧ್ವಂಸಮಾಡಿ, ಸಾಂಸಾರಿಕವಾದ ಯೋಚನೆಯಲ್ಲಿ ವಿರಕ್ತನಾಗಿ ಸದಾ ಶಿವಪೂಜೆಯಲ್ಲಿಯೇ ನಿರತನಾಗಿದ್ದನು. ॥೮೮॥

ಶಿವನಿಗೆ ನಿವೇದನಮಾಡಿದ ಭಕ್ಷ್ಯಭೋಜ್ಯಾದಿಗಳಿಂದ ಆ ರಾಜನು ಶಿವಭಕ್ತರನ್ನು ಭಕ್ತಿಪುರಸ್ಸರವಾಗಿ ಪೂಜಿಸಿ ಊಟಮಾಡಿಸುತ್ತಿದ್ದನು. ಮತ್ತು ತನ್ನ ಹೆಂಡತಿ, ಮಕ್ಕಳು, ಮತ್ತು ಮಿತ್ರರು, ಇವರೊಡನೆ ಸಕಲ ಇಷ್ಟಾರ್ಥಗಳನ್ನೂ ಸಲ್ಲಿಸುವ ಈ ಮಹಾಕಾಲಕ್ಷೇತ್ರದಲ್ಲಿ ಮಹಾಕಾಲನನ್ನು ಪೂಜಿಸುತ್ತಾ ಆ ಮಹಾದೇವನ ಕಥಾಶ್ರವಣದಿಂದಲೇ ತನ್ನ ಮನಸ್ಸನ್ನು ಪರಿಶುದ್ಧಗೊಳಿಸಿಗೊಂಡು, ಸಾಂಸಾರಿಕವಾದ ವಿಷಯಗಳಲ್ಲಿ ವಿರಕ್ತನಾಗುವಂತೆ ಮಾಡಬೇಕೆಂದು ಪ್ರಾರ್ಥಿಸುತ್ತಾ ಆ ಕ್ಷೇತ್ರದಲ್ಲಿಯೇ ಸದಾ ವಾಸಮಾಡುತ್ತಿದ್ದನು. ॥೮೯॥

ಸದಾ ಶಿವನಲ್ಲಿಯೇ ಸಂಬಂಧಿಸಿರುವ ಮನೋಭಾವನೆಯುಳ್ಳವರೂ, ಸಾಂಸಾರಿಕ ಕ್ಲೇಶದಲ್ಲಿ ವಿರಕ್ತಭಾವನೆಯುಳ್ಳವರೂ ಆದ ಶಿವಭಕ್ತರು, ಆ ಚಿತ್ರರಥ ರಾಜನಲ್ಲಿ ಯಾವಾಗಲೂ ಸಂತೋಷಯುಕ್ತವಾದ ಭಾವನೆಯುಳ್ಳವರಾಗಿಯೇ ಇರುತ್ತಿದ್ದರು. ಮನ್ಮಥನ ಸಂಬಂಧವಾದ ಕಾಮವಿಷಯಕ ಭಾವನೆಯು ಅವರಲ್ಲಿ

ಶಿವಂ ಕಲಿಮಲೋತ್ಥಿತಪ್ರಬಲತಾಪಪಾಪಾನಲೈ
ರ್ವಿದಗ್ಧತನುಮಾನಸಾಃ ಸ್ಮರಹರಂ ನ ಚಾರ್ಚಂತಿ ತೇ ।
ಮದನ್ಯಸುರಪಾಮರಾನ್ಹರಿವಿಧೀಂದ್ರಪೂರ್ವಾಮರಾನ್
ಸದಾ ಮುಹುರನನ್ಯಧೀಃ ಸ್ಮರತಿ ಭಾಗ್ಯಹೀನೋ ನರಃ ॥೯೧॥

ಶಿವನೈವೇದ್ಯಮಪಾರಪುಣ್ಯಲಭ್ಯಂ
ನ ಹಿ ಲಭ್ಯಂ ಸತತಂ ಶಿವದ್ರುಹಾಣಾಂ ।
ರಜತಾದ್ರಿನಿವಾಸಭುಕ್ತಿಮುಕ್ತೌ
ಮತಿರುಜ್ಜಾಯತಿ ಶಂಕರಪ್ರಸಾದಾತ್ ॥೯೨॥

ಇತಿ ಶ್ರೀ ಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಶಿವಗೌರೀಸಂವಾದೇ
ಉಜ್ಜಯಿನೀ ಮಹಾಕಾಲಮಹಿಮಾನುವರ್ಣನಂ
ನಾಮ ಪ್ರಥಮೋಽಧ್ಯಾಯಃ

---

ಇರಲಿಲ್ಲ. ಸದಾ ಶಿವಪೂಜಾ, ಶಿವಕಥಾಶ್ರವಣ ಮುಂತಾದವುಗಳಲ್ಲಿ ಆಸಕ್ತಿಭಾವನೆ ಯೇ ಅವರಲ್ಲಿ ತುಂಬಿ ತುಳುಕಾಡುತ್ತಿದ್ದವು. ಮಹಾಪಾಪಗಳಿಂದ ರಹಿತರಾದ ಶಾಂಭವರು ಸದಾ ಭವ ವಿಷಯಕವಾದ (ಸಕಲ ಜಗತ್ತೂ ಇವನಿಂದಲೇ ಉಂಟಾಗುವುದರಿಂದ ಶಿವನಿಗೆ ಭವನೆಂಬ ಹೆಸರುಂಟಾಯಿತು) ಭಾವನೆಗಳಲ್ಲಿಯೇ ತಲ್ಲೀನರಾಗಿ ಸುಖದಿಂದಿರುವರು ॥೯೦॥

ಈ ಕಲಿಯ ದೋಷದಿಂದುಂಟಾದ ಪ್ರಬಲವಾದ ಶಾಪದಿಂದಲೂ, ತಾಪವ ನ್ನುಂಟುಮಾಡುವ ಪಾಪಗಳೆಂಬ ಬೆಂಕಿಗಳಿಂದ ಸುಡಲ್ಪಟ್ಟ ಶರೀರ ಮತ್ತು ಮನಸ್ಸು ಇವುಗಳಿಂದಲೂ, ಮಾನವರು ಮನ್ಮಥಧ್ವಂಸಕನಾದ ನನ್ನನ್ನು ಪೂಜಿಸು ವುದನ್ನು ಬಿಟ್ಟು ನನಗಿಂತಲೂ ಬೇರೆಯವರೂ, ಪಾಮರರೂ ಆದ ವಿಷ್ಣು, ಬ್ರಹ್ಮ, ಇಂದ್ರ ಮುಂತಾದ ದೇವತೆಗಳನ್ನು ಭಾಗ್ಯಹೀನರಾದ ಜನರು ಪದೇ ಪದೇ ಅನನ್ಯ ಭಾವನೆಯುಳ್ಳವರಾಗಿ ಸ್ಮರಣೆ ಮಾಡುತ್ತಾ ಕಾಲಕಳೆಯುತ್ತಿರುವರು. ದೇವಿಯೇ, ಇದು ಕಲಿಯುಗದ ಮಹಿಮೆ. ॥೯೧॥

ಅನಂತವಾದ ಪುಣ್ಯವಿಶೇಷಗಳಿಂದ ದೊರೆಯುವ ಆ ಶಿವನೈವೇದ್ಯವು ಶಿವ ದ್ರೋಹಿಗಳಿಗೆ ಯಾವಾಗಲೂ ಲಭಿಸಲಾರದು. ಲೋಕಮಂಗಳಕರನಾದ, ಮಹೇಶನ ಅನುಗ್ರಹದಿಂದ ರಜತಾಚಲಪರ್ವತದ ವಾಸ, ಭೋಗ ಮತ್ತು ಮುಕ್ತಿ

ಇವುಗಳಲ್ಲಿ ನನ್ನ ಭಕ್ತನಿಗೆ ಬುದ್ಧಿಯುಂಟಾಗುವುದು. ಎಂದು ಶಂಕರನು ಪಾರ್ವತಿಗೆ ಹೇಳಿದುದನ್ನು ಶೌನಕಾದಿಗಳಿಗೆ ಸೂತರು ತಿಳಿಯಪಡಿಸಿದರು. ||೯೨||

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗಸಂಜ್ಞಕವಾದ ಐದನೆಯ ಅಂಶದಲ್ಲಿ ಶಿವ ಮತ್ತು ಗೌರೀ ಇವರ ಸಂವಾದಾಂತರ್ಗತವಾದ ಉಜ್ಜಯಿನೀ ಪಟ್ಟಣದ ಮಹಾಕಾಲೇಶನ ಮಹಿಮೆಯ ವರ್ಣನೆಯೆಂಬ ಮೊದಲನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಚತುರ್ಥಾಂಶೇ

## ದ್ವಿತೀಯೋಽಧ್ಯಾಯಃ

॥ ಸೂತ ಉವಾಚ ॥

ತತಸ್ತೇ ಪ್ರಮಥೇಶಾನಪದಾಂಬುಜನಿಚಿಂತಕಾಃ ।
ಸಾನಂದಲೋಚನಾಃ ಸರ್ವೇ ಮುನಯೋಽಧ್ಯಾತ್ಮವೇದಿನಃ ॥೧॥

ಆಜಗ್ಮುರ್ನೃಪತಿಂ ದ್ರಷ್ಟುಂ ಭಸ್ಮಪಾಂಡರಮೂರ್ತಯಃ ।
ರುದ್ರಾಕ್ಷಮಾಲಾಭರಣಾಃ ಸದಾ ಪಂಚಾಕ್ಷರಪ್ರಿಯಾಃ ॥೨॥

ಪಂಚಾಸ್ಯಧ್ಯಾನನಿರತಾಃ ಪಂಚಬ್ರಹ್ಮವಿದಃ ಸದಾ ।
ಪಂಚೇಷುಬಾಣಧಾರಾಗ್ರತಿರಸ್ಕೃತಿಮಹೋಪಲಾಃ ॥೩॥

## ಎರಡನೆಯ ಅಧ್ಯಾಯವು

ಹೀಗೆ ಆ ಚಿತ್ರರಥಮಹಾರಾಜನು ಸದಾ ಶಿವಪೂಜಾ, ಶಿವಧ್ಯಾನ ಮತ್ತು ಶಿವಸಂಬಂಧವಾದ ಕಥಾಶ್ರವಣ ಇವುಗಳಲ್ಲಿಯೇ ಕುಟುಂಬ ಪರಿವಾರಸಮೇತನಾಗಿ ಕಾಲಕಳೆಯುತ್ತಿರಲು, ಒಂದು ದಿನ, ಪ್ರಮಥಗಣಗಳಿಗೆಲ್ಲಾ ಈಶ್ವರನಾದ (ಸ್ವಾಮಿಯಾದ) ಆ ಪರಶಿವನ ಅಡಿದಾವರೆಗಳನ್ನೇ ಅನವರತವೂ ಭಜನೆಮಾಡುತ್ತಿರುವವರೂ, ಆನಂದ ಪರಿಪೂರ್ಣವಾದ ನೇತ್ರಗಳುಳ್ಳವರೂ, ಅಧ್ಯಾತ್ಮಜ್ಞಾನಿಗಳೂ, ಭಸ್ಮಧಾರಣೆಯಿಂದ ಶುಭ್ರವರ್ಣವಾಗಿರುವ ದೇಹವುಳ್ಳವರೂ, ರುದ್ರಾಕ್ಷಮಾಲೆಗಳನ್ನು ಧರಿಸಿ, ಯಾವಾಗಲೂ ಶಿವಪಂಚಾಕ್ಷರಮಂತ್ರವನ್ನೇ ಜಪಮಾಡುತ್ತಿರುವವರೂ ಆದ ಕೆಲವು ಮುನಿಗಳು ಆ ರಾಜನನ್ನು ನೋಡಲು ಬಂದರು. ॥೧-೨॥

ಇವರು ಐದು ಮುಖಗಳುಳ್ಳ ಆ ಮಹೇಶನ ಧ್ಯಾನತತ್ಪರರೂ, ಪಂಚಬ್ರಹ್ಮತತ್ವಗಳನ್ನರಿತವರೂ, ಮನ್ಮಥನ ಬಾಣಗಳ ಧಾರೆಗಳ ಅಗ್ರಭಾಗವನ್ನು ತಿರಸ್ಕರಿಸು

ಸನಾತನಶ್ಚ ಸನಕಸ್ತಥೈವ ಚ ಸನಂದನಃ ।
ಸನತ್ಸುಜಾತಶ್ಚ ತಥಾ ಜಾತಹರ್ಷಾ ನೃಪೇಕ್ಷಣೇ ॥೪॥

ಸ ತಾನ್ಪ್ರತ್ಯುಜ್ಜಗಾಮಾಥ ಸಾರ್ಘ್ಯಹಸ್ತಃ ಕೃತಾಂಜಲಿಃ ।
ಪ್ರಣನಾಮ ಮಹೀಪಾಲಃ ಸಾಷ್ಟಾಂಗಸ್ಪೃಷ್ಟಭೂತಲಃ ॥೫॥

ಆಸನೇಷು ಸುನಿಷ್ಟಪ್ತಹೇಮಕ್ಲೃಪ್ತೇಷು ಭೂಸುರಾನ್ ।
ಗಾಮರ್ಘ್ಯಮುದಕಂ ತೇಷಾಂ ಸ್ಪರ್ಶಯಾಮಾಸ ಶಾಸ್ತ್ರತಃ ॥೬॥

ಓಮಿತ್ಯೃಷ್ಟೇತಿ ತೈರುಕ್ತೋ ನಿಷಸಾದ ವರಾಸನೇ ।
ಶೈವಸಂದರ್ಶನಾನಂದಸಂಜಾತಪುಲಕೋ ನೃಪಃ ॥೭॥

ವುದರಲ್ಲಿ ದೊಡ್ಡ ಕಲ್ಲಿನಂತಿರುವವರೂ (ಮನ್ಮಥವಿಕಾರವನ್ನು ಜಯಿಸಿದವರೂ) ಆಗಿದ್ದರು. ॥೩॥

ಹಾಗೆಯೇ ಆ ಮುನಿಗಳೊಡನೆ, ಸನಾತನರು, ಸನಕ, ಸನಂದನ, ಸನತ್ಸುಜಾತ, ಇವರೂ ಆ ಚಿತ್ರರಥಮಹಾರಾಜನನ್ನು ನೋಡಬೇಕೆಂದು ಸಂತೋಷಯುಕ್ತರಾಗಿದ್ದರು. ॥೪॥

ಹೀಗೆ ಬಂದು ಆ ಮುನಿಪುಂಗವರನ್ನೆಲ್ಲಾ ಆ ಚಿತ್ರರಥ ಮಹಾರಾಜನು ಸತ್ಕರಿಸಿ, ಕೈಮುಗಿದು ಅರ್ಘ್ಯದೊಡನೆ ಸಾಷ್ಟಾಂಗಪೂರ್ವಕವಾಗಿ ಭೂಮಿಯನ್ನು ಮುಟ್ಟಿ ನಮಸ್ಕಾರಮಾಡಿದನು. ॥೫॥

ಅನಂತರ ರಾಜನು ಆ ಬ್ರಾಹ್ಮಣೋತ್ತಮರನ್ನೆಲ್ಲಾ ಪ್ರೀತಿಯಿಂದ ಪುಟ ಹಾಕಿದ ಚಿನ್ನದಿಂದ ರಚಿತವಾದ ಆಸನಗಳಲ್ಲಿ ಕೂರಿಸಿ ಅವರಿಗೆ ಹಸುವನ್ನೂ, ಅರ್ಘ್ಯವನ್ನೂ, ಮತ್ತು ನೀರನ್ನೂ ಸಹ ಶಾಸ್ತ್ರೋಕ್ತವಾಗಿ ಒಪ್ಪಿಸಿದನು. ॥೬॥

ಆ ರಾಜನು, ಕೊಟ್ಟವಸ್ತುಗಳನ್ನೆಲ್ಲಾ ಓಂಕಾರದಿಂದ ಸ್ವೀಕರಿಸಿ ತೃಪ್ತರಾದೆವೆಂದು ಅವರೆಲ್ಲರೂ ಹೇಳಿದ ಮೇಲೆ, ತಾನೂ ಶ್ರೇಷ್ಠವಾದ ಆಸನದ ಮೇಲೆ ಕುಳಿತುಕೊಂಡು, ಮಹಾಶಾಂಭವರ ಸಂದರ್ಶನದಿಂದುಂಟಾದ ಆನಂದಾತಿರೇಕದಿಂದ ರೋಮಾಂಚ ಹೊಂದಿದನು. ॥೭॥

ಪ್ರಮೋದವರ್ಷಧಾರಾಭಿಃ ಪರಿಪ್ಲುತಕಲೇಬರಃ ।
ಮೋದಾಂಬುಧಿನಿಮಗ್ನಶ್ಚ ಸದಾ ಚಿತ್ರರಥೋ ನೃಪಃ ॥೮॥

ಸಾಂಜಲಿಃ ಪ್ರಾಹ ವಾಕ್ಯಾನಿ ಸುಧಾಧಾರಾಣಿ ಸಾದರಂ ॥೯॥

ಅಹೋ ಧನ್ಯೋಽಸ್ಮಿ ವಿಪ್ರೇಂದ್ರಾ ಭವತ್ಸಂದರ್ಶನಾದಹಂ ।
ಅದ್ಯ ನುತ್ಪೂರ್ವರಾಜೇಂದ್ರಾ ಯಾಶಾರೋಽನುಗ್ರಹಾದ್ದಿವಂ ॥೧೦॥

ಭವತಾಂ ದರ್ಶನಂ ಮೇಽದ್ಯ ಕಾಮಧೇನುಃ ಕಿಲಾರ್ಥದಂ ।
ಭವಾಂಗಸಂಗಜನಿತೋ ವಾತೋಽಪಿ ಸುಖದಾಯಕಃ ॥೧೧॥

ಕಿಂ ಕಿಂ ನ ಸೂತೇ ಭಾಗ್ಯಾನಿ ವಿವಿಧಾನ್ಯಮಿತಾನ್ಯಪಿ ।
ಮಹಾಕಾಲಮಹೇಶಸ್ಯ ಕೃಪಾಪೂರ್ಣಾ ಮಯಿ ಸ್ಥಿರಾ ॥೧೨॥

ಆನಂದವೆಂಬ ವೃಷ್ಟಿಯ ಧಾರೆಗಳಿಂದ ತೋಯಿಸಲ್ಪಟ್ಟ ಶರೀರವುಳ್ಳ ಆ ಚಿತ್ರರಥಮಹಾರಾಜನು ಆಗ ಆನಂದವೆಂಬ ಸಮುದ್ರದಲ್ಲಿಯೇ ಮುಳುಗಿರುತ್ತಿದ್ದನು. ॥೮॥

ಹೀಗೆ ಆ ಮುನಿಪುಂಗವರನ್ನೆಲ್ಲಾ ಉಚಿತವಾದ ಉಪಚಾರಗಳಿಂದ ಸತ್ಕರಿಸಿದ ಮೇಲೆ ಆ ಚಿತ್ರರಥಮಹಾರಾಜನು, ಆ ಮುನಿಗಳಿಗೆ ಕೈಮುಗಿದು ಅಮೃತಧಾರೆಗಳಿಗೆ ಸಮಾನವಾದ ವಾಕ್ಯಗಳನ್ನು ಆದರದಿಂದ ಈರೀತಿ ಹೇಳಿದನು. ॥೯॥

"ಬ್ರಾಹ್ಮಣೋತ್ತಮರೇ ! ನಿಮ್ಮ ಸಂದರ್ಶನದಿಂದ ನಾನು ಧನ್ಯನಾದೆನು. ನಮ್ಮ ವಂಶದ ರಾಜಶ್ರೇಷ್ಠರೆಲ್ಲರೂ ನಿಮ್ಮನುಗ್ರಹದಿಂದ ಸ್ವರ್ಗವನ್ನೈದುವರು. ॥೧೦॥

ಈ ದಿನ ಆದ ತಮ್ಮ ಸಂದರ್ಶನವು ಸಕಲೇಷ್ಟಾರ್ಥಗಳನ್ನೂ ಕೊಡುವ ಕಾಮಧೇನುವೇ ಆಗಿರುವುದು. ಪರಶಿವನ ಭಕ್ತರ ಅವಯುವಕ್ಕೆ ಸಂಬಂಧಿಸಿದಂತೆ ಉಂಟಾದ ವಾಯುವೂ ಸಹ ನನಗೆ ಸುಖಪ್ರದವೇ ಆಗಿರುವುದು. ॥೧೧॥

ಈಶ್ವರಭಕ್ತರ ಸಂಪರ್ಕವು ಏನನ್ನು ತಾನೇ ಉಂಟುಮಾಡಲಾರದು ? ನಾನಾವಿಧವಾದ ಅಪರಿಮಿತಭಾಗ್ಯಗಳನ್ನೂ ಒದಗಿಸಿಕೊಡುವುದು. ಆ ಮಹಾಕಾಲೇಶ್ವರನ ಪರಿಪೂರ್ಣವಾದ ದಯೆಯು ನನ್ನಲ್ಲಿ ಸ್ಥಿರವಾಗಿರುವುದು. ॥೧೨॥

ಭವತಾಂ ಭವಭಕ್ತಾನಾಂ ದರ್ಶನಂ ಜಾತಮದ್ಯ ಮೇ ।
ಇತಿ ಚಿತ್ರರಥೋದಾರಾಂ ವಾಣೀಂ ವಾಣೀಪತಿಪ್ರಮಾಃ ॥೧೩॥

ಶ್ರುತ್ವಾ ತೇ ಮುನಯಃ ಸರ್ವೇ ಪರಂ ಹರ್ಷಮವಾಪ್ನುವನ್ ।
ಊಚುಸ್ತೇ ಮುನಯಃ ಸರ್ವೇ ನೃಪಂ ಶಾಂಭವಪುಂಗವಂ ॥೧೪॥

ಕಂಪಯಿತ್ವಾತ್ಮನಃ ಶೀರ್ಷಂ ಜಟಾಭಾರವಿದೀಪಿತಂ ॥೧೫॥

ತ್ವಮೇವ ಧನ್ಯೋಽಸಿ ಮಹೀತಲೇಽಸ್ಮಿ
ನ್ಮಾನ್ಯೋಽಸಿ ಪೂಜ್ಯೋಽಸಿ ವಿಶಿಷ್ಟಶಿಷ್ಟಃ ।
ತವ ಪ್ರಭಾವಂ ಪ್ರವದಂತಿ ದೇವಾ
ವಿಧೀಂದ್ರಪೂರ್ವಾ ಮುನಯಶ್ಚ ಸಿದ್ಧಾಃ ॥೧೬॥

ಭೂಮಂಡಲಾಖಂಡಲ ಏವ ನೂನಂ
ತ್ವಯಾ ಮಹೀಮಂಡನಗಂಡಮಂಡಿತಾ ।

---

ಸಕಲ ಜಗತ್ಸೃಷ್ಟಿ ಸ್ಥಿತಿ ಸಂಹಾರಕಾರಕನಾದ ಆ ಪರಶಿವನ ಭಕ್ತರಾದ ನಿಮ್ಮ ಅಮೋಘ ದರ್ಶನವು ಇಂದು ನನಗೆ ದೈವಾನುಗ್ರಹದಿಂದುಂಟಾಯಿತು." ಎಂದು ಹೇಳಿದ ಬ್ರಹ್ಮನಿಗೆ ಸಮಾನವಾದ ಉದಾರಗುಣವಿಶಿಷ್ಟನಾದ ಚಿತ್ರರಥ ಮಹಾರಾಜನ ಮಾತುಗಳನ್ನು ಕೇಳಿ, ಆ ಸನಕಸನಂದನಾದಿ ಮುನಿಗಳೆಲ್ಲರೂ ತುಂಬಾ ಸಂತೋಷ ಹೊಂದಿದರು. ||೧೩||

ಸನಕಸನಂದನಾದಿ ಆ ಮುನಿಗಳೆಲ್ಲರೂ ಶಿವಭಕ್ತಾಗ್ರೇಸರನಾದ ಆ ಚಿತ್ರರಥ ಮಹಾರಾಜನನ್ನು ಕುರಿತು ತಮ್ಮ ಜಟೆಗಳ ಭಾರದಿಂದ ಶೋಭಿಸುತ್ತಿರುವ ತಲೆಗಳನ್ನು ಅಲ್ಲಾಡಿಸುತ್ತಾ ಹೀಗೆಂದರು. ||೧೪-೧೫||

"ರಾಜೇಂದ್ರನೇ! ಈ ಭೂಮಂಡಲದಲ್ಲಿ ನೀನೇ ಧನ್ಯನು. ಸಕಲ ಶಿಷ್ಟಾಚಾರಗಳಲ್ಲಿಯೂ ಶ್ರೇಷ್ಠನೆನಿಸಿರುವ ನೀನೇ ಮಾನ್ಯನು. ಮತ್ತು ಪೂಜ್ಯನೂ ಆಗಿರುವೆ. ಬ್ರಹ್ಮ, ಇಂದ್ರ, ಮುಂತಾದ ದೇವತೆಗಳೂ, ಸಕಲ ಮುನಿಗಳೂ, ಸಿದ್ಧಪುರುಷರೂ ಸಹ ನಿನ್ನ ಮಹಿಮೆಯನ್ನು ಕೊಂಡಾಡುತ್ತಿರುವರು. ||೧೬||

ನೀನು ನಿಜವಾಗಿಯೂ ಈ ಭೂಮಂಡಲಕ್ಕೆ ಸಾಕ್ಷಾದಿಂದ್ರನೇ ಆಗಿರುವೆ. ನಿನ್ನಿಂದ ಈ ಭೂಮಂಡಲದ ಮಧ್ಯಭಾಗವು ಅಲಂಕೃತವಾಯಿತು. ಮಹಾಕಾಲೇಶನ

ತ್ವಂ ವೈ ಸುನಾಥಃ ಪ್ರಥಿತಃ ಪೃಥಿವ್ಯಾಂ
ಯತೋ ಮಹಾಕಾಲಪದಾನುರಕ್ತಃ ॥೧೭॥

ಮಾತಾ ಪಿತಾ ತೇಽದ್ಯ ಪಿತಾಮಹೋಽಪಿ
ಪುತ್ರಾಸ್ತಥಾ ಭ್ರಾತರಸ್ತೇಽದ್ಯ ದಾರಾಃ ।
ಸರ್ವೇ ಮಹೇಶಾನುಚರಾ ನೃಪೇಂದ್ರ
ತ್ವಂ ಶಾಂಗಲಿಂಗಾರ್ಚನಸಕ್ತಚಿತ್ತಃ ॥೧೮॥

ಶ್ರುತ್ವಾ ಮುನೀನಾಂ ವಚನಂ ಪ್ರಣತಃ ಸ ನೃಪಾಗ್ರಣೀಃ ।
ತೈಃ ಸರ್ವೈರ್ಮುನಿಭಿಃ ಸಾರ್ಧಂ ಮಹಾಕಾಲಾಲಯಂ ಯಯೌ ॥೧೯॥

ಸ್ನಾತ್ವಾ ಕ್ಷಿಪ್ರಾನದೀತೋಯೈರ್ಭಸ್ಮರುದ್ರಾಕ್ಷಭೂಷಣಃ ।
ನಿಃಸಾಣದುಂದುಭಿರವೈರಮಾತ್ಯೈರ್ಮುನಿಭಿರ್ವೃತಃ ॥೨೦॥

ಪಾದಕಮಲದಲ್ಲಿ ಅನುರಕ್ತನಾಗಿರುವುದರಿಂದ ಈ ಭೂಮಿಯಲ್ಲಿ ಶ್ರೇಷ್ಠನಾದ ಸ್ವಾಮಿಯೆಂದು ನೀನು ಪ್ರಸಿದ್ಧಿ ಪಡೆದಿರುವೆ. ॥೧೭॥

ನಿನ್ನ ತಾಯಿ, ತಂದೆ, ಅಜ್ಜ, ಮಕ್ಕಳು, ಸಹೋದರರು, ಮತ್ತು ಪತ್ನಿಯರು, ಇವರೆಲ್ಲರೂ ಆ ಮಹೇಶ್ವರನ ಸೇವಕರೇ ಆಗಿರುವರು. ಎಲೈ ರಾಜೇಂದ್ರನೇ ! ನೀನೂ ಸಹ ಶಾಂಗನೆನಿಸಿದ (ಸುಖಪ್ರದನೆನಿಸಿದ) ಆ ಪರಶಿವನ ಲಿಂಗಪೂಜೆಯಲ್ಲಿಯೇ ಸದಾ ಆಸಕ್ತನಾಗಿರುವೆ." ॥೧೮॥

ಮುನಿಗಳ ಈ ವಚನಗಳನ್ನು ಕೇಳಿ ರಾಜಶ್ರೇಷ್ಠನಾದ ಚಿತ್ರರಥನು ಅವರಿಗೆ ನಮಸ್ಕಾರಮಾಡಿ, ಆ ಮುನಿಗಳೊಡನೆ ಹೊರಟು ಮಹಾಕಾಲೇಶ್ವರನ ದೇವಾಲಯಕ್ಕೆ ಹೋದನು. ॥೧೯॥

ಅಲ್ಲಿಗೆ ಹೋದನಂತರ ಆ ದೇವಾಲಯದ ಸಮೀಪದಲ್ಲಿದ್ದ ಕ್ಷಿಪ್ರಾನದಿಯ ನೀರಿನಲ್ಲಿ ಎಲ್ಲರೂ ಸ್ನಾನಮಾಡಿ, ಭಸ್ಮ, ಮತ್ತು ರುದ್ರಾಕ್ಷಮಾಲೆಗಳಿಂದಲಂಕೃತನಾಗಿ, ಘೋರ್ಗರೆಯುತ್ತಿರುವ ದುಂದುಭಿವಾದ್ಯಗಳ ಧ್ವನಿಗಳೊಡನೆ, ತನ್ನ ಮಂತ್ರಿಗಳೊಡನೆಯೂ ಮತ್ತು ಮುನಿಗಳೊಡನೆಯೂ ದೇವಾಲಯಕ್ಕೆ ಪ್ರವೇಶಿಸಿದನು. ॥೨೦॥

ವೃತೋ ದಾರಸಹಸ್ರೈಶ್ಚ ಪುತ್ರೈರಮರಸುಂದರೈಃ ।
ಸದಶ್ವೈರ್ಮತ್ತಮಾತಂಗೈಃ ಸ್ಯಂದನೈಃ ಶಿಬಿಕಾಗಣೈಃ ॥೨೦॥

ಭಟೈರನೇಕಸಾಹಸ್ರೈರ್ಬಂದಿಭಿಃ ಸೂತಮಾಗಧೈಃ ।
ಸ್ತುತೋ ಯಯೌ ಮಹಾಕಾಲಂ ದ್ರಷ್ಟುಮಿಂದ್ರನಿಭೋ ನೃಪಃ॥೨೨॥

ಅವತೀರ್ಯ ರಥೇಭ್ಯಸ್ತೇ ನೃಪೇಣ ಸಹಿತಾಃ ಶಿವಂ ।
ದ್ರಷ್ಟುಮಭ್ಯಾಗತಾಃ ಸರ್ವೇ ಸಕಲತ್ರಾಃ ಕುಮಾರಕಾಃ ॥೨೩॥

ಪದ್ಭ್ಯಾಮನುಯಯುಃ ಸರ್ವೇ ತದ್ಭೃತ್ಯಾಸ್ತಸ್ಯ ಸೈನಿಕಾಃ ।
ಸೋಪಹಾರಾ ಮಹೋದಾರಾ ಉದಾರಾಃ ಸುಮನೋಹರಾಃ ॥೨೪॥

ಮುಖ್ಯಾಮಾತ್ಯಾಸ್ತಥಾಪ್ತಾಶ್ಚ ಪ್ರಣೇಮುರ್ಗಿರಿಸಂಭವಂ ।
ಪ್ರದಕ್ಷಿಣಪ್ರಣಾಮಾದ್ಯೈಃ ಸ್ತುತ್ವಾ ರುದ್ರೈರ್ಮಹೇಶ್ವರಂ ॥೨೫॥

---

ಹೊರಡುವಾಗ ತನ್ನ ಸಾವಿರ ಪತ್ನಿಯರೂ, ದೇವತೆಗಳಂತೆ ಸುಂದರರಾದ ಮಕ್ಕಳೂ, ಇವನ ಜೊತೆಯಲ್ಲಿದ್ದರು. ಉತ್ತಮವಾದ ಕುದುರೆಗಳೂ, ಮದಿಸಿದ ಆನೆಗಳೂ, ರಥಗಳೂ, ಮೇನಗಳ ಸಮೂಹವೂ, ಅನೇಕ ನಾವಿರ ಭಟರೂ, ಇವನನ್ನು ಸುತ್ತುವರಿದಿದ್ದರು. ಸೂತರು, ಮಾಗಧರು ಎಂಬ ಸ್ತುತಿಪಾಠಕರೂ ಹೊಗಳುತ್ತಾ ಬರುತ್ತಿದ್ದರು. ಹೀಗೆ ವಿಜೃಂಭಣೆಯಿಂದ ಹೊರಟು ಇಂದ್ರನಿಗೆ ಸಮಾನವಾದ ಆ ಚಿತ್ರರಥಮಹಾರಾಜನು, ಮಹಾಕಾಲೇಶನನ್ನು ದರ್ಶನಮಾಡಲು ಹೋದನು. ॥೨೧-೨೨॥

ಅವರೆಲ್ಲರೂ ರಥದಿಂದಿಳಿದು ರಾಜನೊಡನೆ ಆ ಪರಶಿವನನ್ನು ನೋಡಲು ಹೊರಟರು. ಆ ರಾಜನ ಮಕ್ಕಳೂ ತಮ್ಮ ತಮ್ಮ ಪತ್ನಿಯರೊಡನೆ ಬಂದಿದ್ದರು. ॥೨೩॥

ಉದಾರಸ್ವಭಾವದವರೂ, ಮನೋಹರವಾದ ಆಕೃತಿಯುಳ್ಳವರೂ ಆದ ಅವನ ಭೃತ್ಯರೂ ಮತ್ತು ಸೈನಿಕರೂ ಕಾಲ್ನಡಗೆಯಲ್ಲಿಯೇ ಉಪಹಾರಸಾಮಗ್ರಿಗಳೊಡನೆ ಬರುತ್ತಿದ್ದರು. ॥೨೪॥

ಪ್ರದಕ್ಷಿಣೆ ಮತ್ತು ನಮಸ್ಕಾರಗಳೊಡನೆ ಆ ಮಹೇಶ್ವರನನ್ನು ರುದ್ರಮಂತ್ರಗಳಿಂದ ಸ್ತೋತ್ರಮಾಡಿ, ಮುಖ್ಯರಾದ ಮಂತ್ರಿಗಳೂ ಮತ್ತು ಆಪ್ತರೂ ಸಹ ಆ ಗಿರಿಜಾರಮಣನಿಗೆ ಪ್ರಣಾಮಮಾಡಿದರು. ॥೨೫॥

ಸಮಭ್ಯರ್ಚ್ಯ ಚ ಮಧ್ಯಾಹ್ನೇ ಭುಕ್ತ್ವಾ ನೈವೇದ್ಯಮಾಶಿತುಃ ।
ದಾರೈಃ ಪುತ್ರೈಃ ಪರಿವೃತಃ ಶಾಂಭವೈಃ ಸ್ವಭಟೈಃ ಸಹ ॥೨೬॥

ಉಪೋಪವಿವಿಶುಃ ಸರ್ವೇ ಶಿವಾಗ್ರೇ ಸ್ವರ್ಣಮಂಟಪೇ ।
ಕಲ್ಲೋಲತೀರ್ಥಂ ಚ ಪರಂ ಪೀತ್ವಾ ಸ್ವರ್ಣಾಬ್ಜನೀಪಯಃ ॥೨೭॥

ಭವಲಿಂಗಾರ್ಚನಪರಾಃ ಮುನಯಸ್ತೇ ನೃಪಾದಯಃ ।
ಏವಂ ಸಭಾಸದಃ ಸರ್ವೇ ಸಭಾಪತಿಮುಪಾಸತೇ ॥೨೮॥

ಶಿವಾರ್ಪಿತೈರ್ಗಂಧವರೈಸ್ತಾಂಬೂಲೈಶ್ಚ ಮನೋಹರೈಃ ।
ಸ್ರಗ್ಭಿಶ್ಚ ಸುಮನಾಮೋದಪರಿಭ್ರಮಿತಷಟ್ಪದೈಃ ॥೨೯॥

ತಾನಭ್ಯರ್ಚ್ಯ ಯಥಾನ್ಯಾಯಂ ಸ್ವಯಂಚಾನ್ಯಾನ್ ತಥಾ ನೃಪಃ ।
ಸ್ವದಾರತನಯಾದ್ಯಾಂಶ್ಚ ತಥಾಽಮಾತ್ಯಾನ್ಭೃತಂ ಜನಂ ॥೩೦॥

ಮಧ್ಯಾಹ್ನಕಾಲದಲ್ಲಿ ಮಹೇಶ್ವರನನ್ನು ಪೂಜಿಸಿ ಆ ಶಿವನೈವೇದ್ಯವನ್ನು ಮಾತ್ರ ಊಟಮಾಡಿ, ತನ್ನ ಪತ್ನೀಪುತ್ರರೊಡನೆಯೂ ಮತ್ತು ಶಂಭುಭಕ್ತರಾದ ಇತರ ಭಟರೊಡನೆಯೂ ಪರಿವೃತನಾಗಿ ಆ ಶಿವನ ಮುಂಭಾಗದಲ್ಲಿರುವ ಸುವರ್ಣ ಮಂಟಪದಲ್ಲಿ ಕುಳಿತುಕೊಂಡನು. ಎಲ್ಲರೂ ಸ್ವರ್ಣಕಮಲಗಳಿಂದ ಯುಕ್ತವಾದ ಆ ಸರಸ್ಸಿನ ನೀರನ್ನು ಪ್ರೀತಿಯಿಂದ ಪಾನಮಾಡಿದರು. ॥೨೬-೨೭॥

ಭವಸಂಜ್ಞಕನಾದ ಆ ಪರಶಿವನ ಪೂಜಾತತ್ಪರರಾದ ಆ ಮುನಿಗಳೂ, ರಾಜರೇ ಮುಂತಾದವರೂ ಮತ್ತು ಅಲ್ಲಿ ನೆರೆದಿದ್ದ ಸಭಿಕರೆಲ್ಲರೂ ಸಭಾಪತಿಯೂದ ಚಿತ್ರರಥಮಹಾರಾಜನನ್ನು ಸೇವಿಸುತ್ತಿದ್ದರು. ॥೨೮॥

ಶಿವನಿಗೆ ಸಮರ್ಪಿಸಿದ ಶ್ರೇಷ್ಠವಾದ ಗಂಧ, ಮತ್ತು ಮನೋಹರವಾದ ತಾಂಬೂಲ, ಹೂವಿನ ಸುವಾಸನೆಗೋಸ್ಕರ ಮುತ್ತಿಕೊಂಡಿರುವ ಅಪಾರವಾದ ಭ್ರಮರಗಳುಳ್ಳ ಹೂಮಾಲೆಗಳು, ಇವುಗಳಿಂದ ಆ ಮುನಿಪುಂಗವರನ್ನೂ, ತನ್ನ ಪತ್ನೀಪುತ್ರಾದಿಗಳನ್ನೂ ಮತ್ತು ಮಂತ್ರಿ ಸೇವಕ ಜನರನ್ನೂ ಅವರವರ ಯೋಗ್ಯತಾನುಸಾರವಾಗಿ ಉಪಚರಿಸಿದನು. ॥೨೯-೩೦॥

**ವಿಚಿತ್ರಾಭಿಃ ಕಥಾಭಿಶ್ಚ ಶೈವೀಭಿರ್ನೃಪಸತ್ತಮಃ ।**
**ಚಕಾರ ಕಾಲಸಯನಂ ಮಹಾಕಾಲಾರ್ಚನಪ್ರಿಯಃ** ||೩೦||

**ತತಸ್ತೇ ಮುನಯಃ ಸರ್ವೇ ದೃಷ್ಟ್ವಾ ತಲ್ಲಿಂಗಮೈಶ್ವರಂ ।**
**ಪ್ರಣಮ್ಯ ವಿನಯೋಪೇತಾಸ್ತುಷ್ಟುವುಃ ಶಂಕರಂ ತದಾ** ||೩೧||

|| ಮುನಯ ಊಚುಃ ||

**ಕೃತಾನಂಗಭಂಗಂ ಮಹಾಂಗಂ ತ್ವಗಂಗಂ**
**ಸದಾ ಜಹ್ನುಕನ್ಯಾತರಂಗೋತ್ತಮಾಂಗಂ ।**
**ಶಿವಂ ಭಕ್ತಹೃತ್ಪದ್ಮಸದ್ಮೈಕಸಂಗಂ**
**ಮಹಾಕಾಲಲಿಂಗಂ ಭಜಾಮೋ ಭಜಾಮಃ** ||೩೨||

**ಮಹಾಶಾಂಗಲಿಂಗಂ ವಿಪದ್ಭೋಗಭಂಗಂ**
**ಭುಜಂಗಾಂಗಸಂಗಂ ಕುರಂಗಾಂಗಸಂಗಂ ।**
**ತರಂಗಾಲಿಮಾಲೀನಿಷಂಗಂ ಶುಭಾಂಗಂ**
**ಮಹಾಕಾಲಲಿಂಗಂ ಭಜಾಮೋ ಭಜಾಮಃ** ||೩೩||

---

ವಿಚಿತ್ರವಾದ ಶಿವಕಥೆಗಳಿಂದಲೇ ಮಹಾಕಾಲೇಶನ ಪೂಜಾತತ್ಪರನಾದ ಆ ಚಿತ್ರರಥಮಹಾರಾಜನು ಅಂದಿನ ಕಾಲವನ್ನು ಕಳೆದನು. ||೩೦||

ಆಗ ಸನಕಸನಂದನಾದಿಯಾದ ಆ ಮುನಿಗಳೆಲ್ಲರೂ ಈಶ್ವರನ ಲಿಂಗವನ್ನು ನೋಡಿ, ನಮಸ್ಕರಿಸಿದ ನಂತರ ವಿನಯದಿಂದ ಶಂಕರನನ್ನು ಕುರಿತು ಹೀಗೆ ಸ್ತೋತ್ರಮಾಡಿದರು. ||೩೧||

ಮನ್ಮಥನನ್ನು ಭಸ್ಮಮಾಡಿದವನೂ, ದೊಡ್ಡ ಶರೀರವುಳ್ಳವನೂ, ಆನೆಯ ಚರ್ಮವನ್ನು ಹೊದೆಯುವವನೂ, ಯಾವಾಗಲೂ ಆ ಜಾಹ್ನವೀನದಿಯ ತರಂಗಗಳನ್ನು ತಲೆಯಲ್ಲಿ ಧರಿಸಿರುವನೂ, ಭಕ್ತರ ಹೃದಯವೆಂಬ ಕಮಲದಲ್ಲಿಯೇ ಮನೆಯಂತೆ ನೆಲಸಿರುವನೂ, ಸರ್ವಮಂಗಳಕರನೂ ಆದ ಆ ಮಹಾಕಾಲೇಶ್ವರನ ಲಿಂಗವನ್ನು ನಾವು ಭಜನೆಮಾಡುವೆವು. ||೩೨||

ಈ ಮಹಾಕಾಲೇಶ್ವರನ ಶಿವಲಿಂಗವು, ಸುಖಸ್ವರೂಪನಾದ ಆ ಶಿವನ ಒಂದು ಮುಖ್ಯ ಅಂಗವೇ ಆಗಿರುವುದು. ಇದು ತನ್ನ ಭಕ್ತರು ವಿಪತ್ತುಗಳನ್ನನು

ಅನಂಗಂ ಪತಂತಂ ಪತಂಗೈಕಭಂಗ್ಯಾ
ನಿಜಾಕ್ಷಿಸ್ಫುಲಿಂಗೇ ದಹಂತಂ ಶಯಾಂತಂ ।
ಕುರಂಗಂ ವಹಂತಂ ಪತಂಗೇಂದುನೇತ್ರಂ
ಮಹಾಕಾಲಲಿಂಗಂ ಭಜಾಮೋ ಭಜಾಮಃ ॥೩೫॥

ಜಟಾಜೂಟಪಿಂಗಂ ದಯಾಸ್ರಾವ್ಯಪಾಂಗಂ
ಕೃತಾಂಗಾನುಷಂಗಂ ಕಯಾಚಿತ್ಕೃಶಾಂಗ್ಯಾ ।
ಅಸಂಗಾಂತರಂಗಂ ಮಹಾಲಿಂಗಸಂಗಂ
ಮಹಾಕಾಲಲಿಂಗಂ ಭಜಾಮೋ ಭಜಾಮಃ ॥೩೬॥

ಭವಿಸುವುದನ್ನು ಧ್ವಂಸಮಾಡುತ್ತಿರುವುದು. ಸರ್ಪವನ್ನೂ, ಜಿಂಕೆಯನ್ನೂ ಧರಿಸಿರುವುದು. ಅನೇಕ ಪ್ರವಾಹಗಳ ಸಮೂಹದಿಂದ ಯುಕ್ತವಾದ ಸಮುದ್ರವನ್ನೇ ಬತ್ತಳಿಕೆಯನ್ನಾಗಿ ಧರಿಸಿರುವುದು. ಅಲ್ಲದೇ ಶುಭಕರವಾದ ಅವಯವಗಳುಳ್ಳದ್ದಾಗಿ ಶೋಭಿಸುತ್ತಿರುವುದು. ಇಂತಹ ಮಹಾಕಾಲ ಲಿಂಗವನ್ನು ನಾವು ಭಜಿಸುವೆವು. ॥೩೪॥

ಪತಂಗದ ಹುಳುವು ಬೆಂಕಿಗೆ ಬಂದು ಬೀಳುವಂತೆ, ತನ್ನ ಫಾಲನೇತ್ರಾಗ್ನಿಯ ಕೆಂಡಕ್ಕೆ ಗುರಿಯಾಗಿ ಸುಟ್ಟು ಭಸ್ಮವಾಗಿರುವ ಮನ್ಮಥನುಳ್ಳವನೂ, ಜಿಂಕೆಯನ್ನು ಧರಿಸಿರುವವನೂ, ಸೂರ್ಯಚಂದ್ರರೆಂಬ ಕಣ್ಣುಗಳಿಂದ ಶೋಭಿಸುತ್ತಿರುವವನೂ ಆದ ಆ ಮಹಾಕಾಲೇಶನ ಲಿಂಗವನ್ನು ನಾವು ಸದಾ ಭಜನೆಮಾಡುವೆವು. ॥೩೫॥

ಜಟಾಭಾರದಿಂದ ಪಿಂಗಳವರ್ಣವುಳ್ಳವನೂ, ದಯಾಮಯವಾದ ಕಣ್ಣೀರನ್ನು ಸುರಿಸುತ್ತಿರುವ ಕಡೆಗಣ್ಣಿನ ನೋಟದಿಂದ ಕೂಡಿದವನೂ, ಅನಿರ್ವಚನೀಯ ಮಹಿಮೆಯುಳ್ಳ ಆ ಗಿರಿಜೆಯ ಅವಯುವ ಸಂಪರ್ಕವುಳ್ಳವನೂ, ತನ್ನ ಮನಸ್ಸಿನಲ್ಲಿ ಇತರ ಯಾವ ವಿಧವಾದ ಸಂಬಂಧವೂ ಇಲ್ಲದೆ ಪರಿಶುದ್ಧನಾಗಿರುವವನೂ, ಶಿವಸ್ವರೂಪದಿಂದ ತೋರುತ್ತಿರುವವನೂ ಆದ ಮಹಾಕಾಲೇಶ್ವರನ ಲಿಂಗವನ್ನು ನಾವು ಭಜನೆಮಾಡುವೆವು. ॥೩೬॥

ಮಹೋಕ್ಷಾಂಗಸಂಗಂ ಮಹೋಕ್ಷಾಭಲಿಂಗಂ
ಸ್ವಕಾಕ್ಷಿಸ್ಫುಲಿಂಗಂ ಸುಗಂಧೋತ್ತಮಾಂಗಂ।
ಮಹಃ ಶೋಣಿತಾಂಗಂ ಮಹಾನಂಗಭಂಗಂ
ಮಹಾಕಾಲಲಿಂಗಂ ಭಜಾಮೋ ಭಜಾಮಃ ॥೩೭॥

॥ ಸೂತ ಉವಾಚ ॥

ಏವಂ ಸಂಸ್ತುತ್ಯ ತೇ ಸರ್ವೇ ಮುನಯೋ ಹೃಷ್ಟಮಾನಸಾಃ।
ರಾಜಾನಂ ವಿನಯೋಪೇತಂ ವಾಚಮೂಚುಸ್ತದಾ ದ್ವಿಜಾಃ ॥೩೮॥

॥ ಮುನಯ ಊಚುಃ ॥

ಧನ್ಯೋಽಸಿ ಕೃತಕೃತ್ಯೋಽಸಿ ಸರ್ವಮಾನ್ಯೋಽಸಿ ಭೂಪತೇ।
ಪಶ್ಯ ದೇವಸ್ಯ ಮಹಿಮಾಂ ಮಹಾಕಾಲಸ್ಯ ಸಾದರಂ ॥೩೯॥

ಮೇರುಸ್ತೃಣತಿ ರಾಜೇಂದ್ರ ತೃಣಂ ಯಾತಿ ಗಿರೀಂದ್ರತಾಂ।
ಭವದ್ವೃತ್ತಾಂತಮಖಿಲಂ ಶೃಣುಷ್ವ ಗದಿತಾಂ ಹಿ ನಃ ॥೪೦॥

ದೊಡ್ಡ ವೃಷಭದ ಮೇಲೆ ಕುಳಿತು ಸಂಚಾರಮಾಡುವವನೂ ಮತ್ತು ಆ ಎತ್ತಿನ ಕಾಂತಿಯಿಂದ ಶೋಭಿಸುತ್ತಿರುವ ಲಿಂಗವುಳ್ಳವನೂ, ತನ್ನ ಫಾಲನೇತ್ರವೆಂಬ ಬೆಂಕಿಯ ಕೆಂಡಗಳುಳ್ಳವನೂ, ಸುಗಂಧಯುಕ್ತವಾದ ಶಿರಸ್ಸುಳ್ಳವನೂ, ತನ್ನ ತೇಜಸ್ಸಿನಿಂದ ಕೆಂಪಾದ ಅವಯವಗಳುಳ್ಳವನೂ, ಅವಯವರಹಿತನಾದ ಮನ್ಮಥನನ್ನು ಭಸ್ಮಮಾಡಿದವನೂ, ಆದ ಆ ಮಹಾಕಾಲೇಶ್ವರನ ದಿವ್ಯಲಿಂಗವನ್ನು ನಾವು ಸದಾ ಭಜನೆಮಾಡುವೆವು." ॥೩೭॥

ಓ ಶೌನಕಾದಿಮುನಿಗಳಿರಾ! ಈ ರೀತಿ ಆ ಸನಕಸನಂದನಾದಿ ಮುನಿಗಳೆಲ್ಲರೂ ಆ ಮಹಾಕಾಲೇಶ್ವರನನ್ನು ಸ್ತೋತ್ರಮಾಡಿ ಅನಂತರ ವಿನಯಯುಕ್ತನಾದ ಆ ಚಿತ್ರರಥಮಹಾರಾಜನನ್ನು ಕುರಿತು ಹೀಗೆ ಮಾತನಾಡಿದರು. ॥೩೮॥

ಅಯ್ಯಾ ರಾಜೇಂದ್ರನೇ, ನೀನೇ ಧನ್ಯನು, ಕೃತಕೃತ್ಯನೂ ಸರ್ವಪೂಜ್ಯನೂ ನೀನೇ ಆಗಿರುವೆ. ಈ ಮಹಾಕಾಲೇಶ್ವರನ ಮಹಿಮೆಯನ್ನು ಆದರದಿಂದ ತಿಳಿಯುವನಾಗು. ॥೩೯॥

ಎಲೈ ರಾಜಶ್ರೇಷ್ಠನೇ, ಆ ಮಹೇಶ್ವರನ ದಯೆಯಿಂದ ಮೇರುಪರ್ವತವೂ ನಿನಗೆ ತೃಣಪ್ರಾಯವಾಗುತ್ತದೆ. ಅಲ್ಲದೇ, ಹುಲ್ಲುಕಡ್ಡಿಯೂ ಕೂಡ ಬೇಕಾದರೆ

ಭವಾನ್ಪೂರ್ವಭವೇ ರಾಜನ್ಬ್ರಾಹ್ಮಣಃ ಕಣಯಾಚಕಃ ।
ಮಾತಾಪಿತೃವಿಹೀನಶ್ಚ ದಾರೇಣ ಚ ಸಮನ್ವಿತಃ ॥೪೧॥

ಉಂಛವೃತ್ತಿಪರೋ ನಿತ್ಯಂ ಸತತಂ ಕ್ಷುಚ್ಛ್ರಮಾನ್ವಿತಃ ।
ಪಟಾಂಚಲೇ ಗೃಹೀತ್ವಾ ತಾಂ ಕಣಾನಾಂ ಮುಷ್ಟಿಮಾದರಾತ್ ॥೪೨॥

ಪತ್ನ್ಯಾ ಸಾರ್ಧಂ ಭ್ರಮನ್ರಾಜನ್ಗ್ರಾಮೇಷು ನಗರೇಷು ಚ ।
ಸ ದ್ವಿಜೋ ಹಿ ದಿವಾರಾತ್ರಂ ದಿನಾಂತೇ ನಗರಾದ್ಬಹಿಃ ॥೪೩॥

ಕದಾಚಿತ್ಸಾಯಮಶ್ನಾನೋ ದ್ವಿತೀಯೇ ದಿವಸೇ ಕ್ವಚಿತ್ ।
ತೃತೀಯೇ ವಾಥ ಷಷ್ಠೇ ವಾ ಭುಂಕ್ತೇ ದಾರಿದ್ರ್ಯಪೀಡಿತಃ ॥೪೪॥

ದೊಡ್ಡ ಪರ್ವತವೇ ಆಗಬಲ್ಲದು. ಓ ನೃಪಕುಲತಿಲಕನೇ, ನಿನ್ನ ಹಿಂದಿನ ವೃತ್ತಾಂತವನ್ನೆಲ್ಲಾ ನಾವು ತಿಳಿಸುವೆವು. ಆದರದಿಂದ ಲಾಲಿಸುವನಾಗು. ||೪೦||

ರಾಜನೇ ! ನೀನು ಪೂರ್ವಜನ್ಮದಲ್ಲಿ ಭಿಕ್ಷೆಮಾಡಿ ಕಾಳುಗಳನ್ನು ಸಂಗ್ರಹಿಸಿ ಜೀವನ ಮಾಡುವ ಬ್ರಾಹ್ಮಣನಾಗಿದ್ದೆ. ನಿನಗೆ ತಾಯಿತಂದೆಗಳಿರಲಿಲ್ಲ. (ಅಂದರೆ ಬಾಲ್ಯದಲ್ಲಿಯೇ ಮೃತರಾಗಿದ್ದರೆಂದಭಿಪ್ರಾಯವು) ಕೇವಲ ಪತ್ನಿಮಾತ್ರ ಇದ್ದಳು. ||೪೧||

ಹಸಿವಿನಿಂದಲೂ ತುಂಬಾ ಬಳಲಿಕೆಯಿಂದಲೂ ಕೂಡಿದ ನೀನು ನಿತ್ಯವೂ ನಿತ್ಯಯಾತ್ರೆ (ಭಿಕ್ಷೆಬೇಡುವುದು) ಮಾಡುತ್ತಾ ಬಂದ ಧಾನ್ಯಗಳ ಕಾಳುಗಳನ್ನು ಬಟ್ಟೆಯ ತುದಿಯಲ್ಲಿ ಕಟ್ಟಿಕೊಂಡು, ಮುಷ್ಟಿರೂಪವಾಗಿ ಬರುವ ಧಾನ್ಯಗಳನ್ನು ಆದರದಿಂದ ತರುತ್ತಿದ್ದೆ. ||೪೨||

ಬ್ರಾಹ್ಮಣನಾದ ನೀನು ನಿನ್ನ ಪತ್ನಿಯೊಡನೆ ಪ್ರತಿ ಹಳ್ಳಿಗಳಲ್ಲಿಯೂ ಮತ್ತು ಪಟ್ಟಣಗಳಲ್ಲಿಯೂ ಹಗಲೂ ರಾತ್ರಿ ಅಲೆಯುತ್ತಾ ಬಂದ ಧಾನ್ಯಗಳಿಂದ ಆ ದಿನದ ಸಾಯಂಕಾಲದಲ್ಲಿ ಊರಹೊರಗಡೆ ಊಟಮಾಡುತ್ತಿದ್ದೆ. ಒಂದೊಂದು ದಿನ ಸಾಯಂಕಾಲದಲ್ಲಿಯೂ ಒಂದೊಂದು ಸಲ ಎರಡು ದಿನಕ್ಕೊಮ್ಮೆಯೂ, ಕೆಲವು ಸಲ ಮೂರು ದಿನಗಳಿಗೊಂದಾವರ್ತಿಯೂ ಇನ್ನು ಕೆಲವು ಸಲ ಆರಾರು ದಿನಗಳಿಗೊಂದು ದಿವಸದಂತೆಯೂ ಊಟಮಾಡುತ್ತಾ ದಾರಿದ್ರ್ಯದಿಂದ ಪೀಡಿತನಾಗಿದ್ದೆ. ||೪೩-೪೪||

ಅತ್ಯಂತಂ ಸೂರ್ಯಕಿರಣೈಸ್ತಪ್ತಗಾತ್ರಃ ಸದಾ ದ್ವಿಜಃ ।
ಭೇರುಂಡಪಕ್ಷಿಸದೃಶೋ ಹಿಂಡತೇ ಪ್ರತಿವಾಸರಂ ॥೪೫॥

ಪ್ರತಿಗ್ರಾಮಂ ಪ್ರತಿದ್ವಾರಂ ಲಜ್ಜಾಸರ್ವಸ್ವವರ್ಜಿತಃ ।
ಕ್ವಚಿನ್ಮೂರ್ಛಾನ್ವಿತಃ ಶೇತೇ ಕ್ವಚಿದ್ಯಾತಿ ಸ್ಖಲತ್ಪದಃ ॥೪೬॥

ಭಾರ್ಯಾಸ್ಕಂಧಕರೋ ಯಾತಿ ರುದನ್ಪ್ರತಿಗೃಹಂ ತದಾ ।
ದತ್ವಾ ದತ್ವಾ ಚ ವಿರತಾಃ ಪುನಸ್ತಾನ್ಯಾಚಯತ್ಯಯಂ ॥೪೭॥

ಅಸೂಯಾವಿಷ್ಟಮನಸೋ ದರ್ಶನಾತ್ತಸ್ಯ ಭೂಸುರಾಃ ।
ಕ್ಷತ್ರಿಯಾಶ್ಚ ವಿಶಶ್ಚೈವ ಶೂದ್ರಾ ಅಪಿ ಚ ಸಂಕರಾಃ ॥೪೮॥

ಭ್ರುಕುಟೀಕುಟಿಲಂ ವಕ್ತ್ರಂ ಕುರ್ವಂತ್ಯೇವ ಮುಹುರ್ಮುಹುಃ ।
ಗಚ್ಛ ಗಚ್ಛೇತಿ ತಂ ಕೇಚಿನ್ಮೂಢೇತಿ ಚ ವದಂತಿ ತೇ ॥೪೯॥

ಪ್ರತಿದಿನವೂ ಆ ಸೂರ್ಯನ ತೀವ್ರಕಿರಣಗಳಿಂದ ಅತಿಯಾಗಿ ಕಾದ ಮೈಯುಳ್ಳವನಾಗಿ ಭೇರುಂಡಪಕ್ಷಿಯಂತೆ ಪ್ರತಿದಿನವೂ ಸಂಚರಿಸುತ್ತಾ ಕಾಲಕಳೆಯುತ್ತಿದ್ದೆ. ॥೪೫॥

ಪ್ರತಿಯೊಂದು ಗ್ರಾಮದಲ್ಲಿಯೂ ಪ್ರತಿಯೊಬ್ಬರ ಮನೆಯ ಬಾಗಿಲಿನಲ್ಲಿಯೂ ಹೋಗಿ ಭಿಕ್ಷೆಬೇಡುತ್ತಾ ಕೆಲವು ವೇಳೆ ಮೂರ್ಛೆಯನ್ನೈದುತ್ತಲೂ, ಕೆಲವು ಸಲ ಎಡವಿಬೀಳುತ್ತಲೂ ಹಾಗೆಯೇ ನಡೆಯುತ್ತಾ ನಾಚಿಕೆಯಿಲ್ಲದೆ ಜೀವನ ನಡೆಸುತ್ತಿದ್ದೆ. ॥೪೬॥

ಬ್ರಾಹ್ಮಣನಾದ ನೀನು ನಿನ್ನ ಹೆಂಡತಿಯ ಹೆಗಲಿನ ಮೇಲೆ ಕೈಯಿಟ್ಟುಕೊಂಡು, ಪ್ರತಿಯೊಂದು ಮನೆಗೂ ಹೋಗಿ ಗೋಳಾಡುತ್ತಾ ಯಾಚನೆಮಾಡುತ್ತಿದ್ದೆ. ಅವರೂ ಭಿಕ್ಷೆಕೊಟ್ಟು ನಿತ್ಯವೂ ಬೇಜಾರು ಹೊಂದುತ್ತಿದ್ದರು. ಆದರೂ ನೀನು ಬಿಡದೇ ಅವರನ್ನು ಪುನಃ ಪುನಃ ಯಾಚಿಸುತ್ತಿದ್ದೆ. ॥೪೭॥

ನಿನ್ನನ್ನು ದರ್ಶನಮಾಡುವುದರಿಂದ ಕ್ಷತ್ರಿಯರು, ವೈಶ್ಯರು, ಶೂದ್ರರು, ಮತ್ತು ಸಂಕರಜಾತಿಯವರೂ ಕೂಡ ಅಸೂಯಾಪರರಾಗಿ ಮುಖವನ್ನು ಹುಬ್ಬುಗಂಟಿಕ್ಕಿಕೊಂಡು ಪದೇಪದೇ ಕೆಲವರು, ಎಲೈ ಮೂಢನೇ! ಹೋಗು ಹೋಗು ಎಂದು ಹೇಳುತ್ತಿದ್ದರು. ॥೪೮-೪೯॥

ದೂರಾದಾಲೋಕ್ಯ ತಂ ವಿಪ್ರಂ ಕವಾಟೈರರ್ಗಲಾನ್ವಿತೈಃ ।
ಗೃಹದ್ವಾರಾಣಿ ಕುರ್ವಂತಿ ಸಾಧವೋಽಪಿ ಭಿಯಾ ತದಾ ॥೫೦॥

ಕಣಮುಷ್ಟಿಂ ಗೃಹೀತ್ವೈವ ನಿರ್ಯಾತ್ಯುತ್ಕ್ರೋಶಯಜ್ಜನಂ ।
ಗ್ರಾಮಸ್ಥಾ ನಾಗರಾಶ್ಚೈವ ಜನಾ ನಿರ್ಭರ್ತ್ಸಯಂತಿ ತಂ ॥೫೧॥

ನಿಃಸಾರ್ಯೋಽಯಂ ಸುದುಷ್ಟಾತ್ಮಾ ಕದಾ ಮರಣಮೇಷ್ಯತಿ ।
ದ್ವಿಜಂ ದಂಡಕಶಾಘಾತೈಸ್ತಾಡಯಂತಿ ಚ ಕೋಪತಃ ॥೫೨॥

ಪಾಂಸುಕರ್ದಮಪಿಂಡೈಶ್ಚ ಕುಮಾರಾಃ ಪೀಡಯಂತಿ ತಂ ।
ಜೀರ್ಣಂ ಪಟಂ ತಸ್ಯ ಕಟ್ಯಾಂ ನಿಷ್ಕಾಸ್ಯಂತ್ಯತಿವೇಗತಃ ॥೫೩॥

ಏವಂ ಸಂಪೀಡಿತೋ ವಿಪ್ರಶ್ಚೌರ್ಯೇಣಾಪಿ ಸ ಜೀವತಿ ।
ವಿಪಣ್ಯಾಪಣವೀಥೀಷು ಧನಿಕಾನಾಂ ಗೃಹೇಷು ಚ ॥೫೪॥

ಸಾಧುಗಳೂ ಸಹ ದೂರದಿಂದಲೇ ನೀನು ಬರುತ್ತಿರುವುದನ್ನು ನೋಡಿ ಭಯದಿಂದ ತಮ್ಮ ಮನೆಯ ಬಾಗಿಲುಗಳನ್ನು ಹಾಕಿ ಅದಕ್ಕೆ ಬಿಗಿಯಾಗಿ ಅಗಳಿಗಳನ್ನು ಹಾಕುತ್ತಿದ್ದರು. ॥೫೦॥

ಜನಗಳು ಎಷ್ಟು ಬಿಗಿಮಾಡುತ್ತಾ ಬಂದರೂ ನೀನು ಅವರನ್ನು ಕೂಗಿ ಒಂದು ಹಿಡಿಯನ್ನಾದರೂ ಧಾನ್ಯವನ್ನು ತೆಗೆದುಕೊಂಡೇ ಹೋಗುತ್ತಿದ್ದೆ. ಆದ್ದರಿಂದಲೇ ಹಳ್ಳಿಯವರೂ ಮತ್ತು ಪಟ್ಟಣಿಗರೂ ಸಹ ನಿನ್ನನ್ನು ಬಹಳವಾಗಿ ನಿಂದಿಸುತ್ತಿದ್ದರು. ॥೫೧॥

ಇವನು ತೊಲಗಲಿಲ್ಲವಲ್ಲ! ಈ ದುಷ್ಟನು ಯಾವಾಗ ಮರಣಹೊಂದುವನೋ ಕಾಣೆನಲ್ಲಾ! ಎಂಬುದಾಗಿ ಬ್ರಾಹ್ಮಣನಾಗಿದ್ದ ನಿನ್ನನ್ನು ಕೋಪದಿಂದ ಚಾವಟಿಯಿಂದ ಹೊಡೆಯುತ್ತಾ ತೊಂದರೆಪಡಿಸುತ್ತಿದ್ದರು. ॥೫೨॥

ಹುಡುಗರು, ಮಣ್ಣು, ಕೆಸರಿನಉಂಡೆ ಇವುಗಳನ್ನು ಆ ಬ್ರಾಹ್ಮಣನ ಮೇಲೆ ಎಸೆದು ಪೀಡಿಸುತ್ತಿದ್ದರು. ಇನ್ನು ಕೆಲವು ಮಂದಿ ತುಂಟ ಬಾಲಕರು ಅವನು ಉಟ್ಟಿದ್ದ ಹರುಕಲು ಚಿಂದಿಯ ಬಟ್ಟೆಯನ್ನು ಅವನ (ನಿನ್ನ) ಸೊಂಟದಿಂದ ಎಳೆದು ಜಾಗ್ರತೆಯಾಗಿ ಓಡಿಹೋಗುತ್ತಿದ್ದರು. ॥೫೩॥

ಕೇಚಾನ್ನಪಣ್ಯಾಂಶ್ಚೋರಯತಿ ದೃಷ್ಟ್ವಾ ಸಂತಾಡಯಂತಿ ತಂ ।
ಏವಂ ವಸಂಸ್ತದಾ ವಿಪ್ರೋ ಭಾರ್ಯಯಾ ಜೀರ್ಣಯಾ ವೃತಃ ॥೫೫॥

ಕಾಲಂ ನಿನಾಯ ಬಹುಶೋ ವಿನಯಾಚಾರವರ್ಜಿತಃ ।
ಭಾರ್ಯಾಮಾಹ ತದಾ ವಿಪ್ರೋ ದುಃಖಾದಶ್ರುಪ್ರವರ್ತಯನ್ ॥೫೬॥

ಉವಾಚ ಭಾರ್ಯಾಂ ದೀನಾತ್ಮಾ ಮಂದಾತ್ಮಾ ಕೃಪಣಃ ಕೃಶಃ ॥೫೭॥

॥ ಬ್ರಾಹ್ಮಣ ಉವಾಚ ॥

ಹಾ ಕಷ್ಟಂ ಪ್ರೇತನಾಥೋಽಪಿ ಮಯಿ ನೈಷ್ಠುರ್ಯಮಾಗತಃ ।
ಕದಾ ಮರಣಮೇಷ್ಯಾಮಿ ಪ್ರಾಣಾಃ ಕಷ್ಟತರಾ ಮಮ ॥೫೮॥

ಸತ್ವರಂ ಗತ್ವರಂ ಲೋಕಂ ದೃಷ್ಟ್ವಾಽಹಂ ದುಃಖವರ್ಜಿತಃ ।
ಯಾಚ್ಞಾದೌ ಮಹತೀ ಲಜ್ಜಾ ಜಾಯತೇ ಮೇಽಧುನಾ ಪ್ರಿಯೇ॥೫೯॥

---

ಈರೀತಿ ಎಲ್ಲರಿಂದಲೂ ಪೀಡಿಸಲ್ಪಡುತ್ತಾ ಆ ಬ್ರಾಹ್ಮಣನೆನಿಸಿದ ನೀನು ಕಳ್ಳತನದಿಂದಲೂ ಜೀವನ ಮಾಡಲು ಆರಂಭಮಾಡಿದೆ. ನೀನು ಅಂಗಡೀಬೀದಿಗಳಲ್ಲಿಯೂ, ಧನಿಕರ ಮನೆಗಳಲ್ಲಿಯೂ, ಹೋಗಿ ಧಾನ್ಯಗಳನ್ನೂ ದುಡ್ಡನ್ನೂ ಕದಿಯುತ್ತಿದ್ದೆ. ಇದನ್ನು ನೋಡಿ ಅದರ ಮಾಲೀಕರು ಬ್ರಾಹ್ಮಣನಾದ ನಿನ್ನನ್ನು ಚೆನ್ನಾಗಿ ಹೊಡೆಯುತ್ತಿದ್ದರು. ||೫೪||

ಮುದುಕಿಯಾಗಿದ್ದ ತನ್ನ ಪತ್ನಿಯೊಡನೆ ಈರೀತಿ ಬಹಳ ಕ್ಲೇಶದಿಂದ ವಾಸಮಾಡುತ್ತಾ ಆ ಬ್ರಾಹ್ಮಣನು ವಿನಯ ಸದಾಚಾರ ಇವುಗಳನ್ನೂ ಸಹ ಬಿಟ್ಟು ಬಹಳ ಕಾಲ ಕಳೆದನು. ಹೀಗೆಯೇ ಒಂದು ದಿನ ಅತ್ಯಂತ ದುಃಖಿತನಾಗಿ ಕಣ್ಣೀರನ್ನು ಸುರಿಸುತ್ತಾ ದೀನನೂ, ಅಲಸನೂ, ಕೃಪಣನೂ ಮತ್ತು ಕೃಶನೂ ಆದ ಆ ಬ್ರಾಹ್ಮಣನು ತನ್ನ ಪತ್ನಿಯನ್ನು ಕುರಿತು ಇಂತೆಂದನು. ||೫೫-೫೬-೫೭||

" ಪ್ರಿಯೇ! ಅಯ್ಯೋ ತುಂಬಾ ಕಷ್ಟವು! ಆ ಯಮನೂ ಸಹ ನನ್ನ ವಿಷಯದಲ್ಲಿ ತುಂಬಾ ನಿಷ್ಠುರನಾದನು. ನಾನು ಯಾವಾಗ ಮರಣ ಹೊಂದುವೆನೋ! ಇನ್ನು ಮುಂದೆ ನಾನು ಬದುಕಿರುವುದು ಕಷ್ಟಕರವಾಗಿರುವುದು. ||೫೮||

ಶಾಶ್ವತವಲ್ಲದ ಈ ಪ್ರಪಂಚವನ್ನು ನೋಡಿ ನನಗೆ ದುಃಖವೇ ಇಲ್ಲದಂತಾಗಿದೆ. ಅಲ್ಲದೆ ಕೂಡಲೇ ಈ ಯಾಚಕವೃತ್ತಿಯೇ ಮೊದಲಾದುವುಗಳಲ್ಲಿಯೂ ನನಗೆ ಏಕೋ ಅತ್ಯಂತ ನಾಚಿಕೆಯುಂಟಾಗಿರುವುದು. ||೫೯||

ದಾರಿದ್ರ್ಯಂ ನಾಮ ಮರಣಂ ಸರ್ವಸ್ಯಾಪಿ ನ ಸಂಶಯಃ ।
ಭಕ್ಷಿಷ್ಯೇ ಗರಳಂ ತೀವ್ರಂ ಜೀವಿತಾಂತಕರಂ ಮಮ ॥೬೦॥

ತರಂಗಮಾಲಾಕಲಿತಂ ಪ್ರವೇಕ್ಷ್ಯೇ ನಿಧಿಮಂಭಸಾಂ ।
ಜ್ವಲಜ್ಜ್ವಲನಜ್ವಾಲಾಭಿರ್ದಾಹಯಿಷ್ಯೇ ಕಲೇಬರಂ ॥೬೧॥

ಇತ್ಯುಕ್ತವಂತಂ ತಂ ವಿಪ್ರಂ ಭಾರ್ಯಾ ಪ್ರಾಹ ಸುಲೋಚನಾ ॥೬೨॥

|| ಬ್ರಾಹ್ಮಣ್ಯುವಾಚ ||

ಬ್ರಾಹ್ಮಣಾನಾಂ ಕುಲೇ ಜಾತೋ ಬ್ರಾಹ್ಮಣಸ್ತ್ವಂ ನ ಸಂಶಯಃ ।
ಕಿಮರ್ಥಂ ರುದ್ಯತೇ ತೀವ್ರಂ ದುಃಖಾಪನಯನಂ ಕುರು ॥೬೩॥

ಅನಿಷ್ಟಂ ನಾಮ ಮರಣಂ ಲೋಕೇಷು ಪ್ರಥಿತಂ ಸದಾ ।
ಯಯಾ ಕಯಾ ಚ ವೃತ್ಯಾ ವಾ ಜೀವಾನೋ ನಾತ್ರ ಸಂಶಯಃ ॥೬೪॥

---

ಎಲ್ಲರಿಗೂ ಈ ಬಡತನವೆಂಬುದು ನಿಜವಾಗಿಯೂ ಮರಣವೇ ಆಗಿರುವುದು ಇದಕ್ಕೆ ಸಂದೇಹವೇ ಇಲ್ಲ. ಆದುದರಿಂದ ಜಾಗ್ರತೆಯಾಗಿ ನನ್ನ ಜೀವಿತವನ್ನು ಕೊನೆಗಾಣಿಸುವ ವಿಷವನ್ನು ಈಗ ತಿಂದುಬಿಡುವೆನು. ||೬೦||

ಅಥವಾ ಪ್ರವಾಹ ತರಂಗಗಳಿಂದ ಭೋರ್ಗರೆಯುತ್ತಿರುವ ಸಮುದ್ರವನ್ನು ಪ್ರವೇಶಿಸುವೆನು. ಹಾಗಿಲ್ಲದಿದ್ದರೆ ಪ್ರಜ್ವಲಿಸುತ್ತಿರುವ ಬೆಂಕಿಯ ಜ್ವಾಲೆಗಳಿಂದ ಈ ಶರೀರವನ್ನು ಭಸ್ಮಮಾಡಿಕೊಳ್ಳುವೆನು." ಎಂದು ತನ್ನ ಹೆಂಡತಿಗೆ ಹೇಳಿದನು. ||೬೧||

ಹೀಗೆ ಬಹಳ ಬೇಜಾರಿನಿಂದ ನುಡಿದ ತನ್ನ ಪತಿಯಾದ ಆ ಬ್ರಾಹ್ಮಣನ ವಚನಗಳನ್ನು ಲಾಲಿಸಿ ಸುಂದರವಾದ ಕಣ್ಣುಗಳುಳ್ಳ ಆತನ ಪತ್ನಿಯು ತನ್ನ ಪತಿಯೊಡನೆ ಹೀಗೆಂದಳು. ||೬೨||

" ಪ್ರಿಯನೇ ! ಬ್ರಾಹ್ಮಣ ಕುಲೋತ್ಪನ್ನನಾದ ನೀನು ಬ್ರಾಹ್ಮಣನೆಂಬುವುದರಲ್ಲಿ ಸಂಶಯವೇ ಇಲ್ಲ. ಹೀಗೆ ಬ್ರಾಹ್ಮಣನಾಗಿದ್ದೂ ಈ ರೀತಿ ಗಟ್ಟಿಯಾಗಿ ಅಳುವುದೇತಕ್ಕೆ ? ಕೂಡಲೇ ಈ ದುಃಖವು ನಾಶವಾಗುವಂತೆ ಏನಾದರೂ ಉಪಾಯಮಾಡು ? ||೬೩||

ಈ ಲೋಕಗಳಲ್ಲಿ ಮರಣವೆಂಬುದು ಯಾರಿಗೂ ಇಷ್ಟಕರವಾದುದಲ್ಲ.

ಯಸ್ಮಿನ್ಕಾಲೇ ಯದಾ ದೇಶೇ ಯದ್ಯದ್ಭಾವಿ ಭವಿಷ್ಯತಿ ।
ಯಸ್ಮಿನ್ಕಾಲೇ ಯದಾರಾದ್ಧಮನ್ನಮಿತ್ಯಾಹ ಹಿ ಶ್ರುತಿಃ ॥೬೫॥

ಶಿವಕ್ಷೇತ್ರಮಿದಂ ತಾವದ್ಬಹುಶೈವ ವಿರಾಜಿತಂ ।
ಅತ್ರ ಶಂಕಾ ನ ಕರ್ತವ್ಯಾ ಕೃತಾಂತಾದಪಿ ಭೂಸುರ ॥೬೬॥

ವೃಥಾಯಾಸಕರಃ ಕಾಲಃ ಶರೀರಸ್ಯಾಸ್ಯ ಸರ್ವಥಾ ।
ಅತಃ ಪರಂ ಶಿವದ್ವಾರಿ ವಸಾವೋ ಬಲಿಭೋಜನೌ ॥೬೭॥

ಏವಂ ಸಂವದತೋಸ್ತತ್ರ ದಂಪತ್ಯೋಃ ಕಶ್ಚಿದಾಗತಃ ।
ಶೈವವರ್ಯಃ ಪ್ರಹೃಷ್ಟಾತ್ಮಾ ಶಿಪಿವಿಷ್ಟೇಷ್ಟಮಾನಸಃ ॥೬೮॥

ಯಾವುದಾದರೂ ಒಂದು ವೃತ್ತಿಯಿಂದ ಜೀವನಮಾಡುವುದೇ ಉಚಿತವು, ಇದರಲ್ಲಿ ದೋಷವೇನು ? ॥೬೪॥

ಯಾವ ಯಾವ ಕಾಲದಲ್ಲಿ ಯಾವ ದೇಶದಲ್ಲಿ ಏನೇನಾಗಬೇಕೋ ಅದು ತಪ್ಪದೇ ನಡೆಯಲೇ ಬೇಕು. ಯಾರಿಗೆ ಯಾವಕಾಲದಲ್ಲಿ ಯಾವರೀತಿಯಾದ ಅನ್ನಪ್ರಾಪ್ತಿಯಿರುವುದೋ ಅವನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲವೆಂದು ವೇದದಲ್ಲಿ ಪ್ರಮಾಣವಿರುವುದು. ॥೬೫॥

ಓ ಬ್ರಾಹ್ಮಣೋತ್ತಮ ! ಇದು ಅನೇಕ ಶಿವಭಕ್ತರಿಂದ ಶೋಭಿಸುತ್ತಿರುವ ಶಿವಕ್ಷೇತ್ರವಾಗಿರುವುದು. ಇಲ್ಲಿ ಆ ಯಮನ ದೆಸೆಯಿಂದಲೂ ಸಹ ಭಯದ ಶಂಕೆಯೇ ಇರುವುದಿಲ್ಲ. ॥೬೬॥

ಈ ಕಾಲವು ಕೇವಲ ಶರೀರಕ್ಕೆ ವೃಥಾ ಆಯಾಸವನ್ನುಂಟುಮಾಡುವ ಕಾಲವಾಗಿರುವುದು. ಇನ್ನು ಮುಂದೆ ಶಿವನಿಗೆ ನಿವೇದನಮಾಡಿದ ಬಲಿಯನ್ನು ಊಟಮಾಡುತ್ತಾ ಈ ಶಿವಾಲಯದ ಬಾಗಿಲಿನಲ್ಲಿ ವಾಸಮಾಡೋಣ. ॥೬೭॥

ಹೀಗೆ ಆ ಬ್ರಾಹ್ಮಣದಂಪತಿಗಳು ಸಂಭಾಷಣೆಮಾಡುತ್ತಿರುವ ಸಂದರ್ಭದಲ್ಲಿ ಒಬ್ಬ ಶಾಂಭವನು ಅಲ್ಲಿಗೆ ಬಂದನು. ಅವನು ಸದಾ ಶಿಪಿವಿಷ್ಟನೆನಿಸಿದ ಮಹೇಶ್ವರನಲ್ಲಿಯೇ ದೃಢಮನಸ್ಸುಳ್ಳವನೂ ಸಂತೋಷಭರಿತನೂ ಆಗಿದ್ದನು. ॥೬೮॥

ಭಸ್ಮರುದ್ರಾಕ್ಷಸಂಪನ್ನೋ ಮಹಾಕಾಲಂ ನಿರೀಕ್ಷಿತುಂ ।
ಬಭಾಷೇ ವಚನಂ ಚಾರು ತೌ ತದಾ ಹರ್ಷಯನ್ನಿವ ॥೧೯॥

॥ ಶೈವ ಉವಾಚ ॥

ಕಿಮರ್ಥಂ ದುಃಖಿತೌ ಬ್ರೂತಂ ತೀವ್ರಶೋಕೇನ ಕರ್ಷಿತೌ ।
ಯದಿ ಕ್ಷಮಂ ಮಯಿ ಬ್ರೂತಾಮುಪಾಯಂ ಚಿಂತಯಾಮ್ಯಹಂ॥೨೦॥

ಪ್ರಾಪ್ತಮನ್ನಂ ಮಯಾ ಭುಕ್ತಂ ಸದಾನ್ನಪತಿಪೂಜನಾತ್ ।
ಅಸ್ಮಿನ್ನೇವ ಶಿವಕ್ಷೇತ್ರೇ ದದ್ಯಾದನ್ನಂ ಸುಸಂಸ್ಕೃತಂ ॥೨೦॥

ಯಸ್ಮೈ ಕಸ್ಮೈಚಿದತ್ಯಂತಂ ತುಷ್ಟಸ್ತೇನ ಮಹೇಶ್ವರಃ ।
ಕಿಂ ಪುನಃ ಶೈವವರ್ಯೇಷು ದತ್ತಂ ಭವತಿ ಚಾಕ್ಷಯಂ ॥೨೨॥

---

ಆ ಮಹಾಕಾಲೇಶ್ವರನನ್ನು ನೋಡಲು ಬಂದಿದ್ದ ಆ ಶಾಂಭವಶ್ರೇಷ್ಠರು ಭಸ್ಮ, ರುದ್ರಾಕ್ಷಮಾಲೆ ಇವುಗಳಿಂದಲಂಕೃತನಾಗಿದ್ದನು. ಈ ಮಹಾನುಭಾವನು ಆ ದರಿದ್ರ ಬ್ರಾಹ್ಮಣ ದಂಪತಿಗಳಿಗೆ ಸಂತೋಷವುಂಟಾಗುವಂತೆ ಅವರನ್ನು ಕುರಿತು ಮನೋಹರವಾಗಿ ಹೀಗೆ ಮಾತನಾಡಿದನು. ॥೧೯॥

" ಓ ಬ್ರಾಹ್ಮಣದಂಪತಿಗಳೇ! ಏತಕ್ಕೋಸ್ಕರ ನೀವು ದುಃಖಿತರಾಗಿ ಕೃಶರಾಗಿರುವಿರಿ. ನನಗೆ ನಿಮ್ಮ ವಿಷಯವನ್ನು ತಿಳಿಸಬಹುದಾದ ಪಕ್ಷದಲ್ಲಿ ತಿಳಿಸಿರಿ, ಅದಕ್ಕೆ ನಾನು ಉಪಾಯವನ್ನು ಹುಡುಕುತ್ತೇನೆ. ॥೨೦॥

ನನಗೆ ದೊರೆತ ಅನ್ನವನ್ನು ಈಗ ನಾನು ಊಟಮಾಡಿದೆನು. ಯಾವಾಗಲೂ ಇದೇ ಶಿವಕ್ಷೇತ್ರದಲ್ಲಿ ಆಹಾರವಸ್ತುಗಳಿಗೆಲ್ಲಾ ಒಡೆಯನಾದ ಆ ಪರಮೇಶ್ವರನನ್ನು ಪೂಜಿಸುವುದರಿಂದ, ಚೆನ್ನಾಗಿ ಪರಿಷ್ಕೃತವಾದ ಅನ್ನವನ್ನೇ ಆ ಮಹೇಶನು ಕೊಡುವನು. ॥೨೧॥

ತನ್ನನ್ನು ಸ್ತೋತ್ರಮಾಡಿದ ಸಾಮಾನ್ಯ ಮನುಷ್ಯನಿಗೂ ಬೇಕಾದುದನ್ನು ಕೊಡುವ ಈ ಮಹಾಕಾಲೇಶ್ವರನು ತನ್ನ ನಿಜಭಕ್ತರೇ ತನ್ನನ್ನು ಭಕ್ತಿಯಿಂದ ಸ್ತುತಿಸಿದರೆ ಅವರಿಗೆ ನಾಶರಹಿತವಾದ ಫಲಗಳನ್ನೇ ಕೊಡುವನೆಂಬುದರಲ್ಲಿ ಸಂದೇಹವೇನು ? ॥೨೨॥

ಭಸ್ಮಫಾಲಸ್ತ್ವಮತ್ಯಂತಂ ತ್ರಿಪುಂಡ್ರಾವಲಿಭಾಸುರಃ ।
ರುದ್ರಾಕ್ಷಮಾಲಾಭರಣೋ ದ್ವಿಜೋಽಸ್ಯತ್ಯಂತಕರ್ಷಿತಃ ॥೭೩॥

ಸದಾರಶ್ಚ ವಿಶೇಷೇಣ ತ್ರಿನೇತ್ರಪ್ರಿಯಕೃತ್ತಮಃ ।
ಇತಿ ಶೈವವಚಃ ಶ್ರುತ್ವಾ ಸಭಾರ್ಯೋ ಹರ್ಷಿತೋ ದ್ವಿಜಃ ॥೭೪॥

ಯಥೋದಕಂ ಮರೌ ಪ್ರಾಪ್ಯ ಘಾಸಮಿಷ್ಟಂ ಯಥೈವ ಗೌಃ ।
ತೃಷಿತಸ್ತದ್ವದೇವಾಯಂ ಪ್ರಾಂಜಲಿಃ ಪ್ರಣನಾಮ ತಂ ॥೭೫॥

ಉವಾಚೋತ್ಫುಲ್ಲವದನೋ ಹರ್ಷಗದ್ಗದಯಾ ಗಿರಾ ॥೭೬॥

॥ ಬ್ರಾಹ್ಮಣ ಉವಾಚ ॥

ಕಿಂ ಕರೋಮಿ ದ್ವಿಜಶ್ರೇಷ್ಠ ಯಾಚಕೋಽಹಂ ಸದಾತುರಃ ।
ಬಹುಭಕ್ಷಃ ಸದಾರಶ್ಚ ಮಾಸಮಾತ್ರಮುಪೋಷಣಃ ॥೭೭॥

ಹಣೆಯಲ್ಲಿ ಭಸ್ಮವನ್ನು ಧರಿಸಿ ತ್ರಿಪುಂಡ್ರಗಳಿಂದಲಂಕೃತನಾಗಿ ಅತ್ಯಂತ ಕೃಶನಾದ ಬಾಹ್ಮಣನಾಗಿರುವೆ. ॥೭೩॥

ಪತ್ನೀಸಮೇತನಾದ ನೀನು ವಿಶೇಷವಾಗಿ ಆ ಮುಕ್ಕಣ್ಣನಾದ ಮಹಾದೇವನಿಗೆ ಪ್ರೀತಿಪಾತ್ರನಾಗಿರುವೆ." ಎಂದು ನುಡಿದ ಆ ಶಿವಭಕ್ತಾಗ್ರೇಸರನ ವಚನಗಳನ್ನು ಕೇಳಿ, ತನ್ನ ಪತ್ನಿಯೊಡನೆ ಆ ಬ್ರಾಹ್ಮಣನು ಸಂತೋಷಗೊಂಡನು. ॥೭೪॥

ಬಾಯಾರಿದವನು ಮರಳುಕಾಡಿನಲ್ಲಿ ನೀರನ್ನು ಕಂಡಂತೆಯೂ, ಆಹಾರವಿಲ್ಲದೆ ನರಳುತ್ತಿದ್ದ ಹಸುವು ಇದ್ದಕ್ಕಿದ್ದಂತೆ ತನಗೆ ಬೇಕಾದ ಎಳೆ ಹುಲ್ಲನ್ನು ಪಡೆದಂತೆಯೂ, ಈ ಬ್ರಾಹ್ಮಣನು ಶಾಂಭವನನ್ನು ನೋಡಿ ಸಂತೋಷಗೊಂಡು ಅವನಿಗೆ ನಮಸ್ಕಾರಮಾಡಿದನು. ಮತ್ತು ಅರಳಿದ ಮುಖವುಳ್ಳವನಾಗಿ ಸಂತೋಷಭರದಿಂದ ಗದ್ಗದವಾದ ಮಾತುಗಳನ್ನಾಡುತ್ತಾ ಅವನೊಡನೆ ಇಂತೆಂದನು. ॥೭೫-೭೬॥

" ಓ ಬ್ರಾಹ್ಮಣೋತ್ತಮನೇ ! ನಾನೇನು ಮಾಡಲಿ ! ಯಾಚಕನಾದ ನಾನು ಯಾವಾಗಲೂ ರೋಗಿಷ್ಠನಾಗಿದ್ದೇನೆ. ಪತ್ನೀಸಮೇತನಾದ ನನಗೆ ತುಂಬಾ ಊಟ ಮಾಡುವುದರಲ್ಲಿ ಅಪೇಕ್ಷೆ ಇದೆ. ಆದರೆ ಒಂದೊಂದು ವೇಳೆ ಒಂದು ತಿಂಗಳವರೆವಿಗೂ ಉಪವಾಸಮಾಡಬೇಕಾಗಿ ಬರುವುದು. ॥೭೭॥

ಮದ್ಯಾಚನಾಭಿಯಾ ಲೋಕೋ ನೈವ ದಾಸ್ಯತಿ ಕಿಂಚನ ।
ಧನಧಾನ್ಯೋದಪೂರ್ಣೇಷು ಗೃಹೇಷು ಗೃಹಿಣಃ ಸದಾ ॥೭೮॥

ತಿರಸ್ಕುರ್ವಂತಿ ಮಾಂ ನಿತ್ಯಂ ಕುಪ್ಯಂತಿ ಚ ಹಸಂತಿ ಚ ।
ದಾರಿದ್ರ್ಯಪೀಡಿತಸ್ಯಾದ್ಯ ಜೀವನಂ ಮೇ ನ ವಿದ್ಯತೇ ॥೭೯॥

ಮ್ರಿಯೇಽಹಮಧುನಾ ವಿಪ್ರ ಅಭಾಗ್ಯಾರ್ಣವಮಧ್ಯಗಃ ।
ಸದಾರಃ ಪಶ್ಯತಸ್ತೇಽದ್ಯ ಮಹಾಕಾಲಶಿವಾಗ್ರತಃ ॥೮೦॥

ಶಿವಾಗ್ರೇ ಮರಣಂ ಶೈವ ಧನ್ಯಾನಾಂ ಕಿಲ ಜಾಯತೇ ।
ಮತ್ಪಾಪಗಣನಾ ನೂನಂ ಶೇಷೋ ವಕ್ತುಂ ನ ಹಿ ಕ್ಷಮಃ ॥೮೧॥

ತಸ್ಮಾಚ್ಛಿವಕ್ಷೇತ್ರಗತಸ್ತ್ಯಕ್ಷ್ಯಾಮೀದಂ ಕಳೇಬರಂ ।
ನೈವ ಪಾತಕಸಂಗೋ ಮೇ ಶೈವೇತ್ಥಂ ಸತ್ಯಮುಚ್ಯತೇ ॥೮೨॥

ನಾನು ಬಂದು ಯಾಚನೆ ಮಾಡುತ್ತಾ ನಮಗೆ ತೊಂದರೆ ಕೊಡುವನೆಂದು ಜನರೆಲ್ಲರೂ ಭಯದಿಂದ ನನಗೆ ಏನನ್ನೂ ಕೊಡುವುದಿಲ್ಲ. ಧನ, ಧಾನ್ಯ, ಮತ್ತು ನೀರು ಇವೇ ಮುಂತಾದವುಗಳಿಂದ ಪರಿಪೂರ್ಣವಾಗಿರುವ ಮನೆಗಳಲ್ಲಿ ವಾಸಮಾಡುವ ಗೃಹಸ್ಥರೂ ಸಹ ಯಾವಾಗಲೂ ನನ್ನ ಮೇಲೆ ಕೋಪಗೊಳ್ಳುತ್ತಾ ನಿತ್ಯವೂ ತಿರಸ್ಕಾರಮಾಡುತ್ತಾ ನಗುತ್ತಿರುವರು. ಈ ದಾರಿದ್ರ್ಯದಿಂದ ಪೀಡಿಸಲ್ಪಟ್ಟಿರುವ ನನಗೆ ಇದ್ದು ಈ ರೀತಿ ಬದುಕುವುದರಲ್ಲಿ ಸ್ವಲ್ಪವೂ ಅಪೇಕ್ಷೆಯಿಲ್ಲ. ॥೭೮-೭೯॥

ಎಲೈ ಬ್ರಾಹ್ಮಣನೆ! ದಾರಿದ್ರ್ಯವೆಂಬ ಸಮುದ್ರದ ಮಧ್ಯದಲ್ಲಿರುತ್ತಾ ಪತ್ನೀ ಸಮೇತನಾಗಿ ನರಳುತ್ತಿರುವ ನಾನು ನೀನು ನೋಡುತ್ತಿರುವಂತೆಯೇ ಈ ಮಹಾಕಾಲೇಶ್ವರನ ಮುಂದುಗಡೆಯಲ್ಲಿಯೇ ಈಗ ಸಾಯುವೆನು. ॥೮೦॥

ಓ ಶೈವನೇ, ಈ ಶಿವನ ಮುಂದುಗಡೆ ಕೇವಲ ಧನ್ಯರೆನಿಸಿದವರಿಗೆ ಮಾತ್ರ ಮರಣವುಂಟಾಗುವುದು. ನಾನು ಮಾಡಿರುವ ಪಾಪಗಳನ್ನು ಲೆಕ್ಕಮಾಡಲು ಆ ಆದಿಶೇಷನಿಗೂ ಸಾಮರ್ಥ್ಯವಿಲ್ಲ. ಇದು ನಿಶ್ಚಯವು. ॥೮೧॥

ಅಯ್ಯ ಈಶ್ವರ ಭಕ್ತನೇ! ಹೀಗಿರುವುದರಿಂದ ಶಿವಕ್ಷೇತ್ರವನ್ನು ಸೇರಿ ಇಲ್ಲಿ ನನ್ನ ಈ ಪಾಪವಿಶಿಷ್ಟವಾದ ಶರೀರವನ್ನು ತ್ಯಾಗಮಾಡುವೆನು. ಇದರಿಂದ ನನಗೆ

ಇತಿ ತದ್ವಚನಂ ಶ್ರುತ್ವಾ ಸ ಶೈವೋ ದುಃಖಿತೋಽವದತ್ ॥೮೩॥

॥ ಶೈವ ಉವಾಚ ॥

ತ್ವಯೋಽನ್ನಪತಯೇ ಪೂರ್ವಂ ನ ದತ್ತಂ ಚಾನ್ನಮುತ್ತಮಂ ।
ತೇನ ತ್ವಂ ದುಃಖಭಾಙ್ನೂನಂ ದರಿದ್ರಶ್ಚ ವಿಶೇಷತಃ ॥೮೪॥

ಜನೈಸ್ತಿರಸ್ಕೃತಶ್ಚಾಸಿ ಸದಾ ಧಿಗ್ಶಬ್ದವಾದಿಭಿಃ ।
ಧನಧಾನ್ಯಸಮಾಯುಕ್ತೆ ಜನತಾಯಾಂ ತ್ವಯಾಧುನಾ ॥೮೫॥

ನೈವ ಸಂಪ್ರಾಪ್ಯತೇ ಚಾನ್ನಂ ಪಶ್ಯ ತ್ವಂ ಕಾಲಪರ್ಯಯಂ ।
ಉಪಾಯಮೇಕಂ ವಕ್ಷ್ಯಾಮಿ ಸಾವಧಾನಮನಾಃ ಶೃಣು ॥೮೬॥

ವೃದ್ಧಸ್ತ್ವಂ ಜರಯಾ ವ್ಯಾಪ್ತಶ್ಚಲಿತೋಽರುಶಿರಾಂಗಕೈಃ ।
ಮುಹುರ್ಮುಹುರ್ಜಾಯತೇ ತೇ ಹೃದಯೇ ಚೈವ ವೇಪಥುಃ ॥೮೭॥

ಯಾವ ಪಾಪವೂ ಬರುವುದಿಲ್ಲ. ಇದು ಸತ್ಯವು'' ಎಂದು ಆ ಬ್ರಾಹ್ಮಣನು ನ್ಯೈನ್ಯದಿಂದ ನುಡಿದ ವಚನಗಳನ್ನು ಕೇಳಿ ಆ ಶೈವನು ದುಃಖಿತನಾಗಿ ಹೀಗೆಂದನು. ॥೮೨-೮೩॥

ಓ ಬ್ರಾಹ್ಮಣನೇ ಕೇಳು. ನೀನು ಹಿಂದಿನ ಜನ್ಮದಲ್ಲಿ ಅನ್ನಪತಿಯಾದ ಆ ಪರಮೇಶ್ವರನಿಗೆ ಉತ್ತಮವಾದ ಅನ್ನವನ್ನು ಕೊಡಲಿಲ್ಲ. ಆದ್ದರಿಂದ ಈಗ ನೀನು ಈ ರೀತಿಯಾದ ದುಃಖಕ್ಕೊಳಗಾಗಿ ನಿಶ್ಚಯವಾಗಿಯೂ ಹೆಚ್ಚು ದರಿದ್ರನಾಗಿರುವೆ.॥೮೪॥

ಜನರು ಯಾವಾಗಲೂ ಧಿಕ್ಕಾರಪೂರ್ವಕವಾಗಿ ನಿನ್ನನ್ನು ತಿರಸ್ಕರಿಸುತ್ತಿರುವರು. ಅಲ್ಲದೇ ಧನ ಧಾನ್ಯ ಮುಂತಾದವುಗಳಿಂದ ಕೂಡಿರುವ ಜನಗಳ ಗುಂಪಿನಲ್ಲಿಯೂ ನಿನಗೆ ಈಗ ಅದೇ ಕಾರಣದಿಂದ ಅನ್ನವು ದೊರೆಯುತ್ತಿಲ್ಲ. ನೋಡು, ಕಾಲವು ಯಾವರೀತಿಯಾಗಿ ವಿಪರಿಣಾಮಹೊಂದಿದೆ. ಈಗ ನಾನು ನಿನಗೆ ಈ ದುಃಖವನ್ನು ಕಳೆದುಕೊಳ್ಳುವುದಕ್ಕೆ ಒಂದುಪಾಯವನ್ನು ಹೇಳುವೆನು ಅದನ್ನು ಸಾವಧಾನದಿಂದ ಕೇಳು. ॥೮೫-೮೬॥

ನೀನು ಮುದುಕನು. ಈ ಮುಪ್ಪಿನಿಂದ ನಿನ್ನ ತೊಡೆ, ತಲೆ ಮತ್ತು ಇತರ ಅಂಗಗಳು ಇವುಗಳೆಲ್ಲವೂ ನಡುಗುತ್ತಿವೆ. ಅಲ್ಲದೆ ನಿನ್ನ ಮನಸ್ಸಿನಲ್ಲಿಯೂ ಪದೇ ಪದೇ ಕಂಪವು ಹುಟ್ಟುತ್ತಿದೆ. ಹಾಗಿರುವಾಗ ನೀನು ಸುಮ್ಮನಿರುವುದು ಯುಕ್ತವಲ್ಲ.

ತೂಷ್ಣೀಂ ಸ್ಥಿತಿರ್ನ ತೇ ಯುಕ್ತಾ ಹಿತಮಾತ್ಯಂತಿಕಂ ಶೃಣು ।
ಅಸ್ಮಿನ್ನೇವ ಶಿವಕ್ಷೇತ್ರೇ ವಸನ್ನುನಿಯತೋ ಭವ ॥೮೮॥

ಶಂಕರಂ ಭಜ ಹೇ ವಿಪ್ರ ಭಸ್ಮರುದ್ರಾಕ್ಷಭೂಷಣಃ ।
ಸರ್ವಪಾಪವಿನಾಶಾಯ ತವ ದಾಸ್ಯಾಮ್ಯಹಂ ಮನುಂ ॥೮೯॥

ಪಂಚಾಕ್ಷರಂ ಮಹದ್ವಿಪ್ರ ತೇನ ಲಿಂಗಾರ್ಚಕೋ ಭವ ।
ಹರೇಣ ಕಥಿತಂ ಗೌರ್ಯೈ ಹಿತಂ ದಾರಿದ್ರ್ಯನಾಶಕಂ ॥೯೦॥

ತತ್ತುಭ್ಯಂ ಶೃಣು ವಕ್ಷ್ಯಾಮಿ ಹಿತಮಾತ್ಯಂತಿಕಂ ದ್ವಿಜ ॥೯೧॥

ಅಖಂಡಶುಭ್ರೋತ್ತಮಧೌತತಂಡುಲಾನ್
ಹಯ್ಯಂಗವೀನೇನ ವಿಲೋಡ್ಯ ಪಕ್ತ್ವಾ ।
ದತ್ವಾ ತದನ್ನಂ ಸ ಭವೇದಥಾನ್ನ
ಪತಿಃ ಪ್ರಜಾಃ ಪಾಲಯಿತಾದ್ಯ ಗೌರಿ ॥೯೨॥

ಆದ್ದರಿಂದ ನಿನಗೆ ಮುಂದೆ ಅತ್ಯಂತ ಹಿತಕರವಾದುದನ್ನು ಹೇಳುತ್ತೇನೆ ಕೇಳು! ಎಂದು ಇಂತೆಂದನು. ॥೮೭॥

ನೀನು ಈ ಶಿವಕ್ಷೇತ್ರದಲ್ಲಿ ನಿಯಮದಿಂದಿರುತ್ತಾ ಭಸ್ಮ, ರುದ್ರಾಕ್ಷ ಇವುಗಳಿಂದಲಂಕೃತನಾಗಿ ಆ ಲೋಕಮಂಗಳಕರನಾದ ಶಿವನನ್ನು ಭಜನೆಮಾಡುವನಾಗು. ನಾನು ನಿನಗೆ ಸಕಲಪಾಪಗಳನ್ನೂ ನಾಶಮಾಡುವ ಮಂತ್ರವನ್ನುಪದೇಶಿಸುತ್ತೇನೆ. ॥೮೮-೮೯॥

ಅಯ್ಯ ಬ್ರಾಹ್ಮಣನೇ! ಪಂಚಾಕ್ಷರರೂಪವಾದ ಈ ಮಹಾಶಿವಮಂತ್ರವನ್ನು ಸ್ವೀಕರಿಸಿ ಅದರಿಂದ ಆ ಶಿವಲಿಂಗವನ್ನು ಪೂಜೆಮಾಡು. ಓ ಬ್ರಾಹ್ಮಣೋತ್ತಮನೇ, ಪರಮೇಶ್ವರನು ತನ್ನ ಪತ್ನಿಯಾದ ಗೌರಿಗೆ ಹೇಳಿದ ಅತ್ಯಂತ ಹಿತಕರವೂ ಮತ್ತು ಸಕಲ ದಾರಿದ್ರ್ಯನಾಶಕವೂ ಆದ ವಿಷಯವನ್ನು ಈಗ ನಿನಗೆ ಹೇಳುವೆನು ಕೇಳು. ॥೯೦-೯೧॥

'ಎಲೌ ಗೌರಿಯೇ, ನುಚ್ಚಾಗದೆ ಅತ್ಯಂತ ಶುಭ್ರವಾಗಿರುವ ಅಕ್ಕಿಯನ್ನು ಚೆನ್ನಾಗಿ ತೊಳೆದು ಒಳ್ಳೆಯ ಹಸುವಿನ ತುಪ್ಪವನ್ನು ಬೆರೆಸಿ ಚೆನ್ನಾಗಿ ಪಕ್ವವಾಗುವಂತೆ ಅನ್ನಮಾಡಿ ಅದನ್ನು ಅನ್ನಪತಿಯೆನಿಸಿದ (ನನಗೆ) ಪರಮೇಶ್ವರನಿಗೆ ನಿವೇದನಮಾಡು

ಶಿವೇ ಶಿರಸಿ ಮೇ ಶಿವೇ ಮಯಿ ದದತ್ಯನ್ನಮತ್ಯಾದರಾ
ತ್ಸ ಏವ ನಿಧಿಸಂಪದಾಂ ಭವತಿ ಭಾಗ್ಯಪೂರ್ಣೋ ಜನಃ ।
ಸ ಏವ ಸುಕೃತೀ ವರಂ ಮುಹುರನನ್ಯಚೇತಾ ಮಯಿ
ಸ್ಥಿರೋ ಮಮ ಸಪರ್ಯಯಾ ಭವತಿ ಮುಕ್ತಯೇ ಚಾಂಬಿಕೇ ॥೯೩॥

ಸುಕೃಷ್ಟಭುವಿ ವರ್ಧತಃ ಪ್ರಸೃತಮಲ್ಲಿವಲ್ಲೀಲಸ ।
ದ್ವಸಂತನವಕುಡ್ಮಲೀ ವಿರಲಪುಂಜವನ್ಮಂಜುಲಂ ॥೯೪॥

ದ್ರೋಣಾಚ್ಛಾಭ್ರನಿಭಾನ್ನರಾಶಿಭಿರುಮೇ ಸಂಛಾದ್ಯರಾಕಾಶರ ।
ದ್ಯಾಶ್ಚಿನ್ಯಾ ತದಪಾರಸಿಕ್ಥಗಣನಾಪುಣ್ಯೈರನಲ್ಪೋ ಭವೇತ್ ॥೯೫॥

ಸರ್ವಾಶ್ವಮೇಧಶತಕೋತ್ಥಫಲಾದ್ಯಗರ್ವ
ನಿರ್ವಾಪಣಾಯಾಲಮುಮೇದ್ಯ ಪುಣ್ಯಂ ।

---

ವವನು ನಿಜವಾಗಿಯೂ ತಾನೇ ಅನ್ನಪತಿಯೆನಿಸಿ ಪ್ರಜೆಗಳನ್ನೆಲ್ಲಾ ರಕ್ಷಣೆಮಾಡುವ ಶಕ್ತಿಯುಳ್ಳವನಾಗುವನು. ॥೯೨॥

ಎಲೌ ಮಂಗಳಾಂಗಿಯೇ, ಶಿವನೆನಿಸಿದ ಈ ನನ್ನ ತಲೆಯಮೇಲೆ (ಅಂಗದ ಮೇಲೆ) ಆ ಅನ್ನವನ್ನು ಅತ್ಯಾದರದಿಂದ ಇಟ್ಟು ಪೂಜಿಸುವ ಮಾನವನೇ ಸಕಲ ನಿಧಿಗಳಿಗೂ ಸ್ವಾಮಿಯಾಗಿ ಸರ್ವಭಾಗ್ಯಗಳಿಂದಲೂ ಪರಿಪೂರ್ಣನಾಗುವನು. ಯಾವಾಗಲೂ ಈರೀತಿ ಅನನ್ಯಮನಸ್ಸಿನಿಂದ ನನ್ನನ್ನು ಪೂಜೆಮಾಡುವ ಆತನೇ ಪುಣ್ಯಶಾಲಿಯು. ಎಲೌ ಅಂಬಿಕೆ, ಹೀಗೆ ಬಿಡದೇ ಅನವರತವೂ ನನ್ನನ್ನು ಪೂಜಿಸುವ ಆತನಿಗೆ ನಿಜವಾಗಿಯೂ ಮೋಕ್ಷವು ದೊರೆಯುವುದು. ॥೯೩॥

ಫಲವತ್ತಾದ ಭೂಮಿಯಲ್ಲಿ ಬೆಳೆದಿರುವ ವಸಂತ ಋತುವಿನ ಮಲ್ಲಿಗೆಯ ಮೊಗ್ಗುಗಳ ರಾಶಿಯಂತೆಯೂ, ತುಂಬೆಹೂವಿನ ಸಮೂಹದಂತೆಯೂ ಶರಚ್ಚಂದ್ರನ ಬೆಳದಿಂಗಳಿನಂತೆಯೂ ಅತ್ಯಂತ ಶುಭ್ರವಾಗಿ ಕಾಣುವ ಅನ್ನರಾಶಿಯನ್ನು ಯಾರು ಪರಶಿವಲಿಂಗದ ಮೇಲೆ ಇಟ್ಟು ಭಕ್ತಿಯಿಂದ ಪೂಜಿಸುವರೋ, ಅವರಿಗೆ ದೊರಕುವ ಸುಕೃತವು ಅನಂತವಾದುದು. ಅಂತಹವರು ಎಲ್ಲಾ ವಿಧವಾದ ಇಷ್ಟಾರ್ಥಗಳನ್ನು ಕೂಡ ಪಡೆಯಲು ಸಮರ್ಥರಾಗುವರು. ॥೯೪-೯೫॥

ಎಲೌ ಗೌರೀ, ಅನ್ನಾಧಿಪತಿಯಾದ ಪರಮೇಶ್ವರನ ಪಾದಪೂಜೆಯಿಂದುಂಟಾಗುವ ಪುಣ್ಯಗಳ ಮುಂದೆ, ನೂರಾರು ಅಶ್ವಮೇಧಯಾಗಗಳನ್ನು ಸಾಂಗವಾಗಿ

ಕಿಯತ್ತ್ವದನ್ನಾಧಿಪಪಾದಪೂಜನಂ
ತತೋ ಭವೇದ್ಗೌರಿ ವಿಶಿಷ್ಟಮೇತತ್ ॥೯೬॥

ಅಹೋ ಪಾಮರಾ ವಾನರಾ ಏವ ನಿತ್ಯಂ
ಶಿವಾರಾಧಕಾಃ ಸಾಧನಾದಿಪ್ರಹೀಣಾಃ ।
ನ ಚಾಚಾರಧಾರಾವಿಹಾರೈಕಶೂರಾಃ
ಖರಾಪಾರಯೋನಿದ್ರವಾಸಾರಕೃಷ್ಣಾಃ ॥೯೭॥

ಮಹಾಬಿಲ್ವಮೂಲೇ ಮಹಾಶೈವಮೇಕಂ
ಸಮಭ್ಯರ್ಚ್ಯ ಸಂಭೋಜಯಿತ್ವಾ ಘೃತಾನ್ನೈಃ ।
ಸ ಚಾನ್ನಾಧಿಪತ್ಯಂ ಲಭೇತ್ತೈವ ಕಾಮಂ
ಮಹಾನ್ನಾಧಿಪಸ್ಯೈವ ಶೀಘ್ರಂ ಪ್ರಸಾದಾತ್ ॥೯೮॥

ಮಾಡಿದರೆ ಉಂಟಾಗುವ ಪುಣ್ಯಫಲಗಳು ಎಷ್ಟರವು! ಈ ಪುಣ್ಯವೇ ಆ ಅಶ್ವಮೇಧಾದಿಯಾಗಗಳ ಫಲಗಳಿಗಿಂತ ವಿಶೇಷವಾಗಿ ಫಲಕೊಟ್ಟು ಅವುಗಳ ಅಹಂಕಾರವನ್ನೆಲ್ಲಾ ಹೋಗಲಾಡಿಸುವಷ್ಟು ಸಮರ್ಥವಾಗುವುದು. ॥೯೬॥

ಅಯ್ಯೋ, ಶಿವಪೂಜಾಸಾಧನಾದಿಗಳಿಲ್ಲದೆ ನಿತ್ಯವೂ ಆ ಶಿವಪೂಜೆಯನ್ನು ಮಾಡುವ ಪಾಮರರಾದ ಮಾನವರು ನಿಜವಾಗಿಯೂ ವಾನರರೇ ಸರಿ. (ಕಪಿಗಳಿಗೆ ಹೇಗೆ ಯುಕ್ತಾಯುಕ್ತವಿವೇಚನೆಯಿಲ್ಲವೋ ಅದರಂತೆ ಇವರಿಗೂ ಸರಿಯಾದ ಪೂಜಾಸಾಧನಗಳಿಲ್ಲದೆ ಪೂಜೆಮಾಡುವುದರಿಂದ ತಿಳಿವಳಿಕೆಯಿಲ್ಲವೆಂದು ಹೇಳಬೇಕು. ಆದ್ದರಿಂದ ಮಾನವನು ಯುಕ್ತವಾದ ಶಿವಪೂಜಾಸಾಮಗ್ರಿಗಳಿಂದ ಆ ಪರಮೇಶ್ವರನನ್ನು ಪೂಜಿಸಬೇಕೆಂದು ಭಾವವು.) ಯಾವಾಗಲೂ ತಮ್ಮ ಆಚಾರಗಳಲ್ಲಿಯೇ ನಿರತರಾಗಿ ಅನವರತವೂ ಆ ಶಿವಪೂಜಾ ಭಜನಾದಿಗಳಲ್ಲಿಯೇ ವಿಹರಿಸುತ್ತಿರುವರು. ಅವರು ಕತ್ತೆಯೇ ಮುಂತಾದ ಅಪಾರ ನೀಚಯೋನಿಗಳಲ್ಲಿ ಜನ್ಮವನ್ನೆತ್ತಿ ಆದರಲ್ಲಿ ಬಿದ್ದು ನರಳಲಪೇಕ್ಷೆಪಡುವುದಿಲ್ಲ. ॥೯೭॥

ಒಂದು ದೊಡ್ಡ ಬಿಲ್ವಪತ್ರೇ ಮರದ ಬುಡದಲ್ಲಿ ಒಬ್ಬನೇ ಒಬ್ಬ ಶಿವಭಕ್ತ ನನ್ನು ಚೆನ್ನಾಗಿ ಪೂಜಿಸಿ ತುಪ್ಪಮಿಶ್ರವಾದ ಅನ್ನಗಳಿಂದ ತೃಪ್ತಿಯಾಗುವಂತೆ ಭೋಜನಮಾಡಿಸುವ ಮಹಾನುಭಾವನು ಶ್ರೇಷ್ಠನಾದ ಅನ್ನಾಧಿಪತಿಯೆನಿಸಿದ ಆ

**ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಸನಕಾದಿಚಿತ್ರರಥರಾಜ ಸಂವಾದೇ ಚಿತ್ರರಥ ಪೂರ್ವಜನ್ಮವೃತ್ತಾಂತಕಥನೇ ದರಿದ್ರಬ್ರಾಹ್ಮಣ ಶೈವೋಪದೇಶವರ್ಣನೇ ಅನ್ನೇನಾನ್ನಪತಿಪೂಜಾವೈಭವ ನಿರೂಪಣಂ ನಾಮ ದ್ವಿತೀಯೋಽಧ್ಯಾಯಃ**

ಮಹೇಶ್ವರ ಅನುಗ್ರಹದಿಂದ ಕೂಡಲೇ ಯಥೇಚ್ಛವಾಗಿ ತಾನೂ ಅನ್ನಾಧಿಪತ್ಯವನ್ನು ಹೊಂದಿಯೇ ಹೊಂದುತ್ತಾನೆ. ಎಂದು ಶಾಂಭವನು ಬ್ರಾಹ್ಮಣನಿಗೆ ಬೋಧಿಸಿದನು. ||೯೮||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಭರ್ಗಸಂಜ್ಞಕವಾದ ಐದನೆಯ ಅಂಶದಲ್ಲಿ ಸನಕ ಮತ್ತು ಚಿತ್ರರಥಮಹಾರಾಜ ಇವರ ಸಂವಾದಾಂತರ್ಗತವಾದ ಆ ಚಿತ್ರರಥಮಹಾರಾಜನ ಪೂರ್ವಜನ್ಮವೃತ್ತಾಂತನಿರೂಪಣೆಯಲ್ಲಿ ದರಿದ್ರಬ್ರಾಹ್ಮಣನಾಗಿದ್ದ ಅವನಿಗೆ ಶಿವಭಕ್ತನುಪದೇಶಮಾಡಿದನೆಂಬ ವಿವರಣೆಯಲ್ಲಿ ಅನ್ನದಿಂದ ಅನ್ನಪತಿ ಯಾದ ಆ ಪರಮೇಶ್ವರನ ಪೂಜಾವೈಭವವರ್ಣನೆಯ ನಿರೂಪಣೆಯೆಂಬ ಎರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀ ಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ತೃತೀಯೋಽಧ್ಯಾಯಃ

|| ಶೌನಕ ಉವಾಚ ||

ಕಿಮಾಹ ಶೈವಸ್ತಂ ವಿಪ್ರಂ ಮಹಾದೇವಪರಾಯಣಃ ।
ಸ ವಿಪ್ರಃ ಕಥಮತ್ಯುಗ್ರಃ ಸದಾ ಯಾಚಕಶೇಖರಃ ॥೧॥

ಶೈವವರ್ತ್ಮ ವಚೋಧಾಟೀಘೋಟೀಪುಚ್ಛಾನುಗೇಕಧೀಃ ।
ಸಾ ತಸ್ಯ ಮಹಿಲಾ ಬಾಲಾ ಕುಟಿಲಸ್ಯೈವ ಜಿಹ್ಮಧೀಃ ॥೨॥

---

## ಮೂರನೆಯ ಅಧ್ಯಾಯ

" ಮಹರ್ಷಿಯೇ, ಮಹಾದೇವ ಪೂಜಾ ನಿರತನಾದ ಆ ಶಿವಭಕ್ತಾಗ್ರೇಸರನು ಆ ಬ್ರಾಹ್ಮಣನಿಗೆ ಏನನ್ನು ಹೇಳಿದನು ? ಅತ್ಯಂತ ಉಗ್ರನೂ ಯಾಚನೆ ಮಾಡುವ ರಲ್ಲಿ ಅತಿ ನಿಪುಣನೂ ಆದ ಆ ಬ್ರಾಹ್ಮಣನ ವಿಷಯವು ಏನಾಯಿತು ? ||೧||

ಆ ಶೈವನ ಮಾತುಗಳ ಸರಣಿಯೆಂಬ ಕುದುರೆಯ ಬಾಲವನ್ನೇ ಅನುಸರಿಸಿ ನಡೆಯುತ್ತಿದ್ದ ಆ ಕುಟಿಲನಾದ ಬ್ರಾಹ್ಮಣನ ಪತ್ನಿಯೂ ತನ್ನ ಪತಿಯಂತೆಯೇ ಕೃತ್ರಿಮ ಬುದ್ಧಿಯಿಂದಲೇ ಯುಕ್ತಳಾಗಿದ್ದಳಲ್ಲ! ಅವಳೊಡನೆ ಆ ಬ್ರಾಹ್ಮಣನು ಮುಂದೇನು ಮಾಡಿದನು ? ದಯೆಯಿಟ್ಟು ಇವೆಲ್ಲವನ್ನೂ ನನಗೆ ತಿಳಿಸಬೇಕು" ಎಂದು ಶೌನಕನು ಮತ್ತೆ ಸೂತಮುನಿಯನ್ನು ಕೇಳಿಕೊಂಡನು. ||೨||

ತಯಾ ಸಹ ತತಃ ಕಾಮಂ ಕಿಂ ಚಕಾರ ವದಾಶು ನಃ ।
ಶೌನಕೋಕ್ತಂ ವಚಃ ಶ್ರುತ್ವಾ ಸೂತಃ ಸಾನಂದಲೋಚನಃ ॥೩॥

ಹರ್ಷವರ್ಷಾರ್ದ್ರಚಿತ್ತಃ ಸನ್ಮಹಾಶೀರ್ಷಂ ವಿಧೂನಯನ್ ।
ಜಗಾದಾಗಾಧವಾಕ್ಯಾನಿ ಶಂಕರೋಕ್ತಾನಿ ತಾನ್ಯಪಿ ॥೪॥

ಪಾವನಾನಿ ಮಹಾದೇವ್ಯೈ ಪೃಚ್ಛಂತ್ಯೈ ತತ್ಕಥಾರ್ಣವಂ ॥೫॥

॥ ಸೂತ ಉವಾಚ ॥

ಶೃಣು ಶೌನಕ ಭೂಯೋಽಪಿ ಭಕ್ತಕಲ್ಪತರೋರ್ಯಶಃ ।
ವಿಶ್ವಾಧಿಕಸ್ಯ ದೇವಸ್ಯ ಮಹಾದೇವಸ್ಯ ಸಾದರಂ ॥೬॥

ಯಜ್ಜಗಾದಾರವಿಂದಾಕ್ಷ್ಯೈ ಕೌಮುದೀಪತಿಶೇಖರಃ ।
ಕಥಾಸುಧಾಂ ಪ್ರವಕ್ಷ್ಯಾಮಿ ನಿಬೋಧತ ಮುನೀಶ್ವರಾಃ ॥೭॥

ಶೌನಕನು ಪ್ರಾರ್ಥಿಸಿದ ವಚನಗಳನ್ನು ಕೇಳಿ ಸೂತಮಹಾಮುನಿಯು ಆನಂದಭರಿತವಾದ ಕಣ್ಣುಗಳುಳ್ಳವನಾಗಿ ಸಂತೋಷವೆಂಬ ಮಳೆಯಿಂದ ನೆನೆದ ಮನಸ್ಸಿನಿಂದ ತನ್ನ ತಲೆಯನ್ನು ಅಲ್ಲಾಡಿಸುತ್ತಾ, ಶಂಕರನು ಮಹಾದೇವಿಯ ಪ್ರಾರ್ಥನೆಯಂತೆ ದೇವಿಗಾಗಿ ಹೇಳಿದ ಪವಿತ್ರವಾದ ಶಿವಕಥಾ ಸಮುದ್ರವನ್ನು ಹೇಳತೊಡಗಿದನು. ॥೩-೪-೫॥

" ಓ ಶೌನಕಮುನಿಯೇ ! ಭಕ್ತರಿಗೆ ಕಲ್ಪತರುವಿನಂತೆ ಸಕಲ ಇಷ್ಟಾರ್ಥಗಳನ್ನೂ ಸಲ್ಲಿಸುತ್ತಾ ಪ್ರಪಂಚದಲ್ಲೆಲ್ಲಾ ಉತ್ಕೃಷ್ಟನೂ ದೇವಾದಿ ದೇವನೂ ಎನಿಸಿದ ಆ ಮಹಾದೇವನ ಕೀರ್ತಿಯನ್ನು ಇನ್ನೂ ತಿಳಿಸುವೆನು ಕೇಳು. ಚಂದ್ರಮೌಳೀಶ್ವರನಾದ ಆ ಮಹೇಶ್ವರನು, ಕಮಲದಂತೆ ಕಣ್ಣುಗಳುಳ್ಳ ತನ್ನ ಪ್ರೇಯಸಿಗೆ ಹೇಳಿದ ಅಮೃತ ಸಮಾನವಾದ ಆ ಶಿವಕಥೆಗಳನ್ನೇ ನಿಮಗೆ ಈಗ ತಿಳಿಯಹೇಳುವೆನು. ಎಲೈ ಮುನಿಶ್ರೇಷ್ಠರೇ ! ಸಾವಧಾನದಿಂದ ಲಾಲಿಸಿರೆಂದು ಕಥೆಯನ್ನು ಸೂತ ಮುನಿಯು ಮುಂದುವರಿಸಿದನು. ॥೬-೭॥

|| ದೇವ್ಯುವಾಚ ||

ಭಗವನ್ಭೂತಭವ್ಯೇಶ ಭವೋದ್ಭವ ಜಗತ್ಪ್ರಭೋ ।
ಕಥಾರ್ಣವವಚೋಭಂಗೀತರಂಗೈರಂಜಯಾಶು ಮೇ ||೮||

ತದಾ ದೇವ್ಯಾ ವಚಃ ಶ್ರುತ್ವಾ ಜಗಾದಾತ್ಮಾ ಮಹೇಶ್ವರಃ ।
ಸಮಾಶ್ಲಿಷ್ಯ ಮಹಾದೇವೀಂ ಬಭಾಣ ಗಣನಾಯಕಃ ||೯||

|| ಈಶ್ವರ ಉವಾಚ ||

ತದಾ ಶೈವೋದಿತಾಂ ವಾಣೀಂ ಶ್ರುತ್ವಾ ಸಂತುಷ್ಟಮಾನಸಃ ।
ಸ ತು ಶೈವಪದದ್ವಂದ್ವಂ ಪ್ರಣನಾಮ ಮುದಾ ದ್ವಿಜಃ ||೧೦||

ತಮುತ್ಥಾಪ್ಯ ಪ್ರಹೃಷ್ಟಾತ್ಮಾ ಶೈವವರ್ಯೋ ಮುದಾ ದ್ವಿಜಂ ।
ಕ್ಷಿಪ್ರಂ ಕ್ಷಿಪ್ರಾನದೀತೋಯೈಸ್ತಂ ವಿಪ್ರಂ ಸ್ನಾಪಯತ್ತದಾ ||೧೧||

---

ಭೂತಭವಿಷ್ಯದ್ವರ್ತಮಾನಗಳಿಗೆಲ್ಲಾ ಸ್ವಾಮಿಯಾದ ಭಗವಂತನೇ, ಸಕಲ ಜಗತ್ಸೃಷ್ಟಿ, ಸ್ಥಿತಿ, ಲಯಗಳಿಗೆ ಸಿಕ್ಕಿದ ಈ ಪ್ರಪಂಚವೆಲ್ಲವೂ ನಿನ್ನಿಂದಲೇ ವ್ಯವಹರಿಸಲ್ಪಡುತ್ತಿರುವುದು. ಎಲೈ ಜಗದೊಡೆಯನೇ, ನಿನ್ನ ಕಥಾಸಮುದ್ರದ ಅಲೆಗಳಿಂದ ನನ್ನನ್ನು ಜಾಗ್ರತೆ ಸಂತೋಷಪಡಿಸು ಎಂದು ದೇವಿಯು ಮಹೇಶ್ವರನನ್ನು ಪ್ರಾರ್ಥಿಸಿದಳು. ||೮||

ಆಗ ಪರಮಾತ್ಮಸ್ವರೂಪನೂ, ದೇವಗಣಾಧಿಪತಿಯೂ ಆದ ಮಹೇಶ್ವರನು ದೇವಿಯ ಆ ಮಾತುಗಳನ್ನು ಕೇಳಿ ಮಹಾದೇವಿಯನ್ನು ಪ್ರೀತಿಪುರಸ್ಸರವಾಗಿ ಆಲಿಂಗನಮಾಡಿಕೊಂಡು ಸಂತೋಷದಿಂದ ದೇವಿಯನ್ನು ಕುರಿತು ಇಂತೆಂದನು ||೯||

ಆಮೇಲೆ ಆ ಶಾಂಭವನು ಹೇಳಿದ ಹಿತವಚನಗಳನ್ನು ಕೇಳಿ ಸಂತೋಷಭರಿತವಾದ ಮನಸ್ಸುಳ್ಳವನಾಗಿ ಆ ಬಡಬ್ರಾಹ್ಮಣನು ಆನಂದದಿಂದ ಆ ಶೈವನ ಎರಡು ಕಾಲುಗಳಿಗೂ ನಮಸ್ಕಾರಮಾಡಿದನು. ||೧೦||

ಆಗ ಶಿವಭಕ್ತಾಗ್ರೇಸರನು ಸಂತೋಷದಿಂದ ಆ ಬ್ರಾಹ್ಮಣನ ಕೈಹಿಡಿದು ಮೇಲಕ್ಕೆಬ್ಬಿಸಿ, ಕೂಡಲೇ ಅವನನ್ನು ಕ್ಷಿಪ್ರಾನದಿಯ ಸಮೀಪಕ್ಕೆ ಕರೆದೊಯ್ದು ಅವನಿಗೆ ಶುಭ್ರವಾದ ಮತ್ತು ಪವಿತ್ರವಾದ ನೀರಿನಿಂದ ಸ್ನಾನಮಾಡಿಸಿದನು. ||೧೧||

ಅಗ್ನಿರಿತ್ಯಾದಿಭಿರ್ಮಂತ್ರೈಃ ಕೃತೋದ್ಧೂಲನಪುಂಡ್ರಕಂ ।
ರುದ್ರಾಕ್ಷಮಾಲಾಭರಣಂ ಕಂಠಕರ್ಣಗಲಾದಿಷು ॥೧೨॥

ಬಿಲ್ವಮೂಲೇಽಥ ವಿಪ್ರಂ ತಂ ಸ ವಿಪ್ರಃ ಶೈವಸತ್ತಮಃ ।
ದದೌ ಸ ಶಾಂಭವೀಂ ವಿದ್ಯಾಂ ಪಂಚಾಕ್ಷರಮನೋಹರಾಂ ॥೧೩॥

ಅಷ್ಟೈಶ್ವರ್ಯಪ್ರದಾತ್ರೀಂ ತಾಂ ನಿಹಂತ್ರೀಂ ನಿಖಿಲಾಪದಾಂ ।
ಶಿವವಿದ್ಯಾಪ್ರಭಾವೇನ ತದ್ದೇಹಾದ್ಧೂಮ ಉದ್ಬಭೌ ॥೧೪॥

ತದ್ಧೂಮಧಾಮಾಸ್ತ್ರಿದಶಾ ನಿತಾಂತಂ ತಾಂತಲೋಚನಾಃ ।
ಇತಿಕರ್ತವ್ಯತಾಂ ತ್ಯಕ್ತ್ವಾ ಸಮೀಕ್ಷಂತೇ ಪರಸ್ಪರಂ ॥೧೫॥

॥ ದೇವಾ ಊಚುಃ ॥

ಕಿಮದ್ಯ ಧೂಮಜೋರಾಶಿರ್ಜಗದಸ್ಯ ಸಮಾವೃಣೋತ್ ।
ಇತ್ಯೇವಂ ಸಂಶಯಾವಿಷ್ಟಾನ್ಸುರಾನ್ನಾರದ ಆಗತಃ ॥೧೬॥

---

ಸ್ನಾನವಾದಮೇಲೆ "ಅಗ್ನಿರಿತಿಭಸ್ಮ" ಮುಂತಾದ ಮಂತ್ರಪುರಸ್ಸರವಾಗಿ ಭಸ್ಮೋದ್ಧೂಳನ, ಭಸ್ಮತ್ರಿಪುಂಡ್ರಧಾರಣ ಮತ್ತು ಕೊರಳು, ಕಿವಿ, ಮುಂಗೈ, ಕಂಠ ಮುಂತಾದ ಸ್ಥಳಗಳಲ್ಲಿ ರುದ್ರಾಕ್ಷಮಾಲೆ ಇವುಗಳನ್ನು ಧಾರಣೆಮಾಡಿಸಿದನು.॥೧೨॥

ಹೀಗೆ ಭಸ್ಮಧಾರಣಾದಿಗಳಿಂದ ಪರಿಶುದ್ಧನಾದ ಆ ಬಡಬ್ರಾಹ್ಮಣನನ್ನು ಶಿವಭಕ್ತಾಗ್ರೇಸರನಾದ ಬ್ರಾಹ್ಮಣೋತ್ತಮನು ಬಿಲ್ವವೃಕ್ಷದ ಬುಡದಲ್ಲಿ ಕೂರಿಸಿ, ಸಕಲ ವಿಪತ್ತುಗಳನ್ನೂ ಹೋಗಲಾಡಿಸಿ ಅಣಿಮಾದ್ಯಷ್ಟೈಶ್ವರ್ಯಗಳನ್ನೂ ಕೊಡುವ ಮನೋಹರವಾದ ಶಿವಪಂಚಾಕ್ಷರೀವಿದ್ಯೆಯನ್ನು ಆ ಬ್ರಾಹ್ಮಣನಿಗೆ ಉಪದೇಶ ಮಾಡಿದನು. ॥೧೩॥

ಆ ಶಿವವಿದ್ಯೆಯಾದ ಪಂಚಾಕ್ಷರಿಯ ಮಂತ್ರದ ಉಪದೇಶಮಹಿಮೆಯಿಂದ ಆ ಬ್ರಾಹ್ಮಣನ ಶರೀರದಿಂದ ಅತ್ಯಗಾಧವಾದ ಹೊಗೆಯು ಮೇಲೆದ್ದಿತು. ಈ ಹೊಗೆಯು ಸ್ವರ್ಗಲೋಕವನ್ನೆಲ್ಲಾ ವ್ಯಾಪಿಸಲು ಅದರಿಂದ ದೇವತೆಗಳು ಕಂಗೆಟ್ಟು ಯಾವ ಕೆಲಸವನ್ನೂ ಮಾಡಲಾರದೇ ತಮ್ಮಲ್ಲಿಯೇ ಒಬ್ಬರನ್ನೊಬ್ಬರು ಪರಸ್ಪರ ವಾಗಿ ನೋಡುತ್ತಾ ಬೆಪ್ಪಾಗಿ ಕುಳಿತುಕೊಂಡರು. ॥೧೪-೧೫॥

ಇದೇನಾಶ್ಚರ್ಯ! ಹಿಂದೆ ಎಂದೂ ಇಲ್ಲದ ಹೊಗೆಯ ಸಮೂಹವು ಈದಿನ ಪ್ರಪಂಚವನ್ನೆಲ್ಲಾ ವ್ಯಾಪಿಸಿದೆಯಲ್ಲಾ ಎಂದು ಚಿಂತಿಸುತ್ತಾ ನಿಜಾಂಶವನ್ನು

॥ ನಾರದ ಉವಾಚ ॥

ಶಿವವಿದ್ಯಾಪ್ರಭಾವೇನ ಶೈವದತ್ತೇನ ಭೂಸುರಃ ।
ಭಾಸುರಂ ದೇಹಮಾಸಾದ್ಯ ಮೋದತೇ ಪಶ್ಯತಾಧುನಾ ॥೧೭॥

ತದ್ದೇಹಾತ್ಪಾಪಜೋರಾಶಿರ್ವಿದಗ್ಧಸ್ತೇನ ಸಂಬಭೌ ।
ಅಪಾರಧೂಮಪ್ರಬಲಜಾಲೈರ್ಮಾಲಾಯಿತಂ ನಭಃ ॥೧೮॥

ತದ್ದರ್ಶನಾರ್ಥಂ ತ್ರಿದಶಾ ನಾರದೇನ ಸಮಾಗತಾಃ ।
ಅಭಿವಂದ್ಯಾಥ ತಾನ್ಸರ್ವಾನ್ಸ ಶೈವೋ ದ್ರಷ್ಟುಮಾಗತಾನ್ ॥೧೯॥

ಬ್ರಹ್ಮಾದಿತ್ರಿದಶಾನ್ಸರ್ವಾನ್ ತಾನ್ ವಿಪ್ರೋ ವಕ್ತುಮೈಚ್ಛತ ।
ದೃಷ್ಟ್ವಾ ದೇವಂ ಮಹಾಕಾಲಂ ಪ್ರಣಮ್ಯ ವಿನಯಾನ್ವಿತಃ ॥೨೦॥

ತಿಳಿಯದೇ ಸಂಶಯಗ್ರಸ್ತರಾಗಿದ್ದ ದೇವತೆಗಳ ಸಮೀಪಕ್ಕೆ ನಾರದಮುನಿಯು ಬಂದು ದೇವತೆಗಳೊಡನೆ, ॥೧೬॥

"ಓ ದೇವತೆಗಳಿರಾ, ಶಾಂಭವಶ್ರೇಷ್ಠನೊಬ್ಬನು ಒಬ್ಬ ಬ್ರಾಹ್ಮಣನಿಗೆ ಉಪದೇಶ ಮಾಡಿದ ಶಿವಪಂಚಾಕ್ಷರೀಮಹಾಮಂತ್ರದ ಮಹಿಮೆಯಿಂದ ಆ ಬ್ರಾಹ್ಮಣನು ದೇದೀಪ್ಯಮಾನವಾದ ಶರೀರವನ್ನು ಹೊಂದಿ ಸಂತೋಷದಿಂದ ಮೆರೆಯುತ್ತಿರುವನು. ಅತ್ತ ನೋಡಿರಿ. ॥೧೭॥

ಆ ಮಹಾಮಂತ್ರೋಪದೇಶಮಹಿಮೆಯಿಂದ ಆ ಬ್ರಾಹ್ಮಣನ ಶರೀರದಲ್ಲಿದ್ದ ಪಾಪಸಂಬಂಧವೆಲ್ಲಾ ಸುಟ್ಟುಹೋಗಿ ಈಗ ಹೊಗೆಯರೂಪದಿಂದ ತೋರುತ್ತಾ ಅಪಾರವಾದ ಮಾಲಾಕಾರವನ್ನು ಹೊಂದಿ ಈ ಅಂತರಿಕ್ಷವನ್ನೆಲ್ಲಾ ವ್ಯಾಪಿಸಿದೆ" ಎಂದು ಹೇಳಿದನು. ॥೧೮॥

ನಾರದರಿಂದ ವಿಷಯವನ್ನು ತಿಳಿದುಕೊಂಡನಂತರ ಇಂದ್ರಾದಿದೇವತೆಗಳೆಲ್ಲರೂ ಆ ಬ್ರಾಹ್ಮಣನನ್ನು ನೋಡುವುದಕ್ಕೋಸ್ಕರ ನಾರದಮುನಿಯೊಡನೆ ಆ ಬ್ರಾಹ್ಮಣನಿದ್ದೆಡೆಗೆ ಬಂದರು. ಆಗ ಶಾಂಭವನು ತನ್ನನ್ನು ನೋಡಲು ಬಂದ ಬ್ರಹ್ಮಾದಿದೇವತೆಗಳಿಗೆಲ್ಲಾ ನಮಸ್ಕಾರಮಾಡಿದನಂತರ ಶೈವನು ಬ್ರಾಹ್ಮಣನನ್ನು ಕುರಿತು ಕೆಲವು ವಿಷಯಗಳನ್ನು ಹೇಳಲು ಅಪೇಕ್ಷಿಸಿದನು. ಅದಕ್ಕೋಸ್ಕರ ಅವನು ಮೊದಲು

॥ ಶೈವ ಉವಾಚ ॥

ವಕ್ಷ್ಯೇ ಹಿತಂ ಶೃಣುಷ್ವಾದ್ಯ ತದಾಘೌಘವಿನಾಶನಂ ।
ಬ್ರಾಹ್ಮಣಸ್ಯ ಚ ಯತ್ಕೃತ್ಯಂ ತತ್ರಾಪಿ ಶೃಣು ವಿಸ್ತರಾತ್ ॥೨೧॥

ಆಚಾರೋ ಬ್ರಾಹ್ಮಣಾನಾಂ ಹಿ ಪರಮೋ ಧರ್ಮ ಉಚ್ಯತೇ ।
ಸ್ನಾತ್ವಾ ಕ್ಷಿಪ್ರಾನದೀತೋಯೇ ಸಭಾರ್ಯಸ್ತ್ವಂ ದ್ವಿಜೋತ್ತಮ ॥೨೨॥

ಧೃತತ್ರಿಪುಂಡ್ರರುದ್ರಾಕ್ಷಃ ಪೂರ್ವಾಂ ಸಂಧ್ಯಾಮುಪಾಸ್ಯ ಚ ।
ಸಂತರ್ಪ್ಯ ಪಿತೃದೇವರ್ಷೀನ್ಜಪ ಪಂಚಾಕ್ಷರಂ ಮನುಂ ॥೨೩॥

ಅಷ್ಟೋತ್ತರಸಹಸ್ರಂ ತು ನಿತ್ಯಂ ರುದ್ರಾಕ್ಷಮಾಲಯಾ ।
ರುದ್ರಾಕ್ಷಮಾಲಯಾ ಜಪ್ತೋ ಜಪೋಽನಂತಫಲಪ್ರದಃ ॥೨೪॥

---

ಮಹಾಕಾಲೇಶ್ವರನನ್ನು ಒಂದು ಸಲ ದರ್ಶನಮಾಡಿ ವಿನಯದಿಂದ ಆ ಮಹಾದೇವ ನಿಗೆ ನಮಸ್ಕಾರಮಾಡಿದನು. ॥೨೦॥

"ಅಯ್ಯಾ ಬ್ರಾಹ್ಮಣನೇ! ಸಕಲ ಪಾಪಸಮೂಹಗಳ ನಾಶಕ್ಕಾಗಿ ಬ್ರಾಹ್ಮ ಣನು ಅವಶ್ಯವಾಗಿ ಮಾಡಬೇಕಾದ ಕೃತ್ಯವನ್ನು ವಿಸ್ತಾರವಾಗಿ ನಿನಗೆ ಮೊದಲು ಉಪದೇಶಮಾಡುತ್ತೇನೆ ಕೇಳು. ॥೨೧॥

ಅಯ್ಯಾ ಬ್ರಾಹ್ಮಣೋತ್ತಮ! ಬ್ರಾಹ್ಮಣನಾದವನಿಗೆ ಆಚಾರವೇ ಶ್ರೇಷ್ಠವಾದ ಧರ್ಮವು. ಆದ್ದರಿಂದ ನೀನು ನಿನ್ನ ಪತ್ನಿಯೊಡನೆ ಪವಿತ್ರವಾದ ಕ್ಷಿಪ್ರಾನದಿಯ ನೀರಿನಲ್ಲಿ ಸ್ನಾನಮಾಡಿ ಭಸ್ಮತ್ರಿಪುಂಡ್ರವನ್ನೂ ರುದ್ರಾಕ್ಷಗಳನ್ನೂ ಧರಿಸಿ ಮೊದಲು ಪ್ರಾತಃಕಾಲದ ಸಂಧ್ಯಾವಂದನವನ್ನು ಮಾಡಿ, ಅನಂತರ ಪಿತೃಗಳನ್ನೂ, ದೇವತೆ ಗಳನ್ನೂ, ಮತ್ತು ಋಷಿಗಳನ್ನೂ ತರ್ಪಣಾದಿಗಳಿಂದ ಸಂತೋಷಗೊಳಿಸಿ ಈ ಶಿವ ಪಂಚಾಕ್ಷರಮಂತ್ರವನ್ನು ಜಪಮಾಡು. ॥೨೨-೨೩॥

ಪ್ರತಿನಿತ್ಯವೂ ಸಾವಿರದೆಂಟುಬಾರಿ ಈ ಶಿವಪಂಚಾಕ್ಷರ ಮಂತ್ರವನ್ನು ರುದ್ರಾಕ್ಷ ಮಾಲೆಯಿಂದ ಜಪಿಸುವನಾಗು. ರುದ್ರಾಕ್ಷ ಮಾಲೆಯೊಡನೆ ಜಪಿಸಿದ ಈ ಜಪವು ಅಪಾರವಾದ ಫಲವನ್ನು ಕೊಡುವುದು. ॥೨೪॥

ಬಾಣಲಿಂಗಂ ಬಿಲ್ವಮೂಲೇ ಸ್ಥಾಪಯಿತ್ವಾ ಸಮರ್ಚಯ ।
ರುದ್ರಾವರ್ತನಶೀಲಸ್ತ್ವಂ ಭವ ನಿತ್ಯಂ ಯತವ್ರತಃ ॥೨೫॥

ಬಿಲ್ವಪತ್ರೈರ್ಮಹಾದೇವಂ ಸಮರ್ಚಯ ದಿನೇ ದಿನೇ ।
ತ್ವಮಸ್ಯೈ ದೇಹಿ ತನ್ಮಂತ್ರಂ ಶಿವಶಬ್ದೋರ್ಧ್ವಗಂ ಸ್ತ್ರಿಯೈ ॥೨೬॥

ಸಭರ್ತೃಕಾ ಭರ್ತೃಮುಖಾನ್ಮಂತ್ರಂ ಪ್ರಾಪ್ಯ ಶಿವಾರ್ಚನಂ ।
ಕುರ್ಯಾನ್ನಾನ್ಯತ್ರ ತಸ್ಯೈವ ಬಿಲ್ವೈರ್ಮಲ್ಲಿಂಗಪೂಜನಂ ॥೨೭॥

ಪ್ರದೋಷೇ ಶಂಕರಸ್ಯಾರ್ಚಾ ಬ್ರಾಹ್ಮಣೇ ವಿಹಿತೋ ವಿಧಿಃ ।
ಸೋಮವಾರೇಷು ಸರ್ವೇಷು ವಿಧಿಃ ಶಂಕರಪೂಜನಂ ॥೨೮॥

ಅಷ್ಟಮ್ಯಾಂ ಚ ಚತುರ್ದಶ್ಯಾಂ ವಿಧಿಃ ಶಂಕರಪೂಜನಂ ।
ಬಿಲ್ವಪತ್ರೈಸ್ತದಾ ವಿಪ್ರ ನಕ್ತಾಶೀ ನಿಯಮೇನ ಹಿ ॥೨೯॥

---

ಬಿಲ್ವಪತ್ರೇ ಮರದ ಬುಡದಲ್ಲಿ ಬಾಣಲಿಂಗವನ್ನು ಸ್ಥಾಪಿಸಿ, ಅಲ್ಲಿ ಕುಳಿತು ನಿತ್ಯವೂ ನಿಯಮದಿಂದ ರುದ್ರಮಂತ್ರವನ್ನು ಆವರ್ತಿ ಹೇಳುತ್ತಿರು. ॥೨೫॥

ಪ್ರತಿದಿನವೂ ಬಿಲ್ವಪತ್ರೆಗಳಿಂದ ಆ ಮಹಾದೇವನನ್ನು ತಪ್ಪದೇ ಪೂಜೆಮಾಡು. ಅಲ್ಲದೇ ನೀನು ಈ ನಿನ್ನ ಪತ್ನಿಗೆ ಶಿವಶಬ್ದವನ್ನೇ ಆದಿಯಾಗಿ ಉಳ್ಳ ಈ ಶಿವಪಂಚಾಕ್ಷರಮಂತ್ರವನ್ನು ಉಪದೇಶಿಸುವನಾಗು. ॥೨೬॥

ಪತಿಸೌಭಾಗ್ಯವುಳ್ಳ ಸ್ತ್ರೀಯರು ತಮ್ಮ ಪತಿಯರಿಂದಲೇ ಮಂತ್ರ ಪಡೆದು ಬಿಲ್ವಪತ್ರೆಗಳಿಂದ ನನ್ನ ಈ ಶಿವಲಿಂಗವನ್ನು ಪೂಜಿಸಬೇಕು. ಬ್ರಾಹ್ಮಣನೆ! ಸ್ತ್ರೀಯರಿಗೆ ಬೇರೆ ಯಾವಕ್ರಮದಲ್ಲಿಯೂ ಶಿವಲಿಂಗಪೂಜೆಯು ವಿಹಿತವಲ್ಲ. ॥೨೭॥

ಪ್ರದೋಷಕಾಲಗಳಲ್ಲಿ ಆ ಶಂಕರನ ಪೂಜೆ ಮಾಡುವುದು ಬ್ರಾಹ್ಮಣನಿಗೆ ಸಾಮಾನ್ಯವಾದ ವಿಧಿಯಾಗಿರುವುದು. ಹಾಗೆಯೇ ಎಲ್ಲಾ ಸೋಮವಾರಗಳಲ್ಲಿಯೂ ಮತ್ತು ಅಷ್ಟಮೀ, ಚತುರ್ದಶೀ ಈ ತಿಥಿಗಳಲ್ಲಿಯೂ ವಿಶೇಷವಾದ ಬಿಲ್ವಪತ್ರೆಗಳಿಂದ ಆ ಶಂಕರನನ್ನು ಪೂಜೆಮಾಡಿ ನಿಯಮದಿಂದ ರಾತ್ರಿಯವೇಳೆ ಮಾತ್ರ ಊಟ ಮಾಡಬೇಕು. ಮತ್ತು ಆ ಪರಶಿವನಿಗೆ ತಾನು ತಂದಿರುವ ಪದಾರ್ಥಗಳನ್ನೆಲ್ಲಾ ನಿವೇದನಮಾಡಿ ಅದನ್ನೇ ಭುಂಜಿಸಬೇಕು. ಇದು ಬ್ರಾಹ್ಮಣನ ಕರ್ತವ್ಯವೆಂದು ಜಾಬಾಲಿಕೀ ಶ್ರುತಿಯು ಹೇಳುತ್ತಿರುವುದು. ॥೨೮-೨೯॥

ಶಿವೇ ನೈವೇದ್ಯಂ ಭುಂಜೀತೇತ್ಯೇವಂ ಜಾಬಾಲಿಕೀ ಶ್ರುತಿಃ ।
ಮಹಾಕಾಲಂ ಮಹಾದೇವಂ ನತ್ವಾ ನಿತ್ಯಂ ಶತೋತ್ತರಂ ॥೩೦॥

ಪ್ರದಕ್ಷಿಣಪ್ರಣಾಮಾಂಶ್ಚ ಸದಾರಃ ಕುರು ಸಾದರಂ ।
ಪಂಚಾಕ್ಷರಂ ಚ ನಿಯತಂ ಜಪ ದೇವಸ್ಯ ಸನ್ನಿಧೌ ॥೩೧॥

ರುದ್ರೇಣ ಸ್ತುಹಿ ದೇವೇಶಂ ಸ್ತೋತ್ರೈಃ ಪೌರಾಣಿಕೈರಪಿ ।
ಗಾಯತ್ರೀಂ ಚ ಜಪೇತ್ಪ್ರೀತ್ಯಾ ಭರ್ಗಶಬ್ದೈಕಭಾಸುರಂ ॥೩೨॥

ಸಂಸಾರಭರ್ಜಕೋ ಭರ್ಗೋ ದ್ವಿಜ ತಸ್ಯಾಧಿದೈವತಂ ।
ತದಾವೃತ್ತ್ಯಾ ನಿವೃತ್ತಿರ್ಹಿ ಶಿವಸ್ತುಷ್ಯತಿ ಸತ್ತಮಃ ॥೩೩॥

ಗೌತಮಾತ್ರಿಭರದ್ವಾಜಾ ಭೃಗುವಾಸಿಷ್ಠಕಾಶ್ಯಪಾಃ ।
ಗಾಯತ್ರೀಜಪತಃ ಸರ್ವೇ ಪರಾಂ ಸಿದ್ಧಿಮುಪಾಗತಾಃ ॥೩೪॥

---

ಮಹಾಕಾಲಸಂಜ್ಞಕನಾದ ಆ ಮಹಾದೇವನನ್ನು ಪ್ರತಿನಿತ್ಯವೂ ನೂರುಸಲ ಕ್ಕಿಂತಲೂ ಕಮ್ಮಿಯಿಲ್ಲದಂತೆ ಪ್ರದಕ್ಷಿಣಪೂರ್ವಕವಾಗಿ ನಿನ್ನ ಪತ್ನಿಯೊಡನೆ ನಮಸ್ಕಾರಮಾಡುವನಾಗು. ಅಲ್ಲದೇ ನಿಯಮದಿಂದ ಆ ಮಹೇಶ್ವರನ ಸನ್ನಿಧಾನ ದಲ್ಲಿ ಕುಳಿತು ಶಿವಪಂಚಾಕ್ಷರಮಂತ್ರವನ್ನು ಜಪಮಾಡು. ॥೩೦-೩೧॥

ರುದ್ರಮಂತ್ರದಿಂದಲೂ ಮತ್ತು ಪುರಾಣಮಂತ್ರಗಳಿಂದಲೂ ಇತರ ಸ್ತೋತ್ರ ಗಳಿಂದಲೂ ಆ ದೇವದೇವನನ್ನು ಸ್ತೋತ್ರಮಾಡು. 'ಭರ್ಗ' ಎಂಬ ಶಿವಶಬ್ದದಿಂದ ಪ್ರಕಾಶಿಸುವ ಆ ಗಾಯತ್ರೀದೇವಿಯನ್ನು ನಿಯಮದಿಂದ ಪ್ರೀತಿಪುರಸ್ಸರವಾಗಿ ಧ್ಯಾನಮಾಡು. ॥೩೨॥

ಓ ಬ್ರಾಹ್ಮಣನೇ, ಈ ಸಂಸಾರದುಃಖವನ್ನು ಸಂಪೂರ್ಣವಾಗಿ ಹೋಗ ಲಾಡಿಸಿ ಶಾಶ್ವತವಾದ ಮೋಕ್ಷವನ್ನು ಕರುಣಿಸುವ ಭರ್ಗನು ಆ ಗಾಯತ್ರೀದೇವತೆಗೆ ಅಧಿದೇವತೆಯಾಗಿರುವನು. ಆದುದರಿಂದಲೇ ಆ ಗಾಯತ್ರಿಯನ್ನು ಪುರಶ್ಚರಣೆ ಮಾಡುವುದರಿಂದ ಮೋಕ್ಷವುಂಟಾಗುವುದಲ್ಲದೆ ಸರ್ವಶ್ರೇಷ್ಠನಾದ ಆ ಪರಶಿವನೂ ಸಂತೋಷಹೊಂದುವನು. ॥೩೩॥

ಗೌತಮ, ಅತ್ರಿ, ಭರದ್ವಾಜ, ಭೃಗು, ವಸಿಷ್ಠ, ಕಶ್ಯಪ ಈ ಮಹಾಮುನಿ ಗಳೆಲ್ಲರೂ ಆ ಗಾಯತ್ರೀಜಪ ಮಹಿಮೆಯಿಂದಲೇ ಉತ್ಕೃಷ್ಟವಾದ ಸಿದ್ಧಿಯನ್ನು ಪಡೆದಿರುವರು. ॥೩೪॥

ಶೃಣು ತ್ವಂ ವಿಬುಧೈಃ ಸಾರ್ಧಮಗಜಾಪತಿಭಕ್ತಿದಂ ।
ಶೃಣ್ವತಾಂ ಪಾಪಶಮನಂ ಹರಭಕ್ತಿವಿವರ್ಧನಂ ॥೩೫॥

ಜೈಗೀಷವ್ಯೇನ ಸಂಪೃಷ್ಟೋ ನಂದಿಪ್ರೋಕ್ತಮಿದಂ ಶುಭಂ
ಇತಿಹಾಸಂ ಮಹಾಸಾರಂ ಪಶುಪಾಶವಿಮೋಚಕಂ ॥೩೬॥

ಶಿವಪ್ರೀತಿಕರಂ ಪುಣ್ಯಂ ಪಂಚಪಾತಕನಾಶನಂ ।
ಕೈಲಾಸೇ ಶಂಕರದ್ವಾರಿ ಸ್ಥಿತಂ ತಂ ಸುಯಶಾಪತಿಂ ॥೩೭॥

ತ್ರಿಪುಂಡ್ರಚಂದ್ರಾರ್ಧಧರಂ ಸ್ವರ್ಣನೇತ್ರಲಸತ್ಕರಂ ।
ಗಣವೃಂದೈಃ ಪರಿವೃತಂ ನಾನಾಮುನಿಗಣೈರ್ವೃತಂ ॥೩೮॥

ಕಾಂಚನೇ ವಿಷ್ಟರೇ ಪುಣ್ಯೇ ಸಂಸ್ಥಿತಂ ಗಣಪೋತ್ತಮಂ ।
ಜೈಗೀಷವ್ಯಃ ಸಮಾಗಮ್ಯ ದೃಷ್ಟ್ವಾ ನತ್ವಾ ಚ ಶಂಕರಂ ॥೩೯॥

ನಂದಿನಂ ಶಾಂಕರಾನ್ಧರ್ಮಾನಪೃಚ್ಛಚ್ಛಿವಭಾಷಿತಾನ್ ॥೪೦॥

---

ಅಯ್ಯ ಬ್ರಾಹ್ಮಣನೇ, ನೀನು ಈ ದೇವತೆಗಳೊಡನೆ, ಗಿರಿಜಾರಮಣನಲ್ಲಿ ಭಕ್ತಿಯನ್ನುಂಟುಮಾಡುವುದೂ ಮತ್ತು ಭಕ್ತಿಯನ್ನು ಹೆಚ್ಚಿಸುವುದೂ, ಮತ್ತು(ಇದನ್ನು) ಕೇಳುವವರ ಪಾಪವನ್ನು ಹೋಗಲಾಡಿಸುವುದೂ ಆದ ಇತಿಹಾಸವನ್ನು ಈಗ ಕೇಳು. ಹಿಂದೆ ಈ ಶಿವರಹಸ್ಯವೆಂಬ ಶುಭಕರವೂ ಸಾರವುಳ್ಳದ್ದೂ ಮತ್ತು ಈ ಪಾಶವೀಬಂಧನವನ್ನು ಹೋಗಲಾಡಿಸುವುದೂ ಆದ ಇತಿಹಾಸವನ್ನು ಜೈಗೀಷವ್ಯಮಹಾಮುನಿಯು ನಂದಿಕೇಶ್ವರನನ್ನು ಪ್ರಾರ್ಥಿಸಿ ಅವನಿಂದ ತಿಳಿದುಕೊಂಡಿದ್ದನು. ॥೩೫-೩೬॥

ಪುಣ್ಯಕರವೂ ಮತ್ತು ಪಂಚಮಹಾಪಾತಕಗಳನ್ನೂ (ಬ್ರಹ್ಮಹತ್ಯಾ, ಸುರಾಪಾನಂ, ಸ್ವರ್ಣಸ್ತೇಯಂ, ಗುರುತಲ್ಪಗಮನಂ, ಈ ನಾಲ್ವರೊಡನೆ ಸೇರುವಿಕೆ, ಈ ಐದೂ ಮಹಾಪಾತಕಗಳೆನಿಸುವುವು.) ನಾಶಪಡಿಸುವುದೂ ಆದ ಈ ಶಿವರಹಸ್ಯವು ಶಿವನಿಗೆ ಪ್ರೀತಿಯನ್ನುಂಟುಮಾಡುವುದು. ಒಂದು ದಿನ ಜೈಗೀಷವ್ಯಮುನಿಯು, ಶಂಕರನ ಮನೆಯ ಬಾಗಿಲಿನಲ್ಲಿ ನಿಂತು ಕಾಯುತ್ತಿದ್ದ ಸುಯಶಾದೇವಿಯ ಪತಿಯಾದ ನಂದಿಕೇಶ್ವರನನ್ನು ನೋಡಿ, ಆ ಶಂಕರನ ಧರ್ಮಗಳನ್ನು ಹೇಳಬೇಕೆಂದು ಪ್ರಾರ್ಥಿಸಿ ಪ್ರಶ್ನೆಮಾಡಿದನು. ಆಗ ಆ ನಂದಿಕೇಶ್ವರನು ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನೂ ತಲೆಯಲ್ಲಿ ಅರ್ಧಚಂದ್ರನನ್ನೂ ಧರಿಸಿ, ಕೈಯಲ್ಲಿ ಚಿನ್ನದ ಬೆತ್ತವನ್ನು ಹಿಡಿದು

॥ ಜೈಗೀಷವ್ಯ ಉವಾಚ ॥

ನಂದಿಕೇಶ್ವರ ಸರ್ವಜ್ಞ ದೇವದೇವ ಕೃಪಾಸ್ಪದ ।
ಶಿವಧರ್ಮಮಹಾರತ್ನಖನಿಸ್ತ್ವಂ ಪ್ರಮಥಾಧಿಪ ॥೪೧॥

ಶಿವಪಾದಾಂಬುಜದ್ವಂದ್ವಭಕ್ತಿಯುಕ್ತೇಷ್ಟಮಾನಸ ।
ಶಿವಪ್ರಭಾವಧರ್ಮಾನ್ಮೇ ಕೌತುಕಾದ್ವಕ್ತುಮರ್ಹಸಿ ॥೪೨॥

ಮಹೇಶ್ವರದಯಾಸಾರಸರ್ವಸ್ವಸ್ತ್ವಂ ಗಣೇಶ್ವರ ॥೪೩॥

॥ ನಂದಿಕೇಶ್ವರ ಉವಾಚ ॥

ಜೈಗೀಷವ್ಯ ಮಹಾಭಾಗ ಶಿವಭಕ್ತಿಕಥಾಸುಧಾಂ ।
ಪಿಬ ತ್ವಂ ಶ್ರೋತ್ರಪುಟಕೈಃ ಪುನರಾವೃತ್ತಿವರ್ಜಿತಾಂ ॥೪೪॥

ಅನೇಕ ಶಿವಗಣಗಳೊಡನೆಯೂ ನಾನಾ ಮುನಿಗಳ ಗುಂಪಿನೊಡನೆಯೂ ಸುತ್ತು ವರಿಯಲ್ಪಟ್ಟವನಾಗಿ ಚಿನ್ನದಿಂದ ರಚಿತವಾದ ಪುಣ್ಯಕರವೆನಿಸಿದ ಸಿಂಹಾಸನದಲ್ಲಿ ಕುಳಿತು ವಿರಾಜಿಸುತ್ತಿದ್ದನು. ॥೩೭-೩೮-೩೯-೪೦॥

ಆಗ ಜೈಗೀಷವ್ಯನು "ಸರ್ವಜ್ಞನೂ ಕೃಪಾನಿಲಯನೂ ಆದ ನಂದಿಕೇಶ್ವರ ಸ್ವಾಮಿಯೇ, ದೇವಾಧಿದೇವನಾದ ನೀನು ಪ್ರಮಥಗಣಗಳಿಗೊಡೆಯನೆನಿಸಿ ಆ ಶಿವಧರ್ಮಗಳೆಂಬ ದೊಡ್ಡ ರತ್ನಗಳಿಗೆ ಗಣಿಯಂತಿರುವೆ. ಅಲ್ಲದೆ ಆ ಪರಶಿವನ ಪಾದಕಮಲದ್ವಂದ್ವದಲ್ಲಿಯೇ ಸದಾ ಭಕ್ತಿಯುಳ್ಳವನಾಗಿರುವೆ. ಓ ಸ್ವಾಮಿ, ಆ ಶಿವನ ಮಹಿಮೆಯನ್ನು ಸೂಚಿಸುವ ಧರ್ಮಗಳನ್ನು ಕುತೂಹಲದಿಂದ ನನಗೆ ತಿಳಿಸಲು ನೀನೇ ಸಮರ್ಥನಾಗಿರುವೆ. ॥೪೧-೪೨॥

ಓ ಗಣಾಧಿಪತಿಯೇ, ನೀನು ಆ ಮಹಾದೇವನ ಅಪಾರವಾದ ದಯಾ ಸಮುದ್ರಕ್ಕೆ ಸಾರಭೂತವಾಗಿರುವೆ. ಅಲ್ಲದೆ ಆ ಮಹೇಶ್ವರನ ಸಮಸ್ತ ದಯೆಗೂ ನೀನೇ ಸರ್ವಸ್ವವಾಗಿರುವೆ. ಓ ದೇವ, ದಯೆಯಿಟ್ಟು ಶಿವಧರ್ಮಗಳನ್ನು ನನಗೆ ತಿಳಿಸುವನಾಗೆಂದು" ಜೈಗೀಷವ್ಯಮುನಿಯು ನಂದಿಕೇಶ್ವರನನ್ನು ಪ್ರಾರ್ಥಿಸಿದನು. ॥೪೩॥

ಅದನ್ನು ಕೇಳಿ ನಂದಿಕೇಶ್ವರನು ಹೀಗೆಂದನು— ಎಲೈ ಮಹಾಮಹಿಮನಾದ ಜೈಗೀಷವ್ಯಮುನಿಯೇ, ಪುನರ್ಜನ್ಮವುಂಟಾಗದಂತೆ ಶಾಶ್ವತವಾದ ಮುಕ್ತಿಯನ್ನು

ಪಾತ್ರಭೂತಸ್ತ್ವಮೇವೇಹ ಮುನಿಷ್ವೇತೇಷು ಸತ್ತಮ ।
ಗೋಪ್ಯಮೇತನ್ಮಹಾಗುಹ್ಯಂ ದೇವ್ಯೈ ದೇವೇನ ಭಾಷಿತಂ ॥೪೫॥

ನಾಖ್ಯೇಯಂ ಚ ತ್ವಯಾ ಬ್ರಹ್ಮನ್ಯಸ್ಯ ಕಸ್ಯಚಿದುತ್ತಮಂ ।
ಮಹಾದೇವೀ ಮಹಾದೇವಮಪೃಚ್ಛತ್ಕೌತುಕಾನ್ವಿತಾ ॥೪೬॥

॥ ದೇವ್ಯುವಾಚ ॥

ಕಿಂ ತೇ ಪ್ರಿಯಕರಂ ಶಂಭೋ ರಹಸ್ಯಂ ತದ್ವದಸ್ವ ಮೇ ।
ಇತಿ ಪೃಷ್ಟೋ ಮಹಾದೇವೋ ಜಗಾದ ಜಗದಂಬಿಕಾಂ ॥೪೭॥

॥ ಈಶ್ವರ ಉವಾಚ ॥

ಶೃಣು ತ್ವಮುಮಾರೇಶಾನಿ ರಹಸ್ಯಂ ಮಮ ಶಾಂಕರಿ ।
ಧರ್ಮಪಂಚಕಮಿತ್ಯಾಹುಃ ಪಂಚಪಾತಕನಾಶನಂ ॥೪೮॥

ಶೃಣುಷ್ವಾವಹಿತೋ ಭೂತ್ವಾ ಜಗತಾಂ ಪಾಪನುತ್ತಮಂ ॥೪೯॥

ಕರುಣಿಸುವ ಈ ಶಿವಭಕ್ತಿಪ್ರಧಾನವಾದ ಕಥಾಮೃತವನ್ನು ಎರಡು| ಕಿವಿಗಳ ತುಂಬ ಕೇಳಿ ಆನಂದಪಡು. ॥೪೪॥

ಸತ್ಪುರುಷಾಗ್ರಣಿಯಾದ ಓ ಜೈಗೀಷವ್ಯಮುನಿಯೇ, ಈ ಶಿವಕಥಾಮೃತವನ್ನು ಪಾನಮಾಡಲು ಈ ಮುನಿಗಳ ಗುಂಪಿನಲ್ಲೆಲ್ಲಾ ನೀನೇ ಸತ್ಪಾತ್ರನಾಗಿರುವೆ. ಮಹಾದೇವನು ಗಿರಿಜಾದೇವಿಗೆ ತಿಳಿಸಿದ ಈ ಶಿವಕಥಾಮೃತವು ತುಂಬಾ ರಹಸ್ಯವಾದುದು. ॥೪೫॥

ಅಯ್ಯ ಬ್ರಾಹ್ಮಣನೇ, ಅತ್ಯುತ್ತಮವಾದ ಈ ಶಿವಕಥಾಮೃತವನ್ನು ಮನಸ್ಸಿಗೆ ತೋರಿದವರಿಗೆಲ್ಲಾ ಹೇಳಬಾರದು. ಒಂದು ದಿನ ಮಹಾದೇವಿಯು ಕುತೂಹಲಾನ್ವಿತಳಾಗಿ ತನ್ನ ಪತಿಯಾದ ಮಹಾದೇವನನ್ನು ಹೀಗೆ ಪ್ರಾರ್ಥಿಸಿದಳು. ॥೪೬॥

'ಸುಖಕರನಾದ ಮಹೇಶನೇ, ನಿನಗೆ ಪ್ರಿಯವನ್ನುಂಟುಮಾಡುವುದಾವುದು ? ಅದರ ರಹಸ್ಯವನ್ನು ನನಗೆ ತಿಳಿಸು' ಎಂದು ಪ್ರಶ್ನೆಮಾಡಿದ ಜಗಜ್ಜನನಿಯಾದ ದೇವಿಗೆ ಮಹಾದೇವನು ಈರೀತಿ ಉತ್ತರವಿತ್ತನು. ॥೪೭॥

ದೇವಾದಿದೇವನ ಪತ್ನಿಯೂ ಶಂಕರನ ಅರ್ಧಾಂಗಿಯೂ ಆದ ದೇವಿ, ನನ್ನ ರಹಸ್ಯವನ್ನು ಹೇಳುವೆನು ಕೇಳು. ಈ ನನ್ನ ರಹಸ್ಯವನ್ನು ಧರ್ಮಪಂಚಕವೆಂಬ

ಪಚೇಲಿಮತಪಃಫಲೈರಮಿತಜನ್ಮಸೂಪಾರ್ಜಿತೈ
ರ್ಭವೇ ಭಸಿತಧಾರಣೇ ಮತಿರುದೇತಿ ವಿಶ್ವಾಧಿಕೇ ।
ತ್ರಿಪುಂಡ್ರರಚನಕ್ರಮಃ ಕರಗಲಾತಿಫಾಲೇ ತಥಾ
ಉರೋನರಶಿರಃಸ್ಥಲೇ ಭವತಿ ಭಾಗ್ಯಪೂರ್ಣೇ ಜನೇ ॥೫೦॥

ರುದ್ರಾಕ್ಷೇತಿ ವದನ್ಸ್ಪೃಶನ್ನಪಿ ನರೋ ಜಂತುಃ ಸ ಗೋದಾನಭಾ
ಗ್ಧೃತ್ವಾ ತಂ ಸತತಂ ಮಹೇಂದ್ರಸದನಂ ಪ್ರಾಪ್ಯೇಂದ್ರಸಾಲೋಕ್ಯಗಃ ।
ತತ್ಸಾಹಸ್ರಧರೋಽಪಿ ತತ್ರ ದಶಕಂ ತಸ್ಮಾದನಂತಾಕ್ಷಧೃ
ಗ್ಬ್ರಾಹ್ಮ್ಯಂ ವೈಷ್ಣವಮೈಶ್ವರಂ ಪದಸುಖಂ ಪ್ರಾಪ್ಯೇಶ್ವರೇ ಲೀಯತೇ॥೫೧॥

ಹೆಸರಿನಿಂದ ಕರೆಯುವರು. ಇದು ಪಂಚಮಹಾಪಾತಕಗಳನ್ನೂ ನಾಶಮಾಡುವುದು. ದೇವಿ, ಈ ಜಗತ್ತಿನ ಪಾಪವನ್ನು ನಾಶಮಾಡುವುದಕ್ಕೋಸ್ಕರ ಸಾವಧಾನವಾಗಿ ನನ್ನ ರಹಸ್ಯವನ್ನು ಕೇಳು. ॥೪೮-೪೯॥

ಅನೇಕ ಜನ್ಮಗಳಲ್ಲಿ ಸಂಪಾದಿಸಿದ ತಪಸ್ಸಿನ ಫಲಗಳ ಪರಿಪಾಕದಿಂದ ಈ ಜನ್ಮದಲ್ಲಿ ಮಹಾಭಾಗ್ಯಶಾಲಿಯಾದ ಮಾನವನಿಗೆ ಮಾತ್ರ ಆ ಪರಮೇಶ್ವರನಲ್ಲಿ ಭಕ್ತಿಯೂ, ಕೈ, ಕಂಠ ಮತ್ತು ಹಣೆ ಮುಂತಾದ ಸ್ಥಳಗಳಲ್ಲಿಯೂ ಎದೆ, ಹೊಟ್ಟೆ, ತಲೆ ಈ ಭಾಗಗಳಲ್ಲಿಯೂ ಭಸ್ಮಧಾರಣೆಮಾಡಿಕೊಳ್ಳುವ ಯೋಗ್ಯತೆಯೂ ಉಂಟಾಗುವುದು. ॥೫೦॥

ನೂರುಬಾರಿ ರುದ್ರಾಕ್ಷ ಎಂದು ಹೇಳುತ್ತಲಾಗಲೀ ಸ್ಪರ್ಶಮಾಡುತ್ತಲಾಗಲೀ ಇದ್ದರೆ ಅಂತಹ ಮಾನವರು ಅಥವಾ ಪ್ರಾಣಿಯಾಗಲೀ ಗೋದಾನಮಾಡಿದ ಫಲವನ್ನೈದುವರು. ಅಂತಹ ನೂರು ರುದ್ರಾಕ್ಷಗಳನ್ನು ಧರಿಸಿದವನು ಇಂದ್ರ ಲೋಕವನ್ನೈದಿ ಆ ದೇವೇಂದ್ರ ಸಾಲೋಕ್ಯವನ್ನೈದುವನು. ಸಹಸ್ರ ರುದ್ರಾಕ್ಷ ಗಳನ್ನು ಧರಿಸುವನು ಬ್ರಹ್ಮಲೋಕಸುಖವನ್ನೂ, ಹತ್ತುಸಾವಿರ ರುದ್ರಾಕ್ಷಗಳನ್ನು ಧರಿಸಿದವನು ವಿಷ್ಣುವಿನ ವೈಕುಂಠಲೋಕದ ಸುಖವನ್ನೂ ಮತ್ತು ಅದಕ್ಕಿಂತಲೂ ಹತ್ತರಷ್ಟು ಅಂದರೆ ಒಂದು ಲಕ್ಷ ರುದ್ರಾಕ್ಷಿಗಳನ್ನು ಧಾರಣೆಮಾಡಿದವನು ಈಶ್ವರ ಲೋಕದ ಸುಖವನ್ನೂ ಅನುಭವಿಸಿ ಕೊನೆಗೆ ಆ ಪರಶಿವನಲ್ಲಿ ಐಕ್ಯವಾಗುತ್ತಾನೆ. ॥೫೧॥

ಪಂಚಪಾತಕವಿನಾಶನಂ ಪಂಚಕೋಶವಿನಿವಾರಣಂ ಸದಾ ।
ಪಂಚವಕ್ತ್ರಕೃಪಯಾ ಶುಭಪ್ರದಂ ಪಂಚಮಂತ್ರಪರಮಂ ತಥಾಕ್ಷರಂ ॥೫೨॥

ಕುಂಭಸಂಭವಮುಖ್ಯೈರ್ಮುನೀಶ್ವರೈ
ರ್ಜಂಭಮಾರಕಮುಖ್ಯೈರಮರೇಂದ್ರೈಃ ।
ಕುಂಭಿವಕ್ತ್ರಮುಖ್ಯೈರ್ಗಣೇಶ್ವರೈ
ರ್ದಂಭನಾಶನಕರಂ ಪರಮಂ ಮನುಂ ॥೫೩॥

ಜಪ್ತಮಾಪ್ತಫಲದಂ ಶುಭಾಪ್ತಯೇ
ಸಪ್ತಮಂತ್ರಕೃತಧೂಲನಾದರೈಃ ।
ಏವ ಮುಕ್ತಿಫಲದಂ ಭವಭೂಮ್ಯಾಂ
ಬೀಜಮುಪ್ತಮನಿಶಂ ಶಿವಭಕ್ತೈಃ ॥೫೪॥

---

ಪಂಚಾಕ್ಷರೀ ಜಪವು ಬ್ರಹ್ಮಹತ್ಯಾ, ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪ ಗಮನ, ಈ ನಾಲ್ಕು ಕೆಲಸಗಳನ್ನು ಮಾಡುವವರ ಜೊತೆಯಲ್ಲಿ ಸೇರುವಿಕೆ, ಈ ಐದು ಮಹಾಪಾತಕಗಳನ್ನೂ ನಾಶಮಾಡುವುದು. ಸರ್ವಶ್ರೇಷ್ಠವೆನಿಸಿ, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯವೆಂಬ ಪಂಚಕೋಶಗಳಿಗೂ ಅಧಿಷ್ಠಾನಭೂತವಾದ ಈ ಶರೀರವನ್ನೇ ಪುನಃ ಬರದಂತೆ ನಿವಾರಣೆಮಾಡುವುದು. ಐದುಮುಖವುಳ್ಳ ಆ ಮಹೇಶ್ವರನ ಕೃಪೆಯಿಂದ ಸುಖವನ್ನುಂಟುಮಾಡುವುದು. ಐದು ಅಕ್ಷರಗಳಿಂದ ಯುಕ್ತವಾಗಿ ಪರಮ ಪಾವನವೆನಿಸಿರುವುದೂ ಸಹ ಆ ಶಿವಪಂಚಾಕ್ಷರಮಂತ್ರವೇ. ॥೫೨॥

ಪರಮಶ್ರೇಷ್ಠವೂ ಆಡಂಬರವನ್ನು ನಾಶಮಾಡುವುದೂ, ಆದ ಈ ಶಿವಪಂಚಾಕ್ಷರಮಂತ್ರವು ಆಗಸ್ತ್ಯನೇ ಮೊದಲಾದ ಮುನಿಶ್ರೇಷ್ಠರಿಂದಲೂ, ಇಂದ್ರನೇ ಮೊದಲಾದ ದೇವತೋತ್ತಮರಿಂದಲೂ, ಕುಂಭಿವಕ್ತ್ರನೇ ಮೊದಲಾದ ಗಣಾಧಿಪತಿಗಳಿಂದಲೂ ಸ್ತೋತ್ರಮಾಡಲ್ಪಟ್ಟಿರುವುದು. ॥೫೩॥

ಸದ್ಯೋಜಾತಾದಿ ಅಥವಾ ಅಗ್ನಿರಿತ್ಯಾದಿ ಸಪ್ತಮಂತ್ರಗಳಿಂದ ಭಸ್ಮೋದ್ಧೂಲನ ಮಾಡಿಕೊಂಡು ಜಪಿಸಿದ ಪಂಚಾಕ್ಷರವೆಂಬ ಬೀಜಮಂತ್ರವು, ಭವನಾಮಕವಾದ ಭೂಮಿಯಲ್ಲಿ ಫಲವತ್ತಾದ ಧೂಳನ್ನು ಹರಡಿ, ಶ್ರೇಷ್ಠವಾದ ಬಿತ್ತವನ್ನು ಬಿತ್ತಿದಂತೆ ಇಷ್ಟಾರ್ಥಫಲವನ್ನೆಲ್ಲಾ ಅನುಗ್ರಹಿಸಿಕೊಡುವುದು. ॥೫೪॥

**ಶ್ರೀರುದ್ರಂ ಯಜುಷಾಂ ಗಣೇಷು ವಿಹಿತಂ ಜಪ್ತ್ವಾ ಪರಂ ಪ್ರೀತಿಮಾನ್**
**ಮುಕ್ತಃ ಪಾತಕಸಂಘತೋ ಗಿರಿವರಾಜ್ಞಾತೇ ಸ ಪುಣ್ಯೈಕಭಾಕ್ ।**
**ತನ್ನಾಮ್ನಾ ಫಲವಾದಸೂಕ್ತಿಪರಮೋ ಮಂತ್ರಂ ಜಪನ್ಮುಕ್ತಿಭಾಕ್**
**ಭಸ್ಮಾಭ್ಯಕ್ತತನುಸ್ತಥಾ ಚ ಶಪಿತೋ ಯೋ ಭಸ್ಮನಿಷ್ಠೋ ಭವೇತ್ ॥೫೫॥**

**ಯೋ ರುದ್ರಾಕ್ಷವಿಭೂತಿಭೂಷಣಯುತೋ ಜಪ್ತ್ವಾ ಪ್ರಿಯೋ ಜಾಯತೇ**
**ಯಃ ಪುಂಡ್ರಾಂತರಧಾರಣೇ ಮತಿರುಮೇ ನೈವಾಪ್ನುಯಾತ್ತತ್ಫಲಂ ।**
**ಜಪ್ತ್ವಾಽಪಿ ಶ್ರುತಿಶೇಖರೋತ್ತಮಪದಾನ್ ಜ್ಞಾತ್ವಾಪಿ ತಸ್ಯಾರ್ಥಕಂ**
**ಲಿಂಗೇಷು ಪ್ರಥಿತಂ ಸದಾಪಚಿತಿಜಂ ಪುಣ್ಯಂ ನ ಹಿ ಪ್ರಾಪ್ನುಯಾತ್ ॥೫೬॥**

---

ಯಜುರ್ವೇದದಲ್ಲಿ ಕ್ರಮವಾಗಿ ಪಠಿತವಾಗಿರುವ ರುದ್ರಮಂತ್ರವನ್ನು ಪ್ರೀತಿಯಿಂದ ಜಪಮಾಡುವ ಮಾನವನು ಮುಕ್ತನಾಗುವನು. ಎಲೈ ಗಿರಿರಾಜ ಕುಮಾರಿಯೇ! ಆ ಮಾನವನು ಭಕ್ತಿಯಿಂದ ಭಸ್ಮಧಾರಣೆಮಾಡಿ ಇದೇ ರುದ್ರಮಂತ್ರವನ್ನು ಜಪಿಸಿದರೆ ಅವನ ಸಕಲ ಪಾತಕಗಳೂ ತೊಲಗಿ ಉತ್ತಮವಾದ ಪುಣ್ಯಗಳಿಗೆ ತಾನು ಭಾಗಿಯಾಗುವನು. ಶರೀರದ ಅಂಗಗಳಿಗೆಲ್ಲಾ ಭಸ್ಮವನ್ನು ಲೇಪನಮಾಡಿಕೊಂಡು ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿ ಆ ರುದ್ರವೆಂಬ ಹೆಸರಿನಿಂದ ಫಲವಾದರೂಪವಾದ ವಚನಗಳನ್ನು ತಿಳಿಸುವುದರಲ್ಲಿ ಶ್ರೇಷ್ಠವಾದ ರುದ್ರಮಂತ್ರವನ್ನು ಜಪಮಾಡುವ ಮಾನವನು ನಿಜವಾಗಿಯೂ ಮೋಕ್ಷವನ್ನೈದುವನು. ॥೫೫॥

ಭಸ್ಮತ್ರಿಪುಂಡ್ರ, ರುದ್ರಾಕ್ಷ ಇವುಗಳನ್ನು ಅಲಂಕರಿಸಿಕೊಂಡು ಈ ರುದ್ರ ಮಂತ್ರವನ್ನು ಜಪಮಾಡಿದವನು ಪರಮೇಶ್ವರನಿಗೆ ಪ್ರೀತಿಕರನಾಗುವನು. ಬೇರೆ ಊರ್ಧ್ವಪುಂಡ್ರಾದಿಗಳನ್ನು ಧರಿಸಿ ಈ ಜಪಮಾಡಿದರೆ ಅದರ ಫಲವು ಅವನಿಗೆ ದೊರೆಯಲಾರದು. ಉಮೇ, 'ತಸ್ಯಯಜುರೇವ ಶಿರಃ' ಎಂಬ ವಚನದಂತೆ ವೇದಗಳಲ್ಲಿ ಮೂರ್ಧನ್ಯಸ್ಥಾನವನ್ನು ಪಡೆದಿರುವ ಯಜುರ್ವೇದದಲ್ಲಿ ವಿಹಿತವಾಗಿರುವ ಆ ರುದ್ರಮಂತ್ರದ ಪದಗಳನ್ನೂ ಮತ್ತೂ ಅರ್ಥಗಳನ್ನೂ ಸಹ ಚೆನ್ನಾಗಿ ತಿಳಿದಿದ್ದರೂ, ಶಿವಲಿಂಗ ವಿಷಯಗಳಲ್ಲಿ ಪ್ರಸಿದ್ಧವಾಗಿ ಮೋಕ್ಷಾದಿ ಫಲಗಳನ್ನು ಕೊಡುವ ಈ ರುದ್ರಮಂತ್ರವನ್ನು ಭಸ್ಮತ್ರಿಪುಂಡ್ರಾತಿರಿಕ್ತವಾದ ಬೇರೆ ಊರ್ಧ್ವಪುಂಡ್ರಾದಿಗಳನ್ನು ಧಾರಣೆಮಾಡಿ ಜಪಮಾಡಿದರೆ ಅದರ ಪುಣ್ಯವು ದೊರೆಯಲಾರದು. ॥೫೬॥

ಪುನ್ನಾಗನಾಗಬಕುಲಾರ್ಜುನಚಂಪಕೈಶ್ಚ
ಮಂದಾರಪಾಟಲಕದಂಬಕಕರ್ಣಿಕಾರೈಃ ।
ಜಪಾಮ್ರದಾಡಿಮಸುಗಂಧಿಶಮೀಶಮೀಕ
ಲೋಧ್ರೋದ್ಭವೈಶ್ಚ ಬಕುಲೈಃ ಕರವೀರಪುಷ್ಪೈಃ ॥೫೭॥

ಪದ್ಮಾರ್ಕೈಃ ಕನಕೈಸ್ತಥಾ ದಮನಕೈರ್ಬಂಧೂಕಕೋಕೈರ್ಬಕೈಃ
ಕುಂದೈರ್ಜಾತಿಕುಸುಂಭಸಂಭವಸುಮೈಃ ಸನ್ಮಲ್ಲಿಕಾಸಂಭವೈಃ ।
ಅಂಕೋಲೈರ್ಗಿರಿಮಲ್ಲಿಕಾದಿಕುಸುಮೈಃ ಸತ್ಪಾರಿಜಾತಾದಿಭಿಃ
ನಂದ್ಯಾವರ್ತಮರುತ್ವಕೈಶ್ಚ ತುಲಸೀಸದ್ದ್ರೋಣದೂರ್ವಾಂಕುರೈಃ ॥೫೮॥

ವಿಷ್ಣುಕ್ರಾಂತಕುಶಾಪಮಾರ್ಗಜದಲೈಃ ಕಾಶೈಸ್ತಥೈವಾರ್ಜುನೈಃ
ಸಹಸ್ರನೀಲೋತ್ಪಲಮಾಲಯಾ ಶಿವಂ ಸಮುಲ್ಲಸಚ್ಚಾರುಶಶಾಂಕಮೌಲಿಂ ।
ಮುದಾ ಮುಕುಂದಾಜವಿಮೃಗ್ಯಮೌಳಿಪಾದಾಂಬುಜಂ ಪೂಜಯಿತಾ ಸ
ಧನ್ಯಃ ॥೫೯॥

ಪುನ್ನಾಗ, ನಾಗ (ನಾಗಸಂಪಿಗೆ), ಬಕುಲ, ಚಂಪಕ (ಸಂಪಿಗೆ), ಮಂದಾರ, ಪಾದರೀ, ನೀಪ (ಕದಂಬ), ಕಣಿಗಲೆ, ದಾಸವಾಳ, ಮಾವು, ದಾಳಿಂಬೆ, ಸುಗಂಧಿ, ಶಮೀ (ಬನ್ನೀ), ಶಮೀಕ, ಲೋಧ್ರ (ಕಂಚುವಾಳ), ಬಕುಲ ಮತ್ತು ಕರವೀರ ಮುಂತಾದ ಹೂವುಗಳಿಂದ ಆ ಪರಮೇಶ್ವರನ ಪಾದಕಮಲಗಳನ್ನು ಪೂಜೆಮಾಡುವವನು ಧನ್ಯನೆನಿಸುವನು. ॥೫೭॥

ಸುವರ್ಣದ ಕಮಲ ಮತ್ತು ಅರ್ಕಪುಷ್ಪ, ಸಂಪಿಗೆ, ದಮನಕಪುಷ್ಪ, ಬಿಂದಿಗೆ ಹೂ, ಕೋಕ ಮತ್ತು ಬಕಪುಷ್ಪಗಳು, ಕುಂದ, ಜಾಜಿ, ಕುಸುಮೆ, ಮುಂತಾದ ಹೂಗಳು, ಶ್ರೇಷ್ಠವಾದ ಮಲ್ಲಿಗೆ ಹೂವುಗಳು, ಅಂಕೋಲೆ, ಗಿರಿಮಲ್ಲಿಕಾ ಮುಂತಾದ ಪುಷ್ಪಗಳು, ಒಳ್ಳೆಯ ಪಾರಿಜಾತಹೂಗಳು, ನಂದಿಬಟ್ಟಲು, ಮರುಗ, ತುಲಸೀ, ತುಂಬೆಹೂ, ಎಳೆಯ ಗರಿಕೆ ಇವೇ ಮುಂತಾದ ಹೂ ಮತ್ತು ಪತ್ರೆಗಳಿಂದ ಆ ಪರಮೇಶ್ವರನನ್ನು ಪೂಜೆಮಾಡುವ ಮಾನವನು ಧನ್ಯನೆನಿಸುವನು. ॥೫೮॥

ವಿಷ್ಣುಕ್ರಾಂತ, ದರ್ಭೆ, ಉತ್ತರಣೀ ಇವುಗಳ ದಳಗಳಿಂದಲೂ, ಕಾಶ, ಅರ್ಜುನ ಮೊದಲಾದ ಹೂಗಳಿಂದಲೂ, ಸಾವಿರ ಕನ್ನೈದಿಲೆ ಹೂವಿನಿಂದ ರಚಿತ

ಯೋ ಬಿಲ್ವೋತ್ತಮಮಾಲಯಾಽನುದಿವಸಂ ಮಂದಾರಮಾಲಾದಿಭಿ
ರ್ಲಿಂಗಂ ಮಂಗಲಮೇತದದ್ಯ ಸುಮನಃಸೌರಭ್ಯಗಂಧಾಯಿತಂ ।
ಪಶ್ಯನ್ನಶ್ವರಪಾತಕೋಽನ್ಯಶಮನಾವ್ಯಾಘಾತಭೀತಿಂ ಹರನ್ನಿ
ರ್ಗುಂಡೀಕುಶಪತ್ರಬಿಲ್ವಜದಲೈಃ ಸದ್ಭಾವಲಿಂಗೋದ್ಭವೈಃ ॥೬೦॥

ಕಾಪಿತ್ಥೈರಘಹಾರಿಪತ್ರಕಬರ್ಯೈರ್ಯಃ ಪಂಚವಕ್ತ್ರಾರ್ಚನಂ ।
ಪಂಚಬ್ರಹ್ಮನಮಾಂಸಿ ಯಸ್ಯ ವದನೇ ಸದ್ಯಃ ಸ ಮುಕ್ತೋಽಭವೇತ್ ॥೬೧॥

ವಸಂತನವಮಲ್ಲಿಕಾಕುಸುಮದಿವ್ಯಮಾಲಾದಿಭಿ
ರ್ದಿನಾಂತಸಮಯೋಲ್ಲಸನ್ಮಧುರಗಂಧಜಾಜೀಸರೈಃ ।

---

ವಾದ ಮಾಲೆಗಳಿಂದಲೂ, ಮನೋಹರವಾದ ಚಂದ್ರನನ್ನೇ ತಲೆಯಲ್ಲಿ ಧರಿಸಿ ಪ್ರಕಾಶಿಸುತ್ತಾ, ವಿಷ್ಣು ಮತ್ತು ಬ್ರಹ್ಮ ಇವರುಗಳಿಂದ ಯಾವಾಗಲೂ ಪ್ರಾರ್ಥಿಸಲ್ಪಡುತ್ತಿರುವ ಪಾದಕಮಲಗಳುಳ್ಳ ಆ ಪರಶಿವನನ್ನು ಪ್ರೀತಿಯಿಂದ ಪೂಜೆಮಾಡುವವನು ಧನ್ಯನೇ ಸರಿ! ॥೫೯॥

ಪ್ರತಿದಿನವೂ ಬಿಲ್ವಪತ್ರೆಯ ಶ್ರೇಷ್ಠವಾದ ಮಾಲೆಗಳಿಂದಲೂ, ಮಂದಾರ ಪುಷ್ಪಗಳ ಹಾರಗಳಿಂದಲೂ, ಪುಷ್ಪಸೌರಭ್ಯದಿಂದ ಸುವಾಸನೆಯುಳ್ಳ ಮತ್ತು ಮಂಗಳಕರವಾದ ಈ ಶಿವಲಿಂಗವನ್ನು ಪೂಜಿಸುತ್ತಾ ಅನವರತವೂ ದರ್ಶನಮಾಡುವವನ ಪಾಪಗಳೆಲ್ಲವೂ ಕೂಡಲೇ ನಾಶವಾಗುವುದಲ್ಲದೇ ಇತರ ಯಾವ ಭೀತಿಯೂ ಅವನಿಗುಂಟಾಗಲಾರದು. ಆದರಿಂದಲೇ ನಿರ್ಗುಂಡೀ, ಕುಶ, ಪತ್ರೆ, ಬಿಲ್ವದಳಗಳು ಇವೇ ಮುಂತಾದ ಪತ್ರಪುಷ್ಪಾದಿಗಳನ್ನು ಭಕ್ತಿಪೂರ್ವಕವಾಗಿ ಆ ಶಿವಲಿಂಗಕ್ಕೆ ಪೂಜೆಮಾಡಬೇಕು. ॥೬೦॥

ಕಪಿತ್ಥವೃಕ್ಷದ (ಬೇಲದಮರದ) ಪತ್ರೆಗಳಿಂದಲೂ ಮತ್ತು ಕಬರೀಪತ್ರೆಗಳಿಂದಲೂ ಸಹ ಆ ಐದು ಮುಖವುಳ್ಳ ಶಿವನನ್ನು ಪೂಜಿಸಿ ಸದ್ಯೋಜಾತಾದಿ ಅನುವಾಕಗಳಿಂದ ನಮಸ್ಕರಿಸುತ್ತಾ ಯಾವಾಗಲೂ ಆ ಪಂಚಬ್ರಹ್ಮಸ್ವರೂಪನನ್ನೇ ಧ್ಯಾನಮಾಡುವವನು ಸದ್ಯದಲ್ಲಿಯೇ ಮೋಕ್ಷವನ್ನೈದುವನು. ॥೬೧॥

ವಸಂತಕಾಲದಲ್ಲಿ ಅರಳಿ ಮನೋಹರವಾಗಿರುವ ಹೊಸಮಲ್ಲಿಗೆಯ ಹೂಮಾಲೆಗಳಿಂದಲೂ, ಸಾಯಂಕಾಲದ ಸಮಯದಲ್ಲಿ ಪ್ರಕಾಶಿಸುತ್ತಾ ಚೆನ್ನಾಗಿ ಅರಳಿ ತಮ್ಮ

ಮಹೇಶಕೃತಮರ್ಚನಂ ಪ್ರಕುರುತೇ ಪ್ರದೋಷೇಷು ಯಃ
ಸ ಚಾದಿಭಿಷಗುತ್ತಮಪ್ರಿಯಮಘೌಘತೂಲಾನಲಃ ॥೬೨॥

ಬ್ರಹ್ಮಾ ಶೈಲಮಯಂ ಹರಿನ್ಮಣಿಮಯಂ ವಿಷ್ಣುರ್ನಿಶಾನಾಯಕೋ
ಮುಕ್ತಾಜಾಲಮಯಂ ಪ್ರವಾಲಜಮುಮಾ ತಾಮ್ರೋದ್ಭವಂ ಭಾನುಮಾನ್।
ಹೈರಣ್ಯಂ ಧನಧಸ್ತಥೈವ ವರುಣಃ ಶ್ರೀಚಂದ್ರಕಾಂತೋದ್ಭವಂ
ವಹ್ನಿಶ್ಚಾನ್ನಮಯಂ ಸುಪಿತ್ತಲಭವಂ ವಾಯುಶ್ಚ ನೀಲಂ ಹರಿಃ ॥೬೩॥

ಅನ್ಯೇ ಸರ್ವಮರುದ್ಗಣಾಶ್ಚ ದಿತಿಜಾ ಗಂಧರ್ವವಿದ್ಯಾಧರಾಃ
ಯಕ್ಷಾ ರಾಕ್ಷಸಕಿಂನರೋರಗಗಣಾಃ ರುದ್ರಾ ಮುನೀನಾಂ ಗಣಾಃ।
ಚಿತ್ರಂ ಚಾರು ಮಹೇಶಲಿಂಗಮಮಲಂ ಸಂಪೂಜಯತ್ಯಾದರಾ
ದ್ಬಿಲ್ವೀಕೋಮಲಪಲ್ಲವೈರ್ವಿಷದೋ ಮಂದಾರಮಾಲಾದಿಭಿಃ ॥೬೪॥

---

ದಿವ್ಯಪರಿಮಳವನ್ನು ಹೊರಚೆಲ್ಲುತ್ತಿರುವ ಜಾಜೀಪುಷ್ಪಗಳ ಮಾಲಿಕೆಗಳಿಂದಲೂ, ಪ್ರದೋಷಕಾಲದಲ್ಲಿ ಆ ಮಹೇಶ್ವರನನ್ನು ಪೂಜೆಮಾಡುವವನು ಉತ್ತಮವಾದ ವೈದ್ಯರಲ್ಲಿ ಮೊದಲನೆಯವನೆನಿಸುವನು. (ಅಂದರೆ ಈ ಸಂಸಾರವೆಂಬ ಕೂಪದಲ್ಲಿ ಬಿದ್ದು ನರಳುವ ಮಾನವರನ್ನು ಚಿಕಿತ್ಸೆಮಾಡಿ ಉದ್ಧಾರಮಾಡುವ ವೈದ್ಯರಲ್ಲಿ ಅಗ್ರಗಣ್ಯನೆಂದು ಭಾವವು.) ಅಲ್ಲದೇ ಈ ಸಕಲ ಪಾಪಗಳ ಸಮೂಹವೆಂಬ ಹತ್ತಿಯ ಬಂತೆಗೆ ಅಗ್ನಿಪ್ರಾಯನು. (ಅಂದರೆ ಅಗ್ನಿಯಂತೆ ಹತ್ತಿಯ ಸದೃಶವಾದ ಪಾಪಗಳನ್ನೆಲ್ಲಾ ಕ್ಷಣಕಾಲದಲ್ಲಿ ಭಸ್ಮಮಾಡುವನೆಂದು ಭಾವವು.) ॥೬೨॥

ಬ್ರಹ್ಮನು ಕಲ್ಲಿನ ಶಿವಲಿಂಗವನ್ನೂ, ವಿಷ್ಣುವು, ಹಸುರು ಪಚ್ಚೆ ಮಣಿಯ ಲಿಂಗವನ್ನೂ; ಚಂದ್ರನು ಮುತ್ತಿನ ಸಮೂಹದಿಂದ ರಚಿತವಾದ ಶಿವಲಿಂಗವನ್ನೂ; ಉಮಾದೇವಿಯು (ಪಾರ್ವತಿಯು) ಹವಳದ ಲಿಂಗವನ್ನೂ, ಸೂರ್ಯನು ತಾಮ್ರದ ಲಿಂಗವನ್ನೂ; ಕುಬೇರನು ಚಿನ್ನದ ಲಿಂಗವನ್ನೂ, ಹಾಗೆಯೇ ವರುಣನು ಒಳ್ಳೆಯ ಚಂದ್ರಕಾಂತಶಿಲೆಯ ಲಿಂಗವನ್ನೂ; ಅಗ್ನಿಯು ಅನ್ನಮಯಲಿಂಗವನ್ನೂ, ವಾಯುವು ಹಿತ್ತಾಳೆಯ ಲಿಂಗವನ್ನೂ, ಇಂದ್ರನು (ಹರಿಯು) ನೀಲದ ಲಿಂಗವನ್ನೂ, ಇತರ ಸಕಲ ಮರುದ್ಗಣಗಳೂ, ದೈತ್ಯರೂ, ಗಂಧರ್ವರೂ, ವಿದ್ಯಾಧರರೂ, ಯಕ್ಷರೂ, ರಾಕ್ಷಸರೂ, ಕಿನ್ನರರೂ, ನಾಗರೂ, ರುದ್ರರೂ ಮತ್ತು ಮುನಿಗಳೂ ಸಹ ಪರಿಶುದ್ಧವೂ ಮನೋಹರವೂ ಆದ ಆ ಮಹೇಶ್ವರನ ಚಿತ್ರವರ್ಣದ ಶಿವಲಿಂಗವನ್ನೂ, ಕೋಮಲವಾದ

ಉತ್ಫುಲ್ಲರಕ್ತಕಮಲೈರಮಲೈಃ ಕದಂಬೈ ।
ರ್ನೀಲೋತ್ಪಲೈರ್ವಿಕಸಿತೈಃ ಕುಮುದೈಶ್ಚ ನಿತ್ಯಂ ॥೬೫॥

ಮಾಲೂರಪ್ರಭವೈರ್ನವಾರುಣದಲೈರ್ದೂರ್ವಾಂಕುರೈಃ ಶಂಕರಂ
ಲಿಂಗೇಽಭ್ಯರ್ಚ್ಯ ಭವೇದನೇಕವಿಭವೈರ್ಯುಕ್ತಸ್ತಥಾ ಮುಕ್ತಿಭಾಕ್ ।
ಸಾಯಂ ಕುಂದಮರಂದಬಂಧುರಲಸದ್ಗಂಧೌಘಗಂಧೀಕೃತೈ
ರ್ದಿಗ್ವ್ಯಾಪ್ತೈರ್ವಿಪಿನಪ್ರಫುಲ್ಲಸುಮನೋಧೂಳಿಪ್ರಭಾಧೂಸರೈಃ ॥೬೬॥

ಶರ್ವಾಣೀರಮಣಾರ್ಚನೇ ಕೃತಮತಿರ್ಮಂದಾರಮಾಲಾದಿಭಿ ।
ರ್ಭಸ್ಮಾಭ್ಯಕ್ತತನುರ್ಭವೇತ್ಸ ಸುಭಗೋ ಭಾವೇಽಪಿ ಕಶ್ಚಿತ್ಕಲೌ ॥೬೭॥

ಬಿಲ್ವದಳಗಳು, ಮತ್ತು ಮನೋಹರವಾದ ಮಂದಾರ ಪುಷ್ಪಮಾಲೆಗಳೂ ಇವೇ ಮೊದಲಾದವುಗಳಿಂದ ಆದರ ಪೂರ್ವಕವಾಗಿ ಸದಾ ಪೂಜೆಮಾಡುತ್ತಿರುವರು. ||೬೩-೬೪||

ಚೆನ್ನಾಗಿ ಅರಳಿದ ಸ್ವಚ್ಛವಾದ ಕೆಂದಾವರೆಗಳಿಂದಲೂ, ಕದಂಬಪುಷ್ಪ, ಅರಳಿದ ಕನ್ನೈದಿಲೆ, ಮತ್ತು ಕುಮುದಪುಷ್ಪ, ಇವುಗಳಿಂದಲೂ, ಅಲ್ಲದೆ ಮಾಲೂರ ವೃಕ್ಷದಲ್ಲಿ (ಬಿಲ್ವವೃಕ್ಷ) ಚೆನ್ನಾಗಿ ಚಿಗುರಿರುವ ಹೊಸಗೆಂಪಿನ ಪತ್ರೆಗಳಿಂದಲೂ, ಚಿಗುರು ಗರಿಕೆಗಳಿಂದಲೂ ಶಂಕರನನ್ನು ಪ್ರತಿನಿತ್ಯವೂ ಶಿವಲಿಂಗದಲ್ಲಿ ಪೂಜೆಮಾಡುವವನು ಸಕಲ ವಿಭವಗಳಿಂದಲೂ ಯುಕ್ತನಾಗಿ ಕೊನೆಗೆ ಮುಕ್ತನಾಗುವನು. ಹಾಗೆಯೇ ಪ್ರದೋಷಕಾಲಗಳಲ್ಲಿ, ಮನೋಹರವಾದ ಮಕರಂದ ಸೌರಭಕ್ಕೆ ಮುಗ್ಧವಾಗಿ ಬಂದು ಮೊರೆಯುತ್ತಿರುವ ದುಂಬಿಗಳುಳ್ಳ ಕುಂದಪುಷ್ಪಗಳಿಂದಲೂ, ಕಾಡಿನಲ್ಲಿ ಸ್ವಚ್ಛವಾಗಿ ಬೆಳೆದಿರುವ ಹೂವುಗಳ ಮೇಲೆ ಬೀಸಿ, ಅದರ ಪರಾಗಗಳನ್ನು ಹೊತ್ತುಕೊಂಡು ಎಲ್ಲ ಕಡೆಯಲ್ಲಿಯೂ ಧೂಮ್ರವರ್ಣದಿಂದ ಪ್ರಕಾಶಿಸುವಂತೆ ಮಾಡುತ್ತಿರುವ ವಾಯುವಿನ ಸಂಚಾರದಿಂದಲೂ, ರಮ್ಯವಾಗಿ ತೋರುತ್ತಿರುವ ಮಂದಾರ ಪುಷ್ಪದ ಮಾಲೆಗಳಿಂದಲೂ ಮತ್ತು ಇತರ ಪುಷ್ಪಸಮುದಾಯದಿಂದಲೂ, ಗಿರಿಜಾರಮಣನಾದ ಆ ಮಹೇಶ್ವರನ ಪೂಜೆಯಲ್ಲಿ ಆಸಕ್ತನಾಗಿ, ಭಸ್ಮಧಾರಣೆಯಿಂದ ಶೋಭಿಸುವ ಭಾಗ್ಯವಂತನು ಈ ಕಲಿಯುಗದಲ್ಲಿ ಯಾರೋ ಒಬ್ಬನು ಮಾತ್ರ ದೊರೆಯಬಲ್ಲನು. ||೬೫-೬೬-೬೭||

ಪ್ರಾಜ್ಯೈರ್ಮಧ್ವಾಜ್ಯದುಗ್ಧಪ್ರಭವದಧಿಘಟೈರ್ನಾರಿಕೇಳೇಕ್ಷುಸಾರೈಃ
ರಂಭಾಜಂಬೀರಚೂತಪ್ರಭವಫಲರಸೈಃ ಪಾನಸೋದ್ಭೂತಕೋಶೈಃ ।
ಶ್ರೀಖಂಡದ್ರವಸಾರಸಾಗರಮಹಾಕರ್ಪೂರಖಂಡದ್ರವೈಃ
ಪಾಟೀರೈರ್ಮೃಗನಾಭಿಜಾತಸುರಸೈಃ ಸಚ್ಛರ್ಕರಾಪೂರಕೈಃ ॥೬೮॥

ಆಸಿಚ್ಯಾಲಿಪ್ಯ ಗಂಧೈರ್ಮೃದುತರವಸನಾವೇಷ್ಟನೈರ್ವೇಷ್ಟಯಿತ್ವಾ
ನೇಪಥ್ಯೈರ್ಮಣಿಕಲ್ಪಿತೈಃ ಸುಮನಸಾಂ ಭಾರೈಶ್ಚ ಬಿಲ್ವೀದಲೈಃ ।
ಅಭ್ಯರ್ಚ್ಯಾಭೂಷ್ಯ ಧೂಪೈರಗರುಪರಿಮಳಾಮೋದಿತೈರ್ದೀಪಜಾತೈ
ರ್ನೈವೇದ್ಯೈರ್ಬಹುಭಕ್ಷಭೋಜ್ಯಸಹಿತೈಸ್ತಾಂಬೂಲನೀರಾಜನೈಃ ॥೬೯॥

ಕುಮಾರಸ್ವಾಮಿ, ನಂದಿ, ಭೃಂಗೀ ಮುಂತಾದವರು ಅತಿಶಯವಾಗಿ, ಮಧು, (ಜೇನು) ಆಜ್ಯ, (ತುಪ್ಪ) ದುಗ್ಧ (ಹಾಲು) ಮೊಸರು, ಇವುಗಳನ್ನು ಕೊಡ ಗಟ್ಟಲೆ ತಂದು ಮಹೇಶ್ವರನಿಗೆ ಅಭಿಷೇಕಮಾಡುತ್ತಿರುವರು. ಎಳೆನೀರು, ಕಬ್ಬಿನ ಹಾಲು, ಬಾಳೆಹಣ್ಣು, ನಿಂಬೇಹಣ್ಣು, ಮಾವು ಇವುಗಳ ರಸ, ಮತ್ತು ಹಲಸಿನ ಹಣ್ಣಿನ ತೊಳೆಗಳೊಳಡಗಿರುವ ಮಧುರ ರಸ ಇವುಗಳಿಂದಲೂ, ಆ ಮಹೇ ಶ್ವರನಿಗೆ ಅಭಿಷೇಕ ಮಾಡುತ್ತಿರುವರು. ಅಲ್ಲದೆ ಸಾರಭೂತವಾದ ಶ್ರೀಖಂಡ, ಕರ್ಪೂರ, ಚಂದನ, ಕಸ್ತೂರೀ ಮತ್ತು ಪಚ್ಚಕರ್ಪೂರ ಇವುಗಳ ಶ್ರೇಷ್ಠವಾದ ದ್ರವಗಳಿಂದ ವಿಶೇಷವಾಗಿ ಆ ಶಿವನಿಗೆ ಲೇಪನಮಾಡುತ್ತಿರುವರು. ||೬೮||

ದಿವ್ಯವಾದ ಚಂದನವೇ ಮುಂತಾದ ಸುಗಂಧ ದ್ರವ್ಯಗಳಿಂದ ಪರಮೇಶ್ವರನ ಲಿಂಗವನ್ನು ಲೇಪನಮಾಡಿ, ಮೃದುವಾದುದೂ, ರತ್ನಖಚಿತವೂ ಆದ ಉತ್ತಮ ತರದ ವಸ್ತ್ರಗಳನ್ನು ಹೊದಿಸಿ, ಅಪಾರವಾದ ಪುಷ್ಪಸಮೂಹಗಳಿಂದಲೂ ಮತ್ತು ಬಿಲ್ವದಳಗಳಿಂದಲೂ ಶಿವನನ್ನಲಂಕರಿಸಿ, ಅಗರು ಮುಂತಾದ ದಿವ್ಯಪರಿಮಳಧೂಪ ವನ್ನು ಸಮರ್ಪಿಸಿ, ನಾನಾವಿಧವಾದ ದೀಪಮಾಲೆಗಳು, ಬಗೆಬಗೆಯ ಭಕ್ಷ್ಯಭೋಜ್ಯ ಗಳೊಡಗೂಡಿದ ನೈವೇದ್ಯ ಇವುಗಳನ್ನು ನಿವೇದನಮಾಡಿ, ತಾಂಬೂಲವನ್ನು ಸಲ್ಲಿಸಿ, ಕುಮಾರಸ್ವಾಮಿ, ನಂದಿ, ಭೃಂಗಿ ಮುಂತಾದವರು ಆ ಶಿವಲಿಂಗಕ್ಕೆ ಭಕ್ತಿಪುರಸ್ಸರವಾಗಿ ಮಂಗಳಾರತಿ ಮಾಡುತ್ತಿರುವರು. ||೬೯||

ಕುಂದೇಂದುಪ್ರತಿಮಾನಚಾಮರಗಣೈಶ್ಛತ್ರೈಶ್ಚ ಮುಕ್ತಾಫಲೋ
ದ್ದಾಮಸ್ವರ್ಣಪರಿಷ್ಕೃತೈರ್ವ್ಯಜನಜಾಮಂದೋತ್ಥವಾತಾರ್ಪಣೈಃ ।
ಆದರ್ಶೈರತಿನಿರ್ಮಲೈರ್ಮೃದುಲಕೈಃ ಸದ್ವಾದ್ಯಭೇದೋತ್ಥಿತಧ್ವಾನೈಃ
ಪ್ರಕ್ರಮಸಂಸ್ತವಪ್ರಣಮನೈರ್ನೃತ್ತೈಶ್ಚ ಗೇಯೈರಪಿ ॥೭೦॥

ಲಿಂಗಂ ಮಂಗಲಮಂಗಲಾಪತಿಮಹಾಸಾನ್ನಿಧ್ಯಹೇತುಸ್ಥಲಂ
ವಾರಂ ವಾರಮಘೌಘನಾಶನಕರಂ ಪುಣ್ಯೇ ಪ್ರದೋಷೇಽಪಿ ಚ ।
ಸಂಪೂಜ್ಯಾಲೋಕಪುಣ್ಯೈರ್ಜನಿಶತವಿತತೈಃ ಕಿಂ ವದಾಮೀಶತುಲ್ಯಾಃ
ಸ್ಕಂದೋ ನಂದೀಶ್ಚ ಭೃಂಗಿರ್ಗಿರಿಶಕರುಣಯಾ ಧನ್ಯ ಧನ್ಯಾಃ ಸ ಏವ ॥೭೧॥

ಕುಂದಪುಷ್ಪ ಮತ್ತು ಚಂದ್ರ ಇವರಿಗೆ ಸದೃಶವಾದ ಕಾಂತಿಯಿಂದ ಹೊಳೆಯುತ್ತಿರುವ ಚಾಮರ ಸಮೂಹಗಳಿಂದ ಸದಾ ಆ ಶಿವನಿಗೆ ಸೇವೆಮಾಡುತ್ತಿರುವರು (ಬೀಸುತ್ತಿರುವರು). ಮುತ್ತಿನಮಣಿಗಳಿಂದ ಖಚಿತವಾಗಿರುವ ಶ್ರೇಷ್ಠವಾದ ಸುವರ್ಣದ ಛತ್ರಿಗಳನ್ನು ಹಿಡಿಯುತ್ತಿರುವರು. ದಿವ್ಯವಾದ ಬೀಸಣಿಗೆಗಳಿಂದ ಬೀಸುತ್ತಾ ಅನವರತವೂ ತಂಪಾದ ಗಾಳಿಯನ್ನು ಹಾಕುತ್ತಿರುವರು. ನಾನಾವಿಧವಾದ ದಿವ್ಯವಾದ್ಯಗಳನ್ನು ಬಾರಿಸುತ್ತಾ ಅವುಗಳ ಮೃದುಧ್ವನಿಗಳಿಂದ ಶಿವನಿಗೆ ಸಂತೋಷವನ್ನುಂಟುಮಾಡುತ್ತಿರುವರು. ಮತ್ತು ಕ್ರಮೋಚಿತವಾದ ಸ್ತೋತ್ರಗಳನ್ನು ಮಾಡುತ್ತಾ ನಮಸ್ಕರಿಸುತ್ತಲೂ ನರ್ತನ ಮತ್ತು ಸಂಗೀತ ಇವುಗಳಿಂದಭಿನಯ ಮಾಡುತ್ತಲೂ ಆ ಶಿವನ ಸೇವೆಯನ್ನು ತಪ್ಪದೇ ನಡೆಸುತ್ತಿರುವರು. ॥೭೦॥

ಪಾಪವನ್ನು ನಾಶಮಾಡುವ, ಸರ್ವಮಂಗಳಾದೇವಿಯ (ಪಾರ್ವತಿಯ) ರಮಣನಾದ, ಮಹಾದೇವನ ಉತ್ತಮವಾದ ಸನ್ನಿಧಾನಕ್ಕೆ ಕಾರಣಭೂತ ಪ್ರದೇಶವಾಗಿರುವ ಶಿವಲಿಂಗವನ್ನು ಬಾರಿಬಾರಿಗೂ ಮತ್ತು ವಿಶೇಷವಾಗಿ ಪ್ರದೋಷಕಾಲಗಳಲ್ಲಿಯೂ ಪೂಜಿಸುತ್ತಿರುವರು. ನೂರಾರು ಜನ್ಮಗಳಲ್ಲಿ ಸಾಧಾರಣವಾದ ಕರ್ಮಗಳಿಂದ ಸಂಪಾದಿಸಲು ಅಸಾಧ್ಯವಾಗಿರುವ ಸುಕೃತ ವಿಶೇಷವನ್ನು ಹೊಂದುತ್ತಾ, ಸ್ಕಂದ, ನಂದೀ, ಮತ್ತು ಭೃಂಗೀ ಇವರು ಆ ಈಶ್ವರನ ಸಮಾನರೇ ಆಗಿ, ಆ ಜಗದೀಶ್ವರನ ದಯೆಯಿಂದ ಧನ್ಯರೆನಿಸಿ ಮೆರೆಯುತ್ತಿರುವರು. ॥೭೧॥

|| ನಂದಿಕೇಶ್ವರ ಉವಾಚ ||

ಏವಮೂಹ ಮಹಾದೇವೋ ಗಿರಿಜಾಂ ಪ್ರತಿ ಶಂಕರಃ ।
ರಹಸ್ಯಮೇತದ್ಗೋಪ್ಯಂ ತೇ ಜೈಗೀಷವ್ಯ ಶೃಣುಷ್ವ ಮೇ ॥೭೨॥

ದುರ್ಗಂಧಾಸಾರಪೂರಪ್ರಬಲಖರಖುರಾಘಾತಭಿನ್ನಾಗ್ರದಂತಾಃ
ತತ್ಸಂಗೋತ್ಕಂಠಿನೋ ಯೇ ನರಜಠರಖರಾ ಘೋರಸಂಸಾರಭಾರಾಃ ।
ತೇಷಾಂ ಕಾ ವಾ ಭವಿತ್ರೀ ಗತಿರಿತಿ ಕಲಯೇ ನಾಥ ಚಂದ್ರಾರ್ಧಚೂಡ
ಸ್ವಾಮಿನ್ನೀಶಾನಭಕ್ತಿಂ ವಿತರ ಪುರಹರಾನಾಥನಾಥ ಪ್ರಸೀದ ॥೭೩॥

ಪರದಾರವಿಚಾರಸಾದರಾಃ
ಸುರತಾಚಾರಕಥಾವಿಧಾನಧೀರಾಃ ।

ಓ ಜೈಗೀಷವ್ಯಮುನಿಯೇ! ಮಹಾದೇವನು ಈ ರೀತಿ ತನ್ನ ಚರಿತ್ರೆಯನ್ನು ಗಿರಿಜೆಗೆ ಹೇಳಿ ಸುಮ್ಮನಾದನು. ಓ ಮುನಿವರ್ಯನೇ! ಇದು ತುಂಬಾ ರಹಸ್ಯವಾದುದು. ಆದುದರಿಂದ ಇದನ್ನು ಜೋಪಾನವಾಗಿ ರಕ್ಷಣೆ ಮಾಡಬೇಕು. ಅದನ್ನೇ ವಿವರಿಸಿ ಹೇಳುವೆನು ಕೇಳೆಂದು ನಂದೀಶ್ವರನು ಮತ್ತೆ ಹೇಳಲುಪ್ರಕಮಿಸಿದನು. ||೭೨||

ಅಪಾರವಾದ ಸಂಸಾರ ದುರ್ಗಂಧ ಪ್ರವಾಹಗಳೆಂಬ ಪ್ರಬಲವಾದ ಕತ್ತೆಗಳ ಗೊರಸುಗಳ ಏಟುಗಳಿಂದ ಮುರಿದ ಹಲ್ಲುಗಳುಳ್ಳವರಾಗಿದ್ದರೂ, ಪುನಃ ಈ ಘೋರವಾದ ಸಂಸಾರದ ಭಾರವನ್ನು ತಲೆಯಲ್ಲಿ ಹೊತ್ತು ಕಾಲಕಳೆಯುತ್ತಿರುವ ಮಾನವರೆಂಬ ಕತ್ತೆಗಳು ಬಾರಿಬಾರಿಗೂ ಸಂಸಾರ ಸಂಗಮದಲ್ಲಿಯೇ ವಿಶೇಷವಾಗಿ ಕುತೂಹಲದಿಂದ ಪ್ರವರ್ತಿಸುತ್ತಿರುವರು. ಅರ್ಧಚಂದ್ರ ಶಿರೋಭೂಷಣನಾದ ಸ್ವಾಮಿಯೇ! ಅಂತಹ ಪಾಪಿಗಳಿಗೆ ಮುಂದೇನು ಗತಿಯುಂಟೋ ತಿಳಿಯದು. ತ್ರಿಪುರನಾಶಕನಾದ ಪ್ರಭುವೇ! ನನ್ನಲ್ಲಿ ಅನುಗ್ರಹಮಾಡಿ, ಜಗದೀಶ್ವರನಾದ ನಿನ್ನ ಭಕ್ತಿಯು ಯಾವಾಗಲೂ ನನ್ನಲ್ಲಿ ನೆಲಸುವಂತೆ ಅನುಗ್ರಹಿಸು. ಎಂದು ನಂದಿಕೇಶ್ವರನು ಶಂಕರನನ್ನು ಪ್ರಾರ್ಥಿಸಿದನು. ಮತ್ತು ಜೈಗೀಷವ್ಯನೊಡನೆ ಇಂತೆಂದನು. ||೭೩||

ಯಾವಾಗಲೂ ಪರಸ್ತ್ರೀ ಸಮಾಗಮ ರೂಪವಾದ ವಿಚಾರಗಳಲ್ಲಿಯೇ ಆದರವುಳ್ಳವರೂ, ಸುರತಕ್ರಿಯಾಚರಣರೂಪವಾದ ಕ್ರಿಯೆಗಳನ್ನು ನಡೆಸುವುದರಲ್ಲಿಯೇ ಶೂರರೂ, ಕೊಬ್ಬಿದ ಮನ್ಮಥನ ಬಾಣಗಳಿಂದ ಹೊಡೆಯಲ್ಪಟ್ಟು ಮದನಪರವಶ

ಉನ್ಮತ್ತಮಾರಶರಕೃತ್ತಮಹೋರಸೋ ಯೇ
ನಾರಾಧಯಂತಿ ಗಿರಿಶಂ ಮಹತಿ ಪ್ರದೋಷೇ ॥೭೪॥

ಮಹಾಪತ್ತರಂಗಾನುಷಂಗಾಭಿಸಂಗಾಃ
ಪಿಶಂಗೀಕೃತಾಶಾಂಗಸಾದ್ರ್ಯಂಗಚಿತ್ತಾಃ ।
ನ ಶಂಗಂ ಭಜಂತ್ಯೇವ ದುಷ್ಟಾಭಿಷಂಗಾನ್ನ
ಗಂಗಾಂಭಸಾ ಸ್ಲಾವಯಿಷ್ಯಂತಿ ಗಾತ್ರಂ ॥೭೫॥

ಸತತಂ ವಿನಿವಿಷ್ಟಮಂತಿಕೇ ಸ್ವೇ
ಭಗವಂತಂ ಶಿಪಿವಿಷ್ಟಮಷ್ಟಮೂರ್ತಿಂ ।
ದುರದೃಷ್ಟಶತೈರ್ವಿಮುಹ್ಯ ದುಷ್ಟಾ
ನ ಭಜಂತ್ಯೇವ ಮಹೇಶ್ವರಂ ಕರಂಟಾಃ ॥೭೬॥

ದುರದೃಷ್ಟದಶಾಕಶಾಭಿಘಾತೈಃ
ಕುಶಕಾಶೈರಪಿ ನಾರ್ಚಯಂತಿ ಶಂಭುಂ ।

ವಾದ ದೊಡ್ಡ ಎದೆಯುಳ್ಳವರೂ ಆದ ಮಾನವರು ।ಸರ್ವೋತ್ತಮವಾದ ಪ್ರದೋಷ ಕಾಲಗಳಲ್ಲಿಯೂ ಸಹ ಗಿರಿಜಾರಮಣನನ್ನು ಪೂಜೆಮಾಡುವುದಿಲ್ಲ. ॥೭೪॥

ಮಹಾ ವಿಪತ್ತುಗಳೆಂಬ ಅಲೆಗಳ ಹೊಡತಕ್ಕೆ ಸಿಕ್ಕುತ್ತಾ ಪುನಃ ಅವುಗಳಲ್ಲೇ ಅಭಿರುಚಿಯುಳ್ಳವರಾಗಿ, ಮಾನವರು ಯಾವಾಗಲೂ ಹೊಂಬಣ್ಣದಂತೆ ತೋರುತ್ತಿರುವ ತಮ್ಮ ಶರೀರ, ಮತ್ತು ಅವರ ತಾತ್ಕಾಲಿಕವಾದ ಸುಖ ಇವುಗಳಲ್ಲಿಯೇ ಅನುರಕ್ತವಾದ ಮನಸ್ಸಿನಿಂದ ಪರಮಸುಖ ಸ್ವರೂಪನಾದ ಆ ಪರಮೇಶ್ವರನನ್ನು ಭಜನೆ ಮಾಡುವುದಿಲ್ಲ. ಅಲ್ಲದೇ ಸದಾ ದುರ್ವ್ಯಾಪಾರಗಳಲ್ಲಿ ಅಭಿಲಾಷೆ ಹೊಂದಿರುವುದರಿಂದ ಒಂದು ದಿನವಾದರೂ ತಮ್ಮ ಅಪವಿತ್ರವಾದ ಶರೀರವನ್ನು ಪರಮಪಾವನೆಯಾದ ಗಂಗಾನದಿಯಲ್ಲಿ ಸ್ನಾನಮಾಡುವುದರಿಂದ ಪಾವನಗೊಳಿಸುತ್ತಿಲ್ಲ. ॥೭೫॥

ಯಾವಾಗಲೂ ತಮ್ಮ ಅತ್ಯಂತ ಸಮೀಪದಲ್ಲಿಯೇ ನೆಲಸಿರುವ ಅಷ್ಟಮೂರ್ತಿಯೂ, ಶಿಪಿವಿಷ್ಟನೂ ಎನಿಸಿದ ಮಹಾದೇವನನ್ನು ಪಾಮರರಾದ ಜನರು ತಮ್ಮ ಅನೇಕ ದುರದೃಷ್ಟಗಳಿಂದ ಮುಗ್ಧರಾಗಿ ಸೇವಿಸುತ್ತಿಲ್ಲ. ॥೭೬॥

ಈ ಮಾನವರು ತಮ್ಮ ದುರ್ದೈವದೆಸೆಯೆಂಬ ಚಾವಟಿಯ ಹೊಡತಕ್ಕೊಳಗಾಗಿ ಯಾವಾಗಲೂ ಎಡೆಬಿಡದೇ ತಮ್ಮ ಅಂತರಂಗದಲ್ಲಿಯೇ ನೆಲಸಿ ತಮ್ಮ ಸಕಲ

ಅನಿಶಂ ನಿವಿಶಂತಮಂತರಂಗೇ
ಶಮಿತಾಶೇಷದುರಂತದುಃಖಜಾಲಂ ॥೭೭॥

ಅಗಜಾಪತಿಪಾದಪೂಜನೇ
ಮತಿರಲ್ಪೈರ್ನ ಭವೇತ ಧರ್ಮಜಾಲೈಃ ।
ಅರ್ಚ್ಯಂ ಪ್ರಾರ್ಚ್ಯತ ಭಕ್ತಿಯುಕ್ತಮನಸಾ
ಯೂಯಂ ಸುಬುದ್ಧ್ಯೈರತಾಃ ॥೭೮॥

॥ ಸೂತ ಉವಾಚ ॥

ಇತ್ಯುಕ್ತೋ ನಂದಿಕೇಶೇನ ಜೈಗೀಷವ್ಯೋ ಮಹಾಮುನಿಃ ।
ನಂದಿಕೇಶಂ ಸಮಾಲಿಂಗ್ಯ ಪ್ರೇಮಾಶ್ರುಪುಲಕೋಽವದತ್ ॥೭೯॥

॥ ಜೈಗೀಷವ್ಯ ಉವಾಚ ॥

ಅಹೋ ಮಹಾದೇವಕಥಾವಿಧಾನಸುಧಾರಸಾಸ್ವಾದನಲೋಲಚಿತ್ತೈಃ ।
ಸಹಾಸ್ತು ಮೇ ನಿತ್ಯಮಭೀಷ್ಟಸಂಗಃ ಕಾಂತೇವ ರತ್ಯರ್ಥವಿಶಾರದೇನ ॥೮೦॥

ದುಃಖಸಮೂಹವನ್ನೂ ಹೊಡೆದೋಡಿಸುವ ಶಂಭುವನ್ನು ದರ್ಭೆ ಮತ್ತು ಕಾಶ ಪುಷ್ಪ ಇವುಗಳಿಂದ ಪೂಜೆಮಾಡುವುದಿಲ್ಲ. ॥೭೭॥

ಗಿರಿರಾಜಕುವರಿಯ ರಮಣನಾದ ಮಹೇಶನ ಪೂಜೆಯಲ್ಲಿ ಅಭಿರುಚಿಯು ಕೇವಲ ಅಲ್ಪವಾದ ಧರ್ಮಸಮೂಹಗಳಿಂದ ಉಂಟಾಗಲಾರದು. ಆದುದರಿಂದ ಎಲೈ ಮುನಿಗಳಿರಾ, ಪೂಜಾರ್ಹನಾದ ಆ ಮಹೇಶ್ವರನನ್ನು ಭಕ್ತಿಯುಕ್ತವಾದ ಮನಸ್ಸುಳ್ಳವರಾಗಿಯೂ ಒಳ್ಳೆಯ ಬುದ್ಧಿಯುಳ್ಳವರಾಗಿಯೂ ನೀವು ನಿಯಮ ಪೂರ್ವಕವಾಗಿ ಪೂಜೆಮಾಡಿರಿ ಎಂದು ನಂದಿಕೇಶ್ವರನು ಜೈಗೀಷವ್ಯನಿಗೆ ಹೇಳಿದನು. ॥೭೮॥

ಈರೀತಿಯಾದ ನಂದಿಕೇಶ್ವರನ ವಚನವನ್ನು ಲಾಲಿಸಿ ಆ ಜೈಗೀಷವ್ಯ ಮುನಿಯು ಅತ್ಯಂತ ಪ್ರೀತಿಯುಕ್ತನಾಗಿ ಕಣ್ಣಿನಲ್ಲಿ ಪ್ರೇಮಾಶ್ರುಗಳನ್ನು ಸುರಿಸುತ್ತಾ ಆ ನಂದಿಕೇಶ್ವರನನ್ನು ಆಲಿಂಗನಮಾಡಿಕೊಂಡು ಇಂತೆಂದನು. ॥೭೯॥

ರತಿಕ್ರೀಡೆಯಲ್ಲಿ, ಚತುರನಾದ ಪತಿಯೊಡನೆ ಸೇರಿ ಪರಮಾನಂದಭರಿತ ಳಾಗುವ ರಮಣಿಯಂತೆ ಯಾವಾಗಲೂ ಆ ಮಹಾದೇವನ ಕಥಾವಿಧಾನವೆಂಬ

ತೇನ ಛಿನದ್ಮೀಶ್ವರ ಘೋರದಾವಪ್ರಭಾಕರಾಕಾರಭವೈಕಬಂಧಂ॥೮೧॥

ಇತ್ಯುಕ್ತ್ವಾ ಸ ಜಗಾಮಾಥ ಕೈಲಾಸಂ ಮುನಿಸತ್ತಮಃ ।
ಪ್ರಣಮ್ಯ ಚ ಮಹಾದೇವಂ ಜೈಗೀಷವ್ಯಸ್ತದಾಬ್ರವೀತ್ ॥೮೨॥

॥ ಜೈಗೀಷವ್ಯ ಉವಾಚ ॥

ಸ್ವಾಮಿನ್ಮಹೇಶ ಕರುಣಾವರುಣಾಲಯಾದ್ಯ
ತ್ವತ್ಪಾದಪದ್ಮಮಕರಂದಮಧುವ್ರತತ್ವಂ ।
ಸಂಪ್ರಾರ್ಥಯಾಮಿ ನಿತರಾಂ ತರುಣೇಂದುಮೌಳೇ
ಸಂಸಾರಘೋರದವದಗ್ಧಸಮಗ್ರಕಾಮಃ ॥೮೩॥

ಇತ್ಥಂ ಸ್ತುತ್ವಾ ಮಹಾದೇವಂ ಶಂಕರಾಗ್ರೇ ಸ್ಥಿತೋಽಭವತ್ ॥೮೪॥

ಅಮೃತರಸವನ್ನೇ ಸೇವಿಸುವುದರಲ್ಲಿ ಆಸಕ್ತವಾದ ಮನಸ್ಸುಳ್ಳ ಈಶ್ವರಭಕ್ತ ರೊಡನೆಯೇ ನನಗೆ ಯಾವಾಗಲೂ ಸಮಾಗಮವುಂಟಾಗಲಿ. ಅವರಿಂದ ದೊರೆಯುವ ಆನಂದವು ಅತ್ಯಾಶ್ಚರ್ಯಜನಕವಾದುದು. ॥೮೦॥

ಹೇ ಈಶ್ವರ, ಶಿವಪೂಜಾನಿರತರಾದ ಈ ಭಕ್ತರ ಸಮಾಗಮದಿಂದ, ಭಯಂ ಕರವಾದ ಕಾಡುಗಿಚ್ಚಿನ ಕಾಂತಿಯ ಸಮೂಹದ ಆಕಾರದಂತಿರುವ ಈ ಸಂಸಾರ ಬಂಧನವನ್ನು ಕತ್ತರಿಸಿ ಹಾಕುವೆನು, ಎಂದು ಜೈಗೀಷವ್ಯನು ನಂದಿಕೇಶ್ವರನಿಗೆ ಹೇಳಿ ಆ ಮುನಿಶ್ರೇಷ್ಠನು ಅಲ್ಲಿಂದ ಹೊರಟು ಕೈಲಾಸಕ್ಕೆ ಹೋಗಿ ಅಲ್ಲಿ ಆ ಮಹಾದೇವನಿಗೆ ನಮಸ್ಕರಿಸಿ ಇಂತೆಂದನು. ॥೮೧-೮೨॥

ಸ್ವಾಮಿ, ದಯಾಸಮುದ್ರನಾದ ಮಹೇಶ್ವರನೇ, ಈ ಸಂಸಾರವೆಂಬ ಘೋರ ವಾದ ಕಾಳ್ಗಿಚ್ಚಿನಿಂದ ಸುಡಲ್ಪಟ್ಟ ನಾನು ಸಕಲ ಮನೋರಥಗಳನ್ನು ಬಯಸು ವವನಾಗಿ ಬಾಲಚಂದ್ರಶಿರೋಭೂಷಣನಾದ ನಿನ್ನ ಅಡಿದಾವರೆಗಳ ಮಕರಂದ ಪಾನಮಾಡುವುದರಲ್ಲಿ ಭ್ರಮರದಂತಿರಬೇಕೆಂದು ಬಯಸುತ್ತಿರುವೆನು, ದಯೆಯಿಟ್ಟು ಅದಕ್ಕನುಗ್ರಹಮಾಡಬೇಕು. ॥೮೩॥

ಹೀಗೆ ಆ ಜೈಗೀಷವ್ಯಮುನಿಯು ಮಹಾದೇವನನ್ನು ಸ್ತೋತ್ರಮಾಡಿ ಆ ಶಂಕರನ ಮುಂದೆಯೇ ನಿಂತುಕೊಂಡನು. (ಅಂದರೆ ಅವನ ಸಾನ್ನಿಧ್ಯವನ್ನು ಹೊಂದಿದನೆಂದು ತಾತ್ಪರ್ಯ.) ॥೮೪॥

|| ಶೈವ ಉವಾಚ ||

ಏತತ್ತೇ ಸರ್ವಮಾಖ್ಯಾತಂ ಸಂವಾದಂ ದ್ವಿಜಸತ್ತಮ ।
ಯಃ ಶೃಣೋತಿ ಸಕೃದ್ಭಕ್ತ್ಯಾ ಭವಭಕ್ತಿವಿವರ್ಧನಂ ||೮೫||

ತ್ವದರ್ಥೇ ಕಥಿತಂ ವಿಪ್ರ ಸರ್ವಪಾತಕನಾಶನಂ ||೮೬||

ಅಸ್ಮಾಕಂ ದುರದೃಷ್ಟಕೋಟಿಘಟಿತಾಪಾರಾಂಹಸೋ ನಾಶಕಂ
ಲಿಂಗಂ ದೃಷ್ಟಮಪಾರಬಿಲ್ವಜದಲೈಃ ಸಂಪೂಜಿತಂ ಮಸ್ತಕೇ ।
ಕ್ಷಿಪ್ರಾತುಂಗತರಂಗಶೀಕರಲವೈಃ ಸಂಪ್ರೋಕ್ಷಿತಂ ವೀಜಿತಂ
ವಾತೈಃ ಕೇತಕಪದ್ಮಗಂಧಜರಜೋಗುಂಫೀಕೃತೈಃ ಶೀತಲೈಃ ||೮೭||

|| ಸೂತ ಉವಾಚ ||

ಶೈವವರ್ಯವಚಃ ಶ್ರುತ್ವಾ ಸಭಾರ್ಯಃ ಸದ್ವಿಜಃ ಸದಾ ।
ಸಕಂಪಿತಾಂಗಹೃದಯೋ ಭವಭಕ್ತಿಪರೋಽಭವತ್ ||೮೮||

---

ಆ ಬಡಬ್ರಾಹ್ಮಣನನ್ನು ಕುರಿತು ಶೈವನು ಅದನ್ನೆಲ್ಲಾ ವಿವರಿಸುತ್ತಾ ಹೀಗೆಂದನು "ಅಯ್ಯ ಬ್ರಾಹ್ಮಣೋತ್ತಮನೇ, ನಿನಗೆ ಹೇಳಿದ ಈ ನಂದಿಕೇಶ್ವರ ಮತ್ತು ಜೈಗೀಷವ್ಯ ಸಂವಾದವನ್ನೆಲ್ಲಾ ಭಕ್ತಿಪೂರ್ವಕವಾಗಿ ಕೇಳುವವನಿಗೆ ಈಶ್ವರ ವಿಷಯಕವಾದ ಭಕ್ತಿಯು ಹೆಚ್ಚುವುದು. ಓ ಬ್ರಾಹ್ಮಣ, ಸಕಲ ಪಾಪಗಳನ್ನೂ ನಾಶಮಾಡುವ ಈ ದಿವ್ಯಸಂವಾದವನ್ನು ನಿನಗೋಸ್ಕರ ಹೇಳಿದೆನು. ||೮೫-೮೬||

ನಮ್ಮ ಅಪಾರವಾದ ದುರದೃಷ್ಟದ ದೆಸೆಯಿಂದ ಸಕಲ ಪಾತಕಗಳನ್ನೂ ನಾಶಮಾಡುವ ಈ ದಿವ್ಯಲಿಂಗವನ್ನು ನಾವು ದರ್ಶನಮಾಡಿದೆವು. ಪಾವನವಾದ ಕ್ಷಿಪ್ರಾನದಿಯ ಪ್ರವಾಹದ ತುಂತುರುಗಳಿಂದ ಈ ಲಿಂಗವು ನೆನಸಲ್ಪಟ್ಟು ಅಪಾರವಾದ ಬಿಲ್ವಪತ್ರೆಗಳಿಂದ ಪೂಜಿಸಲ್ಪಟ್ಟಿದೆ. ಕೇದಗೆ (ತಾಳೆ) ತಾವರೆ ಮುಂತಾದ ಸುಗಂಧ ಪುಷ್ಪಗಳ ಮೇಲೆ ಬೀಸಿ ಅವುಗಳ ಪರಾಗಗಳನ್ನು ಹೊತ್ತುಕೊಂಡುಬಂದು ಸುಗಂಧ ಭರಿತವಾದ ವಾಯುವು ಈ ಲಿಂಗದ ಮೇಲೆ ಮೆಲ್ಲನೆ ತಂಪಾಗಿ ಬೀಸುತ್ತಿರುವುದು. ||೮೭||

ಹೀಗೆಂದು ಆ ಶೈವಶ್ರೇಷ್ಠನು ನುಡಿದ ವಚನಗಳನ್ನು ಕೇಳಿ ಪತ್ನೀಸಮೇತ ನಾದ ಆ ಬ್ರಾಹ್ಮಣನು ತನ್ನ ಸಕಲ ಅವಯವಗಳು ಮತ್ತು ಮನಸ್ಸು ಇವು

ಪ್ರಣಮ್ಯ ತಂ ಮಹಾದೇವಂ ಮಹಾಕಾಲಂ ಮಹೇಶ್ವರಂ ।
ಭೂಸುರಸ್ತಾಂತ್ಸುರಾಂಶ್ಚಾಽಪಿ ನಾರದಂ ಜ್ವಲಿತೌಜಸಂ ॥೮೯॥

ಏತಾವತ್ಕಾಲಪರ್ಯಂತಂ ಮತ್ಕೃತ್ಯಂ ಶ್ರೂಯತಾಂ ದ್ವಿಜ ।
ಇತಿ ಪ್ರಾಹಾಶ್ರುನಯನಃ ಸದಾರಶ್ಚ ದ್ವಿಜಾಧಮಃ ॥೯೦॥

॥ ಬ್ರಾಹ್ಮಣ ಉವಾಚ ॥

ಜಾಬಾಲಶ್ರುತಿಮಸ್ತಕೇಷು ನಿರತೋ ಧರ್ಮೋ ನ ಸಂಸೇವಿತೋ
ಮಂತ್ರೈಃ ಸಪ್ತಭಿರೇವ ಧೂಲನವಿಧಿರ್ನಾಕರ್ಣಿತೋ ನೋ ಕೃತಃ ।
ರುದ್ರಾಕ್ಷೈರ್ನ ವಿಭೂಷಿತಾ ತನುರಿಯಂ ನಾಭ್ಯರ್ಚಿತಃ ಶಂಕರೋ
ಹಾ ಹಾ ನೋ ಜನಿರೇವ ಗರ್ಭಕುಹರೇ ವ್ಯರ್ಥೀಕೃತಾ ಮೇಽಧುನಾ ॥೯೧॥

ನಡುಗುತ್ತಿರಲು ಏನೂ ಮಾತನಾಡಲಾರದೆ ಅಲ್ಲಿಂದ ಮುಂದೆ ಹೊರಟು ಶಿವಭಕ್ತಿ ಯಲ್ಲಿಯೇ ಆಸಕ್ತನಾದನು. ॥೮೮॥

ಅನಂತರ ಆ ಬ್ರಾಹ್ಮಣನು ಎದುರಿಗೆ ಇರುವ ಮಹಾಕಾಲೇಶ್ವರನಿಗೆ ನಮಸ್ಕಾರಮಾಡಿ ಆಮೇಲೆ ಆ ಬ್ರಾಹ್ಮಣನು ಅಲ್ಲಿ ನೆರೆದಿದ್ದ ದೇವತೆಗಳಿಗೂ ದಿವ್ಯತೇಜಸ್ಸಿನಿಂದ ಹೊಳೆಯುತ್ತಿದ್ದ ನಾರದಮುನಿಗೂ ಪ್ರಣಾಮಮಾಡಿ, ಅಯ್ಯಾ ಶಿವಭಕ್ತಾಗ್ರೇಸರನಾದ ಬ್ರಾಹ್ಮಣನೇ, ಇದುವರೆಗೆ ನಾನು ಆಚರಿಸುತ್ತಿದ್ದ ಕಾರ್ಯ ಗಳನ್ನು ತಿಳಿಸುವೆನು. ಕೇಳೆಂದು ತನ್ನ ಪತ್ನಿಯೊಡನೆ ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ಇಂತೆಂದನು. ॥೮೯-೯೦॥

ಜಾಬಾಲೋಪನಿಷತ್ತಿನಲ್ಲಿ ಹೇಳಿದ ಶ್ರುತ್ಯಾಚಾರಗಳಲ್ಲಿ ತತ್ಪರನಾಗಿ ನಾನು ಇಲ್ಲಿಯುವರೆಗೂ, ಅದರಂತೆ ಯಾವ ಧರ್ಮಕಾರ್ಯಗಳನ್ನೂ ಆಚರಿಸಲಿಲ್ಲ. ಏಳು ಮಂತ್ರಗಳಿಂದ ಆಚರಿಸಬೇಕಾದ ಭಸ್ಮೋದ್ಧೂಲನವಿಧಿಯನ್ನು ಕೇಳಿಯೂ ಇರಲಿಲ್ಲ. ಮತ್ತು ಮಾಡಿಯೂ ನಡೆಯಲಿಲ್ಲ. ಈ ನನ್ನ ಶರೀರಕ್ಕೆ ಪರಮಪವಿತ್ರವಾದ ರುದ್ರಾಕ್ಷ ಧಾರಣೆಯು ಇಲ್ಲಿಯುವರೆಗೆ ನಡೆದಿರಲಿಲ್ಲ. ಮತ್ತು ಒಂದು ದಿನವಾದರೂ ಈ ನನ್ನ ಶರೀರವು ಆ ಶಂಕರನನ್ನು ಪೂಜಿಸಲಿಲ್ಲವಲ್ಲಾ ! ಅಯ್ಯೋ ! ನಮ್ಮ ಈ ರೀತಿ ಯಾವ ಜನ್ಮವು ಕೇವಲ ನಮ್ಮ ತಾಯಿಯ ಗರ್ಭಕೋಶದಲ್ಲಿ ಬೆಳೆದು ಈಗ ವ್ಯಥಾ ನನಗೆ ನಿಷ್ಪ್ರಯೋಜನಕಾರಿಯಾಯಿತು. ॥೯೧॥

ಕ್ವ ಬಿಲ್ವದಲಪೂಜನೇ ಮತಿರುದೇತಿ ಭಾಗ್ಯೋದಯೈಃ
ಶತಶ್ರುತಿಶಿರೋಗತೈರ್ನಮಕಸೂತ್ರಪಾಠಕ್ರಮೈಃ ।
ಶಿವಾಂಗಣಪರಿಭ್ರಮೈಃ ಸಿತವಿಭೂತಿಧೂಲೀಧರೈಃ
ಸುಶಾಂಭವವರೈರ್ವೃತಂ ಗಿರಿಶಮಂದಿರಂ ತತ್ರ ಹಿ ॥೯೨॥

ಶಂಕಾತಂಕದುರಂತದುಷ್ಕೃತಮಹಾಪ್ರಾಕಾರವಜ್ರಾಯಿತಾ
ಶ್ರೀವಿಶ್ವಾಧಿಕ ವೇದವೇದ್ಯ ಭವತಃ ಕಾರುಣ್ಯಪಾಥೋಝರೀ ।
ದೂರೀಕರ್ತುಮಲಂ ಸಮಸ್ತಜಗತಾಂ ಸಂತಾಪಸ್ಪಂದಂ ಸದಾ
ದೀನೇ ಮಯ್ಯಪಿ ಚಾತಕಪ್ರತಿನಿಭೇ ಸಂಶುಷ್ಕಕಂಠಾಸ್ಯಕೇ ॥೯೩॥

ಮೇಘಸ್ತ್ವಂ ಭಗವನ್ದಯಾರ್ದ್ರಕರುಣಾದೃಷ್ಟ್ಯಾಽಭಿವರ್ಷಸ್ವ ಮಾಂ ॥೯೪॥

ಈಗ ನನಗೆ ಬಿಲ್ವದಳಗಳಿಂದ ಆ ಶಿವಲಿಂಗವನ್ನು ಪೂಜೆಮಾಡುವಂತೆ ಬುದ್ಧಿಯು ಹೇಗೆ ಹುಟ್ಟೀತು? ಅದಕ್ಕೆ ಬೇಕಾದ ಭಾಗ್ಯವು ನನಗೆಲ್ಲಿ ಬಂದೀತು! ನೂರಾರು ಶ್ರುತಿಗಳಿಗೂ ಶಿರೋಭೂಷಣವಾದ ನಮಕ ಮತ್ತು ಚಮಕ ಮಂತ್ರ ಗಳನ್ನು ಹೇಳಿಕೊಂಡು ಪರಶಿವನ ಪೂಜೆಮಾಡುವ ಯೋಗವಂತೂ ಬರಲೇ ಇಲ್ಲ. ಶುಭ್ರವಾದ ವಿಭೂತಿಯನ್ನು ಆದರದಿಂದ ಸಕಲ ಅವಯವಗಳಿಗೂ ಲೇಪನಮಾಡಿ ಕೊಂಡು ಶ್ರೇಷ್ಠರಾದ ಶಂಭುಭಕ್ತರೊಡಗೂಡಿ ಪ್ರದಕ್ಷಿಣೆಯುತ್ತಾ ಆ ಶಿವಮಂದಿರದಲ್ಲಿ ಭಕ್ತಿಪುರಸ್ಸರವಾಗಿ ಪೂಜೆಮಾಡುವ ಯೋಗವಂತೂ ನನಗೆ ಸಂಭವಿಸಲೇ ಇಲ್ಲವಲ್ಲಾ ನಾನೆಂತಹ ನಿರ್ಭಾಗ್ಯನು! ॥೯೨॥

ಸಂದೇಹ, ಭಯ, ತೊಂದರೆ ಮತ್ತು ಮಹಾಮಹಾ ಪಾತಕಗಳೆಂಬ ದೊಡ್ಡ ಕಲ್ಲಿನ ಪ್ರಾಕಾರಕ್ಕೆ ವಜ್ರಾಯುಧದಂತಿರುವ ನಿನ್ನ ದಯಾರಸಪ್ರವಾಹವು, ಸಕಲ ಜಗತ್ತಿನ ದುಃಖಸಮುದಾಯವನ್ನೂ ತೊಲಗಿಸುವುದರಲ್ಲಿ ಸಮರ್ಥವಾಗಿರುವುದು. ಎಲೈ ಸಕಲ ಜಗತ್ತಿನಲ್ಲಿಯೂ ಶ್ರೇಷ್ಠನಾದವನೂ, ವೇದವೇದ್ಯನೂ (ವೇದಗಳಿಂದ ತಿಳಿಯಲ್ಪಡತಕ್ಕವನೂ) ಆಗಿರುವ ಪರಮಾತ್ಮನೇ, ದೇಹ, ಮುಖ, ಮತ್ತು ಗಂಟಲು ಇವುಗಳೊಣಗಿ ಚಾತಕಪಕ್ಷಿಗೆ ಸಮಾನನೆನಿಸಿ ದೀನನಾಗಿರುವ ನನ್ನಲ್ಲಿ ಮೇಘಸ್ವರೂ ಪನೂ ದಯಾಮಯನೂ ಆದ ನೀನು ಕೃಪಾದೃಷ್ಟಿಯಿಂದ ಮಳೆಗರೆದು ಕಾಪಾಡು ಎಂದು ಆ ಬಡಬ್ರಾಹ್ಮಣನು ಸ್ತೋತ್ರಮಾಡಿದನು. ॥೯೩-೯೪॥

**ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಮಹಾಕಾಲೇಶ ಮಹಿಮಾಯಾಂ ಶೈವವಿಪ್ರ-ದರಿದ್ರಬ್ರಾಹ್ಮಣ ಸಂವಾದ ವರ್ಣನಂ ನಾಮ ತೃತೀಯೋಽಧ್ಯಾಯಃ.**

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗಸಂಜ್ಞಕವಾದ ಐದನೆಯ ಅಂಶದಲ್ಲಿ ಮಹಾಕಾಳೇಶ್ವರನ ಮಹಿಮಾನಿರೂಪಣೆಯ ಸಂದರ್ಭದಲ್ಲಿ ಶಿವಭಕ್ತನಾದ ಬ್ರಾಹ್ಮಣ ಮತ್ತು ಬಡಬ್ರಾಹ್ಮಣ ಇವರ ಸಂವಾದವರ್ಣನೆಯೆಂಬ ಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀ ಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಚತುರ್ಥೋಽಧ್ಯಾಯಃ

|| ದೇವಾ ಊಚುಃ ||

**ಅಹೋ ಮಹದಿದಂ ಭಾಗ್ಯಂ ಬ್ರಾಹ್ಮಣಸ್ಯ ಮಹಾತ್ಮನಃ ।**
**ಮುನೀಶ್ವರೈಸ್ಸುರೇಂದ್ರೈಶ್ಚ ಭಕ್ತಿಂ ಪ್ರಾಪ ಸುದುರ್ಲಭಾಂ ||೧||**

**ಶಾಂಭವೀಂ ಪಾವನೀಂ ಧನ್ಯಾಂ ತ್ವತ್ಸಂಗಾಂಗಾವಲೋಕನಾತ್ ।**
**ನಿಷ್ಕ್ರಿಯೋಽಪ್ಯಯಮತ್ಯುಗ್ರಂ ಶೂದ್ರಕರ್ಮಾಪಿ ಭೂಸುರಃ ||೨||**

**ಭಾಸುರಾಚಾರಸಂಯುಕ್ತಃ ಸುರಾಶ್ಚರ್ಯೈಕಭಾಜನಃ ।**
**ತ್ವದಂಗಸಂಗವಾತೋಽಪಿ ಪಾವನಾನಾಂ ಚ ಪಾವನಃ ||೩||**

### ನಾಲ್ಕನೆಯ ಅಧ್ಯಾಯ

ಅಹೋ! ಮಹಾತ್ಮನಾದ ಈ ಬ್ರಾಹ್ಮಣನಿಗೆ ಎಂತಹ ಮಹಾಭಾಗ್ಯವು ದೊರೆಯಿತು. ದೊಡ್ಡ ದೊಡ್ಡ ಮುನಿಶ್ರೇಷ್ಠರೂ, ದೇವತಾಸಾರ್ವಭೌಮರೂ ಹೊಂದಲಸಾಧ್ಯವಾದ ಭಕ್ತಿಯನ್ನು ಈ ಮಹಾನುಭಾವನು ಪಡೆದನಲ್ಲಾ ಎಂದು ದೇವತೆಗಳೂ ಆ ಬ್ರಾಹ್ಮಣನನ್ನು ಶ್ಲಾಘಿಸತೊಡಗಿದರು. ||೧||

ಅಯ್ಯಾ ಶೈವನೇ, ನಿನ್ನ ಸಹವಾಸ ಮತ್ತು ನಿನ್ನ ಶರೀರಾವಲೋಕನ ಇವುಗಳಿಂದ ಈ ಬ್ರಾಹ್ಮಣನು ಪರಮಪಾವನನೂ ಧನ್ಯನೂ ಆದ ಶಂಭುವಿನಲ್ಲಿ ಭಕ್ತಿಯನ್ನು ಪಡೆದನು. ಈ ಬ್ರಾಹ್ಮಣನು ಮೊದಲು ತುಂಬಾ ಕ್ರೂರನಾಗಿ ಯಾವ ಸತ್ಕರ್ಮಗಳನ್ನೂ ಆಚರಿಸದೇ ಕೇವಲ ಶೂದ್ರವೃತ್ತಿಯಲ್ಲಿಯೇ ನಿರತನಾಗಿದ್ದರೂ

ತ್ವದ್ದರ್ಶನಂ ಸುರಾಣಾಂ ತು ವಿಚಿತ್ರಜನಕಂ ಮಹತ್ ।
ಅಹೋ ಮಹಾಮಣಿಸ್ಪರ್ಶಾಲ್ಲೋಹಂ ಕಾಂಚನತಾಂ ವ್ರಜೇತ್ ॥೪॥

ತದ್ವದೇವಾಯಮಧುನಾ ವಿಪ್ರಬಂಧುಸ್ತಥಾಧಮಃ ।
ಮುನೀಂದ್ರಾನಮರೇಂದ್ರಾಂಶ್ಚ ಧಿಕ್ಕರೋತಿ ತ್ವದಾಶ್ರಯಾತ್ ॥೫॥

ತ್ರಿನೇತ್ರಸದಯಾಪಾತ್ರಾನ್ಪವಿತ್ರಾನ್ಸ್ನಾತ್ರಸಂಗಮೈಃ ।
ಕುರ್ವಂತ್ಯೇವಾಮರಧುನೀ ಪುನೀತೇ ಯದ್ವದೇವ ತೇ ॥೬॥

ಏತಸ್ಯ ಭಾಗ್ಯಗಣನಾ ನಾಯೋಗ್ಯೈರಿಹ ಗಣ್ಯತೇ ।
ಶೇಷೋಽಪಿ ಮಹಿಮಾಲೇಶಂ ಗಣಿತುಂ ತವ ನ ಕ್ಷಮಃ ॥೭॥

ಈತನು ಈಗ ತೇಜಸ್ವಿಯಾಗಿ ಸತ್ಕರ್ಮನಿರತನಾಗಿ ದೇವತೆಗಳಿಗೂ ಆಶ್ಚರ್ಯವನ್ನುಂಟುಮಾಡುವಷ್ಟು ಸಾಮರ್ಥ್ಯಹೊಂದಿರುವುದು ನಿನ್ನ ಸಹವಾಸದಿಂದ. ಆದ್ದರಿಂದ ನಿನ್ನ ಅವಯವಕ್ಕೆ ತಗಲಿ ಬೀಸುತ್ತಿರುವ ವಾಯುವಿನ ಸ್ಪರ್ಶವೂ ಸಹ ಪಾವನವಾದುದೆಂದೇ ನಾವು ತಿಳಿಯುವೆವು. ॥೨-೩॥

ಈ ನಿನ್ನ ದರ್ಶನವು ದೇವತೆಗಳಿಗೂ ತುಂಬಾ ವಿಚಿತ್ರವನ್ನುಂಟುಮಾಡುತ್ತಿದೆ. ಶ್ರೇಷ್ಠವಾದ ಚಿಂತಾಮಣಿಯೆಂಬ ಮಹಾರತ್ನದ ಸ್ಪರ್ಶದಿಂದ ಕಬ್ಬಿಣವೂ ಚಿನ್ನವಾಗುವುದರಲ್ಲಿ ಆಶ್ಚರ್ಯವೇನು! ಹಾಗೆಯೇ ಬ್ರಾಹ್ಮಣಾಧಮನಾದ ಈತನೂ ಸಹ ಈಗ ನಿನ್ನ ಆಶ್ರಯದಿಂದ ಮುನಿಶ್ರೇಷ್ಠರನ್ನೂ ಮತ್ತು ದೇವತೋತ್ತಮರನ್ನೂ ಧಿಕ್ಕರಿಸುತ್ತಿರುವನು. ॥೪-೫॥

ಮುಕ್ಕಣ್ಣನಾದ ಆ ಮಹೇಶನ ದಯೆಗೆ ಪಾತ್ರರಾಗಿರುವ ಜನರು ತನ್ನಲ್ಲಿ ಸ್ನಾನಮಾಡುವುದರಿಂದ ದೇವಗಂಗೆಯು ಅವರನ್ನು ಪಾವನರನ್ನಾಗಿ ಮಾಡುವಂತೆ ನೀನೂ ಈ ಬ್ರಾಹ್ಮಣನನ್ನು ಪರಮಪಾವನನನ್ನಾಗಿ ಮಾಡಿರುವೆ. ॥೬॥

ಈ ಬ್ರಾಹ್ಮಣನ ಭಾಗ್ಯವನ್ನೆಣಿಸಲು ಕೇವಲ ಅಯೋಗ್ಯರಿಂದ ಸಾಧ್ಯವೇ ಆಗದು. ಇಷ್ಟಕ್ಕೆ ಕಾರಣಭೂತನಾದ ನಿನ್ನ ಮಹಿಮೆಯ ಲೇಶಭಾಗವನ್ನು ಗಣನೆ ಮಾಡಲು ಆ ಆದಿಶೇಷನಿಗೂ ಶಕ್ತಿಯಿಲ್ಲ. ॥೭॥

ಮಹಾಕಾಲಮಿದಂ ಕ್ಷೇತ್ರಂ ಮಹೇಶಪ್ರಿಯಕೃತ್ತಮಂ ।
ಭೂಮಂಡಲೇಽಸ್ಯ ಸದೃಶಂ ಕ್ಷೇತ್ರಮನ್ಯನ್ನ ವಿದ್ಯತೇ ॥೮॥

ವಿದ್ಯೋತತೇ ಯಥಾ ಭಾನುರ್ನಭೋಽಂಕಣಪಥಿ ಸ್ಥಿತಃ ।
ತಥಾ ಭೂಮಂಡಲಗತಕ್ಷೇತ್ರೇಷ್ವೇತದ್ವಿರಾಜತೇ ॥೯॥

ಮಹಾಕಾಲ ಮಹಾಕಾಲ ಮಹಾಕಾಲೇತಿ ಯೋ ವದೇತ್ ।
ಸ ದೂರೇಽಪಿ ಗತೋ ಮರ್ತ್ಯೋ ಮಹಾಕಾಲಾಂತಿಕೇ ಸ್ಥಿತಃ ॥೧೦॥

ಲಿಂಗಂ ಮಂಗಲದಂ ಪುಣ್ಯಂ ಮಹಾಮಂಗಲಯಾರ್ಚಿತಂ ।
ಅರ್ಚಿತಂ ಬ್ರಹ್ಮವಿಷ್ಣ್ವಾದ್ಯೈರ್ಮಹಾಕಾಲಗಣಾರ್ಚಿತಂ ॥೧೧॥

ದೃಷ್ಟಂ ಶ್ರುತಂ ವಾ ಸತತಂ ಸ್ಪೃಷ್ಟಮಂಹೋವಿನಾಶಕಂ ।
ಅಯಂ ಮೇ ಹಸ್ತ ಇತ್ಯಾದಿಮಂತ್ರಸ್ಪರ್ಶೋ ವಿಶಿಷ್ಯತೇ ॥೧೨॥

ಮಹಾಕಾಲಸಂಜ್ಞಕವಾದ ಈ ಕ್ಷೇತ್ರವು ಆ ಮಹಾದೇವನಿಗೆ ತುಂಬಾ ಪ್ರೀತಿಕರವಾದುದು. ಈ ಭೂಮಂಡಲದಲ್ಲಿ ಇದಕ್ಕೆ ಸರಿತೂಗುವ ಕ್ಷೇತ್ರವು ಮತ್ತಾವುದೂ ಇಲ್ಲ. ॥೮॥

ಅಂತರಿಕ್ಷದಲ್ಲಿ ಪ್ರಕಾಶಿಸುವ ಸೂರ್ಯನಂತೆ ಭೂಮಣ್ಡಲದಲ್ಲಿ ಈ ಮಹಾ ಕಾಲಕ್ಷೇತ್ರವು ವಿರಾಜಿಸುತ್ತಿರುವುದು. (ಅಂದರೆ ಚಂದ್ರ, ನಕ್ಷತ್ರ ಮುಂತಾದವುಗ ಳನೇಕವಿದ್ದರೂ ಆಕಾಶದಲ್ಲಿ ಸೂರ್ಯನು ದಿವ್ಯತೇಜಸ್ಸಿನಿಂದ ಅವೆಲ್ಲಕ್ಕಿಂತಲೂ ಮಿಗಿಲಾಗಿ ಪ್ರಕಾಶಿಸುವಂತೆ ಭೂಮಂಡಲಾಂತರ್ಗತಕ್ಷೇತ್ರಗಳಲ್ಲೆಲ್ಲಾ ತುಂಬಾ ಶ್ರೇಷ್ಠವೆನಿಸಿ ಈ ಮಹಾಕಾಲಕ್ಷೇತ್ರವು ವಿರಾಜಿಸುತ್ತಿರುವುದು.)

ಮಹಾಕಾಲ, ಮಹಾಕಾಲ, ಮಹಾಕಾಲ, ಎಂಬುದಾಗಿ ದೂರದಲ್ಲಿ ನಿಂತು ಕೊಂಡು ಭಗವನ್ನಾಮಸ್ಮರಣಮಾಡುವ ಮಾನವನೂ ಆ ಮಹಾಕಾಲಸಂಜ್ಞಕನಾದ ಪರಶಿವನ ಸಮೀಪವನ್ನೈದುವನು. ॥೧೦॥

ಮಹಾಮಂಗಳೆಯೆಂಬ ಹೆಸರಿನಿಂದ ಪ್ರಸಿದ್ಧಳಾದ ಗಿರಿಜಾದೇವಿಯಿಂದಲೂ, ಬ್ರಹ್ಮ, ವಿಷ್ಣು ಮುಂತಾದ ದೇವತೋತ್ತಮರಿಂದಲೂ, ಮತ್ತು ಆ ಮಹಾಕಾಲೇ ಶ್ವರನ ಗಣಗಳಿಂದ ಪೂಜೆಮಾಡಲ್ಪಟ್ಟಿರುವ ಮಂಗಳಕರವೂ, ಪುಣ್ಯಪ್ರದವೂ ಆದ ಆ ಮಹಾಕಾಲೇಶ್ವರನ ಲಿಂಗವನ್ನು ದರ್ಶನಮಾಡುವುದು ಅಥವಾ ಅದರ ಸಂಬಂಧ

ಚೈತ್ರ್ಯಾಂ ಮಾಘ್ಯಾಂ ತಥಾಷಾಢ್ಯಾಂ
ಪೌರ್ಣಮ್ಯಾಂ ಯಸ್ತು ಪೂಜಯೇತ್ ।
ಸ ವಿಮುಕ್ತ ಮಹಾಪಾಪಾ
ಮುಕ್ತಿಮಂತೇ ವ್ರಜೇತ ಚ ॥೧೩॥

ಯಸ್ತು ಚಂದನಪಂಕೇನ ಲಿಂಗಮೇತದ್ವಿಲೇಪಯೇತ್ ।
ಕರ್ಪೂರಾಗರುಕಸ್ತೂರೀಮಿಶ್ರೈರ್ವಾ ಯಕ್ಷಕರ್ದಮೈಃ ॥೧೪॥

ತಾಲವೃಂತೈರ್ವೀಜಯಿತ್ವಾಗ್ನಿಷ್ಟೋಮಫಲಭಾಗ್ಭವೇತ್ ।
ಬಿಲ್ವಪತ್ರೈಶ್ಚ ಪದ್ಮೈಶ್ಚ ಕಲ್ಹಾರೈಶ್ಚಂಪಕೈಸ್ತಥಾ ॥೧೫॥

ಪೂಜಯಿತ್ವಾ ಮಹಾಲಿಂಗಂ ಮಹಾಕಾಲಸ್ಯ ಶೂಲಿನಃ ।
ಸದ್ಯೋ ಮುಚ್ಯೇತ ಪಾಪೈಶ್ಚ ಗಾಣಾಪತ್ಯಂ ಲಭೇನ್ನರಃ ॥೧೬॥

ವಾದ ಕಥಾಶ್ರವಣ ಇವುಗಳನ್ನು ಕೇಳುವುದು. ಅಲ್ಲದೆ ಆ ಲಿಂಗವನ್ನು ಸ್ಪರ್ಶ ಮಾಡುವುದು, ಇವು ಸಕಲ ಪಾಪಗಳನ್ನು ಹೋಗಲಾಡಿಸುವುವು. ' ಅಯಂ ಮೇ ಹಸ್ತೋ ಭಗವಾನ್ " ಎಂಬ ರುದ್ರಮಂತ್ರಪೂರ್ವಕವಾಗಿ ಆ ಲಿಂಗವನ್ನು ಸ್ಪರ್ಶ ಮಾಡಿದರೆ ವಿಶೇಷವಾದ ಫಲವುಂಟು. ॥೧೧-೧೨॥

ಚೈತ್ರ, ಮಾಘ ಮತ್ತು ಆಷಾಢಮಾಸಗಳ ಪೂರ್ಣಿಮಾತಿಥಿಯಲ್ಲಿ ಶಿವ ಲಿಂಗವನ್ನು ವಿಶೇಷವಾಗಿ ಪೂಜಿಸುವ ಮಾನವನು ಸಕಲ ಮಹಾಪಾಪಗಳನ್ನೂ ಕಳೆದುಕೊಂಡು ಕೊನೆಗೆ ಮುಕ್ತಿಯನ್ನೈದುವನು. ॥೧೩॥

ಚಂದನಗಂಧದಿಂದಲಾಗಲೀ, ಕರ್ಪೂರ, ಅಗರು, ಕಸ್ತೂರೀ ಇವುಗಳಿಂದ ಮಿಶ್ರವಾದ ಯಕ್ಷಕರ್ದಮ (ದಶಾಂಗ) ಗಳಿಂದಲಾಗಲೀ, ಆ ಶಿವಲಿಂಗವನ್ನು ಲೇಪನ ಮಾಡಿ, ಹಾಗೆಯೇ ಬೀಸಣಿಗೆಗಳಿಂದ ಬೀಸುವ ಮಾನವನು ಅಗ್ನಿಷ್ಟೋಮಯಾಗದ ಫಲವನ್ನು ಪಡೆಯುತ್ತಾನೆ. ॥೧೪॥

ಇದೂ ಅಲ್ಲದೆ ಬಿಲ್ವಪತ್ರೆ, ಕಮಲ, ಕಲ್ಹಾರ, ಸಂಪಿಗೆ ಈ ಹೂವುಗಳಿಂದ ಮಹಾಕಾಲನೆಂಬ ಸಂಜ್ಞೆಯುಳ್ಳ ತ್ರಿಶೂಲಾಯುಧಧರನಾದ ಶಿವನ ಮಹಾಲಿಂಗ ವನ್ನು ಭಕ್ತಿಪುರಸ್ಸರವಾಗಿ ಪೂಜಿಸಿದ ಮಾನವನು ಕೂಡಲೇ ಸಕಲ ಪಾಪ ಗಳಿಂದಲೂ ಮುಕ್ತನಾಗುವನಲ್ಲದೆ ಅನಂತರ ಗಣಾಧಿಪತಿಯೂ ಆಗುತ್ತಾನೆ. ॥೧೫-೧೬॥

ಅತ್ರೋಪೋಷ್ಯ ಮಹಾದೇವಂ ದೃಷ್ಟ್ವಾ ಸಾಯಂ ಹವಿಷ್ಯಭುಕ್ ।
ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥೧೭॥

ಕ್ಷಿಪ್ರಾನದ್ಯುದಕೇ ಸ್ನಾತ್ವಾ ಸಂತರ್ಪ್ಯ ಪಿತೃದೇವತಾಃ ।
ಭೋಜಯಿತ್ವಾ ದ್ವಿಜಾಂಶ್ಚೈವಾನ್ಭಕ್ಷ್ಯಭೋಜ್ಯೈರನೇಕಶಃ ॥೧೮॥

ಕೋಟಿಭೋಜ್ಯಫಲಂ ತಸ್ಯ ಕ್ಷೇತ್ರೇಽಸ್ಮಿಂಶ್ಚೈವಸತ್ತಮ ।
ದತ್ವಾಥ ತಂಡುಲಂ ಧಾನ್ಯಂ ತಿಲಾನ್ಮುದ್ಗಾಂಸ್ತಥಾಢಕಾನ್ ॥೧೯॥

ಕ್ಷೀರಂ ದಧಿಘೃತಂ ಕ್ಷೌದ್ರಂ ಶರ್ಕರಾಂ ವಾ ಫಲಾನಿ ಚ ।
ರಂಭಾಪನಸಜಂಬೀರನಾರಿಕೇಲೇಕ್ಷುಸಾರಕಂ ॥೨೦॥

ದತ್ವಾ ಶಿವಾಯ ಸ ಭವೇನ್ನಿಷ್ಪಾಪೋ ನಾತ್ರ ಸಂಶಯಃ ।
ಸುಶೋಭೇತ ಸ ವೈ ಮರ್ತ್ಯೋ ಮೇಘಮುಕ್ತ ಇವೋಡುರಾಟ್ ॥೨೧॥

---

ಸಾಯಂಕಾಲದವರೆಗೂ ಉಪವಾಸಮಾಡಿ ಆ ಮಹಾದೇವನನ್ನು ದರ್ಶನ ಮಾಡಿ, ಅನಂತರ ಹವಿಸ್ಸನ್ನು (ಆ ಪರಶಿವನಿಗೆ ನಿವೇದನಮಾಡಿದ ಹವಿರ್ಭಾಗವನ್ನು) ಊಟಮಾಡುವವನು ಬ್ರಹ್ಮಹತ್ಯಾ, ಸುರಾಪಾನ ಮೊದಲಾದ ಪಂಚಮಹಾ ಪಾತಕಗಳನ್ನೂ ಕಳೆದುಕೊಳ್ಳುತ್ತಾನೆ. (ಬ್ರಹ್ಮಹತ್ಯಾ, ಸುರಾಪಾನ, ಸ್ವರ್ಣ ಸ್ತೇಯ, ಗುರುಪತ್ನೀಗಮನ ಮತ್ತು ಈ ನಾಲ್ವರ ಸಹವಾಸ ಇವು ಪಂಚಮಹಾ ಪಾತಕಗಳೆನಿಸುವುವು.) ॥೧೭॥

ಶೈವವರ್ಯನೇ, ಸಮೀಪದಲ್ಲಿ ಹರಿಯುತ್ತಿರುವ ಕ್ಷಿಪ್ರಾನದಿಯ ನೀರಿನಲ್ಲಿ ಸ್ನಾನ ಮಾಡಿ, ಪಿತೃಗಳನ್ನೂ ಮತ್ತು ದೇವತೆಗಳನ್ನೂ ಸಂತೋಷಗೊಳಿಸಿ, ಇದೇ ಮಹಾ ಕಾಲಕ್ಷೇತ್ರದಲ್ಲಿ ನಾನಾವಿಧವಾದ ಭಕ್ಷ್ಯಭೋಜ್ಯಗಳೊಡನೆ ಅನೇಕಮಂದಿ ಬ್ರಾಹ್ಮಣರಿಗೆ ಭೋಜನಮಾಡಿಸಿದವನಿಗೆ ಕೋಟಿಮಂದಿ ಬ್ರಾಹ್ಮಣರಿಗೆ ಭೋಜನಮಾಡಿಸಿದ ಫಲವುಂಟಾಗುವುದು. ॥೧೮॥

ಅಕ್ಕಿ, ಇತರ ಧಾನ್ಯಗಳು, ಎಳ್ಳು, ಹೆಸರು, ತೊಗರಿ, ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ, ಬಾಳೆಹಣ್ಣು, ಹಲಸು, ನಿಂಬೆ, ತೆಂಗಿನಕಾಯಿ, ಕಬ್ಬಿನ ಹಾಲು ಇವುಗಳನ್ನು ಪರಶಿವನಿಗೆ ಈ ಮಹಾಕಾಲಕ್ಷೇತ್ರದಲ್ಲಿ ಸಮರ್ಪಣೆ ಮಾಡುವ ಮಾನವನು ಪಾಪರಹಿತನಾಗುವನಲ್ಲದೇ ಮೇಘಮಂಡಲದಿಂದ ಮರೆ

ಬುದ್ಧಿಪೂರ್ವಕೃತೈಃ ಪಾಪೈಸ್ತತ್ಕ್ಷಣಾದೇವ ಮುಚ್ಯತೇ ।
ಕಾಪಿಲೇನಾಥ ಪಯಸಾ ಯೋಽಭಿಷಿಂಚೇನ್ಮಹೇಶ್ವರಂ ॥೨೨॥

ಸ ಪುನಸ್ತನ್ಯಪಯಸಾ ಸ್ವೋದರಂ ನಾಭಿಷಿಂಚತಿ ।
ಘೃತೇನ ದೀಪಾನ್ ಪ್ರಜ್ವಾಲ್ಯ ಕಾರ್ತಿಕೇ ತು ವಿಶೇಷತಃ ॥೨೩॥

ಸೋಮವಾರೇ ತ್ರಯೋದಶ್ಯಾಂ ಪ್ರದೋಷೇ ಪರ್ವಣೋರ್ದ್ವಯೋಃ ।
ಸಂಕ್ರಾಂತೌ ಚ ವ್ಯತೀಪಾತೇ ಅಯನೇ ಗ್ರಹಣೇ ತಥಾ ॥೨೪॥

ದತ್ವಾ ದೇವಂ ಮಹಾಕಾಲಂ ಪೂಜ್ಯ ಮುಕ್ತೋ ಭವೇನ್ನರಃ ।
ಶತರುದ್ರೀಯಮಂತ್ರೈಶ್ಚ ಯೋಽಭಿಷಿಂಚೇನ್ಮಹೇಶ್ವರಂ ॥೨೫॥

ಧಾರಾಪಾತ್ರೈಸ್ತಥಾ ಭೃಂಗೈಃ ಶಂಖೈಶ್ಚೈವಾಥ ಪಾಂಡರೈಃ ।
ಸಹಸ್ರಧಾರಾಕಲಶೈಃ ಶತಧಾರಾದಿಕೈರಪಿ ॥೨೬॥

---

ಮಾಡಲ್ಪಡದಿರುವ ಚಂದ್ರನಂತೆ ದಿವ್ಯಕಾಂತಿಯಿಂದ ಶೋಭಿಸುತ್ತಾನೆ. ಇದರಲ್ಲಿ ಸಂಶಯವಿಲ್ಲ. ||೧೯-೨೦-೨೧||

ಮಾನವನು ಬುದ್ಧಿಪೂರ್ವಕವಾಗಿ ತಾನು ಮಾಡಿದ ಪಾಪಗಳಿಂದ ಕೂಡಲೇ ಬಿಡುಗಡೆಹೊಂದುತ್ತಾನೆ. ಕಪಿಲವರ್ಣದಗೋವಿನ ಹಾಲಿನಿಂದ ಮಹಾ ಕಾಲಸಂಜ್ಞಕನಾದ ಮಹೇಶ್ವರನಿಗೆ ಅಭಿಷೇಕಮಾಡುವ ಮಾನವನು ಪುನಃ ತನ್ನ ತಾಯಿಯ ಮೊಲೆಹಾಲನ್ನು ಕುಡಿಯದಂತೆ (ಅಂದರೆ ಪುನರ್ಜನ್ಮ ಹೊಂದದೇ) ಮುಕ್ತನಾಗುವನು. ||೨೨||

ಪ್ರತಿನಿತ್ಯವೂ ತುಪ್ಪದ ದೀಪಗಳನ್ನು ಶಿವಾಲಯದಲ್ಲಿ ಪ್ರಜ್ವಲಿಸುವಂತೆ ಹೊತ್ತಿಸಿರುತ್ತಲೂ, ವಿಶೇಷವಾಗಿ ಕಾರ್ತಿಕಮಾಸ, ಸೋಮವಾರ, ತ್ರಯೋದಶೀ, ಪ್ರದೋಷ ಕಾಲ, ಪೂರ್ಣಿಮಾ, ಅಮಾವಾಸ್ಯೆ (ಪರ್ವಗಳು) ಸೌರಸಂಕ್ರಾಂತಿದಿನಗಳು, ವ್ಯತೀಪಾತ, ದಕ್ಷಿಣಾಯನ, ಉತ್ತರಾಯಣ, ಸೂರ್ಯಚಂದ್ರಗ್ರಹಣಕಾಲ ಇವೇ ಮೊದಲಾದ ಪುಣ್ಯದಿವಸಗಳಲ್ಲಿ ದೀಪಗಳ ಮಾಲೆಯನ್ನು ಆ ಪರಮೇಶ್ವರನಿಗೆ ಸಮರ್ಪಣೆ ಮಾಡುತ್ತಾ ಭಕ್ತಿಯಿಂದ ಪೂಜೆಮಾಡುವ ಮಾನವರು ಮೋಕ್ಷವನ್ನೈದುವರು. ||೨೩-೨೪||

ಧಾರಾಕಾರವಾಗಿ ನೀರುಬೀಳುವಂತೆ ಮಾಡಿರುವ ಪಾತ್ರೆಗಳು, ಕೊಂಬುಗಳು, ಶುಭ್ರವರ್ಣವುಳ್ಳ ಶಂಖ, ಸಾವಿರಧಾರೆ ಮತ್ತು ನೂರುಧಾರೆಗಳು ಒಟ್ಟಿಗೆ

ಶತಧಾರಂ ಸಹಸ್ರಧಾರಂ ಮಂತ್ರೈರ್ಯಸ್ತ್ವಭಿಷಿಂಚಯೇತ್ ।
ಶೋಧಿತೈರ್ವಾಸಿತೈರ್ನೀರೈರ್ಧಾರಯಾ ವೃತ್ತಸೂಕ್ಷ್ಮಯಾ ॥೨೭॥

ಧಾರಾಂ ಶಿವಶಿರೋಲಗ್ನಾಮವಿಚ್ಛಿನ್ನಾಂ ಪ್ರಕಲ್ಪಯೇತ್ ।
ಸಂತತಿಂ ಪಶುಪುತ್ರಾಂಶ್ಚ ಅವಿಚ್ಛಿನ್ನಂ ಲಭೇತ ಸಃ ॥೨೮॥

ಸುದುರ್ಲಭಕರಂ ಜ್ಞಾನಂ ಲಭತೇ ನಾತ್ರ ಸಂಶಯಃ ।
ಇತ್ಥಂ ಶೈವೇನ ಸಂವಾದಂ ಕೃತ್ವಾ ಬ್ರಹ್ಮಾದಯಃ ಸುರಾಃ ॥೨೯॥

ನಾರದಾದ್ಯೈರ್ಮುನಿಶ್ರೇಷ್ಠೈಃ ಸಾರ್ಧಂ ಗಂಧರ್ವಕಿಂನರೈಃ ।
ಸಿತಭಸ್ಮಾಕ್ತತನವೋ ರುದ್ರಾಕ್ಷವರಭೂಷಣಾಃ ॥೩೦॥

ಮಹಾಕಾಲಾಲಯಂ ದೇವಾ ಯಯುರ್ಬಿಲ್ವಾದಿಪಾಣಯಃ ।
ಮಹಾಪಚಿತಿಸಂಭಾರಾನ್ಕಾಮಧೇನೂಧಸೋದ್ಭವೈಃ ॥೩೧॥

---

ಬೀಳುವಂತೆ ರಚಿಸಿರುವ ಪಾತ್ರೆಗಳು ಇವೇ ಮೊದಲಾದ ಪಾತ್ರೆಗಳಿಂದ ಚೆನ್ನಾಗಿ ಶೋಧಿಸಿ, ಸುವಾಸನೆಯುಳ್ಳದ್ದನ್ನಾಗಿ ಮಾಡಿ, ಅತಿ ಸೂಕ್ಷ್ಮವಾದ ಧಾರಾರೂಪವಾಗಿ ಶತರುದ್ರೀಯ ಮಂತ್ರೋಚ್ಚಾರಣೆಮಾಡುತ್ತಾ ಅವಿಚ್ಛಿನ್ನವಾಗಿ ಆ ಮಹೇಶ್ವರನ ತಲೆಯಮೇಲೆ ನೀರು ಸುರಿಯುತ್ತಿರುವಂತೆ ಅಭಿಷೇಕಮಾಡುವ ಮಾನವನು, ಈ ಲೋಕದಲ್ಲಿ ಗೋವುಗಳು, ಪುತ್ರರು ಇವೇ ಮುಂತಾದ ಸಕಲ ಸಂಪತ್ತುಗಳನ್ನೂ ಎಡಬಿಡದೇ ಹೊಂದುತ್ತಾನೆ. ||೨೫-೨೬-೨೭-೨೮||

ಇದಲ್ಲದೆ ಸಾಧಾರಣರಾದವರಿಗೆ ಸುಲಭವಾಗಿ ದೊರೆಯದಂತಹ ದಿವ್ಯ ಜ್ಞಾನವನ್ನೂ ಪಡೆಯುತ್ತಾನೆ. ಇದರಲ್ಲಿ ಸಂದೇಹವಿಲ್ಲವೆಂದು ಬ್ರಹ್ಮಾದಿದೇವತೆಗಳು ಆ ಶೈವನೊಡನೆ ಸಂಭಾಷಣೆ ನಡೆಸಿ ನಾರದಾದಿ ಮುನಿಶ್ರೇಷ್ಠರೊಡನೆಯೂ, ಗಂಧರ್ವ ಮತ್ತು ಕಿಂನರ ಇವರೊಡನೆಯೂ ಅಲ್ಲಿಂದ ಹೊರಟು ಶುಭ್ರವಾದ ಭಸ್ಮವನ್ನು ಶರೀರಕ್ಕೆ ಧರಿಸಿ, ಶ್ರೇಷ್ಠವಾದ ರುದ್ರಾಕ್ಷಮಾಲಾಭರಣಗಳನ್ನು ಕೊಟ್ಟು ಕೈಯ್ಯಲ್ಲಿ ಬಿಲ್ವ ಮುಂತಾದ ಪೂಜಾಸಾಧನಗಳನ್ನು ಹಿಡಿದು ಆ ಮಹಾಕಾಲೇಶ್ವರನ ಗುಡಿಗೆ ಪ್ರವೇಶಮಾಡಿದರು. ||೨೯-೩೦||

ಕಾಮಧೇನುವಿನ ಕೆಚ್ಚಲಿನಿಂದ ಅಪಾರವಾಗಿ ಲಬ್ಧವಾದ ಪೂಜಾಸಾಮಗ್ರಿಗಳನ್ನು ಹಿಡಿದು, ಅವುಗಳಲ್ಲಿ ನೊರೆಸಹಿತವಾದ ಹಾಲು, ಗರಣೆ ಗರಣೆಯಾದ ಮೊಸರು,

ಸಫೇನಕ್ಷೀರಧಾರಾಭಿಃ ರುದ್ರಸೂಕ್ತೈರಸೇಚಯನ್ ।
ದಧಿಮಂಡೈರ್ಘೃತೈರ್ದಿವ್ಯೈರ್ಮಧುನಾ ಸಿತಯಾಪಿ ಚ ॥೩೨॥

ನಾರಿಕೇಲಾಮ್ರಸರಸೈರ್ಮೋಚಾಜಂಬೀರಪಾನಸೈಃ ।
ತತ್ತದ್ರಸೈರ್ಮಹಾದೇವಂ ವಿವಿಧೈರಭಿಷೇಚಯನ್ ॥೩೩॥

ಗಂಧಕರ್ಪೂರಪುಷ್ಪೋತ್ಥೈಃ ಸ್ವರ್ಣರತ್ನೈರ್ಜಲೈಸ್ತಥಾ ।
ರೌದ್ರೈಃ ಋಕ್ಸಾಮಯಜುಷಾಂ ಗಣೈರಾಥರ್ವಣೈರಪಿ ॥೩೪॥

ಪಂಚಬ್ರಹ್ಮಭಿರೀಶಾನಂ ಸುಗಂಧಿಂ ಗಂಧವಾಸಿತೈಃ ।
ಪಯೋಭಿರಮೃತಾಸ್ವಾದೈಃ ಪಾಟಲ್ಯಗರುವಾಸಿತೈಃ ॥೩೫॥

ನಾನಾವಾದಿತ್ರನಿನದಾನ್ನಿಲಿಂಪಾಃ ಸಮಘೋಷಯನ್ ।
ಸ್ನಾನಕಾಲೇ ಮಹೇಶಸ್ಯ ಜಯಶಬ್ದೈಶ್ಚ ಪುಷ್ಕಲೈಃ ॥೩೬॥

ದಿವ್ಯಸುಗಂಧಭರಿತವಾದ ತುಪ್ಪ, ಮನೋಹರವಾದ ಜೇನು, ಉತ್ತಮವಾದ ಕಲ್ಲು ಸಕ್ಕರೆ ಇವೇ ಮುಂತಾದ ಪಂಚಾಮೃತ ದ್ರವ್ಯಗಳಿಂದಲೂ, ಎಳನೀರು, ಮಾವು ಇವುಗಳ ದಿವ್ಯರಸಗಳಿಂದಲೂ, ಬಾಳೆ, ನಿಂಬೆ, ಹಲಸು ಈ ಹಣ್ಣುಗಳ ರಸಗಳಿಂದಲೂ ರುದ್ರಸೂಕ್ತಮಂತ್ರಪೂರ್ವಕವಾಗಿ ಮಹಾದೇವನಿಗೆ ಅಭಿಷೇಕಮಾಡಿದರು. ||೩೧-೩೨-೩೩||

ಗಂಧ, ಕರ್ಪೂರ ಮತ್ತು ಹೂವು ಇವುಗಳಿಂದ ಯುಕ್ತವಾಗಿಯೂ, ಸುವರ್ಣ ಮತ್ತು ರತ್ನ ಇವುಗಳಿಂದ ಕೂಡಿಯೂ ಇರುವ ಶುದ್ಧವಾದ ನೀರಿನಿಂದ ಆ ದೇವತೆಗಳು ರುದ್ರಸಂಬಂಧಿಯಾದ ಋಕ್, ಸಾಮ, ಯಜುಸ್ಸು ಮತ್ತು ಅಥರ್ವಣ ಈ ಮಂತ್ರೋಚ್ಚಾರಣಪೂರ್ವಕವಾಗಿ ಮಹಾದೇವನಿಗೆ ಅಭಿಷೇಕಮಾಡಿದರು. ಸದ್ಯೋಜಾತಾದಿ ಪಂಚಬ್ರಹ್ಮಮಂತ್ರದಿಂದ ಈಶ್ವರನಿಗೆ ನೀರೆರೆದರು. ಸುಗಂಧ ಭರಿತವಾದ ನೀರಿನಿಂದ ಸುಗಂಧಿಸಂಜ್ಞಕನಾದ ಪರಮೇಶ್ವರನಿಗೆ ಅಭಿಷೇಕಮಾಡಿದರು. ಅಗರು, ಚಂದನ ಮುಂತಾದ ಸುಗಂಧದ್ರವ್ಯಗಳಿಂದ ಮಿಶ್ರವಾಗಿ ಅಮೃತಕ್ಕೆ ಸಮಾನವಾಗಿರುವ ಶುದ್ಧೋದಕದಿಂದ ಆ ಮಹೇಶನಿಗೆ ಅಭಿಷೇಕಮಾಡುತ್ತಾ, ಅಭಿಷೇಕಕಾಲದಲ್ಲಿ ನಾನಾವಿಧವಾದ ವಾದ್ಯಧ್ವನಿಗಳನ್ನೂ, ಅಪಾರವಾದ ಜಯಧ್ವನಿಗಳನ್ನೂ ಮಾಡಿದರು. ||೩೪-೩೫-೩೬||

ಸ್ನಾಪ್ಯ ವಸ್ತ್ರೈರ್ವೇಷ್ಟಯಿತ್ವಾ ಮೃದುಕೌಶೇಯಸಂಭವೈಃ ।
ಚಂದನೇನೈವ ಸಂಲಿಪ್ಯ ಲಿಂಗಮಾಪೀಠಮುತ್ತಮಂ ॥೩೭॥

ನವರತ್ನ ಚಿತಾನೇಕಭೂಷಣೈರ್ಭೂಷಯಂತ್ಸುರಾಃ ।
ನಿಧನೇತ್ಯಾದಿಭಿರ್ಮಂತ್ರೈಃ ಶ್ರೀಪತ್ರೈಃ ಪೂಜಯಂಸ್ತದಾ ॥೩೮॥

ಪಂಕಜೈಶ್ಚಂಪಕೈರರ್ಕೈರ್ಮಂದಾರಕರವೀರಕೈಃ ।
ಬಕೈರ್ದ್ರೋಣೈಶ್ಚ ಧತ್ತೂರೈರ್ನೀಲರಕ್ತೋತ್ಪಲೈಸ್ತಥಾ ॥೩೯॥

ಸಹಸ್ರನಾಮಭಿಃ ಪುಷ್ಪೈರ್ಧೂಪದೀಪೈರ್ಮನೋಹರೈಃ ।
ದೀಪೈರ್ವಿದೀಪಯಾಮಾಸುರ್ಮಹಾಕಾಲಶಿವಾಲಯಂ ॥೪೦॥

ಧೂಪೈರಗರುಜೋದ್ಭೂತೈರ್ಘಮುಘ್ಘುಮಿತದಿಕ್ತಟಂ ।
ನೈವೇದ್ಯೈರ್ವಿವಿಧೈರ್ಹೃದ್ಯೈಃ ಸೂಪಾಪೂಪಾದಿರಾಶಿಭಿಃ ॥೪೧॥

ಈ ರೀತಿ ವಿಜೃಂಭಣೆಯಿಂದ ಅಭಿಷೇಕಮಾಡಿದ ನಂತರ ಮೃದುವಾದ ರೇಷ್ಮೆಯ ವಸ್ತ್ರಗಳನ್ನು ಆ ಶಿವಲಿಂಗಕ್ಕೆ ಉಡಿಸಿ, ಪೀಠದವರೆಗೂ ಆ ಮಹಾಕಾಲೇಶ್ವರನ ಲಿಂಗಕ್ಕೆ ದಿವ್ಯಚಂದನಗಂಧವನ್ನು ಲೇಪಿಸಿ, ತರುವಾಯ ಆ ದೇವತೆಗಳು ನವರತ್ನಖಚಿತವಾದ ಅನೇಕ ಆಭರಣಗಳಿಂದ ಆ ಶಿವಲಿಂಗವನ್ನು ಅಲಂಕರಿಸಿದರು. ||೩೭||

ಆ ಮೇಲೆ, "ನಿಧನಪತಯೇ ನಮಃ" ಮುಂತಾದ ಮಂತ್ರಗಳನ್ನುಚ್ಚರಿಸುತ್ತಾ ಬಿಲ್ವಪತ್ರೆ, ತಾವರೇಹೂ, ಸಂಪಿಗೆ, ಎಕ್ಕ, ಪಾರಿಜಾತ, ಕಣಿಗಲೆ, ಬಕಪುಷ್ಪ, ದ್ರೋಣ (ತುಂಬೇಹೂ) ಧತ್ತೂರ, ಕನ್ನೈದಲೆ, ಕೆಂಪುನೈದಿಲೆ ಮುಂತಾದ ಹೂಗಳಿಂದ ಸಹಸ್ರನಾಮಪೂರ್ವಕವಾಗಿ ಪೂಜೆಮಾಡಿ, ಮನೋಹರವಾದ ಧೂಪ ಮತ್ತು ದೀಪ ಇವುಗಳಿಂದ ಆ ಮಹಾಕಾಲೇಶ್ವರನ ನಿಲಯವೇ ಬೆಳಗುವಂತೆ ಮಾಡಿದರು. ||೩೮-೩೯-೪೦||

ಎಲ್ಲಾ ದಿಕ್ಕುಗಳಲ್ಲಿಯೂ ಹರಡಿ ಘಮುಘುಮಾಯಮಾನವಾಗಿರುವ ಅಗರುಧೂಪಗಳನ್ನು ಹಾಕಿ, ನಾನಾವಿಧವಾದ, ಹೃದಯಂಗಮವಾಗಿರುವ ಸೂಪ (ತೊವ್ವೆ) ಅಪೂಪ(ಒಬ್ಬಟ್ಟು) ಮೊದಲಾದ ಭಕ್ಷ್ಯರಾಶಿಗಳು, ನೂರಾರು ಕೊಡಗಳಲ್ಲಿ

ಕ್ಷೀರಾಜ್ಯಕುಂಭೈಃ ಶತಶಃ ಪಾಯಸಾನಾಂ ಘಟೀಶತೈಃ
ದಧಿಖಂಡಾದಿಭಾಂಡೈಶ್ಚ ಶಾರ್ಕರಾಪಂಕಪಂಕಿಲೈಃ ॥೪೨॥

ತಾಂಬೂಲಪರ್ವತಾನೇಕಕ್ರಮುಕಾನಾಂ ಚ ರಾಶಿಭಿಃ ।
ಮುಖವಾಸಕರೈರನ್ಯೈರ್ಮೃಗನಾಭಿವಿರಾಜಿತೈಃ ॥೪೩॥

ಲವಂಗೈಲಾಮುಖರಿತೈರ್ಜಾತೀಪತ್ರಫಲೈರಪಿ ।
ಸ್ವಚ್ಛಪತ್ರಯುತಾಪಾರಮರೀಚಿಖದಿರೈಸ್ತಥಾ ॥೪೪॥

ನೈವೇದ್ಯಮಾದ್ಯಂ ಹೃದ್ಯಂ ಚ ದತ್ವಾ ದಿವಿಷದಃ ಶಿವಂ ।
ನೀರಾಜನೈಸ್ತಥಾ ಪುಣ್ಯೈಶ್ಛತ್ರಚಾಮರದರ್ಪಣೈಃ ॥೪೫॥

ವ್ಯಜನೈಃ ಸಂನಿಷೇವ್ಯೇಶಂ ನಾನಾವಾದ್ಯರವೈರಪಿ ।
ರಂಭಾದ್ಯಪ್ಸರಸಸ್ತತ್ರ ನನೃತುಃ ಶಂಕರಾಗ್ರತಃ ॥೪೬॥

ತುಂಬಿರುವ ಹಾಲು ಮತ್ತು ತುಪ್ಪ, ಅನೇಕ ಪಾಯಸದ ಗಡಿಗೆಗಳು, ಸಕ್ಕರೆಯಿಂದ ಮಿಶ್ರವಾದ ಕೆನೆಮೊಸರಿನಿಂದ ಭರಿತವಾದ ನೂರಾರು ಕೊಡಗಳು ಇವುಗಳನ್ನು ಆ ಮಹಾಕಾಳೇಶ್ವರನಿಗೆ ನಿವೇದನ ಮಾಡಿದರು. ॥೪೧-೪೨॥

ಪರ್ವತಕ್ಕೆ ಸಮಾನವಾದ ತಾಂಬೂಲವನ್ನು ಅನೇಕ ಅಡಿಕೆಯ ರಾಶಿಗಳೊಡನೆಯೂ, ಬಾಯಿಗೆ ಸುವಾಸನೆಯನ್ನುಂಟುಮಾಡುವ ಇನ್ನಿತರ ಕಸ್ತೂರೀ, ಲವಂಗ, ಏಲಕ್ಕಿ, ಜಾಯಿಕಾಯಿ, ಜಾಯಿಪತ್ರೆ, ಮೆಣಸು, ಕಾಚು ಇವುಗಳೊಡನೆಯೂ ಸಮರ್ಪಿಸಿ, ಆ ಮಹಾದೇವನಿಗೆ ತಾಂಬೂಲನಿವೇದನಮಾಡಿದರು. ॥೪೩-೪೪॥

ಅನಂತರ ಪುಣ್ಯಕರವಾದ ನೀರಾಜನಗಳನ್ನು (ಆರತಿ) ಎತ್ತಿ, ಛತ್ರಿ, ಚಾಮರ, ಕನ್ನಡಿ, ಬೀಸಣಿಗೆ ಇವೇ ಮುಂತಾದವುಗಳಿಂದ ಸೇವಿಸಿ, ನಾನಾವಿಧವಾದ ವಾದ್ಯಧ್ವನಿಗಳಿಂದ ಸಂತೋಷವನ್ನುಂಟುಮಾಡಿದರು. ಆಗ ರಂಭಾದ್ಯಪ್ಸರೆಯರು ಆ ಶಂಕರನ ಮುಂಭಾಗದಲ್ಲಿ ನಿಂತು ಮನೋಹರವಾಗಿ ನರ್ತನಗೈದರು. ॥೪೫-೪೬॥

ಜಗುಶ್ಚ ದೇವಗಂಧರ್ವಾ ನಾರದಾದ್ಯಾಶ್ಚ ಗಾಯಕಾಃ ।
ಮಹಾದೇವ ಪ್ರಸೀದೇತಿ ಶ್ರೀಮನ್ಮೃತ್ಯುಂಜಯೇತಿ ಚ ॥೪೭॥

ಸರಾಗಂ ಚ ಸಕಾಲಂ ಚ ಕಲಗೀತೈರತೋಷಯನ್ ।
ಮೂರ್ಛನಾಸ್ಥಾನವಿನ್ಯಾಸೈಃ ರುದ್ರವೀಣಾಕರಾಃ ಸುರಾಃ ॥೪೮॥

ಪ್ರದಕ್ಷಿಣನಮಸ್ಕಾರೈಃ ಸ್ತುತಿಭಿರ್ನರ್ತನೈಸ್ತಥಾ ।
ಕರತಾಡನಪೂರ್ವಂ ತೇ ತುಷ್ಟುವುಃ ಪರಮೇಶ್ವರಂ ॥೪೯॥

॥ ದೇವಾ ಊಚುಃ ॥

ಸರಿತ್ಪತಿನಿಷಂಗಿಣೇ ಕೃತಗಿರೀಂದ್ರಸದ್ಧನ್ವಿನೇ
ಧರಾಧರಣಸತ್ಫಣಿಪ್ರಥರಭೂತತತ್ಸಿಂಜಿನೇ ।
ರಮಾರಮಣಸಾಯಕೆ ಪ್ರಬಲಹಸ್ತ ತುಭ್ಯಂ ನಮೋ
ಮಹೋಕ್ಷವರವಾಹಿನೇ ಕೃತಗಣೇಂದ್ರಶೈಲಾದಿನೇ ॥೫೦॥

ದೇವತೆಗಳೂ ಗಂಧರ್ವರೂ ಮತ್ತು ನಾರದನೇ ಮೊದಲಾದ ಗಾಯಕರೂ ಸಹ, ಮಹಾದೇವ! ಪ್ರಸನ್ನನಾಗು, ಓ ಮೃತ್ಯುಂಜಯಸ್ವಾಮಿಯೇ, ನಮ್ಮನ್ನನುಗ್ರಹಿಸು, ಎಂದು ಸ್ತೋತ್ರಮಾಡಿದರು. ॥೪೭॥

ಕೆಲವು ಮಂದಿ ದೇವತೆಗಳು ರುದ್ರವೀಣೆಯಲ್ಲಿ ಸರಿಯಾಗಿ ಮೂರ್ಛನಾದಿ ವಿನ್ಯಾಸಗಳನ್ನನುಸರಿಸಿ, ರಾಗಾನುಗುಣವಾಗಿಯೂ, ಕಾಲಕ್ಕೆ ಸರಿಯಾಗಿಯೂ ಅವ್ಯಕ್ತಮಧುರಧ್ವನಿಗಳಿಂದ ಆ ಮಹಾದೇವನಿಗೆ ಸಂತೋಷವನ್ನುಂಟುಮಾಡಿದರು. ಎಲ್ಲರೂ ಪ್ರದಕ್ಷಿಣೆ, ನಮಸ್ಕಾರ, ಸ್ತೋತ್ರ ಮತ್ತು ನರ್ತನ ಇವುಗಳಲ್ಲಿ ಭಾಗಿಗಳಾಗಿ ಕೈ ಚಪ್ಪಾಳೆ ಹೊಡೆಯುತ್ತಾ ಆ ಪರಮೇಶ್ವರನನ್ನು ಈ ರೀತಿ ಸ್ತೋತ್ರಮಾಡಿದರು. ॥೪೮-೪೯॥

ಸಮುದ್ರರಾಜನಾದ ವರುಣನನ್ನೇ ಬತ್ತಳಿಕೆಯನ್ನಾಗಿಯೂ, ಮೇರುಪರ್ವತವನ್ನೇ ದೊಡ್ಡ ಧನುಸ್ಸನ್ನಾಗಿಯೂ, ಭೂಮಿಯನ್ನು ಹೊರಲು ಸಮರ್ಥವಾದ ಹೆಡೆಯಿಂದ ಶೋಭಿಸುತ್ತಿರುವ ಆದಿಶೇಷನನ್ನೇ ಹೆದೆಯನ್ನಾಗಿಯೂ ಮಾಡಿಕೊಂಡು, ಲಕ್ಷ್ಮೀರಮಣನಾದ ಆ ವಿಷ್ಣುವನ್ನೇ ಬಾಣದಂತೆ ಧರಿಸಿ ದೊಡ್ಡ ಎತ್ತನ್ನೇ ವಾಹನಮಾಡಿಕೊಂಡು ಶಿಲಾದನ ಮಗನಾದ ನಂದಿಕೇಶ್ವರನನ್ನೇ

ಭುಜಂಗವರಧಾರಿಣೇ ಧೃತಗರಾರ್ಧಕಂಠಾಯ ತೇ
ನಿಶಾಪತಿಕಲಾಧರ ಸುರತರಂಗಿಣೀಮೌಳಯೇ ।
ಮಹಾಂಗವದನೋಲ್ಲಸನ್ಮದವಿಲೋಕನೇ ತೇ ನಮೋ
ಜಲಂಧರಶಿರೋಽಬ್ಜನೀನಿಕೃತನಾಲಚಕ್ರಾಯ ತೇ ॥೫೦॥

ಕಪರ್ದಕೃತಬಂಧನೋಲ್ಲಸಿತಭೋಗಿಭೋಗಾಯ ತೇ
ತವಾಕ್ಷ್ಯನಲಕೋಣಭೂಕಣವಿದಗ್ಧಕಾಮಾಯ ತೇ ।
ಮಹಾಘಗಿರಿಮಸ್ತಕೆ ಪ್ರಹೃತಿನಾಮವಜ್ರಾಯ ತೇ
ಕರೀಂದ್ರವದನೋಲ್ಲಸತ್ಸ್ಫುಟಪದಾಯ ತುಭ್ಯಂ ನಮಃ ॥೫೨॥

ಗಣೇಂದ್ರನನ್ನಾಗಿ ಮಾಡಿಕೊಂಡಿರುವ ಮಹೇಶ್ವರನೇ, ನಿನಗೆ ನಮಸ್ಕಾರಮಾಡು ವೆವು. ॥೫೦॥

ದೇವ, ನೀನು ಸರ್ಪರಾಜನಾದ ಆದಿಶೇಷನನ್ನು ಧರಿಸಿರುವೆ. ಸಮುದ್ರ ಮಥನಕಾಲದಲ್ಲಿ ಜನಿಸಿದ ಮಹಾವಿಷವನ್ನು ಲೋಕರಕ್ಷಣಾರ್ಥವಾಗಿ ನಿನ್ನ ಅರ್ಧ ಕುತ್ತಿಗೆಯಲ್ಲಿ ನಿಲ್ಲಿಸಿರುವೆ ಚಂದ್ರಕಲಾಧರನೂ, ದೇವಗಂಗಾನದಿಯನ್ನು ತಲೆಯಲ್ಲಿ ಧರಿಸಿದವನೂ ನೀನೇ ಆಗಿರುವೆ. ದೊಡ್ಡ ಶರೀರವನ್ನೂ ವಿಶಾಲವಾದ ಮುಖ ವನ್ನೂ ಹೊಂದಿ ಸಕಲ ಪ್ರಪಂಚವನ್ನೂ ಮದವಿಶಿಷ್ಟವನ್ನಾಗಿ ನೀನು ನೋಡುತ್ತಿರುವೆ. ದುಷ್ಟನಾದ ಜಲಂಧರರಾಕ್ಷಸನ ತಲೆಯೆಂಬ ಕಮಲಪುಷ್ಪವನ್ನೂ ಅದರ ದಂಟನ್ನೂ ಕತ್ತರಿಸಿ ಧ್ವಂಸಮಾಡುವುದರಲ್ಲಿ ಚಕ್ರವಂತಿರುವ ನಿನಗೆ ನಮಸ್ಕಾರವು. ॥೫೧॥

ಸ್ವಾಮಿ, ನಿನ್ನ ಸಕಲ ಜಟಾಭಾರಗಳನ್ನೂ ಸರ್ಪದಿಂದ ಬಿಗಿದು ಕಟ್ಟಿರು ವುದರಿಂದ ಆ ದಿವ್ಯವಾದ ಸರ್ಪಶರೀರವೇ ಜಟಾಭಾಗದಲ್ಲಿ ಹೊಳೆಯುತ್ತಿರುವುದು ನಿನ್ನ ಫಾಲನೇತ್ರದ ಅಗ್ನಿಗೆ ಸಾಮಾನ್ಯ ಧೂಳಿನಂತೆ ಬಿದ್ದು ಮನ್ಮಥನು ಕ್ಷಣಕಾಲದಲ್ಲಿ ಭಸ್ಮವಾದನು. ಮಹಾಪಾತಕಗಳೆಂಬ ದೊಡ್ಡದೊಡ್ಡ ಪರ್ವತಶಿಖರಗಳನ್ನು ಹೊಡೆ ದುರುಳಿಸುವುದರಲ್ಲಿ ನೀನು ವಜ್ರಾಯುಧದಂತಿರುವ ಆ ಗಜಮುಖನ (ವಿಘ್ನೇಶ್ವರನ) ಸಾನ್ನಿಧ್ಯದಿಂದ ವಿಶೇಷವಾಗಿ ಹೊಳೆಯುತ್ತಿರುವೆ. ದಿವ್ಯವಾದ ಪಾದಗಳುಳ್ಳ ನಿನಗೆ ನಮಸ್ಕಾರಮಾಡುತ್ತೇವೆ. (ಲಿಂಗದ ಸಮೀಪದಲ್ಲಿ ಗಜವದನ ವಿಗ್ರಹವಿದ್ದುದರಿಂದ ಹೀಗೆ ವರ್ಣಿಸಲ್ಪಟ್ಟಿದೆ ಎಂದು ಹೇಳಬಹುದು.) ॥೫೨॥

ವಿಭೂತಿಪರಿಧೂಳನೋದ್ಧವಲಿತಾಂಗರಾಗಾಯತೇ
ಹರಿನ್ಮಣಿನಿಭಾಗಜಾಕೃತವಿಭಾಗದೇಹಾಯ ತೇ ।
ಪತಂಗನಯನೋದ್ಧತಪ್ರಬಲಚಂಡದಂಡಾಹತಿ
ಸ್ಫುಟದ್ದ್ವಿಜಸುತಾವನೇ ಭವಹರಾಯ ತುಭ್ಯಂ ನಮಃ ॥೫೩॥

ಸುರಾಸುರಮರುದ್ಗಣ ಪ್ರವರ ವಿಪ್ರವೃಂದಾರ್ಭಟೇ
ಕಟೀತಟಮೃಗಾಜಿನಪ್ರಬಲರಕ್ಷದೀಕ್ಷಾಮಣೇ ।
ಹವಿರ್ಮುಖಮುಖಾಮೃತಾಂಧಸುಮುಖೋರುದಂತೇಕ್ಷಣ
ಪ್ರಪಾತನಕರಾಯ ತೇ ಗಿರಿಶಯಾಯ ತುಭ್ಯಂ ನಮಃ ॥೫೪॥

ಇತ್ಥಂ ಸ್ತುತ್ವಾ ಮಹಾದೇವಂ ಮಹಾಕಾಲಂ ತದಾ ಸುರಾಃ ।
ಶಾಂಭವೈರ್ಮುನಿಭಿಃ ಸಾರ್ಧಂ ಬ್ರಹ್ಮಾದ್ಯಾಸ್ತೇ ಸುಧಾಂಧಸಃ ॥೫೫॥

---

ಪರಶಿವನೇ, ನಿನ್ನ ದೇಹವು ವಿಭೂತಿಯ ಲೇಪದಿಂದ ಶುಭ್ರವಾಗಿರುವುದು. ನಿನ್ನ ಎಡಭಾಗದಲ್ಲಿ ಇಂದ್ರನೀಲಮಣಿಯಂತೆ ಹೊಳೆಯುವ ಪಾರ್ವತಿಯು ಸದಾ ನೆಲಸಿರುವಳು. ನಿನ್ನ ಅಗ್ನಿನೇತ್ರದ ಉರಿಯಿಂದ ಮಾರ್ಕಂಡೇಯನನ್ನು ಎಳೆಯುತ್ತಿದ್ದ ಯಮನ ಗರ್ವವು ನಾಶವಾಯಿತು. ದ್ವಿಜಪುತ್ರನು ರಕ್ಷಿತನಾದನು. ಇಂತಹ ಮಹಾತ್ಮನೆನಿಸಿದ ಭವನಾಶಕನಾದ ಸ್ವಾಮಿಯೇ, ನಿನಗೆ ವಂದನೆ. ॥೫೩॥

ದೇವತೆಗಳು, ರಾಕ್ಷಸರು, ಮರುದ್ಗಣಗಳು ಉತ್ತಮರಾದ ಬ್ರಾಹ್ಮಣರು ಇವರೇ ಮುಂತಾದ ಜನಸಮೂಹವನ್ನು ರಕ್ಷಿಸುವುದರಲ್ಲಿ ದೀಕ್ಷಾಬದ್ಧನಾಗಿ ಅದಕ್ಕೋಸ್ಕರವೇ ಸೊಂಟಕ್ಕೆ ಜಿಂಕೆಯ ಚರ್ಮವನ್ನು ಕಟ್ಟಿ ಸಿದ್ಧವಾಗಿರುವ ಸ್ವಾಮಿಯೇ, ಹವಿಸ್ಸುಂಬುವ ಅಗ್ನಿಯೇ ಮುಂತಾದ ದೇವತೆಗಳ ದುಃಖವನ್ನು ಅಥವ ತೊಂದರೆಯನ್ನು ಕ್ಷಣಕಾಲದಲ್ಲಿ ಹೊಡೆದೋಡಿಸುವ ನೀನು ಯಾವಾಗಲೂ ಕೈಲಾಸಗಿರಿಯಲ್ಲಿಯೇ ವಾಸಮಾಡುತ್ತಿರುವೆ. ದೇವ, ಇದೋ ನಿನಗೆ ನಮಸ್ಕಾರ ಮಾಡುವೆವು. ॥೫೪॥

ಈ ರೀತಿ ಆ ದೇವತೆಗಳು ಮಹಾಕಾಲಸಂಜ್ಞಕನಾದ ಮಹೇಶ್ವರನನ್ನು ಭಕ್ತಿಪುರಸ್ಸರವಾಗಿ ಸ್ತೋತ್ರಮಾಡಿದ ಬಳಿಕ ಆ ಬ್ರಹ್ಮಾದಿದೇವತೆಗಳೆಲ್ಲರೂ ಶಂಭುಭಕ್ತರಾಗಿ ಅಲ್ಲಿ ನೆರೆದಿದ್ದ ಮುನಿಗಳೊಡನೆ ಆ ಪರಶಿವನಿಗೆ ನಿವೇದನ

ಶಿವನೈವೇದ್ಯಮಾಸ್ವಾದ್ಯ ಸುಧಾಧಿಕ್ಕಾರಿಣೋಽಭವನ್ ।
ತತಸ್ತೇ ವಿಬುಧಾಃ ಸರ್ವೇ ದದೃಶುರ್ವಸುಧಾಧಿಪಂ ॥೩೬॥

ನಾಮ್ನಾ ಚಿತ್ರರಥಂ ದೃಷ್ಟ್ವಾ ಸ್ಪರ್ಧತೇ ಯಃ ಶತಕ್ರತುಂ ।
ಭಸ್ಮರುದ್ರಾಕ್ಷವೀತಾಂಗಂ ಶಾಂಭವೈಃ ಪರಿವಾರಿತಂ ॥೩೭॥

ಮಹಾಕಾಲ ಮಹಾಲಿಂಗಂ ಧ್ಯಾಯಂತಮನಿಶಂ ಹೃದಾ ।
ರಂಭಾಧಿಕ್ಕಾರಿಭಿರ್ದಾರೈಃ ಕುಮಾರೈರ್ಮಾರಸಪ್ರಭೈಃ ॥೩೮॥

ಶೈವಾಮಾತ್ಯವರೈರ್ವೀರೈರ್ಭಟೈಸ್ತಾದೃಗ್ವಿಧೈರಪಿ ।
ಸುರಾಸ್ತೇ ನೃವರಶ್ರೇಷ್ಠಂ ಪರೀಕ್ಷ್ಯ ಬಹುಧಾಸ್ತಿಕಂ ॥೩೯॥

ಊಚುರಮ್ಲಾನವದನಾಃ ಪ್ರಾಂಜಲಿಂ ಪ್ರಣತಂ ನೃಪಂ ॥೪೦॥

ಮಾಡಿದ್ದ ಪ್ರಸಾದವನ್ನು ತಿಂದು, ಎಲ್ಲರೂ ಹಿಂದೆ ತಾವು ಪಾನಮಾಡುತ್ತಿದ್ದ ಅಮೃತವನ್ನು ಧಿಕ್ಕರಿಸಲು ಪ್ರಾರಂಭಿಸಿದರು. ॥೩೫॥

ಹೀಗೆ ಬ್ರಹ್ಮಾದಿದೇವತೆಗಳೆಲ್ಲರೂ ಶಿವನೈವೇದ್ಯವನ್ನು ಸ್ವೀಕರಿಸಿದ ಮೇಲೆ, ಭಸ್ಮ, ರುದ್ರಾಕ್ಷಿ ಇವುಗಳಿಂದಲಂಕೃತನಾಗಿ ಶಂಭುಭಕ್ತರಿಂದ ಸುತ್ತುವರಿಯಲ್ಪಟ್ಟು, ತನ್ನ ಕಾಂತಿಯಿಂದ ಇಂದ್ರನನ್ನು ಸರಿತೂಗುವಂತೆ ಪ್ರಕಾಶಿಸುತ್ತಾ, ಮನಸ್ಸಿನಲ್ಲಿ ಮಹಾಕಾಲಸಂಜ್ಞಕನಾದ ಮಹೇಶ್ವರನನ್ನು ಅನವರತವೂ ಧ್ಯಾನಮಾಡುತ್ತಿರುವ ಚಿತ್ರರಥಮಹಾರಾಜನನ್ನು ನೋಡಿದರು. ॥೩೬-೩೭॥

ಆ ಚಿತ್ರರಥಮಹಾರಾಜನು, ರಂಭೆಯನ್ನು ತನ್ನ ಸೌಂದರ್ಯದಿಂದ ತಿರಸ್ಕರಿಸುವಂತಿರುವ ರಾಣಿಯರಿಂದಲೂ, ಮನ್ಮಥನಿಗೆ ಸಮನಾದ ಸೌಂದರ್ಯವುಳ್ಳ ಮಕ್ಕಳಿಂದಲೂ, ಶಿವಭಕ್ತರೂ, ವೀರರೂ ಆದ ಮಂತ್ರಿಗಳಿಂದಲೂ ಮತ್ತು ಭಟರಿಂದಲೂ ಸುತ್ತುವರಿಯಲ್ಪಟ್ಟಿದ್ದನು. ಆ ದೇವತೆಗಳು ಮಾನವಶ್ರೇಷ್ಠನಾದ ಆ ಚಿತ್ರರಥನನ್ನು ನಾನಾರೀತಿಯಿಂದ ಪರೀಕ್ಷಿಸಿ, ಅವನು ಆಸ್ತಿಕನೆಂದು ತಿಳಿದು, ವಿನಯದಿಂದ ಕೈಜೋಡಿಸಿ, ನಮಸ್ಕಾರಮಾಡುತ್ತಿರುವ ಆ ರಾಜನನ್ನು ಕುರಿತು ಸಂತೋಷವನ್ನು ಹೊರಸೂಸುವ ಮುಖದಿಂದ ಇಂತೆಂದರು. ॥೩೮-೩೯-೪೦॥

ಧನ್ಯಸ್ತ್ವಮೇವ ಭೂಪಾಲ ಪಾಲಿತಾಖಿಲಭೂತಲ ।
ಭೂತಲಾಖಂಡಲಸ್ತ್ವಮೇವೈಕ ಆಷಾಢಾರ್ಚನತತ್ಪರಃ ॥೬೧॥

ತವ ಭಾಗ್ಯಸ್ಯ ನಾಂತೋಽಸ್ತಿ ಯತಃ ಶಿವಪರಾಯಣಃ ।
ಸಹಸ್ರಾಕ್ಷೋಽಯಮತ್ಯಂತಮಕ್ಷ್ಣಾಮಾಪ ಪರಂ ಫಲಂ ॥೬೨॥

ಅನ್ಯೇ ದ್ವಿಲೋಚನಾ ದೇವಾ ಭವದ್ದರ್ಶನಹರ್ಷಿತಾಃ ।
ಸ್ವರ್ಗೌಕಸಾಂ ವಚಃ ಶ್ರುತ್ವಾ ಕ್ಷ್ಮಾಪತಿಃ ಕ್ಷಮಯಾನ್ವಿತಃ ॥೬೩॥

ಭೂಯಃ ಪ್ರಹರ್ಷಿತೋ ದೇವಾನ್ಸಚೋ ವಕ್ತುಂ ಪ್ರಚಕ್ರಮೇ ।
ಸುರಸಂದರ್ಶನಾಸಾರಹರ್ಷವಾರಿಧಿಮಗ್ನಧೀಃ ॥೬೪॥

॥ ರಾಜೋವಾಚ ॥

ಇಂದ್ರಮಿತ್ರಾದಯೋ ದೇವಾ ಹರಿಪದ್ಮಜಪೂರ್ವಕಾಃ ।
ವರುಣಾಗ್ನ್ಯನಿಲಾಃ ಸರ್ವೇ ತ್ರಿನೇತ್ರಾಂಶಾಃ ಸುರೋತ್ತಮಾಃ ॥೬೫॥

---

ಎಲೈ ಚಿತ್ರರಥರಾಜನೇ, ಸಕಲ ಭೂಮಂಡಲವನ್ನೂ ಪರಿಪಾಲನೆಮಾಡು ತ್ತಿರುವ ನೀನೇ ಧನ್ಯನು, ನೀನೂ ಈ ಭೂಲೋಕದ ಇಂದ್ರನೇ ಸರಿ ! ಆಷಾಢ ಮಾಸದಲ್ಲಿ ಆಷಾಢ (ಪಾಪನಾಶಕ) ನೆನಿಸಿದ ಶಿವಪೂಜಾನಿರತನಾಗಿರುವ ನೀನೇ ಸರ್ವೋತ್ತಮನು. ॥೬೧॥

ಅಯ್ಯ ರಾಜಕುಲತಿಲಕನೇ, ಶಿವಪರಾಯಣನಾದ ನಿನ್ನ ಭಾಗ್ಯಕ್ಕೆ ಎಣೆಯೇ ಇಲ್ಲ. ಈಗ ಸಾವಿರ ನೇತ್ರಗಳುಳ್ಳ ಇಂದ್ರನೊಬ್ಬನು ಮಾತ್ರ ತನ್ನ ಸಾವಿರ ಕಣ್ಣುಗ ಳಿಗೂಉತ್ಕೃಷ್ಟವಾದ ಪ್ರಯೋಜನವನ್ನು ಹೊಂದಿದನು. ಉಳಿದ ದೇವತೆಗಳೆಲ್ಲರೂ ಕೇವಲ ನಿನ್ನ ಸಂದರ್ಶನದಿಂದ ಸಂತೋಷಗೊಂಡಿರುವರು (ಅಂದರೆ ನಿನ್ನನ್ನು ನೋಡಲು ಈ ಎರಡು ಕಣ್ಣುಗಳು ಸಾಲವು. ಇಂದ್ರನಂತೆ ನಮಗೂ ಸಾವಿರ ಕಣ್ಣು ಗಳಿದ್ದರೆ ಚೆನ್ನಾಗಿತ್ತೆಂದು ಭಾವವು) ಎಂದು ದೇವತೆಗಳು ಹೇಳಿದುದನ್ನು ಕೇಳಿ ಆ ಚಿತ್ರರಥಮಹಾರಾಜನು ತುಂಬಾ ಸಂತೋಷ ಹೊಂದಿ ಆ ದೇವತೆಗಳ ದರ್ಶನ ದಿಂದುಂಟಾದ ಆನಂದಸಮುದ್ರದಲ್ಲಿ ಮುಳುಗಿ, ವಿನಯದಿಂದ ಪುನಃ ಆ ದೇವತೆ ಗಳೊಡನೆ ಈ ರೀತಿ ಮಾತಾಡಲುಪಕ್ರಮಿಸಿದನು. ॥೬೨-೬೩-೬೪॥

ವಿಷ್ಣು, ಬ್ರಹ್ಮ ಇವರೇ ಮೊದಲಾದ ಇಂದ್ರ, ಸೂರ್ಯ, ವರುಣ, ಅಗ್ನಿ, ವಾಯು ದೇವತೆಗಳಿರಾ, ದೇವತೋತ್ತಮರಾದ ನೀವೆಲ್ಲರೂ ಮುಕ್ಕಣ್ಣನ ಅಂಶ

ಸನಾತನಾದ್ಯಾ ಯೋಗೀಂದ್ರಾ ನಾರದಾದ್ಯಾಃ ಸುರರ್ಷಯಃ ।
ಕೃತಕೃತ್ಯೋಽಸ್ಮಿ ಹೇ ದೇವಾ ಯುಷ್ಮದ್ದರ್ಶನತೋಽಧುನಾ ॥೬೬॥

ಶ್ಲಾಘ್ಯೋಽಹಂ ವಿಬುಧಶ್ರೇಷ್ಠಾಃ ಸರ್ವದಾ ನಾತ್ರ ಸಂಶಯಃ ।
ನ ಮತ್ತೋಽಭ್ಯಧಿಕಃ ಕಶ್ಚಿತ್ಪುಣ್ಯವಾನಿತಿ ಸಂಸ್ಥಿತಃ ॥೬೭॥

ಮಹಾಕಾಲಮಹೇಶಸ್ಯ ಕೃಪಯಾ ಮಯಿ ಸಂಸ್ಥಿತಾಃ ।
ಕಃ ಪೂಜ್ಯತೇ ಭವದ್ಭಿಸ್ತು ಧ್ಯಾಯತೇ ಕಃ ಸುರೋತ್ತಮಃ ॥೬೮॥

ಕಸ್ಯ ಲಿಂಗಂ ಪದ್ಮಜಾದ್ಯೈಃ ಪೂಜ್ಯತೇ ಭಕ್ತಿಭಾವಿತೈಃ ।
ತತ್ಸರ್ವಂ ಶ್ರೋತುಮಿಚ್ಛಾಮಿ ಭವದ್ಭ್ಯಃ ಸ್ವರ್ಗವಾಸಿನಃ ॥೬೯॥

ಮಹೇಶಕಥಯಾ ಕಾಲೋ ವಿನೇಯ ಇತಿ ಮೇ ಮನಃ ।
ಕಾಲಕಾಲಕಥಾಧಾರಾಸುಧಯಾ ಯಸ್ತು ಜೀವತಿ ॥೭೦॥

ಸ ಜೀವತಿ ನರೋ ನಿತ್ಯಂ ಮೃತಸ್ತ್ವನ್ಯಃ ಸುರೋತ್ತಮಾಃ ॥೭೧॥

ಸಂಭೂತರು. ಸನಾತನಾದಿ ಯೋಗಿಶ್ರೇಷ್ಠರೇ, ನಾರದಾದಿ ಮುನಿವರ್ಯರೇ, ನಿಮ್ಮೆಲ್ಲರ ಈ ದಿವ್ಯದರ್ಶನದಿಂದ ನಾನು ಕೃತಾರ್ಥನಾದೆನು. ।೬೫-೬೬।

ನಿಮ್ಮ ದರ್ಶನಕ್ಕೆ ಪಾತ್ರನಾದ ನಾನು ನಿಜವಾಗಿಯೂ ಸ್ತೋತ್ರಾರ್ಹನೇ ಸರಿ. ಇದರಲ್ಲಿ ಸಂಶಯವಿಲ್ಲ. ನನಗಿಂತಲೂ ಶ್ರೇಷ್ಠನಾದ ಪುಣ್ಯಶಾಲಿಯು ಇಲ್ಲ ವೆಂದೇ ತಿಳಿಯುವೆನು. ಅದಂತಿರಲಿ. ॥೬೭॥

ಮಹಾಕಾಲಸಂಜ್ಞಕನಾದ ಆ ಮಹಾದೇವನ ದಯೆಯಿಂದ ನೀವೆಲ್ಲರೂ ನನ್ನ ಸಮೀಪಕ್ಕೆ ಬಂದಿರುವಿರಿ. ಓ ಪೂಜ್ಯರಾದ ದೇವತೆಗಳಿರಾ. ನೀವು ಯಾರನ್ನು ಪೂಜಿಸುವಿರಿ? ನೀವು ಧ್ಯಾನಮಾಡುವ ದೇವತೋತ್ತಮನಾರು? ಯಾವ ಮಹಾನು ಭಾವನ ಲಿಂಗವನ್ನು ಭಕ್ತಿಪರವಶರಾದ ಬ್ರಹ್ಮಾದಿದೇವತೆಗಳು ಸದಾ ಪೂಜೆಮಾಡು ತ್ತಿರುವರು? ಇವೆಲ್ಲವನ್ನೂ ಸ್ವರ್ಗವಾಸಿಗಳಾದ ನಿಮ್ಮನುಗ್ರಹದಿಂದ ತಿಳಿಯ ಬೇಕೆಂದು ಅಪೇಕ್ಷೆಯುಂಟಾಗಿದೆ. ॥೬೮-೬೯॥

ಸಕಲ ಕಾಲವನ್ನೂ ಆ ಮಹೇಶ್ವರನ ಧಾರಾಕಾರವಾದ ಕಥಾಮೃತಶ್ರವಣ ದಿಂದಲೇ ಕಳೆಯಬೇಕೆಂದು ನಾನು ಬಯಸುತ್ತಿರುವೆನು. ಓ ದೇವತೆಗಳಿರಾ,

ವಸುಧಾಧಿಪತೇರ್ವಾಕ್ಯಂ ಶ್ರುತ್ವಾ ತೇ ವಿಬುಧೋತ್ತಮಾ
ಬ್ರಹ್ಮಾಣಂ ವಿನಯಾತ್ಪ್ರಾಹುಃ ಕೃತಾಂಜಲಿಪುಟಾಸ್ತದಾ ॥೭೨॥

॥ ದೇವಾ ಊಚುಃ ॥

ತ್ವಮೇವ ದೇವಶ್ರೇಷ್ಠೋಽಸಿ ಪ್ರಜಾಪತಿರಸಿ ಪ್ರಭೋ ।
ಮಹೇಶ್ವರಾದ್ವೇದಜಾಲಂ ಶಿವಜ್ಞಾನಂ ಚ ವೇತ್ಸಿ ವೈ ॥೭೩॥

ತ್ವತ್ತಃ ಸರ್ವಮಶೇಷೇಣ ರಾಜ್ಞಾ ಚ ಶೃಣುಮೋ ದ್ವಿಜ ॥೭೪॥

॥ ಸೂತ ಉವಾಚ ॥

ಇತಿ ತದ್ವೈಬುಧಂ ವಾಕ್ಯಂ ಶ್ರುತ್ವಾ ನತ್ವಾ ಮಹೇಶ್ವರಂ
ಬಭಾಣ ಭಾರತೀನಾಥೋ ಹರ್ಷಯನ್ನೃಪಮಂಜಸಾ ॥೭೫॥

---

ಶಿವಕಥಾಮೃತಪಾನದಿಂದ ಜೀವಿಸುವವನು ಮಾತ್ರ ನಿಜವಾಗಿಯೂ ಬದುಕಿದವನೆಂದೂ, ಹಾಗಿಲ್ಲದವನು ಸತ್ತವನಿಗೆ ಸಮನಾದವನಂತೆಯೂ ನಾನು ಭಾವಿಸಿರುವೆನು. ॥೭೦-೭೧॥

ಆ ಚಿತ್ರರಥಮಹಾರಾಜನ ವಚನಗಳನ್ನು ಕೇಳಿ ಆ ದೇವತೋತ್ತಮರು ವಿನಯದಿಂದ ಕೈಜೋಡಿಸಿ ಬ್ರಹ್ಮನನ್ನು ಕುರಿತು ಹೀಗೆ ಪ್ರಾರ್ಥಿಸಿದರು. ॥೭೨॥

"ದೇವ, ಈ ದೇವತೆಗಳಲ್ಲೆಲ್ಲಾ ನೀನೇ ಶ್ರೇಷ್ಠನು, ಪ್ರಭೋ! ಅಲ್ಲದೇ ನೀನು ಪ್ರಜೆಗಳಿಗೆಲ್ಲಾ ಒಡೆಯನೆಂಬ (ಪ್ರಜಾಪತಿಯೆಂಬ) ಹೆಸರನ್ನು ಹೊಂದಿರುವೆ. ಮಹೇಶ್ವರನ ಅನುಗ್ರಹದಿಂದ ನಿನಗೆ ವೇದಜ್ಞಾನವು, ಮತ್ತು ಶಿವವಿದ್ಯಾ ಮಹಿಮೆಯೂ ಉಪದೇಶಿಸಲ್ಪಟ್ಟಿವೆ. ಆದುದರಿಂದ ನಿನ್ನ ದೆಸೆಯಿಂದ ಈ ರಾಜನು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಕೇಳಬೇಕೆಂದು ಅಪೇಕ್ಷಿಸುತ್ತಿರುವೆವು. ದಯೆಯಿಟ್ಟು ತಿಳಿಸಬೇಕೆಂದು ದೇವತೆಗಳು ಬ್ರಹ್ಮನನ್ನು ಪ್ರಾರ್ಥಿಸಿದರು. ॥೭೩-೭೪॥

ಹೀಗೆ ಪ್ರಾರ್ಥಿಸಿದ ದೇವತೆಗಳ ಮಾತನ್ನು ಲಾಲಿಸಿ ಸರಸ್ವತಿಯ ರಮಣನಾದ ಬ್ರಹ್ಮನು ಮೊದಲು ಮಹೇಶ್ವರನಿಗೆ ನಮಸ್ಕಾರಮಾಡಿ, ಆ ಚಿತ್ರರಥ ಮಹಾರಾಜನಿಗೆ ಸಂತಸವನ್ನುಂಟುಮಾಡುತ್ತಾ ಕೂಡಲೇ ಈರೀತಿ ಹೇಳಲುಪಕ್ರಮಿಸಿದನೆಂದು ಸೂತರು ಶೌನಕಾದಿಗಳಿಗೆ ಹೇಳಿದರು. ॥೭೫॥

॥ ಬ್ರಹ್ಮೋವಾಚ ॥

**ಅಸ್ಮಾಭಿರಿಂದುಶಕಲಾಕಲಿತೋತ್ತಮಾಂಗ**
**ಲಿಂಗಾರ್ಚನೈರ್ನಿಯಮಧೂತಸುದುಷ್ಕೃತೈಶ್ಚ ।**
**ನಾಸ್ತ್ಯೇವ ಕಾಲಜಭಯಂ ಜನಿಮೃತ್ಯುತೋಽಪಿ**
**ಶಂಕಾ ನ ದುಃಖಶತಕೈಃ ಸುವಿಚಿಂತ್ಯತೇ ಹಿ ॥೭೬॥**

**ಕ್ಷಣಂ ತ್ರ್ಯಕ್ಷಮಕ್ಷೀಣಮಕ್ಷಾಣಿ ರುದ್ಧ್ವಾ**
**ಕ್ಷಪಾದೌ ಕ್ಷಪಾಂತೇ ಕ್ಷಪಾನಾಥಚೂಡಂ ।**
**ಸಮಭ್ಯರ್ಚ್ಯ ದಕ್ಷಾಧ್ವರಧ್ವಂಸಕಂ ಕಕ್ಷವಾಸಂ**
**ಭಗಾಕ್ಷಿಕ್ಷಯಂ ಮುಚ್ಯತೇಽಘೌಘಸಂಘಾತ್ ॥೭೭॥**

**ಶಿಪಿವಿಷ್ಟಮದೃಷ್ಟಕೋಽಷ್ಟಜನಿತಾನಂದೈಕನಿಷ್ಠಾನತೋಽ**
**ನಿಷ್ಟಾನಿಷ್ಟವಿಶಿಷ್ಟಶಿಷ್ಟಹೃದಯಾಗಾರೇ ನಿವಿಷ್ಟಂ ಶಿವಂ ।**

"ಅಯ್ಯಾ ಚಿತ್ರರಥರಾಜನೇ, ನಾವು ಯಾವಾಗಲೂ ಚಂದ್ರಕಲಾಶಿರೋಭೂಷಣನಾಗಿರುವ ಆ ಮಹೇಶ್ವರನ ದಿವ್ಯಲಿಂಗವನ್ನು ನಿಯಮದಿಂದ ಪೂಜಿಸುತ್ತಿರುವುದರಿಂದ ನಮ್ಮ ಸಕಲ ಪಾಪಗಳೂ ನಾಶವಾಗಿರುವುವು. ಪಾಪಸಂಬಂಧವಿಲ್ಲದುದರಿಂದ ನಮಗೆ ಯಮನ ಭಯವಾಗಲೀ, ಜನನ ಮರಣಗಳಾಗಲೀ ಉಂಟಾಗುವ ಸಂದೇಹವೇ ಇಲ್ಲ. ಹೀಗಿರುವಾಗ ಅನೇಕ ದುಃಖಗಳು ಒದಗಿ ಅದರಿಂದ ನಾವು ನಾನಾವಿಧವಾದ ಯೋಚನೆಗಳಿಗೆ ಗುರಿಯಾಗುವ ಸಂಭವವೆಲ್ಲಿ ಬಂದೀತು?. ॥೭೬॥

ನಾವು ಜಿತೇಂದ್ರಿಯರಾಗಿ ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ತಪ್ಪದೆ ನೇತ್ರತ್ರಯಗಳಿಂದ ವಿರಾಜಿಸುವ ಪರಶಿವನ ಪಾದವನ್ನು ಪೂಜಿಸುವೆವು. ದಕ್ಷಯಜ್ಞವಿನಾಶಕನೂ, ಭಕ್ತರ ಹೃದಯಕುಹರದಲ್ಲಿ ವಾಸಿಸುವವನೂ, ದಕ್ಷಯಜ್ಞದಲ್ಲಿ ಭಗನಾಮಕನಾದ ದೇವತೆಯ ಕಣ್ಣನ್ನು ನಾಶಗೊಳಿಸಿದವನೂ ಆದ ಪರಶಿವನನ್ನು ಧ್ಯಾನಿಸುವುದರಿಂದ ಸಮಸ್ತ ಪಾಪರಾಶಿಯೂ ನಿರ್ಮೂಲವಾಗುವುದರಲ್ಲಿ ಅನುಮಾನವೇನು? ॥೭೭॥

ಯಾರಿಗೂ ಗೋಚರವಲ್ಲದ ಆತ್ಮಾನಂದದಲ್ಲಿ ಮುಳುಗಿ ತಮ್ಮ ಹೃದಯಕುಹರದಲ್ಲಿ ಸರ್ವದಾ ಪರಮೇಶ್ವರನನ್ನೇ ಆರಾಧಿಸುವ ಪರಮಶಾಂಭವರು ತಮ್ಮ ಜೀವಿತಕಾಲದಲ್ಲಿ ಎಂಟು ಕಡೆಗಳಿಂದಲೂ ಸಂಭವಿಸುವ ಅನಿಷ್ಟಪರಂಪರೆಯನ್ನು

ಧ್ಯಾತ್ವಾ ಕಷ್ಟೇತರಾಷ್ಟವೇಷ್ಟನಮಯಂ ತ್ಯಕ್ತ್ವಾsಷ್ಟಮೂರ್ತಿಂ ಸದಾ
ಕಾಷ್ಠಾಷ್ಟಾಂಬರಮಾಶು ಚೇಶಮನಿಶಂ ದೃಷ್ಟಿಃ ಫಲಾರ್ಥೇ ಮುಹುಃ॥೭೮॥

ಕೋ ವಾ ವೇದೋದಯಾದ್ರಿಪ್ರವರಶಿಖರಕೋದ್ಭಾಸಿಮಾಹಾತ್ಮ್ಯಜಾಲಂ
ಭೀತ್ಯಾ ಯಸ್ಯೇಂದುಶಕ್ರಾಸ್ತಪನಪವನಕಾ ಭಾಂತಿ ದೇವಾಃ ಸಮಗ್ರಾಃ ।
ಸೋಽಯಂ ಶಂಕರಭಾಸ್ಕರಃ ಪ್ರತಪತೇ ಮುಷ್ಣನ್ನಘೌಘಾಂಬುದಂ
ಉಗ್ರೋ ಭೀಮಮಹೇಶ್ವರೇಶ್ವರಮಹಾದೇವೇತಿ ನಾಮಾಂಶುಭಿಃ ॥೭೯॥

ನಿತ್ಯಾನಿತ್ಯಸಮಸ್ತವಸ್ತುವಿಷಯವ್ಯಾಪಾರಸತ್ತಾತ್ಮಕಂ
ಯತ್ತತ್ತ್ವಾಧಿಗಮೇನ ಚೇತಯತಿ ಯದ್ಭಾನೈಕಬೋಧಂ ಜಗತ್ ।
ಯಸ್ಯಾನಂದಲವೈಕದೇಶಜನಿತಾನಂದೇನ ತೇ ನಿರ್ವೃತಾಃ
ಬ್ರಹ್ಮೇಂದ್ರಾದಿಮರುದ್ಗಣಾಃ ಸವರುಣಾಃ ಸಾಕ್ಷೀ ಸ ಏವೇಶ್ವರಃ ॥೮೦॥

ದೂರಮಾಡಿಕೊಳ್ಳುವರು. ಮತ್ತು ತಮ್ಮ ಇಷ್ಟಪ್ರಾಪ್ತಿಗಾಗಿ, ದಿಗಂಬರನೂ, ಅಷ್ಟಮೂರ್ತಿಯೂ ಆದ ಪರಶಿವನನ್ನು ತಪ್ಪದೆ ಸದಾ ಧ್ಯಾನಮಾಡುವರು. ॥೭೮॥

ವೇದರಾಶಿಯೆಂಬ ಉದಯಾಚಲಪರ್ವತದ ಶ್ರೇಷ್ಠವಾದ ಶಿಖರಗಳಲ್ಲಿ ದೇದೀಪ್ಯಮಾನವಾಗಿ ಹೊಳೆಯುತ್ತಿರುವ ಮಹಿಮಾಸಮೂಹವುಳ್ಳ ಆ ಮಹೇಶ್ವರನ ಪ್ರಭಾವವನ್ನು ಯಾರು ತಾನೆ ತಿಳಿಯುವರು? ಆ ಮಹಾದೇವನ ಭಯದಿಂದ ಚಂದ್ರ, ಇಂದ್ರ, ಸೂರ್ಯ, ವಾಯು ಇವರೇ ಮೊದಲಾದ ಸಕಲದೇವತೆಗಳೂ ತಮ್ಮ ತಮ್ಮ ಕಾರ್ಯವನ್ನು ತಪ್ಪದೆ ಮಾಡುತ್ತಿರುವರು. ಅಂತಹ ಶಂಕರನೆಂಬ ಸೂರ್ಯನು ಪಾಪಸಮೂಹವೆಂಬ ಮೇಘವನ್ನು ನಾಶಮಾಡುತ್ತಾ ಉಗ್ರ, ಭೀಮ, ಮಹೇಶ್ವರ, ಈಶ್ವರ, ಮಹಾದೇವ ಮುಂತಾದ ಹೆಸರುಗಳೆಂಬ ಕಿರಣಗಳಿಂದ ಯುಕ್ತನಾಗಿ ಸದಾ ಪ್ರಜ್ವಲಿಸುತ್ತಿರುವನು. ॥೭೯॥

ಇದು ನಿತ್ಯ (ಶಾಶ್ವತವಾದುದು) ಇದು ಅಶಾಶ್ವತವಾದುದು ಎಂಬ ಸಮಸ್ತ ಪದಾರ್ಥಗಳ ಸತ್ತಾಸ್ವರೂಪವು, ಸತ್ತಾಸ್ವರೂಪನೆನಿಸಿದ ಆ ಪರಮೇಶ್ವರನ ಸ್ವರೂಪವನ್ನು ಅರಿತನಂತರ ಲೋಕದಲ್ಲಿ ಗೊತ್ತಾಗುವುದು. ಪರಮಾತ್ಮನೇ ಜಗದ್ರೂಪದಿಂದ ತೋರುತ್ತಿರುವನಾದಕಾರಣ ಆ ಮಹೇಶ್ವರನ ದಿವ್ಯಪ್ರಕಾಶದಿಂದ ಆ ಪ್ರಪಂಚವನ್ನು ತಿಳಿಯಬೇಕಾಗಿದೆ. ಆ ಮಹಾದೇವನ (ಆನಂದಸ್ವರೂಪನಾದ) ಆನಂದದ ಕೇವಲ ಒಂದು ಲೇಶಮಾತ್ರದಿಂದಲೇ ಬ್ರಹ್ಮ, ಇಂದ್ರ, ವರುಣ ಮುಂತಾದ

ವಿಶ್ವೋತ್ಪತ್ತಿವಿನಾಶಪಾಲನಮಹಾಹಂಕಾರಭೋಕ್ತೈರ್ಗುಣೈ
ರವ್ಯಕ್ತಂ ಪುರುಷಃ ಪ್ರಕೃತ್ಯಧಿಕೃತಿಃ ಸಂವಿತ್ಸ್ವರೂಪಾ ಶಿವಾ ।
ಯಾ ಸಾ ಹ್ಯಸ್ಯ ಶಿವಸ್ಯ ಮುಖ್ಯದಯಿತಾ ತಾಂ ಧ್ಯಾನಯೋಗೈಃ ಸುರಾಃ
ಸಂಪ್ರಾರ್ಥ್ಯ ಪ್ರಮಥಾಧಿನಾಥಮಜರಂ ಜ್ಞಾತ್ವಾ ಪರಂ ನಿರ್ವೃತಾಃ ॥೮೧॥

ವಿಷಾರ್ಚಿಷಿ ವಿಷಾಕರಾದಧಿಮಹೀಷದುಸ್ಯಲತಿ
ಬಲದ್ವಿಷಿ ಗತತ್ವಿಷಿ ಕ್ಷಪಿತಶೇಮುಷೀರೋಚಿಷಿ ।
ಬಲಿದ್ವಿಷಿ ವಿನಾರುಷಾ ವಿಷಮಿಯೇಷ ಪೀಯೂಷವ
ತ್ಸ ಶೋಷಯತಿ ಕಲ್ಮಷಂ ವಿಷಮಬಾಣಶೋಷಾಕರಃ ॥೮೨॥

ದೇವತೆಗಳೆಲ್ಲರೂ ಪರಮಾನಂದಭರಿತರಾಗಿ ಸುಖಿಗಳೆನಿಸಿರುವರು. (ಆ ಮಹೇಶ್ವರನು ಸಚ್ಚಿದಾನಂದಸ್ವರೂಪನು, ಈ ಪ್ರಪಂಚದಲ್ಲಿ ಆ ಸತ್, ಚಿತ್ ಮತ್ತು ಆನಂದವೆಂಬ ಮೂರೂ ಆ ಮಹೇಶನಿಂದಲೇ ಬ್ರಹ್ಮಾದಿಗಳಿಗೆಲ್ಲರಿಗೂ ಬಂದಿದೆ. ಆದರ ಅಲ್ಪಾಂಶದಿಂದಲೇ ಅವರೆಲ್ಲರೂ ಪರಮಾನಂದಭರಿತರಾಗಿರುವರೆಂದು ಭಾವವು) ಇವಕ್ಕೆಲ್ಲಾ ಆ ಮಹೇಶ್ವರನೇ ಸಾಕ್ಷಿಯಾಗಿರುವನು. ॥೮೦॥

ಪ್ರಪಂಚದ ಸೃಷ್ಟಿ, ನಾಶ ಮತ್ತು ರಕ್ಷಣರೂಪವಾದ ಕಾರ್ಯತ್ರಯಗಳಲ್ಲಿ ಸತ್ವ, ರಜೋಸ್ತಮೋಗುಣಗಳು ಸಾಧಕವಾಗಿರುವುವು. ಇವು ಅಹಂಕಾರತತ್ವದಿಂದಲೂ, ಈ ಅಹಂಕಾರವು ಮಹತ್ತತ್ವದಿಂದಲೂ. ಮಹತ್ತತ್ವವು ಅವ್ಯಕ್ತ ಪ್ರಕೃತಿ, ಅಧಿಕೃತಿ, ಸಂವಿತ್ ಈ ರೀತಿಯಾದ ಪರ್ಯಾಯನಾಮಗಳುಳ್ಳ ಪ್ರಕೃತಿಯಿಂದಲೂ ಉಂಟಾಗುತ್ತದೆಂದು ಸಾಂಖ್ಯಮತಪ್ರಕ್ರಿಯೆಯು. ಆ ಪ್ರಕೃತಿಯೇ ಆ ಮಹಾದೇವನ ಪ್ರಿಯೆಯು ರೂಪಳೆಂದೂ ಶಿವನೇ ಪ್ರಕೃತಿಯೆಂದೂ ತಿಳಿಯಬೇಕು. ಈ ಪ್ರಕೃತಿಪುರುಷರ ಸಂಕ್ಷೋಭದಿಂದಲೇ ಈ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಸೃಷ್ಟಿಯಾಗುತ್ತದೆ. ಇಂತಹ ಪ್ರಕೃತಿಯನ್ನು ದೇವತೆಗಳು ಧ್ಯಾನಯೋಗಾಭ್ಯಾಸದಿಂದ ಪ್ರಾರ್ಥನೆಮಾಡಿ ಅನಂತರ ಪ್ರಮಥಗಣಾಧಿಪತಿಯೆನಿಸಿದ ಶಾಶ್ವತನಾದ ಮಹಾದೇವನನ್ನು ತಿಳಿದು ಮುಕ್ತರಾಗುತ್ತಾರೆ. ॥೮೧॥

ದೇವಾಸುರರ ಸಮುದ್ರಮಥನ ಕಾಲದಲ್ಲಿ ಸಮುದ್ರದಿಂದ ಹಾಲಾಹಲ ವಿಷವು ಆವಿರ್ಭವಿಸಲು ಅದನ್ನು ನೋಡಿ ದೇವೇಂದ್ರನು ಮಂಕಾದನು. ಮಹಾವಿಷ್ಣುವು ಬುದ್ಧಿಹೀನನಾದನು. ಆಗ ದೇವತೆಗಳು ಬಂದು ಪರಶಿವನನ್ನು ಮೊರೆ

ನಾಗಮಸ್ತಕಭಿದಂ ಹೃದಯೋನಾಗಮುಸ್ತುತಮಮುಂ ಚ ವಿಹಾಯ।
ನಾಗಮಶ್ರಿತನಿಶಾಕರಸಿಂಧುಂ ನಾಗಮುಚ್ಛರದಿಂದುಸಮಾನಂ ॥೮೩॥

ಯಚ್ಛಿರೋಧಿವಸತೀಹ ಪರಾಗಃ
ಪಾದಯೋಸ್ತವ ಶಿವಾಧಿಪರಾಗಃ।
ಅಪ್ಸರೋಭಿರಪಿ ಸತ್ರಪರಾಗಃ
ತತ್ರ ಚೇದಭಜನಂ ಹಿ ಪರಾಗಃ ॥೮೪॥

ಭಗವತ್ಯಗಜಾಪತೌ ಮಹೇಶೇ
ಕೃತಪುಣ್ಯೈರಮಿತೈರ್ಲಭೇತ ಭಕ್ತಿಂ।

---

ಹೊಗಲು, ದಯಾದೃಷ್ಟಿಯಿಂದ ಪರಶಿವನು ಆ ಹಾಲಾಹಲವಿಷವನ್ನು ಅಮೃತ ದಂತೆ ಪಾನಮಾಡಿದನು. ಅಂತಹ ಮಹಾದೇವನ ಧ್ಯಾನದಿಂದ ಮಾನವನು ಮನ್ಮಥನಿಂದ ಒದಗುವ ಕಾಮಕ್ರೋಧಾದಿಗಳನ್ನು ಸುಲಭವಾಗಿ ಪರಿಹರಿಸಿ ಕೊಳ್ಳುವನು. ॥೮೨॥

ಗಜಾಸುರನನ್ನು ನಾಶಗೊಳಿಸಿದವನೂ, ವೇದವೇದಾಂತಗಳಿಂದ ಸ್ತುತಿಸಲ್ಪ ಡುವವನೂ, ತನ್ನನ್ನೇ ಆಶ್ರಯಿಸಿಕೊಂಡವರನ್ನು ಉದ್ಧರಿಸುವವನೂ, ಶರತ್ಕಾಲದ ಚಂದ್ರನಂತೆ ಪ್ರಕಾಶಿಸುವವನೂ ಆದ ಪರಮೇಶ್ವರನನ್ನು ಯಾರು ಆಶ್ರಯಿ ಸುವರೋ, ಅವರೇ ಧನ್ಯರು. ಅಂತಹ ಶಂಕರನನ್ನು ಯಾರು ಸೇವಿಸುವುದಿಲ್ಲವೋ ಅವರು ಕೇವಲ ಪಾಪಿಷ್ಠರೇ ಸರಿ. ॥೮೩॥

ಪಾರ್ವತೀಪತಿಯಾದ ಶಂಕರನ ಪಾದಕಮಲದ ಧೂಳಿಯು ಯಾರ ತಲೆಯನ್ನಲಂಕರಿಸುವುದೋ, ಅಂತಹವನು ಸೌಂದರ್ಯದಲ್ಲಿಯೂ ಕಾಂತಿಯು ಲ್ಲಿಯೂ ಅಪ್ಸರಸ್ತ್ರೀಯರನ್ನೂ ಮೀರಿಸುವನು. ಅಲ್ಲದೆ ಅವರೇ ನಾಚಿಕೆಯಿಂದ ತನ್ನನ್ನು ಪ್ರೀತಿಸುವಂತೆ ಏರ್ಪಡಿಸಿಕೊಳ್ಳುವನು. ಇದಿಷ್ಟು ಪರಶಿವನ ಪಾದ ಕಮಲದ ಪರಾಗದ ಮಹಿಮೆಯಲ್ಲವೆ? ಅಂತಹ ಪಾದಕಮಲದ ಪರಾಗದ ಸೇವನೆಯಿಲ್ಲದ ಮಾನವರು ಮಹಾಪರಾಧಿಗಳಲ್ಲವೆ! ॥೮೪॥

ಮನುಜನು ತಾನುಮಾಡಿದ ಅಪಾರವಾದ ಪುಣ್ಯಗಳಿಂದ ಗಿರಿಜಾಕುಮಾರಿಯ ಪತಿಯೂ ಷಡ್ಗುಣ್ಯೈಶ್ವರ್ಯಸಂಪನ್ನನೂ ಆದ ಮಹೇಶ್ವರನಲ್ಲಿ ಭಕ್ತಿಯನ್ನು ಪಡೆಯುವನು. ಹಾಗೆ ಉಂಟಾದ ಮಹೇಶ್ವರನ ಭಕ್ತಿಯಿಂದ ಅವನು ಜನನ

ಸ ತು ಸಂತರತೇ ಭವಾಬ್ಧಿಮುಗ್ರಂ
ಜನಿನಾಶಪ್ರಥಿತಂ ವಿಚಿತ್ರಕರ್ಮ ॥೮೫॥

ವರಂ ಕರ್ಕಟಿತ್ವಂ ವರಂ ಮರ್ಕಟಿತ್ವಂ
ವರಂ ಚಂಡಚಂಡಾಲಕನ್ಯಾಸುತತ್ವಂ ।
ವರಂ ಸೂಕರೀಯೋನಿಗಂಧೋನ್ಮುಖತ್ವಂ
ಮಹೇಶಾರ್ಚನಾವರ್ಜನಂ ತದ್ವರಂ ನ ॥೮೬॥

ಅಲಂ ಸರ್ವದಾನೈರಲಂ ಸರ್ವಯಜ್ಞೈ
ರಲಂ ತೀರ್ಥಯಾತ್ರಾವ್ರತಾಚಾರಧರ್ಮೈಃ ।
ಅಲಂ ಯೋಗಸಂಸೇವನೈರ್ವಿಪ್ರವೃಂದ
ಪ್ರತಿಷ್ಠಾದಿಪುಣ್ಯೈರಲಂ ಕೇವಲಂ ಮೇ ॥೮೭॥

ಮರಣರೂಪವಾದ ವಿಚಿತ್ರ ಕರ್ಮಬಂಧನವುಳ್ಳ ಭಯಂಕರವಾದ ಈ ಸಂಸಾರ ಸಾಗರವನ್ನು ದಾಟುವನು. ॥೮೫॥

ಮಹೇಶ್ವರನ ಪೂಜೆಯನ್ನು ಮಾಡದೇ ಬದುಕುವುದಕ್ಕಿಂತ ಏಡಿ (ನಳ್ಳಿ), ಕಪಿ ಇವುಗಳ ಜನ್ಮತಾಳುವುದು, ಕ್ರೂರನಾದ ಚಂಡಾಲನ ಮಗಳ ಮಗನಾಗುವುದು ಮತ್ತು ಹೆಣ್ಣುಹಂದಿಯ ದುರ್ಗಂಧಪೂರಿತವಾದ ಯೋನಿಯಲ್ಲಿ ಜನಿಸುವುದು ಇವೆಲ್ಲವೂ ಉತ್ತಮವಾದವುಗಳೇ ಸರಿ. (ಅಂದರೆ ಅತ್ಯಂತ ಪಾಪಜನ್ಮವನ್ನು ಬೇಕಾದರೂ ಹೊಂದಿ ಬಾಳುವುದು ಉಚಿತವೇ ಹೊರತು ಶಿವಪೂಜೆಮಾಡುವುದನ್ನು ಬಿಟ್ಟು ಬಾಳುವುದು ತುಂಬಾ ನೀಚವಾದುದು, ಎಂದಿಗೂ ಶ್ರೇಷ್ಠವಲ್ಲವೆಂದು ಭಾವ.) ॥೮೬॥

ಎಲ್ಲಾ ವಿಧವಾದ ದಾನಗಳನ್ನು ಮಾಡುವುದು, ಸಕಲ ಯಾಗಗಳನ್ನು ನಡೆಸುವುದು, ಸಮಸ್ತ ತೀರ್ಥಕ್ಷೇತ್ರಗಳಲ್ಲಿ ಸಂಚರಿಸುವುದು, ವ್ರತ ಮತ್ತು ಆಚಾರ ಧರ್ಮ ಇವುಗಳಲ್ಲಿ ತತ್ಪರರಾಗಿರುವುದು, ಯೋಗಾಭ್ಯಾಸದಿಂದ ಸಿದ್ಧಿಯನ್ನು ಹೊಂದುವುದು, ಮತ್ತು ಬ್ರಾಹ್ಮಣರ ಗುಂಪುಗಳನ್ನು ಪೂಜಿಸುವುದು, ವೃಕ್ಷಾದಿಗಳನ್ನು ಪ್ರತಿಷ್ಠೆಮಾಡುವುದು ಇವೇ ಮೊದಲಾದವುಗಳಿಂದ ಬರುವ ಪುಣ್ಯವು ಅಲ್ಪವಾದುದು. ಆದ್ದರಿಂದ ಅವುಗಳ ವಿಷಯ ಹಾಗಿರಲಿ. ॥೮೭॥

ಪ್ರತಿಷ್ಠಾಪ್ಯ ಲಿಂಗಂ ಮಹಾಬಿಲ್ವಮೂಲೇ
ತ್ರಿಕಾಲಂ ಮಹೇಶಂ ಸಮಭ್ಯರ್ಚ್ಯ ಬಿಲ್ವೈಃ ।
ನ ಚೇಚ್ಛಾಮಿ ವಾಣೀಪತಿತ್ವಂ ಹರಿತ್ವಂ
ಮಹೇಶಾನಪಾದಾರವಿಂದೇ ಶಪಾಮಿ ॥೮೮॥

ಕ್ಷಯದ್ವೀರಂ ವೀರಂ ನಿಖಿಲಗುಣಪಾರಂ ಭಯಹರಂ
ಪರಂ ಪಾರಂ ಸಾರಂ ನಿಖಿಲಜನಗುಪ್ತ್ಯೈ ಧೃತಶರಂ ।
ನಮಾಮೀಶಂ ಶಶ್ವತ್ಪ್ರತರಗರಾವಿಷ್ಟಸುಗಲಂ
ವರಂ ವಾರಂ ವಾರಂ ಶ್ರುತಿಶಿಖರಗಮ್ಯಂ ಸುಖಕರಂ ॥೮೯॥

ಇತಿ ಶ್ರೀ ಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಚಿತ್ರರಥರಾಜ ಬ್ರಹ್ಮಾದಿದೇವಗಣಸಂವಾದೇ ಚತುರ್ಥೋಽಧ್ಯಾಯಃ

---

ದೊಡ್ಡ ಬಿಲ್ವಪತ್ರೆಯ ಮರದ ಬುಡದಲ್ಲಿ ಶಿವಲಿಂಗವನ್ನು ವಿಧಿಪೂರ್ವಕವಾಗಿ ಪ್ರತಿಷ್ಠೆಮಾಡಿಸಿ, ಪ್ರಾತರ್ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿಯೂ ಭಕ್ತಿಪುರಸ್ಸರವಾಗಿ ಬಿಲ್ವಪತ್ರೆಗಳಿಂದ ಆ ಮಹೇಶನ ಲಿಂಗವನ್ನು ಪೂಜಿಸಿದ ಮೇಲೆ ನಾನು ಬ್ರಹ್ಮತ್ವವನ್ನಾಗಲಿ, ಅಥವ ವಿಷ್ಣುಪದವಿಯನ್ನಾಗಲೀ ಎಂದಿಗೂ ಬಯಸುವುದಿಲ್ಲವೆಂದು ಮಹೇಶ್ವರನ ಅಡಿದಾವರೆಗಳಲ್ಲಿ ಪ್ರತಿಜ್ಞೆಮಾಡಿ ಹೇಳುತ್ತೇನೆ. ॥೮೮॥

ತನ್ನನ್ನು ಪ್ರತಿಭಟಿಸುವ ವೀರರಾದ ರಾಕ್ಷಸರನ್ನೆಲ್ಲಾ ಲೀಲೆಯಿಂದ ಧ್ವಂಸಮಾಡತಕ್ಕವನೂ (ಕ್ಷಯದ್ವೀರ) ಶೂರನೂ, ಸಕಲಸದ್ಗುಣಗಳಿಗೂ ಮೇರೆಯಾಗಿರುವನೂ, ಜಗತ್ತಿಗುಂಟಾಗುವ ಭಯವನ್ನಪಹರಿಸುವವನೂ, ಸರ್ವೋತ್ತಮನೆನಿಸಿ ಸಕಲ ಪ್ರಜೆಗಳನ್ನೂ ಕಾಪಾಡುವುದಕ್ಕೋಸ್ಕರ ಕೈಯ್ಯಲಿ ಬಾಣವನ್ನು ಹಿಡಿದಿರುವನೂ,ಅತಿಭಯಂಕರವಾದ ಕಾಲಕೂಟಮಹಾವಿಷವನ್ನೇ ಲೋಕಕಲ್ಯಾಣಕ್ಕೋಸ್ಕರ ನುಂಗಿ, ತನ್ನ ಗಂಟಲಿನಲ್ಲಿ ಧರಿಸಿ ಶೋಭಿಸುತ್ತಿರುವನೂ, ವೇದಾಂತಗಳಿಂದ ತಿಳಿಯಲು ಯೋಗ್ಯನಾದವನೂ ಮತ್ತು ಸ್ಥಾವರಜಂಗಮಾತ್ಮಕವಾದ ಸಕಲ ಜಗತ್ತಿಗೂ ಸುಖವನ್ನುಂಟುಮಾಡುವವನೂ ಆದ ಆ ಮಹಾದೇವನಿಗೆ ಬಾರಿಬಾರಿಗೂ ನಮಸ್ಕಾರಮಾಡುತ್ತೇನೆ. ॥೮೯॥

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗಸಂಜ್ಞಕವಾದ ಐದನೆಯ ಅಂಶದಲ್ಲಿ ಚಿತ್ರರಥರಾಜ ಮತ್ತು ಬ್ರಹ್ಮಾದಿದೇವಗಣಗಳ ಸಂವಾದದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಪಂಚಮೋಽಧ್ಯಾಯಃ

॥ ಬ್ರಹ್ಮೋವಾಚ ॥

ತವೋದಾರವಿಚಿತ್ರಾಣಿ ಚರಿತ್ರಾಣಿ ನೃಪೋತ್ತಮ ।
ತ್ರಿನೇತ್ರಪಾದದ್ವಂದ್ವಾರ್ಚಾಭಕ್ತಿಸಾರಾಣಿ ಸತ್ತಮ ॥೧॥

ದ್ರಷ್ಟುಮಭ್ಯಾಗತಾಃ ಸಭ್ಯಾಃ ವಯಂ ಸೇಂದ್ರಾ ದಿವೌಕಸಃ ।
ನಾರದಪ್ರಮುಖಾಃ ಸರ್ವೇ ಮುನಯಸ್ತ್ವಯಿ ಸನ್ಮುಖಾಃ ॥೨॥

ಷಣ್ಮುಖೇನ ಸಮೋಽಸಿ ತ್ವಂ ಮಹಾದೇವಸ್ತ್ವದುನ್ಮುಖಃ ।
ತ್ವನ್ನೇತ್ರಾಪಾಂಗಸಂಗೇನ ಪಾಪಭಂಗಃ ಪ್ರಜಾಯತೇ ॥೩॥

## ಐದನೆಯ ಅಧ್ಯಾಯವು

ಅಯ್ಯ ರಾಜಶ್ರೇಷ್ಠನೇ, ತ್ರಿಲೋಚನನೆನಿಸಿದ ಈ ಮಹಾದೇವನ ಪಾದ ಯುಗ್ಮಗಳ ಪೂಜೆಯಲ್ಲಿಯೇ ಭಕ್ತಿಪೂರ್ವಕವಾಗಿ ನಿರತನಾಗಿರುವ ನಿನ್ನ ಉದಾರವೂ ವಿಚಿತ್ರವೂ ಆದ ಚರಿತ್ರೆಗಳನ್ನು ಕೇಳಬೇಕೆಂಬ ಕುತೂಹಲದಿಂದಲೇ ಈ ಸಭೆಯಲ್ಲಿ ನೆರೆದಿರುವ ಇಂದ್ರಾದಿ ಸಕಲ ದೇವತೆಗಳೂ, ನಾರದಪ್ರಮುಖರಾದ ಮುನಿವರ್ಯರೂ ನಿನ್ನ ಸಮೀಪಕ್ಕೆ ಬಂದು ನಿನ್ನನ್ನು ನೋಡಿ ನಾವೆಲ್ಲರೂ ಸಂತೋಷಭರಿತರಾಗಿರುವೆವು. ಎಂದು ಬ್ರಹ್ಮನು ಮತ್ತೆ ಮಾತನಾಡಲುಪಕ್ರಮಿಸಿದನು. ॥೧-೨॥

ಓ ಚಿತ್ರರಥರಾಜನೇ, ನೀನು ಷಣ್ಮುಖಸ್ವಾಮಿಗೆ ಸಮಾನವಾಗಿರುವೆ. ಮಹಾದೇವನು ನಿನ್ನಲ್ಲಿ ಪ್ರಸನ್ನನಾಗಿರುವನು. ನಿನ್ನ ಕಣ್ಣುಗಳ ಓರೆನೋಟದ ಸಂಪರ್ಕದಿಂದಲೇ ಮಾನವರ ಸಕಲ ಪಾಪಗಳೂ ಧ್ವಂಸವಾಗುವುವು. ॥೩॥

ಅನಂಗರಿಪುರತ್ಯರ್ಥಂ ಕೃಪಾಂ ಸಾಂಗಾಂ ಕರಿಷ್ಯತಿ ।
ನಿಃಸಂಗೇನಾಪಿ ಭಾವೇನ ತ್ವಯಿ ಭಾವೇನ ಭಾವಿತಃ ॥೪॥

ಭವನಾಶಕರಸ್ತುಭ್ಯಂ ಭವತ್ಯೇವ ಭವೋದ್ಭವಃ ।
ಕಿಂ ಚ ಪಂಚಾಸ್ಯಪಾದಾಬ್ಜಚಂಚರೀಕಸ್ತ್ವಮೇವ ಹಿ ॥೫॥

ಮಾಮುಂಚೇತಾದೃಶೀಂ ಭಕ್ತಿಂ ಭವನಾಶಕರೀಂ ನೃಪ ।
ಯಯಾ ಭಕ್ತ್ಯಾ ಮುನಿವರಾ ವಯಂ ವಿಷ್ಣುಮುಖಾಃ ಸುರಾಃ ॥೬॥

ಅಪಾರಘೋರಸಂಸಾರಸಾಗರಂ ತರ್ತುಮಿಚ್ಛವಃ ।
ಸಂಸಾರತರಣೋಪಾಯಃ ಶ್ರೀಮಹಾದೇವಪೂಜನಂ ॥೭॥

---

ಮನ್ಮಥಶತ್ರುವಾದ ಮಹಾದೇವನು ತಾನು ಯಾವ ವಿಷಯದಲ್ಲಿಯೂ ಸಂಬಂಧಿಸದೆ ನಿಸ್ಸಂಗವುಳ್ಳವನಾಗಿದ್ದರೂ, ನಿನ್ನ ಸಂಬಂಧವನ್ನು ಮಾತ್ರ ನಿನ್ನ ಭಕ್ತಿಗೆ ಪರವಶನಾಗಿ ಬಿಡಲಾರದೆ ನಿನ್ನಲ್ಲಿ ಸಂಪೂರ್ಣವಾದ ದಯೆಯನ್ನು ಬೀರುತ್ತಿರುವನು. ॥೪॥

ಸಕಲ ಜಗದುತ್ಪತ್ತಿಕಾರಣನೂ, ಅನಾದಿಯಾದ ಈ ಸಂಸಾರದುಃಖವನ್ನು ಹೋಗಲಾಡಿಸಿ ಶಾಶ್ವತವಾದ ಮುಕ್ತಿಯನ್ನು ಕರುಣಿಸುವನೂ ಆಗಿರುವ ಮಹೇಶ್ವರನು ನಿನ್ನಲ್ಲಿ ಪ್ರೀತನಾಗಿ ನಿನ್ನ ಭವಬಂಧನವನ್ನೆಲ್ಲಾ ನಾಶಪಡಿಸುವನು. ನೀನೂ ಐದು ಮುಖವುಳ್ಳ ಮಹಾದೇವನ ಅಡಿದಾವರೆಗಳ ಮಕರಂದಪಾನದಲ್ಲಿ ಭ್ರಮರದಂತೆಯೇ ಇರುತ್ತೀಯೆ. ॥೫॥

ಅಯ್ಯ ರಾಜನೇ, ಸಂಸಾರಬಂಧನವನ್ನು ನಾಶಮಾಡುವ ಈ ರೀತಿಯಾದ ಮಹಾದೇವಭಕ್ತಿಯನ್ನು ಎಂದಿಗೂ ಬಿಡದೆ ಕಾಪಾಡಿಕೊ. ಮಹೇಶ್ವರನ ಭಕ್ತಿಯಿಂದಲೇ ನಾನೂ, ವಿಷ್ಣುವೇ ಮೊದಲಾದ ಇತರ ದೇವತೆಗಳೂ, ಅಪಾರವೂ ಅತಿ ಭಯಂಕರವೂ ಆಗಿರುವ ಈ ಸಂಸಾರವೆಂಬ ದೊಡ್ಡ ಸಾಗರವನ್ನು ದಾಟಬೇಕೆಂದು ಅಪೇಕ್ಷಿಸಿ ಅದರಂತೆ ನಡೆಯುತ್ತಿರುವೆವು. ಈ ಘೋರಸಂಸಾರವನ್ನು ದಾಟಲು ಮಹಾದೇವನ ಪೂಜೆಯೊಂದೇ ಮುಖ್ಯವಾದ ಉಪಾಯ. ಅದೇ ಭವಸಾಗರದ ಹಡಗು. ॥೬-೭॥

ಮಹಾದೇವಂ ಸಮಭ್ಯರ್ಚ್ಯ ಮುಚ್ಯತೇ ಭವಬಂಧನಾತ್ ।
ವಿಜ್ಞಾನಂ ಮಹದಾಪ್ನೋತಿ ತಸ್ಯ ಭಕ್ತ್ಯೈವ ನಾನ್ಯಥಾ ॥೮॥

ಅನಭ್ಯರ್ಚ್ಯ ಮಹಾದೇವಂ ಕೋ ವಾ ಮುಕ್ತೋ ಭವಿಷ್ಯತಿ ।
ವಯಂ ವಿಷ್ಣ್ವಾದಯೋ ದೇವಾಃ ಪಶವಃ ಪರಿಕೀರ್ತಿತಾಃ ॥೯॥

ತಸ್ಮಾತ್ಪಶುಪತಿಃ ಶಂಭುಃ ಕಾಮುಕರ್ಮಮಯೈರ್ನೃಪ ।
ಪಾಶೈರಸ್ಮಾನ್ನಿಬಧ್ನಾತಿ ಜಗದೇತಚ್ಚರಾಚರಂ ॥೧೦॥

ಸ ಏವ ಭಕ್ತಿಭಾವೇನ ಭಾವಿತಃ ಪರಮೇಶ್ವರಃ ।
ಕಾಮುಕರ್ಮಮಯೈಃ ಪಾಶೈರ್ಮೋಚಯತ್ಯೇವ ನಾನ್ಯಥಾ ॥೧೧॥

ಮಹಾದೇವನನ್ನು ಪೂಜಿಸಿ ಮಾನವನು ಈ ಸಾಂಸಾರಿಕ ಬಂಧನದಿಂದ ಬಿಡುಗಡೆ ಹೊಂದುವನು. ಮಹಾದೇವನಲ್ಲಿ ತಾನು ತೋರ್ಪಡಿಸುವ ಭಕ್ತಿವಿಶೇಷದಿಂದಲೇ ಇವನಿಗೆ ಅಪಾರವಾದ ವಿಜ್ಞಾನವು ದೊರೆಯುವುದು. ಇನ್ನಿತರ ಯಾವ ಸಾಧನದಿಂದಲೂ ಈ ಫಲವು ದೊರೆಯುವುದಿಲ್ಲವೆಂದು ತಿಳಿ. ॥೮॥

ಮಹಾದೇವನನ್ನು ಪೂಜೆಮಾಡದೇ ಯಾರು ತಾನೇ ಮೋಕ್ಷವನ್ನು ಪಡೆಯಬಲ್ಲನು? ನಾನೂ ಮತ್ತು ವಿಷ್ಣುವೇ ಮುಂತಾದ ಇತರದೇವತೆಗಳೂ ಪಶುಗಳೆನಿಸಿರುವೆವು. ಪರಶಂಭುವೆ ನಮ್ಮೆಲ್ಲರಿಗೂ ಒಡೆಯನಾದುದರಿಂದ ಅವನಿಗೆ ಪಶುಪತಿಯೆಂದು ಹೆಸರು ಪ್ರಖ್ಯಾತವಾಗಿದೆ. ಅಯ್ಯ ರಾಜನೇ, ಮಹಾದೇವನು ಈರೀತಿ ಪಶುಪತಿಯೆನಿಸಿ, ಮನ್ಮಥನ ಕಾರ್ಯರೂಪವಾದ ವಿಷಯಸುಖಾಸ್ಪದವನ್ನುಂಟುಮಾಡುವ ಪಾಶಗಳಿಂದ ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವನ್ನೆಲ್ಲವನ್ನೂ ಮತ್ತು ನಮ್ಮೆಲ್ಲರನ್ನೂ ಸೆಳೆಯುತ್ತಿರುವನು. ॥೯-೧೦॥

ಪರಮೇಶ್ವರನನ್ನು ನಾವು ಭಕ್ತಿಭಾವದಿಂದ ಸಂತೋಷಗೊಳಿಸಿದರೆ ಆಗ ಅವನೇ ತನ್ನ ಮನ್ಮಥಕಾರ್ಯಪ್ರಸಕ್ತವಾಗಿರುವ ಪಾಶಗಳನ್ನು ತೆಗೆದು ನಮ್ಮನ್ನು ವೈಷಯಿಕ ಸುಖದಿಂದ ನಿವೃತ್ತಿಮಾಡುತ್ತಾನೆ. ಬೇರೆ ಏನೂ ವಿಶೇಷವಿಲ್ಲ. ಭಕ್ತಿಭಾವನೆಯಿಂದ ನಾವು ಮುಕ್ತಿಯನ್ನು ಪಡೆಯಬೇಕೇ ವಿನಾ ಬೇರೆ ಯಾವ ಮಾರ್ಗವೂ ನಮಗೆ ಸುಲಭವಾಗಿ ದೊರೆಯಲಾರದು. ॥೧೧॥

ಭಕ್ತಿರೇವ ವಿರೂಪಾಕ್ಷೇ ಭವಮೋಕ್ಷಪ್ರದಾಯಿನೀ ।
ಭಾವಗ್ರಾಹ್ಯೋ ಮಹಾದೇವಃ ಶಿವಃ ಶಶಿವಿಭೂಷಣಃ ॥೧೨॥

ಲಿಂಗೇಽರ್ಚಿತೋ ಬಿಲ್ವಪತ್ರೈಸ್ತುಷ್ಟಃ ಕಷ್ಟಾನಿ ನಾಶಯೇತ್ ।
ಶಿಪಿವಿಷ್ಟೇಷ್ಟಜನಕಂ ಲಿಂಗಂ ಮಂಗಲದಾಯಕಂ ॥೧೩॥

ಶಿವಭಕ್ತೈಃ ಕೃತಾಂ ಪೂಜಾಂ ಲಿಂಗೇ ಗೃಹ್ಣಾತಿ ಶಂಕರಃ ।
ಭಕ್ತಿಂ ಭುಕ್ತಿಂ ಚ ಮುಕ್ತಿಂ ಚ ದದಾತ್ಯೇವ ಮಹೇಶ್ವರಃ ॥೧೪॥

ವಿಷ್ಣುರ್ಮಹೇಶಲಿಂಗಾರ್ಚಾಂ ಕೃತ್ವಾ ಪಾಲಯತೇ ಜಗತ್ ।
ಮಯಾಪಿ ಸೃಜ್ಯತೇ ಲೋಕೋ ನೃಪ ಲಿಂಗಾರ್ಚನಾತ್ಸದಾ ॥೧೫॥

ವಿರೂಪಾಕ್ಷನೆನಿಸಿದ ಮಹಾದೇವನಲ್ಲಿ ಉಂಟಾದ ಭಕ್ತಿಯೇ ಈ ಸಂಸಾರ ಬಂಧನವನ್ನು ತೊಡೆದು ಶಾಶ್ವತವಾದ ಮೋಕ್ಷವನ್ನು ಕೊಡುವುದು. ಚಂದ್ರನನ್ನೆ ಅಲಂಕಾರಸಾಮಗ್ರಿಯಂತೆ ತಲೆಯಲ್ಲಿ ಧರಿಸಿ ಮೆರೆಯುತ್ತಿರುವ ಮಹಾದೇವನು ಕೇವಲ ಭಕ್ತಿಯಿಂದ ಮಾತ್ರ ವಿಶೇಷವಾಗಿ ಒಲಿಯುವನು. ॥೧೨॥

ಕೋಮಲವಾದ ಬಿಲ್ವಪತ್ರೆಗಳಿಂದ ಲಿಂಗದಲ್ಲಿ ಪೂಜಿಸಲ್ಪಟ್ಟ ಮಹಾದೇವನು ಸಂತುಷ್ಟನಾಗಿ ತನ್ನ ಭಕ್ತರ ಸಕಲ ತೊಂದರೆಗಳನ್ನೂ ನಾಶಪಡಿಸುವನು. ಶಿಪಿವಿಷ್ಟನೆನಿಸಿದ (ಕಿರಣರೂಪಿಯಾದ) ಆ ಮಹಾದೇವನ ಮಂಗಳಕರವಾದ ಲಿಂಗವು ಸರ್ವೇಷ್ಟಾರ್ಥಗಳನ್ನೂ ಕೊಡುವುದು. ॥೧೩॥

ಶಿವಲಿಂಗದಲ್ಲಿ ತನಗೆ ತನ್ನ ಭಕ್ತರು ಮಾಡುವ ಪೂಜೆಯನ್ನು ಪ್ರೀತಿಯಿಂದ ಸ್ವೀಕರಿಸಿ ಲೋಕಮಂಗಳಕರನಾದ ಮಹೇಶ್ವರನು ತನ್ನ ಭಕ್ತರಿಗೆ ತನ್ನಲ್ಲಿ ವಿಶೇಷವಾದ ಭಕ್ತಿಯನ್ನೂ, ಬೇಕಾದ ಭೋಗಸಾಮಗ್ರಿಗಳನ್ನೂ, ಮತ್ತು ಕೊನೆಗೆ ಶಾಶ್ವತವಾದ ಮೋಕ್ಷವನ್ನೂ ತಪ್ಪದೇ ಕೊಡುವನು. ॥೧೪॥

ಅಯ್ಯ ರಾಜನೇ, ಲಾಲಿಸು. ವಿಷ್ಣುವು ಈ ಮಹೇಶ್ವರನ ಶಿವಲಿಂಗವನ್ನು ಪೂಜೆಮಾಡಿ ಈ ಜಗತ್ತನ್ನೆಲ್ಲಾ ಅವನ ಅನುಗ್ರಹದಿಂದ ಪಾಲಿಸುತ್ತಿರುವನು. ನಾನೂ (ಬ್ರಹ್ಮನೂ) ಸಹ ಶಿವಲಿಂಗಪೂಜಾಮಹಿಮೆಯಿಂದ ಈ ಪ್ರಪಂಚವನ್ನು ಸೃಷ್ಟಿಮಾಡಲು ಸಮರ್ಥನಾಗಿರುವೆನು. ॥೧೫॥

ಇಂದ್ರೋಽಪ್ಯಯಂ ನೃಪಶ್ರೇಷ್ಠ ಲಿಂಗಸಂಪೂಜನಾತ್ಸುರಾನ್ ।
ವೃತ್ರಜಂಭಾದಿಕಾನ್ಹತ್ವಾ ತ್ರಿದಿವಂ ಪಾಲಯತ್ಯಪಿ ॥೧೬॥

ಏತೇ ಸರ್ವೇ ದಿವಿಷದಃ ಸರ್ವೇ ಚ ಮುನಯೋಽಪ್ಯಮೀ ।
ಮಹಾದೇವಸ್ಯ ಲಿಂಗಾರ್ಚಾಂ ಕೃತ್ವಾ ಓಜಸ್ವಿನೋಽಭವನ್ ॥೧೭॥

ಭಸ್ಮರುದ್ರಾಕ್ಷಧಾರ್ಯೇವ ಲಿಂಗಪೂಜಾಧಿಕಾರವಾನ್ ।
ಪಂಚಾಕ್ಷರಾವರ್ತನೇಽಪಿ ರುದ್ರಾಧ್ಯಾಯಜಪೇಽಪಿ ಚ ॥೧೮॥

ಭಸ್ಮರುದ್ರಾಕ್ಷಹೀನಾಂಗೋ ಯೋ ಲಿಂಗಂ ಸಕೃದರ್ಚಯೇತ್ ।
ಕೃತ್ವಾಪಿ ಶಿವಲಿಂಗಾರ್ಚಾಂ ನರಕಂ ಯಾತಿ ಸಾನ್ವಯಃ ॥೧೯॥

ರಾಜಶ್ರೇಷ್ಠನೇ, ಈ ದೇವೇಂದ್ರನೂ ಕೂಡ ಶಿವಲಿಂಗಪೂಜೆಯ ಪ್ರಭಾವದಿಂದಲೇ ವೃತ್ರಾಸುರ, ಜಂಭಾಸುರ ಮುಂತಾದ ದುಷ್ಟ ರಾಕ್ಷಸರನ್ನು ನಾಶಮಾಡಿ ನಿರಾತಂಕವಾಗಿ ಸ್ವರ್ಗಲೋಕದಲ್ಲಿ ರಾಜ್ಯಭಾರಮಾಡುತ್ತಾ ದೇವತೆಗಳನ್ನು ರಕ್ಷಣೆ ಮಾಡುತ್ತಿರುವನು. ॥೧೬॥

ಉಳಿದ ದೇವತೆಗಳೂ ಮತ್ತು ಇಲ್ಲಿರುವ ಎಲ್ಲಾ ಮುನಿಗಳೂ ಆ ಮಹೇಶನ ಲಿಂಗವನ್ನು ಪೂಜೆಮಾಡಿಯೇ ದಿವ್ಯತೇಜಸ್ವಿಗಳಾಗಿಯೂ ಪರಾಕ್ರಮಶಾಲಿಗಳಾಗಿಯೂ ಆಗಿರುವರು. ॥೧೭॥

ಭಸ್ಮ ಮತ್ತು ರುದ್ರಾಕ್ಷ ಇವುಗಳನ್ನು ವಿಧಿಪೂರ್ವಕವಾಗಿ ಧಾರಣೆಮಾಡಿದವನೇ ಆ ಶಿವಲಿಂಗಪೂಜೆಯಲ್ಲಿಯೂ, ಶಿವಪಂಚಾಕ್ಷರಮಂತ್ರಜಪದಲ್ಲಿಯೂ ಅಲ್ಲದೆ ರುದ್ರಾಧ್ಯಾಯರೂಪವಾದ ಮಂತ್ರೋಚ್ಚಾರಣೆಯಲ್ಲಿಯೂ ಅಧಿಕಾರಿಯೆನಿಸುವನು. ॥೧೮॥

ಅಯ್ಯ ರಾಜನೇ, ಭಸ್ಮ ಮತ್ತು ರುದ್ರಾಕ್ಷಮಣಿ ಇವುಗಳನ್ನು ಧಾರಣೆ ಮಾಡದೆ ಶಿವಲಿಂಗವನ್ನು ಅನೇಕಬಾರಿ ಪೂಜೆಮಾಡಿದವನೂ ನರಕಿಯಾಗುವನು. ತಾನು ಶಿವಲಿಂಗಪೂಜೆಮಾಡಿದರೂ, ತನ್ನ ವಂಶಪಾರಂಪರ್ಯವಾಗಿ ಅವನು ನರಕವನ್ನೇ ಹೊಂದುವನೆಂದು ತಿಳಿ. ॥೧೯॥

ಭಸ್ಮತ್ರಿಪುಂಡ್ರರುದ್ರಾಕ್ಷಹೀನಂ ನೇಕ್ಷತಿ ಶಂಕರಃ ।
ಭಸ್ಮರುದ್ರಾಕ್ಷಧಾರ್ಯೇವ ಕೃಪಾಪಾತ್ರಂ ಮಹೇಶಿತುಃ ॥೨೦॥

ಯಥಾಂಬಾವದನಂ ಕೃಷ್ಣಪಂಕಜಂ ವೀಕ್ಷತೇ ಶಿವಃ ।
ಯಥಾ ವೇತಂಡತುಂಡಾದಿಧೃತವಕ್ತ್ರಂ ಮಹೇಶ್ವರಃ ॥೨೧॥

ಷಣ್ಮುಖಾಮುಲವಕ್ತ್ರೇಷು ನೇತ್ರವಮಾಲಾಂ ಯಥಾ ಹರಃ
ಸ್ವಲೋಲನಯನಾಪಾಂಗಸಂಗಿನಂ ಕುರುತೇಽಥ ತಂ ॥೨೨॥

ಭಸ್ಮರುದ್ರಾಕ್ಷಸಂಪನ್ನಂ ಶಿವಭಕ್ತಂ ಶಿವಾರ್ಚಕಂ ।
ತದ್ದತ್ತಂ ಬಿಲ್ವಪತ್ರಂ ವಾ ನೀರಂ ವಾ ಫಲಮೇವ ವಾ ॥೨೩॥

ಭಕ್ತವಶ್ಯೋ ಮಹಾದೇವಃ ಸಾಕ್ಷಾದ್ಗೃಹ್ಣಾತಿ ಭೂಪತೇ ।
ಪುಂಡ್ರಾಂತರಂ ನರೋ ಧೃತ್ವಾ ಪೂಜಯಿಷ್ಯತಿ ಯಃ ಶಿವಂ ॥೨೪॥

ಶಂಕರನು, ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಮಾಲೆ ಇವುಗಳನ್ನು ಧಾರಣೆ ಮಾಡದವನನ್ನು ನೋಡುವುದೂ ಇಲ್ಲ. ಆ ಮಹೇಶ್ವರನ ದಯೆಗೆ ಭಸ್ಮ ಮತ್ತು ರುದ್ರಾಕ್ಷ ಇವುಗಳನ್ನು ಧರಿಸಿದವನು ಮಾತ್ರ ಪಾತ್ರನಾಗುವನೆಂದು ತಿಳಿ. ||೨೦||

ಪರಶಿವನು ಕಪ್ಪು ತಾವರೆಯಂತಿರುವ (ಕನ್ನೈದಲೆಯಂತಿರುವ) ಗಿರಿಜಾದೇವಿಯ ಮುಖವನ್ನು ಅನುರಾಗಪೂರ್ವಕವಾಗಿ ನೋಡುವಂತೆಯೂ, ಗಜವದನನೇ ಮುಂತಾದವರ ಮುಖಗಳನ್ನು ಸ್ನೇಹವಿಶ್ವಾಸಗಳಿಂದ ವೀಕ್ಷಿಸುವಂತೆಯೂ, ಷಣ್ಮುಖನೇ ಮೊದಲಾದವರ ಮುಖಗಳಲ್ಲಿ ತನ್ನ ಸಂಪೂರ್ಣ ದೃಷ್ಟಿ ಸಮೂಹವನ್ನೇ ಅನುರಾಗದಿಂದಲೂ ಪ್ರೀತಿಯಿಂದಲೂ ಬೀರುವಂತೆಯೂ, ಭಸ್ಮ, ರುದ್ರಾಕ್ಷ ಇವುಗಳನ್ನು ಧರಿಸಿರುವ ತನ್ನ ಭಕ್ತನ ಮೇಲೆಯೂ ತನ್ನ ಚಂಚಲವಾದ ಕಡೆಗಣ್ಣಿನ ನೋಟವು ಬೀಳುವಂತೆ ಅನುಗ್ರಹಿಸುತ್ತಾನೆ. ||೨೧-೨೨||

ಅಯ್ಯ ರಾಜನೇ, ಆ ತನ್ನ ಭಕ್ತನು ತನಗೆ ಸಮರ್ಪಿಸಿದ ಬಿಲ್ವಪತ್ರೆ, ನೀರು, ಹಣ್ಣು ಮುಂತಾದವುಗಳನ್ನು ಭಕ್ತಪರಾಧೀನನಾದ ಆ ಮಹಾದೇವನು ಪ್ರೀತಿಯಿಂದ ಸ್ವೀಕರಿಸುವನು. ಭಸ್ಮತ್ರಿಪುಂಡ್ರವನ್ನು ಬಿಟ್ಟು, ಬೇರೆ ಲಾಂಛನವನ್ನು ಧರಿಸಿ, ಶಿವನನ್ನು ಪೂಜೆಮಾಡುವ ಮಾನವನನ್ನು ಆ ಮಹಾದೇವನು ತನ್ನ ಮೂರನೆಯ ಕಣ್ಣಿನ ಅಗ್ನಿಜ್ವಾಲೆಯಿಂದ ದಹಿಸಿಬಿಡುವನು. ಅಲ್ಲದೇ ಶುಚಿರ್ಭೂತ

ಕೃಪೀಟಯೋನಿನೇತ್ರೋತ್ಥಜ್ವಾಲಯಾ ದಾಹಯೇಚ್ಚ ತಂ।
ತಂ ನೈವ ಪಶ್ಯತೀಶಾನ ಅಶುಚಿಂ ಶುಚಿಭಾಗ್ಯಥಾ ।೨೫॥

ತಸ್ಮಾತ್ತ್ವಂಪೂಜಯೇಚ್ಛಂಭುಂ ಭಸ್ಮಧಾರ್ಯೇವ ಸಂತತಂ।
ತ್ರಿಪುಂಡ್ರಾಮಲಭಸ್ಮಾಂಕಂ ರುದ್ರಾಕ್ಷವರಧಾರಿಣಂ ॥೨೬॥

ಸ್ವದೇಶೇ ಪೂಜಯಾಶು ತ್ವಂ ಯತಃ ಶಿವಸಮೋ ಹಿ ಸಃ।
ಭಸ್ಮರುದ್ರಾಕ್ಷಹೀನಾಂಗಂ ದ್ವಿಜಂ ವಾ ವೇದಪಾರಗಂ ॥೨೭॥

ನಿಃಸಾರಯಾಶು ರಾಷ್ಟ್ರಾತ್ತ್ವಂ ಯತಿಂ ವೇದಾಂತಪಾರಗಂ।
ಭಸ್ಮರುದ್ರಾಕ್ಷಹೀನಾಂಗೋ ಯತಿರ್ವೇದಾಂತಸಂಭವಂ ॥೨೮॥

ನಾದವನು ಅಶುಚಿಯಾದವನನ್ನು ದೂರಮಾಡುವಂತೆ ಮಹಾದೇವನು ಬೇರೆ ಲಾಂಛನಗಳನ್ನು ಧರಿಸಿ ತನ್ನನ್ನು ಪೂಜಿಸುವವರನ್ನು ತಿರಸ್ಕರಿಸಿಬಿಡುವನು. ॥೨೩-೨೪-೨೫॥

ಆದುದರಿಂದ ಯಾವಾಗಲೂ ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷ ಇವುಗಳನ್ನು ಧರಿಸಿಯೇ ಆ ಶಂಭುವನ್ನು ನೀನು ಪೂಜೆಮಾಡುವನಾಗು. ಪರಿಶುದ್ಧವಾದ ಭಸ್ಮದಿಂದ ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಿ, ಶ್ರೇಷ್ಠವಾದ ರುದ್ರಾಕ್ಷಮಾಲೆಯನ್ನು ಧಾರಣಮಾಡಿರುವವನು ಆ ಪರಶಿವನಿಗೆ ಸದೃಶನೇ ಸರಿ. ಆದುದರಿಂದ ಅಂತಹ ಮಹಾನುಭಾವನನ್ನು ನೀನು ನಿನ್ನ ದೇಶದಲ್ಲಿ ಭಕ್ತಿಯಿಂದ ತಪ್ಪದೆ ಪೂಜೆಮಾಡು. ॥೨೬॥

ನಿನ್ನ ದೇಶದಲ್ಲಿ ವಾಸಿಸುತ್ತಿರುವವರಲ್ಲಿ ಭಸ್ಮ, ರುದ್ರಾಕ್ಷ ಇವುಗಳನ್ನು ಧಾರಣೆಮಾಡದ ಅವಯವವುಳ್ಳವನು ವೇದಪಾರಂಗತನಾದ ಬ್ರಾಹ್ಮಣನಾಗಿದ್ದರೂ, ವೇದಾಂತಶಾಸ್ತ್ರಪಾರಂಗತನಾಗಿ ಸಂನ್ಯಾಸಿಯೇ ಆಗಿದ್ದರೂ, ಯಾವುದನ್ನೂ ಎಣಿಸದೆ ಕೂಡಲೇ ನಿನ್ನ ದೇಶದಿಂದ ಅವನನ್ನು ಕೂಡಲೆ ಹೊರಹೊರಡಿಸುವನಾಗು. ॥೨೭॥

ಭಸ್ಮ ಮತ್ತು ರುದ್ರಾಕ್ಷ ಇವುಗಳನ್ನು ಧಾರಣೆಮಾಡದ ಸಂನ್ಯಾಸಿಯು ಸದಾ ವೇದಾಂತಶ್ರವಣ ಮಾಡುತ್ತಿದ್ದರೂ ಮತ್ತು ಓದುತ್ತಿದ್ದರೂ ಆ ವೇದಾಂತಶಾಸ್ತ್ರದಿಂದ ಸರಿಯಾಗಿ ಉಂಟಾಗಬೇಕಾದ ವಿಜ್ಞಾನವನ್ನು (ಬ್ರಹ್ಮಜ್ಞಾನವನ್ನು) ಎಂದಿಗೂ

ನೈವ ಜ್ಞಾನಮವಾಪ್ನೋತಿ ಶೃಣ್ವನ್ನಪಿ ಸದಾ ನೃಪ ।
ಜ್ಞಾನದಾತಾ ಯಥಾ ಶಂಭುಸ್ತತ್ಕೃಪಾಹೀನತೋ ಧ್ರುವಮ್ ॥೨೯॥

ಭಸ್ಮರುದ್ರಾಕ್ಷಸಂಪನ್ನಂ ಚಂಡಾಲಮಪಿ ವಾಸಯ ।
ನೃಪ ಕಿಂ ಬಹುನೋಕ್ತೇನ ಶಿವಪ್ರೀತಿಕರಂ ತ್ವಿದಮ್ ॥೩೦॥

ತವ ಪೂರ್ವಭವೋತ್ಥಾಂ ಹಿ ಕಥಾಂ ವಕ್ಷ್ಯೇ ನೃಪೋತ್ತಮ ।
ತ್ವಂ ಯಾಚಕವರಃ ಪೂರ್ವಂ ವಿಪ್ರಬಂಧುಃ ಕಿಲಾಭವಃ ॥೩೧॥

ಶೈವದತ್ತಮಹಾವಿದ್ಯಾದಗ್ಧಪಾತಕಪರ್ವತಃ ।
ಉಪಾಸ್ಯ ಚ ಮಹಾಕಾಲಕ್ಷೇತ್ರೇಽಸ್ಮಿನ್ಮರಣಂ ಗತಃ ॥೩೨॥

ಶಾಂಭವಾನ್ನೇನ ಪುಷ್ಟಸ್ತ್ವಂ ಸದಾರಶ್ಚ ವಿಶೇಷತಃ ।
ಭಾರ್ಯಾ ತ್ವಾಮನುಮಾರ್ಯೈಕಾ ಪತಿವ್ರತಪರಾಯಣಾ ॥೩೩॥

---

ಪಡೆಯಲಾರನು. ಅಯ್ಯ ರಾಜನೇ, ಆ ಜ್ಞಾನವನ್ನು ಕೊಡತಕ್ಕವನು ಸಾಕ್ಷಾನ್ಮಹೇಶ್ವರನೇ ಆಗಿರುವುದರಿಂದ ಅವನ ಕೃಪೆಯೇ ಇಲ್ಲದಿರುವಾಗ ಅಂಥವನಿಗೆ ಹೇಗೆ ತಾನೇ ಬ್ರಹ್ಮಜ್ಞಾನವುಂಟಾದೀತು. ॥೨೮-೨೯॥

ಅಯ್ಯ ರಾಜನೇ, ಹೆಚ್ಚಿಗೆ ಹೇಳುವುದರಿಂದೇನು ಪ್ರಯೋಜನ. ಭಸ್ಮ, ರುದ್ರಾಕ್ಷ, ಇವುಗಳನ್ನು ಧಾರಣೆಮಾಡಿದವನು ಒಂದುವೇಳೆ ಚಂಡಾಲನೇ ಆಗಿದ್ದರೂ ಅವನನ್ನು ಓಡಿಸದೇ ನಿನ್ನ ದೇಶದಲ್ಲಿ ವಾಸಮಾಡುವಂತೆ ನಿಯಮಿಸು. ಇದರಿಂದ ಆ ಪರಶಿವನಿಗೆ ಪ್ರೀತಿಯುಂಟಾಗುವುದು. ॥೩೦॥

ಚಿತ್ರರಥನೇ, ಇನ್ನು ನಿನ್ನ ಪೂರ್ವಜನ್ಮದ ಕಥೆಯನ್ನು ತಿಳಿಸುವೆನು ಕೇಳು; ರಾಜೇಂದ್ರ, ಹಿಂದಿನ ಜನ್ಮದಲ್ಲಿ ನೀನು ಹೀನಬ್ರಾಹ್ಮಣನಾಗಿ ಯಾಚಕವೃತ್ತಿಯಲ್ಲಿ ನಿಪುಣನಾಗಿದ್ದೆ. ಆಗ ದೈವಯೋಗದಿಂದ ನಿನಗೆ ಒಬ್ಬ ಶೈವಶ್ರೇಷ್ಠನು ಶಿವಪಂಚಾಕ್ಷರೀಮಹಾವಿದ್ಯೆಯನ್ನುಪದೇಶಿಸಲು ಅದರ ಮಹಿಮೆಯಿಂದ ನಿನ್ನ ಅಗಾಧವಾದ ಪರ್ವತಕ್ಕೆ ಸಮನಾಗಿದ್ದ ಪಾಪವನ್ನೆಲ್ಲಾ ಕಳೆದುಕೊಂಡು, ಇದೇ ಮಹಾಕಾಲಕ್ಷೇತ್ರದಲ್ಲಿಯೇ ಮಹಾಕಾಲೇಶ್ವರನನ್ನು ಪೂಜಿಸಿ ಕೊನೆಗೆ ಇಲ್ಲಿಯೇ ಮರಣವನ್ನೈದಿದೆ. ॥೩೧-೩೨॥

ಹಿಂದೆ ನಿನ್ನ ಪತ್ನಿಯೊಡನೆ ವಿಶೇಷವಾಗಿ ಶಿವನಿಗೆ ನಿವೇದನಮಾಡಿದ ಅನ್ನವನ್ನು ತಿಂದು ಕಾಲಕಳೆಯುತ್ತಾ ಪುಷ್ಟನಾಗಿದ್ದೆ. ಹೀಗಿರುವಾಗ ನೀನು

ಅಕೃತ್ರಿಮೇಣ ಭಾವೇನ ತ್ರ್ಯಂಬಕಸ್ತೋಷಿತಸ್ತ್ವಯಾ ।
ಯಮೋಽಪಿ ಚಿತ್ರಗುಪ್ತೇನ ಮಾರ್ಷ್ಟಿ ತ್ವತ್ಪಾಪಪತ್ರಿಕಾಂ ॥೩೪॥

ಪೂಜಿತಸ್ತ್ವಂ ಯಮೇನಾಪಿ ಸುತ್ರಾಮ್ಣಾ ವರುಣೇನ ಚ ।
ತತ್ರ ಭುಕ್ತ್ವಾ ಸುಖಾನ್ಯೇವ ತಸ್ಮಾದ್ಭೂತಲಮಾಶ್ರಿತಃ ॥೩೫॥

ಮಹಾರಥಸುತೋ ಜಾತೋ ನಾಮ್ನಾ ಚಿತ್ರರಥೋ ಬಲೀ ।
ಚಂಡಭಾನುಕುಲಶ್ರೇಷ್ಠಃ ಪ್ರಚಂಡತರವಿಕ್ರಮಃ ॥೩೬॥

ತ್ವದ್ದೋರ್ದಂಡೇಷುಕೋದಂಡಖಂಡಿತಾರಾತಿಮಂಡಲಃ ।
ಆಖಂಡಲೋಽಪಿ ಸಾಹ್ಯಂ ತೇ ಕಾಂಕ್ಷತೇ ದಿತಿಜಾರ್ದಿತಃ ॥೩೭॥

ದೈವವಶದಿಂದ ಮೃತನಾಗಲು, ನಿನ್ನ ಏಕಮಾತ್ರ ಪತ್ನಿಯು ಪತಿವ್ರತಾಧರ್ಮ ಪರಾಯಣಳಾಗಿದ್ದುದರಿಂದ ತಾನೂ ನಿನ್ನನ್ನನುಸರಿಸಿ ಮೃತಳಾದಳು. ೩೩

ನೀನು ಸ್ವಭಾವಸಿದ್ಧವಾದ ಭಕ್ತಿಯಿಂದ ಆ ಮುಕ್ಕಣ್ಣನನ್ನು ಸಂತೋಷ ಪಡಿಸಿದುದರಿಂದ ಯಮನೂ ಸಹ ನೀನು ಹಿಂದೆ ಮಾಡಿದ್ದ ಪಾಪಗಳನ್ನೆಲ್ಲ ಬರೆದಿಟ್ಟಿದ್ದ ಪತ್ರಿಕೆಯನ್ನು ತರಿಸಿ ಚಿತ್ರಗುಪ್ತನಿಂದ ಅವೆಲ್ಲವನ್ನೂ ಅಳಿಸಿಹಾಕಿಸಿದನು. ॥೩೪॥

ಆ ಯಮಧರ್ಮನೂ, ದೇವೇಂದ್ರನೂ ಮತ್ತು ವರುಣನೂ ಸಹ ನಿನ್ನನ್ನು ಶಿವಭಕ್ತನೆಂದು ಬಹಳ ಗೌರವದಿಂದ ಪೂಜಿಸಿದರು. ಆಮೇಲೆ ನೀನು ಕೆಲವು ದಿವಸ ಆ ಸ್ವರ್ಗದಲ್ಲಿಯೇ ವಾಸಮಾಡುತ್ತಾ ಅಲ್ಲಿಯ ಸುಖಗಳನ್ನೆಲ್ಲಾ ಸಂಪೂರ್ಣವಾಗಿ ಅನುಭವಿಸಿ, ಪುನಃ ಈ ಭೂಮಂಡಲಕ್ಕೆ ಬಂದೆ. ॥೩೫॥

ಇಲ್ಲಿ ಮಹಾರಥಮಹಾರಾಜನ ಮಗನಾಗಿ ಚಿತ್ರರಥನೆಂಬ ಹೆಸರಿನಿಂದ ಜನಿಸಿ, ಬಲಿಶಾಲಿಯೂ ಪ್ರಚಂಡವಾದ ಪರಾಕ್ರಮವುಳ್ಳವನಾಗಿ ಸೂರ್ಯವಂಶದಲ್ಲಿ ಶ್ರೇಷ್ಠನೆಂದು ಪ್ರಸಿದ್ಧನಾದೆ. ॥೩೬॥

ದಂಡಸದೃಶವಾದ ಈ ನಿನ್ನ ಬಾಹುಗಳಲ್ಲಿ ಧರಿಸಿದ ಧನುರ್ಬಾಣಗಳಿಂದ ಸಕಲ ಶತ್ರುಸಮೂಹವೂ ಧ್ವಂಸಮಾಡಲ್ಪಟ್ಟಿತು. ಇದನ್ನು ನೋಡಿ ದೇವೇಂದ್ರನೂ, ದೈತ್ಯರ (ರಾಕ್ಷಸರ) ಹಿಂಸೆಯಿಂದ ಪೀಡಿತನಾಗಿ ರಾಕ್ಷಸರನ್ನು ನಿಗ್ರಹಿಸಲು ಪರಾಕ್ರಮಶಾಲಿಯಾದ ನಿನ್ನ ಸಹಾಯವನ್ನು ಈಗ ಕೋರುತ್ತಿರುವನು. ॥೩೭॥

ಯಾ ಸಾ ತೇ ಗೃಹಿಣೀ ಬಾಲಾ ನಾಮ್ನಾ ರತ್ನವತೀ ನೃಪ।
ತವಾಗ್ರಮಹಿಷೀ ಜಾತಾ ಸುತಾಸ್ತೇ ಸುರಥಾದಯಃ ॥೩೮॥

ಏತಾದೃಶಂ ಮಹಾಭಾಗ್ಯಂ ಮಹಾಕಾಲಾರ್ಚನಾದಭೂತ್ ।
ಮಹಾಶೈವಾಂಗಸಂಗೇನ ಮಹಾವಿದ್ಯಾಪ್ರಭಾವತಃ ॥೩೯॥

ಜಾತಿಸ್ಮರಸ್ತ್ವಂ ನೃಪತಿಃ ಸ್ಮರಶಾಸನಪೂಜಕಃ ।
ಏತತ್ತೇ ಭಾಸುರಂ ಜನ್ಮ ಭೂಸುರಸ್ಯ ವಿಶೇಷತಃ ॥೪೦॥

ಮಹಾದೇವಂ ಮಹಾಭಾಗ್ಯೈಃ ಸಂಪೂಜಯ ಮಹೀಪತೇ।
ಅಭಾಗ್ಯಾನಾಂ ನ ಸೌಭಾಗ್ಯಪತಿಪೂಜಾಮತಿರ್ಭವೇತ್ ॥೪೧॥

---

ಅಯ್ಯ ರಾಜನೇ, ಯೋಗ್ಯಕುಲೋತ್ಪನ್ನಳೂ ನವಯೌವನಭರಿತಳೂ ಆದ ರತ್ನವತಿಯೆಂಬ ಆ ಬಾಲಿಕೆಯು ನಿನಗೆ ರಾಣಿಯಾದಳು. ನಿನಗೆ ಆ ಮಹಾರಾಣಿಯಲ್ಲಿ ಸುರಥನೇ ಮೊದಲಾದ ಉತ್ತಮ ಪುತ್ರರು ಜನಿಸಿದರು. ॥೩೮॥

ಈರೀತಿಯಾದ ಮಹಾಭಾಗ್ಯವು ನಿನಗೆ ಮಹಾಕಾಲೇಶ್ವರನ ಪೂಜೆಯಿಂದಲೂ ಮಹಾಶೈವನ ಅವಯುವಸಂಬಂಧದಿಂದಲೂ, ಅವನು ಉಪದೇಶಮಾಡಿದ ಶಿವ ಪಂಚಾಕ್ಷರೀ ಮಹಾವಿದ್ಯೆಯ ಪ್ರಭಾವದಿಂದಲೂ ಉಂಟಾಯಿತು. ॥೩೯॥

ಮನ್ಮಥಶತ್ರುವಿನ ಪೂಜಕನಾಗಿರುವ ನೀನು ಆ ದೇವನ ಅನುಗ್ರಹವಿಶೇಷದಿಂದಲೇ ಪೂರ್ವಜನ್ಮವೃತ್ತಾಂತವನ್ನರಿಯುವ ಸಾಮರ್ಥ್ಯವುಳ್ಳವನಾಗಿರುವೆ. ಪೂರ್ವಜನ್ಮದಲ್ಲಿ ಬ್ರಾಹ್ಮಣನಾಗಿದ್ದ ನಿನಗೆ ಇಂತಹ ಪ್ರಕಾಶಮಾನವಾಗಿ ಹೊಳೆಯುತ್ತಿರುವ ಈ ಜನ್ಮವು ವಿಶೇಷವಾಗಿ ಆ ಮಹಾದೇವನ ಅನುಗ್ರಹದಿಂದಲೇ ಬಂದುದೆಂದು ತಿಳಿ. ॥೪೦॥

ಸಕಲ ವೈಭವಗಳಿಗೂ ಸ್ವಾಮಿಯಾದ ಚಿತ್ರರಥ ಮಹಾರಾಜನೇ, ನಿನ್ನಲ್ಲಿರುವ ಮಹಾಭಾಗ್ಯಗಳಿಂದ ಆ ಮಹಾದೇವನನ್ನು ವೈಭವದಿಂದ ಪೂಜೆಮಾಡು. ಭಾಗ್ಯಹೀನರಾದವರಿಗೆ ಸಕಲಸೌಭಾಗ್ಯಗಳಿಗೂ ಸ್ವಾಮಿಯಾಗಿರುವ ಮಹಾದೇವನ ಪೂಜೆಯಲ್ಲಿ ಹೇಗೆತಾನೆ ಬುದ್ಧಿಯುಂಟಾದೀತು? ॥೪೧॥

ಯೇ ಸರ್ವಮಂಗಲಾಕಾಂತಂ ಮಹೇಶಂ ಶರಣಂ ಗತಾಃ ।
ತೇ ಸರ್ವಮಂಗಲಾಕಾರಾ ಭವಂತ್ಯೇವ ಪದೇ ಪದೇ ॥೪೨॥

ಅಮಂಗಲತರಾಃ ಸರ್ವೇ ಮಂಗಲೇಶಾರ್ಚನೋಜ್ಝಿತಾಃ ।
ಯಥಾ ಮಹಾಕಾಲಗಣೋ ಗಣತ್ವಂ ಪ್ರಾಪ ಶಂಕರಾತ್ ॥೪೩॥

ತಥಾ ತ್ವಮಪಿ ಭೂಪಾಲ ದೇಹಾಂತೇ ಗಣಪೋ ಭವ ।
ಶ್ರುತೀಡಿತಮಹೇಶಸ್ಯ ತಥಾ ಗಣಪತೇಃ ಪ್ರಭೋಃ ॥೪೪॥

ಇತ್ಥಂ ವಾಣೀಪತೇರ್ವಾಣೀಂ ಶ್ರುತ್ವಾ ಚಿತ್ರರಥೋ ನೃಪಃ ।
ಉವಾಚ ಪ್ರಾಂಜಲಿರ್ವಾಕ್ಯಂ ಬ್ರಹ್ಮಾಣಂ ವಿನಯಾನ್ವಿತಃ ॥೪೫॥

॥ ರಾಜೋವಾಚ ॥

ಉತ್ಫುಲ್ಲಾಮಲರಾಜೀವರಾಜಾಸನವಿರಾಜಿತ ।
ಸುರಮ್ಯವೇಣೀವಾಣೀಶ ಗೀರ್ವಾಣಗಣವಂದಿತ ॥೪೬॥

---

ಸರ್ವಮಂಗಳಾದೇವಿಯ ರಮಣನಾದ ಮಹೇಶ್ವರನನ್ನು ಮರೆಹೊಕ್ಕ ಜನರು ಪದೇ ಪದೇ ಸಕಲ ಸೌಭಾಗ್ಯಗಳನ್ನೂ ಪಡೆದು ಸರ್ವಸೌಭಾಗ್ಯಸ್ವರೂಪರೇ ಆಗುತ್ತಾರೆ. ॥೪೨॥

ಓ ರಾಜನೇ, ಮಂಗಲಸ್ವರೂಪಳಾದ ದೇವಿಯ ರಮಣನಾದ ಮಹೇಶನ ಪೂಜೆಯನ್ನು ಬಿಟ್ಟು ಉಳಿದುದೆಲ್ಲವೂ ಅಮಂಗಳಕರವೆಂದೇ ಭಾವಿಸು. ಮಹಾ ಕಾಲನ ಗಣವು ಮಹೇಶ್ವರನನ್ನು ಪೂಜಿಸಿ ಅವನ ಅನುಗ್ರಹದಿಂದ ಗಣತ್ವವನ್ನು ಪಡೆದಂತೆ ನೀನೂ ಈ ಜನ್ಮ ಕಳೆದನಂತರ ವೇದಸ್ತುತನೂ, ಸಕಲ ಗಣಾಧಿಪತಿಯೂ ಆದ ಶಂಕರನ ಗಣಗಳಿಗೆ ಅಧಿಪತಿಯೆನಿಸುವೆ. ॥೪೩-೪೪॥

ಈ ರೀತಿ ನುಡಿದ ಸರಸ್ವತೀರಮಣನಾದ ಬ್ರಹ್ಮನ ಮಾತುಗಳನ್ನು ಕೇಳಿ ಚಿತ್ರರಥಮಹಾರಾಜನು ಬ್ರಹ್ಮನಿಗೆ ಕೈಮುಗಿದು ವಿನಯದಿಂದ ಕೆಲವು ಮಾತು ಗಳನ್ನಾಡಿದನು. ॥೪೫॥

ವಿಕಸಿತವಾಗಿ ನಿರ್ಮಲವಾಗಿರುವ ಉತ್ತಮವಾದ ತಾವರೆ ಹೂವೆಂಬ ಆಸನ ದಲ್ಲಿ ವಿರಾಜಿಸುತ್ತಿರುವ ದೇವನೇ, ಮನೋಹರವಾದ ಜಡೆಗಳಿಂದ ಶೋಭಿಸುತ್ತಿ ರುವ ಸರಸ್ವತಿಯ ಪತಿಯಾದ ನಿನ್ನನ್ನು ಸಕಲ ದೇವಗಣಗಳೂ ನಮಸ್ಕಾರಮಾಡು

ಕೋಽಸೌ ಮಹಾಕಾಲಗಣೋ ಗಣೇಶಾರ್ಚನತತ್ಪರಃ ।
ಶಿಪಿವಿಷ್ಟೇಷ್ಟಸದ್ಭಾವೋ ವಿನಷ್ಟಾಶುಭಭಾವನಃ ॥೪೭॥

ಕುಲೇಽಸ್ತಿ ಕಸ್ಯ ತಜ್ಜನ್ಮ ಸುಜನ್ಮ ಮಚ್ಛ್ರುತಿಂ ಗತಃ ।
ಕಾ ಮಾತಾ ತಸ್ಯ ಕಿಂ ಗೋತ್ರಂ ಗೋತ್ರಭಿದ್ಗಾತ್ರಸನ್ನಿಭಃ ॥೪೮॥

ವಸುಧಾಧಿಪತೇರ್ವಾಕ್ಯಂ ಶ್ರುತ್ವಾ ಮಾಧುರ್ಯವಾಗ್ಗುಣಂ ।
ವೇಧಾ ವಕ್ತುಮಥಾರೇಭೇ ಮಹಾಕಾಲೋದ್ಭವಂ ತದಾ ॥೪೯॥

॥ ಪಿತಾಮಹ ಉವಾಚ ॥

ಶೃಣು ರಾಜೇಂದ್ರ ವಕ್ಷ್ಯಾಮಿ ಮೃಗೇಂದ್ರಸಮವಿಕ್ರಮ ।
ಅಸ್ತ್ಯಸ್ಮಿನ್ವಸುಧಾಪೀಠೇ ಕುಮುದೋ ನಾಮ ಶೈಲಕಃ ॥೫೦॥

ಮಹಾಭೂಮಿಸರಃ ಫುಲ್ಲಕುಮುದಾಕಾರತಾಂ ಗತಃ ।
ರಮ್ಯಶಾಖಿವನೋಪೇತಃ ಶಾಖಾಮೃಗಗಣಾಶ್ರಯಃ ॥೫೧॥

---

ತ್ತಿರುವರು. ಪ್ರಭೋ, ಗಣಾಧಿಪತಿಯೆನಿಸಿದ ಆ ಮಹಾದೇವನ ಪೂಜೆಯಲ್ಲಿ ತತ್ಪರರಾಗಿ, ಆ ಶಿಪಿವಿಷ್ಟಸಂಜ್ಞಕನಾದ (ಕಿರಣಸ್ವರೂಪನಾದ) ಮಹೇಶನಲ್ಲಿರುವ ಭಕ್ತಿಯಿಂದ ಸಕಲ ಅನಿಷ್ಟಭಾವನೆಯನ್ನೂ ನೀಗಿಸುವ ಅಂತಹ ಮಹಾಕಾಲಗಣ ಯಾವುದು ? ಅದನ್ನು ತಿಳಿಸಬೇಕು. ॥೪೬-೪೭॥

ಉತ್ತಮಕುಲಪ್ರಸೂತನೆನಿಸಿ ನನ್ನ ಶ್ರವಣೇಂದ್ರಿಯಕ್ಕೆ ಗೋಚರನಾಗಿರುವ ಆ ಮಹಾನುಭಾವನು ಯಾವ ವಂಶದಲ್ಲಿ ಜನ್ಮ ತಾಳಿದನು ? ಅವನ ತಾಯಿ ಯಾರು ? ಇಂದ್ರನ ಶರೀರದಂತೆ ಪ್ರಜ್ವಲಿಸುವ ದೇಹವುಳ್ಳ ಆ ಮಹಾತ್ಮನ ಗೋತ್ರ ಯಾವುದು ? ದಯೆಯಿಟ್ಟು ತಿಳಿಸಬೇಕೆಂದು ಪ್ರಾರ್ಥಿಸಿದನು. ॥೪೮॥

ಮಾಧುರ್ಯಗುಣಭರಿತವಾದ ವಾಗ್ಜಾಲಗಳುಳ್ಳ ಆ ಭೂಪತಿಯ ವಾಕ್ಯವನ್ನು ಕೇಳಿ ಬ್ರಹ್ಮದೇವನು, ಆ ಮಹಾಕಾಲನ ಉತ್ಪತ್ತಿಕ್ರಮ ಮುಂತಾದವುಗಳನ್ನು ಆ ಚಿತ್ರರಥನಿಗೆ ಹೇಳಲುಪಕ್ರಮಿಸಿದನು. ॥೪೯॥

ಸಿಂಹಕ್ಕೆ ಸದೃಶವಾದ ಪರಾಕ್ರಮವುಳ್ಳ ಎಲೈ ರಾಜೇಂದ್ರನೇ, ಕೇಳು ಈ ಭೂಪೀಠದಲ್ಲಿ ಕುಮುದ ಎಂಬ ಹೆಸರುಳ್ಳ ಒಂದು ಪರ್ವತವಿರುವುದು. ॥೫೦॥

ಆ ಪರ್ವತದ ಸಮೀಪದಲ್ಲಿ ದೊಡ್ಡ ಸರೋವರಗಳು, ಚೆನ್ನಾಗಿ ಅರಳಿದ ಕನ್ನೈದಿಲೆಯ ಆಕಾರವನ್ನೇ ಹೊಂದಿರುವಂತೆ ತೋರುತ್ತಾ ಕಪ್ಪಾದ ನೀರಿನಿಂದ

ವಸಂತಪುಷ್ಪಿತಾನೇಕಶಾಖಾಛಾದಿತಮಸ್ತಕಃ ।
ಸಾಲತಾಲತಮಾಲೈಲಾಪಿಪ್ಪಲಾಮಲಕೈರ್ಯುತಃ ॥೫೨॥

ಪುಂನಾಗನಾಗಜಂಬೀರಜಂಬೂನಿಂಬಕದಂಬಕಃ ।
ರಸಾಲಬಿಲ್ವಸರಲಭಲ್ಲಾತಕವಿಭೀತಕಃ ॥೫೩॥

ಶಮ್ಯರ್ಜುನಶಿರೀಷಾದಿಬಾಹೂಕ್ರಮುಕಚಂಪಕಃ ।
ಮಂದಾರಪಾಟಲಾಮೋದಃ ಕುದ್ದಾಲಪನಸಾವೃತಃ ॥೫೪॥

ಕಪಿತ್ಥಸಿಂಧುಕಾಲೋಧ್ರಮಧೂಕೋದ್ದಾಮಗಂಧಿಲಃ ।
ತಕ್ಕೋಲಾಂಕೋಲಹಿಂತಾಲಪ್ರಿಯಾಲೋತ್ಫುಲ್ಲಕೇತಕಃ ॥೫೫॥

ಶೋಭಿಸುತ್ತಿರುವುವು. ಅದರ ಅಕ್ಕಪಕ್ಕದಲ್ಲಿರುವ ಕಾಡುಗಳು ಮನೋಹರವಾದ ವೃಕ್ಷಸಮೂಹಗಳಿಗೆ ನೆಲೆಯಾಗಿ ಅನೇಕ ಶಾಖಾಮೃಗಗಳಿಗೆ (ಕಪಿಗಳಿಗೆ) ಬೀಡಾಗಿರುವುವು. ॥೫೧॥

ವಸಂತಕಾಲದಲ್ಲಿ ಅರಳಿದ ಅನೇಕ ಪುಷ್ಪಗಳಿಂದೊಳಗೊಂಡ ಅನೇಕ ಕೊಂಬೆಗಳಿಂದ ಆ ವನದ ಮೇಲ್ಭಾಗವೆಲ್ಲವೂ ಆಚ್ಛಾದಿತವಾಗಿದೆ. ಸಾಲ, ತಾಳೆ, ಹೊಂಗೆ, ಏಲಕ್ಕೀ ಹಿಪ್ಪಲೀ, ನೆಲ್ಲಿ ಮುಂತಾದ ಮರಗಳು ಆ ಕಾಡಿನಲ್ಲಿ ಸಾಂದ್ರವಾಗಿ ಬೆಳೆದಿವೆ. ॥೫೨॥

ಅಲ್ಲದೆ ಪುನ್ನಾಗ, ನಾಗಸಂಪಿಗೆ, ನಿಂಬೇ, ನೇರಳೆ, ಬೇವು, ಈಚಲು, ಸೀಮಾವು, ಬಿಲ್ವ, ಸರಲ ಭಲ್ಲಾತಕ (ಜೇಡೀಮರ) ವಿಭೀತಕ, (ತಾಂಡ್ರೀಮರ) ಶಮೀ, (ಬನ್ನೀಮರ) ಅರ್ಜುನ, (ಮತ್ತಿ) ಬಾಗೆ ಮುಂತಾದ ಮರಗಳು, ಬಾಹ್ವಾ, (ಕಗ್ಗಲಿ) ಅಡಿಕೆ, ಸಂಪಿಗೆ, ಪಾರಿಜಾತ, ಸುಗಂಧಯುಕ್ತವಾದ ಚಂದನ, ಕುದ್ದಾಲ, (ಕೆಂಪುಕಂಚವಾಳ) ಮತ್ತು ಹಲಸು ಮುಂತಾದ ವೃಕ್ಷಗಳೂ, ॥೫೩-೫೪॥

ಬೇಲ, ಸಿಂಧುಕಾ (ಲಕ್ಕಿಲಿಗಿಡ) ಲೋಧ್ರ, (ದೊಡ್ಡ ಹಿಪ್ಪೆ) ಇಪ್ಪೇ, ವಿಶೇಷವಾಗಿ ಸುಗಂಧಯುಕ್ತವಾದ ಇತರ ವೃಕ್ಷಗಳು, ತಕ್ಕೋಲ, ಅಂಕೋಲ, ಹಿಂತಾಲ, (ಕರಿಕಾಳೇ) ಪ್ರಿಯಾಲು, (ಮೊರಟೇ) ಅರಳಿದ ಕೇದಿಗೆ ಮರ ಇವೇ ಮುಂತಾದುವುಗಳೂ ಆ ವನದಲ್ಲಿ ವಿಶೇಷವಾಗಿರುವುವು. ॥೫೫॥

ಬಾದಾಮೋದುಂಬರಾಕ್ಷೋಟಪ್ರಿಯಂಗುಬದರೀಧವಃ
ಕುರಂಟಕರಜೋಪೇತೋ ವರೋಟುಪಿಟಪೈರ್ವೃತಃ ॥೫೬॥

ತಿಂತ್ರಿಣೀಬಕುಲೋಪೇತಶ್ಚಂದನಾಮೋದಮೋದಿತಃ ।
ಮಾಲತೀಜಾತಿಕಾಕುಂದಮಲ್ಲೀವಲ್ಲೀಶತಾವೃತಃ ॥೫೭॥

ಸುರಮ್ಯಸ್ವಚ್ಛಪಾನೀಯಃ ಕುಮುದೋತ್ಪಲಮಂಡಿತಃ ।
ಪದ್ಮಕಿಂಜಲ್ಕಸೌರಭ್ಯಗಂಧಬಂಧುರಮಾರುತಃ ॥೫೮॥

ಗುಚ್ಛಗಚ್ಛದಳಿವ್ರಾತಸ್ವಚ್ಛನಾದಾಚ್ಛಕಂದರಃ ।
ವಿಪಿನಾವನಿಸಂಚಾರಿಮಯೂರಕ್ಷಿಪ್ತಚಂದ್ರಕಃ ॥೫೯॥

ಬಾದಾಮಿಮರ, ಅತ್ತಿ, ಆಕ್ರೋಟ (ಬೆಟ್ಟಗೋಣಿ) ಪ್ರಿಯಂಗು, (ನವಣೆ) ಬದರೀ, ಧವ, (ಕಗ್ಗಲೀ) ಕುರುಂಟ (ಗೋರಂಟೆ) ಕರಜ, (ಹೊಂಗೆ) ವರೋಟು, (ಕೆಂಪು ತುಂಬೆ) ಇವೇ ಮೊದಲಾದ ವೃಕ್ಷಗಳು ಆ ವನದಲ್ಲಿ ವ್ಯಾಪಿಸಿದ್ದವು. ॥೫೬॥

ಹುಣಿಸೆ, ಬಕುಳ, ಸುಗಂಧಭರಿತವಾದ ಚಂದನವೃಕ್ಷ, ಮಾಲತೀ, ಜಾಜೀ, ಗಿಡಮಲ್ಲಿಕೆ (ಕುಂದ) ಮಲ್ಲಿಗೆ ಮುಂತಾದ ಅನೇಕ ಬಳ್ಳಿಗಳಿಂದ ಆ ವನವು ಆವರಿಸಲ್ಪಟ್ಟಿದ್ದಿತು. ॥೫೭॥

ಅಲ್ಲದೆ ಆ ವನದಲ್ಲಿ ಒಳ್ಳೆಯ ಕನ್ನೈದಿಲೆ ಮುಂತಾದ ಹೂವುಗಳಿಂದ ಅಲಂಕೃತವಾದ ಸರಸ್ಸುಗಳಲ್ಲಿ ಮನೋಹರವಾಗಿಯೂ, ಸ್ವಚ್ಛವಾಗಿಯೂ ಇರುವ ನೀರು ಕಂಗೊಳಿಸುತ್ತಿರುವುದು. ಅಲ್ಲದೆ ಆ ಸರಸ್ಸುಗಳಲ್ಲಿರುವ ಪದ್ಮಗಳ ಕೇಸರಗಳಲ್ಲಡಗಿರುವ ಸೌಗಂಧ್ಯವನ್ನು ಹೊತ್ತು ವಾಯುವು ತಂಪಾಗಿ ಬೀಸುತ್ತಿರುವುದು. ॥೫೮॥

ಪುಷ್ಪಮಕರಂದಪಾನಕ್ಕೋಸ್ಕರ ಗುಂಪಾಗಿ ಬರುತ್ತಿರುವ ಭ್ರಮರಪಂಕ್ತಿಗಳು ಮನೋಹರವಾಗಿ ಧ್ವನಿಮಾಡುತ್ತಾ ಆ ವನಕ್ಕೆ ಶೋಭೆಯನ್ನುಂಟುಮಾಡುತ್ತಿರುವುವು. ಆ ವನಪ್ರದೇಶದಲ್ಲಿ ನವಿಲುಗಳು ತಂಡತಂಡವಾಗಿ ಸಂಚರಿಸುತ್ತಾ, ಚಂದ್ರಿಕಾಪಾನಮಾಡುತ್ತಾ ಆನಂದಪರವಶವಾಗಿರುವುವು. ಅಥವಾ ಗರಿಗಳನ್ನು ಹರಿಡಿಕೊಂಡು ಜಾಗರವಾಡುತ್ತಿರುವುವು. ॥೫೯॥

ನಾನಾಪಕ್ಷಿರುತಾಪಾರವಿನಾದಿತಗುಹಾಮುಖಃ ।
ಪುಂಸ್ಕೋಕಿಲಾನಿನಾದೈಶ್ಚ ಕೇಕಾರಾವವಿನಾದಿತಃ ॥೬೦॥

ವೇಣುಕ್ರೇಂಕಾರಸಂಘರ್ಷಸಮುದ್ಭೂತಹುತಾಶನಃ ।
ಲತಾವೃತತಮೋದ್ಭೂತಝಿಲ್ಲಿಕಾಗಣನಾದಿತಃ ॥೬೧॥

ಕುಥಾಸ್ತೀರ್ಣ ಇವಾಭಾತಿ ಹರಿನ್ಮಣಿನಿಭೈಸ್ತೃಣೈಃ ।
ಗೋಗಣಾನಂದಜನನೋ ಗಂಧರ್ವಗಣಸೇವಿತಃ ॥೬೨॥

ಮೃಗೇಂದ್ರಶಬ್ದವಿತ್ರಸ್ತಗಜೇಂದ್ರಕೃತಧಾವನಃ ।
ಉದ್ಧೂತಪುಚ್ಛಚಮರೀಮೃಗವಿತ್ರಸ್ತಲೋಚನಃ ॥೬೩॥

ಆ ವನಪ್ರದೇಶದ ಗುಹೆಗಳು, ನಾನಾವಿಧವಾದ ಹಕ್ಕಿಗಳ ಅಪಾರವಾದ ಧ್ವನಿಗಳನ್ನು ಪ್ರತಿಧ್ವನಿಮಾಡುತ್ತಿರುವುವು. ಗಂಡುಕೋಗಿಲೆಗಳ ಇಂಪಾದ ಧ್ವನಿಯೂ, ನವಿಲುಗಳ ಕೇಕಾನಾದವೂ ಆ ವನಪ್ರದೇಶವನ್ನೆಲ್ಲಾ ಶಬ್ದಾಯಮಾನ ಮಾಡುತ್ತಿರುವುದು. ॥೬೦॥

ಬಿದಿರುಮೆಳೆಗಳು ಪರಸ್ಪರ ಕ್ರೇಂಕಾರಮಾಡುತ್ತ ಒಂದಕ್ಕೊಂದು ಉಜ್ಜುವುದರಿಂದ ಉಂಟಾದ ಬೆಂಕಿಯು ಆ ವನದಲ್ಲಿ ತೋರುತ್ತಿರುವುದು. ಅಮೃತಬಳ್ಳಿಗಳು ದಟ್ಟವಾಗಿ ಬೆಳದಿರುವುದರಿಂದ ಅದರ ಕಪ್ಪಗಿರುವ ಸ್ಥಳದಲ್ಲಿ ಕುಳಿತು ಝಿಲ್ಲಿಕಾ (ಕಾಡುಗಳಲ್ಲಿ 'ಝೀ' ಎಂದು ಕೂಗುವ ಸಣ್ಣ ದುಂಬಿಯ ತರದ ಪ್ರಾಣಿಗಳು) ಹುಳುಗಳು ಗುಂಪುಗುಂಪಾಗಿ ಧ್ವನಿಮಾಡುತ್ತಿರುವುವು. ॥೬೧॥

ಆ ವನದಲ್ಲಿ ಒಳ್ಳೆಯ ಹಸುರಾಗಿ ಕಂಗೊಳಿಸುತ್ತಾ ಸಾಂದ್ರವಾಗಿರುವ ಹುಲ್ಲುನೆಲವನ್ನು ನೋಡಲು ಸುಪ್ಪತ್ತಿಗೆಯನ್ನು ನೆಲದ ಮೇಲೆ ಹರಡಿದಂತೆ ಮೃದುವಾಗಿ ತೋರುತ್ತಿರುವುದು. ಈ ಹುಲ್ಲು ಸೊಂಪಾಗಿ ಬೆಳೆದಿರುವುದರಿಂದ ಮೇಯಲು ಬಂದ ಗೋಸಮೂಹಕ್ಕೆ ತುಂಬಾ ಆನಂದವನ್ನುಂಟುಮಾಡುತ್ತಿರುವುದು. ಈ ವನದಲ್ಲಿ ಗಂಧರ್ವರು ಗುಂಪುಗುಂಪಾಗಿ ಬಂದು ವಿಹರಿಸುತ್ತಿರುವರು. ॥೬೨॥

ಆ ವನದಲ್ಲಿ ಸಿಂಹಗಳ ಘರ್ಜನೆಯನ್ನು ಕೇಳಿ ಆನೆಗಳು ಹೆದರಿ ಓಡುತ್ತಿರುವುವು. ಮತ್ತು ಅನೇಕ ಚಮರೀಮೃಗಗಳು ತಮ್ಮ ದಪ್ಪವಾದ ಬಾಲಗಳನ್ನು ಬೀಸುತ್ತಾ ಹೆದರಿ ತಮ್ಮ ಕಣ್ಣುಗಳನ್ನು ಚಂಚಲವನ್ನಾಗಿ ಮಾಡುತ್ತಿರುವುವು. ॥೬೩॥

ಮಹಾಮಹಿಷಹುಂಕಾರವಿಷಾಣಾರಾವಸುಂದರಃ ।
ನಿಷಣ್ಣಮಹಿಷೀಸ್ತನ್ಯಪಯೋಲಿಪ್ತಮಹೋಪಲಃ ॥೬೪॥

ಕ್ರೋಡಾಭ್ರೇಡಿತಮುಸ್ತಾರ್ಥಶಸ್ತಚಾರುಶಿಲಾತಲಃ ।
ಶಲಲೀಶರಸಂಲಗ್ನನಿರ್ಯಾಸಿತಮಹಾದ್ರುಮಃ ॥೬೫॥

ವಿದ್ಯಾಧರಮುಖೋದ್ಗೀತಕೃತಮಾರ್ದಂಗಿಕಾರವಃ ।
ಮೃದಂಗನಾದಸಂಲುಬ್ಧಕುರಂಗಗಣಸಂವೃತಃ ॥೬೬॥

ಗೋಲಾಂಗೂಲೋತ್ಥಹುಂಕಾರಪ್ರಪಾತೋದ್ವಿಗ್ನಪಾದಪಃ ।
ಶಾಖಾಮೃಗಾಕ್ರಮಚ್ಛಾಖಾಪ್ರಪತತ್ಫಲಭೂವೃತಃ ॥೬೭॥

---

ದೊಡ್ಡ ದೊಡ್ಡ ಕಾಡುಕೋಣಗಳು ಹುಂಕಾರ ಮಾಡುತ್ತಾ ತಮ್ಮ ಕೊಂಬುಗಳಿಂದ ನೆಲವನ್ನು ಅಗೆಯುತ್ತಾ ಆ ವನವನ್ನೆಲ್ಲಾ ಶಬ್ದಗೊಳಿಸುತ್ತಿರುವುವು. ಅಲ್ಲದೆ ಆ ವನದಲ್ಲಿರುವ ಕಾಡೆಮ್ಮೆಗಳು ತಮ್ಮ ಹಾಲನ್ನು ಕರೆದಿರುವುದರಿಂದ ಅಲ್ಲಿದ್ದ ಬಂಡೆಗಳೆಲ್ಲಾ ನೆನೆಯಲ್ಪಟ್ಟಿರುವುವು. ॥೬೪॥

ಗೆಡ್ಡೆ ಗೆಣಸುಗಳನ್ನು ಕಿತ್ತು ತಿನ್ನುವುದಕ್ಕೋಸ್ಕರ ದೊಡ್ಡ ದೊಡ್ಡ ಕಾಡುಹಂದಿಗಳು ತಮ್ಮ ಕೋರೆದಾಡೆಗಳಿಂದ ಭೂಮಿಯನ್ನು ಬಗೆಯುವಾಗ ಮಧ್ಯದಲ್ಲಿ ಸಿಕ್ಕಿದ ಬಂಡೆಗಳೆಲ್ಲಾ ಚೂರುಚೂರಾಗುತ್ತಿರುವುವು. ಕೆಲವು ಮುಳ್ಳುಹಂದಿಗಳು ಸಂಚರಿಸುತ್ತಿರುವಾಗ ಅವುಗಳ ರೋಮರೂಪವಾದ ದೊಡ್ಡ ದೊಡ್ಡ ಮುಳ್ಳುಗಳಿಗೆ ಸಿಕ್ಕಿ ಅನೇಕ ದೊಡ್ಡ ಮರಗಳೇ ಮುರಿದುಹೋಗುತ್ತಿರುವುವು. ॥೬೫॥

ವಿದ್ಯಾಧರರು ಬಾಯಲ್ಲಿ ಇಂಪಾಗಿ ಹಾಡುತ್ತಾ ತದನುಸಾರವಾಗಿ ಮೃದಂಗವನ್ನು ಬಾರಿಸುತ್ತಿರುವರು. ಆ ಮೃದಂಗ ಧ್ವನಿಗಳಿಗೆ ಆ ವನದಲ್ಲಿರುವ ಜಿಂಕೆಗಳ ಸಮೂಹವೆಲ್ಲವೂ ಮುಗ್ಧವಾಗಿ ಒಟ್ಟಿಗೆ ಬಂದು ಆ ಧ್ವನಿಯನ್ನೇ ಆಲಿಸುತ್ತಿರುವುವು. ॥೬೬॥

ಈ ವನದಲ್ಲಿ ಹುಂಕಾರಮಾಡುತ್ತಾ ಸಂಚರಿಸುವ ಹಸುಗಳ ಬಾಲಗಳ ಹೊಡೆಯುವಿಕೆಯಿಂದ ದೊಡ್ಡ ದೊಡ್ಡ ಮರಗಳೂ ಬೀಳುತ್ತಿರುವುವು. ಕಪಿಗಳು ಆ ವನದ ಮರಗಳ ಮೇಲೆ ಸಂಚರಿಸುವಾಗ ಆ ಮರದ ಹಣ್ಣುಗಳೆಲ್ಲಾ ಅಕ್ಕಪಕ್ಕದಲ್ಲಿರುವ ಕೊಂಬೆಗಳಿಂದ ನೆಲದಮೇಲೆ ಉದುರುತ್ತಿರುವುವು. ॥೬೭॥

ತತ್ರ ವೈಖಾನಸಾಃ ಸಿದ್ಧಾ ವಾಲಖಿಲ್ಯಾ ಮರೀಚಿಪಾಃ ।
ಪಂಚಾಗ್ನಿಮಧ್ಯನಿರತಾಃ ಫಲಪೂರ್ಣಾಂಬುಭೋಜನಾಃ ॥೭೮॥

ತಪಸ್ಯಂತಿ ತಪ ಅತ್ಯುಗ್ರಂ ಶಿವೇ ಸಂಸಕ್ತಮಾನಸಾಃ ।
ಕೃತೋಟಜೋ ಮುನಿಸ್ತತ್ರ ಉವಾಸ ದ್ವಿಜಸಂಯುತಃ ॥೭೯॥

ಉಚಥ್ಯೋ ನಾಮ ಮೇಧಾವೀ ತ್ರಯ್ಯಂತಜ್ಞಾನಪಾರಗಃ
ರುದ್ರಾಧ್ಯಾಯಜಪಾಸಕ್ತಃ ಪಂಚಾಕ್ಷರಪರಾಯಣಃ ॥೮೦॥

ಶಿವಲಿಂಗಾರ್ಚನರತೋ ಭಸ್ಮರುದ್ರಾಕ್ಷಭೂಷಣಃ ।
ತ್ರಯೀಮಾರ್ಗೈಕನಿರತಸ್ತೃಣೀಕೃತಜಗತ್ತ್ರಯಃ ॥೮೧॥

ಸೋಮಪಃ ಸೌಮ್ಯಭಾಗಶ್ಚ ಸೋಮಶೇಖರಪೂಜಕಃ ।
ತಸ್ಯಾಸೀದ್ವಿನಯೋಪೇತಾ ಗೃಹಿಣೀ ಪತಿದೇವತಾ ॥೮೨॥

ಆ ವನದಲ್ಲಿ ವೈಖಾನಸರೂ, ಸಿದ್ಧರೂ, ವಾಲಖಿಲ್ಯರೂ, ಮರೀಚಿಪರೂ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ಅತ್ಯುಗ್ರವಾಗಿ ತಪಸ್ಸುಮಾಡುತ್ತಾ ಯಾವಾಗಲೂ ಪರಶಿವನನ್ನೇ ಮನಸ್ಸಿನಲ್ಲಿ ಧ್ಯಾನಮಾಡುವವರಾಗಿ, ಹಣ್ಣುಹಂಪಲು ಮತ್ತು ನೀರೂ ಇವುಗಳನ್ನೇ ತಿನ್ನುತ್ತಿರುವರು. ॥೭೮॥

ಇಂತಹ ವನಪ್ರದೇಶದಲ್ಲಿ ಉಚಥ್ಯನೆಂಬ ಹೆಸರಿನ ಮುನಿಯೊಬ್ಬನು ಪರ್ಣಶಾಲೆಯನ್ನು ಕಟ್ಟಿಕೊಂಡು ಬ್ರಾಹ್ಮಣರೊಡನೆ ವಾಸಮಾಡುತ್ತಿದ್ದನು. ಅವನು ಬಹು ಮೇಧಾವಿಯು. ವೇದಾಂತಜ್ಞಾನದಲ್ಲಿ ಪಾರಂಗತನಾಗಿದ್ದನು. ಅಲ್ಲದೆ ರುದ್ರಾಧ್ಯಾಯವನ್ನು ಪಾರಾಯಣಮಾಡುತ್ತಾ ಯಾವಾಗಲೂ ಶಿವಪಂಚಾಕ್ಷರಮಂತ್ರವನ್ನೇ ಜಪಮಾಡುತ್ತಿದ್ದನು. ॥೭೯-೮೦॥

ಭಸ್ಮ, ರುದ್ರಾಕ್ಷ ಇವುಗಳನ್ನು ಧರಿಸಿ, ಸದಾ ಆ ಶಿವಲಿಂಗಪೂಜಾನಿರತನಾಗಿದ್ದನು. ಆ ಮುನಿಯು ಹೀಗೆಯೇ ಕೇವಲ ವೇದಮಾರ್ಗದಲ್ಲಿಮಾತ್ರ ನಿರತನಾಗಿ ಮೂರು ಲೋಕಗಳನ್ನೂ ಹುಲ್ಲಿನಂತೆ ತುಚ್ಛವೆಂದು ಭಾವಿಸಿದ್ದನು. ॥೮೧॥

ಸೋಮರಸವನ್ನು ಪಾನಮಾಡಿದ ಸೌಮ್ಯ (ಮೃದು) ಸ್ವಭಾವವುಳ್ಳ ಆ ಮುನಿಯು (ಉಚಥ್ಯನು) ಚಂದ್ರಶೇಖರನ ಪೂಜೆಯಲ್ಲಿ ತುಂಬಾ ಅಭಿರುಚಿಯುಳ್ಳ

ಗಾರ್ಹಪತ್ಯಾರ್ಚನರತಾ ನಾಮ್ನಾ ವಸುಮತೀ ಸತೀ ।
ತಸ್ಯಾಂ ತಸ್ಯ ಸಮುತ್ಪನ್ನ ತಪಸಾ ಬಹುಕಾಲತಃ ॥೭೩॥

ಸನ್ಮುಹೂರ್ತೇ ಶುಭೇ ಋಕ್ಷೇ ಕುಮಾರೋ ಮಾರಸುಂದರಃ ।
ಜಾತಮಾತ್ರೇ ಸುತೇ ತಸ್ಮಿನ್ಪುಷ್ಪವೃಷ್ಟಿರ್ನಭಶ್ಚ್ಯುತಾ ॥೭೪॥

ಅತ್ಯಾಹತಾ ದುಂದುಭಯೋ ದೇವೈರಾಹನನೀಹತಾಃ ।
ವೀಣಾಶ್ಚ ಸಸ್ವನುಸ್ತತ್ರ ದೇವರ್ಷಿನಖಘಟ್ಟಿತಾಃ ॥೭೫॥

ದೇವಗಂಧರ್ವಯಕ್ಷಾಶ್ಚ ಸಮಾಜಗ್ಮುರ್ಮುನೀಶ್ವರಾಃ ।
ಬ್ರಹ್ಮವಿಷ್ಣ್ವಾದಯೋ ದೇವಾ ಉಚಥ್ಯಸ್ಯೋಟಜಂ ಪ್ರತಿ ॥೭೬॥

ವನಾಗಿದ್ದನು. ಈತನಿಗೆ ವಿನಯಗುಣಸಂಪನ್ನಳೂ, ಪತಿಯನ್ನೇ ದೇವರೆಂದು ಭಾವಿಸಿರುವಳೂ ಆದ ಒಬ್ಬಳು ಪತ್ನಿಯಿದ್ದಳು. ॥೭೨॥

ಈಕೆಯು ವಸುಮತಿಯೆಂಬ ಹೆಸರಿನಿಂದ ಪ್ರಸಿದ್ಧಳಾಗಿ ಪತಿವ್ರತಾಧರ್ಮದಿಂದ ಗಾರ್ಹಪತ್ಯಾಶ್ರಮಕ್ಕೆ ಯೋಗ್ಯವಾದ ರೀತಿಯಲ್ಲಿ ಅತಿಥಿಸತ್ಕಾರ, ದೇವತಾಪೂಜಾದಿಕಾರ್ಯಗಳಲ್ಲಿ ತಪ್ಪದೇ ಆಸಕ್ತಿಯುಳ್ಳವಳಾಗಿದ್ದಳು. ಹೀಗೆಯೇ ಅನೇಕ ಕಾಲ ಕಳೆಯಲು ತಪೋಬಲದಿಂದ ಉಚಥ್ಯಮುನಿಗೆ ಪತಿವ್ರತಾಶಿರೋಮಣಿಯಾದ ಈ ವಸುಮತಿಯಲ್ಲಿ ಶುಭ ಮುಹೂರ್ತ, ಶುಭನಕ್ಷತ್ರ ಇವುಗಳಿಂದ ಕೂಡಿದ ಶುಭಸಮಯದಲ್ಲಿ ಮನ್ಮಥನಂತೆ ಸುಂದರನಾದ ಒಬ್ಬ ಮಗನು ಜನಿಸಿದನು. ॥೭೩॥

ಆ ಮಗುವು ಹುಟ್ಟಿದಮಾತ್ರದಿಂದಲೇ ಅಂತರಿಕ್ಷದಿಂದ ಒಳ್ಳೆಯಪುಷ್ಪವೃಷ್ಟಿಯಾಯಿತು. ದೇವತೆಗಳೆಲ್ಲರೂ ವಿಶೇಷವಾಗಿ ದುಂದುಭಿಧ್ವನಿಮಾಡಿದರು. ದೇವರ್ಷಿಗಳು ತಮ್ಮ ಉಗುರುಗಳಿಂದ ವೀಣೆಗಳನ್ನು ನುಡಿಸುತ್ತಾ ಮನೋಹರವಾಗಿ ಧ್ವನಿಸಿದ್ದರು (ನಾದಮಾಡಿದರು). (೭೪-೭೫)

ದೇವ, ಗಂಧರ್ವ, ಯಕ್ಷ ಇವರೇ ಮೊದಲಾದ ದೇವಯೋನಿವಿಶೇಷಗಳೂ, ಮುನಿಶ್ರೇಷ್ಠರೂ ಮತ್ತು ಬ್ರಹ್ಮ, ವಿಷ್ಣು ಮುಂತಾದ ದೇವತೋತ್ತಮರೂ ಸಹ ಆಗ ಆ ಉಚಥ್ಯಮುನಿಯ ಗುಡಿಸಲಿಗೆ ಬಂದರು. ॥೭೬॥

ಸ ತಾನರ್ಘ್ಯೋಪಚಾರಾದ್ಯೈಃ ಪೂಜಯಾಮಾಸ ಭಾರ್ಗವಃ ।
ಪುತ್ರಜನ್ಮಪ್ರಹೃಷ್ಟಾತ್ಮಾ ಧನಂ ಧಾನ್ಯಂ ಪಯಸ್ವಿನೀಃ ॥೭೭॥

ಬ್ರಾಹ್ಮಣೇಭ್ಯೋ ದದೌ ವಿಪ್ರೋ ಜಾತೇಷ್ಟಿಪ್ರಮುಖಾಃ ಕ್ರಿಯಾಃ ।
ನಿರವರ್ತಯದವ್ಯಗ್ರೋ ನಾಮ ಚಕ್ರೇ ಸುರೈಃ ಸಹ ॥೭೮॥

ಮಹಾಕಾಲೋಽಯಮತ್ಯರ್ಥಂ ಶಂಭುಭಕ್ತೋ ಗಣಾಗ್ರಣೀಃ ।
ಭವಿತೇತಿ ಮಯಾ ಚೋಕ್ತಂ ದೇವೈರ್ಯಾತೋಽಸ್ಮಿ ಧಾಮ ಮೇ ॥೭೯॥

ಕಲಾಧೀಶಕಲಾ ಯದ್ವದ್ವರ್ಧಮಾನಾ ದಿನೇ ದಿನೇ ।
ಮಹಾಕಾಲಸ್ತಥೈವಾಯಮವರ್ಧತ ಪಿತುರ್ಮುದೇ ॥೮೦॥

ಹೀಗೆ ಅನಿರೀಕ್ಷಿತವಾಗಿ ತನ್ನ ಗುಡಿಸಲಿಗೆ ಬಂದ ಬ್ರಹ್ಮನೇ ಮೊದಲಾದ ದೇವತೆಗಳನ್ನು ಆ ಭೃಗುವಂಶೋತ್ಪನ್ನನಾದ ಉಚಥ್ಯಮುನಿಯು ಅರ್ಘ್ಯ, ಪಾದ್ಯ ಮತ್ತು ಆಚಮನೀಯಾದಿಗಳಿಂದ ಸತ್ಕರಿಸಿ, ತನಗೆ ಗಂಡುಮಗುವಾದುದರಿಂದ ಸಂತುಷ್ಟನಾಗಿ ಬ್ರಾಹ್ಮಣರಿಗೆ ಧನ, ಧಾನ್ಯ, ತುಂಬಾ ಹಾಲು ಕೊಡುವ ಹಸುಗಳು ಇವೇ ಮೊದಲಾದ ವಸ್ತುಗಳನ್ನು ದಾನಮಾಡಿದನು. ಅನಂತರ ಅಲ್ಲಿ ಬಂದಿರುವ ದೇವತೆಗಳೊಡನೆಯೂ, ಮುನಿಪುಂಗವರೊಡನೆಯೂ ಸೇರಿ ಜಾತಕರ್ಮವನ್ನೂ ಮತ್ತು ನಾಮಕರಣವನ್ನೂ ನೆರವೇರಿಸಿದನು. ॥೭೭-೭೮॥

ಅನಂತರ ಅಲ್ಲಿಗೆ ಹೋಗಿದ್ದ ನಾನು ಈ ಬಾಲಕನು ಶಂಭುಭಕ್ತನೂ, ಗುಣಾಗ್ರಣಿಯೂ ಆಗಿ ಮಹಾಕಾಲನೆಂದು ವಿಶೇಷವಾಗಿ ಪ್ರಸಿದ್ಧಿಪಡೆಯುವನೆಂದು ಹೇಳಿ ನಾಮಕರಣಮಹೋತ್ಸವವು ಮುಗಿದನಂತರ ಆ ಮುನಿಯಿಂದ ಬೀಳ್ಕೊಂಡು ದೇವತೆಗಳೊಡನೆ ನನ್ನ ಸ್ಥಾನಕ್ಕೆ ಹಿಂದಿರುಗಿದೆನು. ॥೭೯॥

ಕಲಾಧಿಪತಿಯಾದ ಚಂದ್ರನ ಕಲೆಗಳು ಶುಕ್ಲಪಕ್ಷದಲ್ಲಿ ದಿನದಿನಕ್ಕೂ ಅಭಿವೃದ್ಧಿಹೊಂದುವಂತೆ, ಈ ಮಹಾಕಾಲನೆಂಬ ಬಾಲಕನಲ್ಲಿ ಕಲೆಗಳು ಅಭಿವೃದ್ಧಿ ಹೊಂದುತ್ತಿದ್ದವು. ಇದನ್ನು ನೋಡಿ ತಂದೆಯು ತುಂಬಾ ಸಂತೋಷಹೊಂದು ತ್ತಿದ್ದನು. ॥೮೦॥

ವಿನಯಾಚಾರಸಂಯುಕ್ತಃ ಕೃತೋಪನಯನಸ್ತದಾ ।
ವೇದಾನ್ಸಾಂಗಾನ್ಸ ಜಗ್ರಾಹ ಶ್ರೀರುದ್ರಸಮಲಂಕೃತಾನ್ ॥೮೧॥

ಪಿತ್ರಾ ಪಂಚಾಕ್ಷರಂ ದತ್ತಂ ನಿತ್ಯಮಾವರ್ತಯಂತ್ಸುಧೀಃ ।
ಲಬ್ಧಾನುಜ್ಞಾಂ ಮಹಾಕಾಲಸ್ತಪಸೇ ಕೃತನಿಶ್ಚಯಃ ॥೮೨॥

ಜಗಾಮ ವಿವಿಧಾನ್ದೇಶಾನ್ನದೀಪರ್ವತಮಂಡಿತಾನ್ ।
ಪುಷ್ಪಿತದ್ರುಮಸಂಫುಲ್ಲಾನ್ದಾಡಿಮಾಮಲಕೈರ್ವೃತಾನ್ ॥೮೩॥

ಭಲ್ಲಾತಕಾನ್ಸಮುತ್ಫುಲ್ಲಾನ್ಮಾಲೂರಾನ್ಪೂಗಸಂಯುತಾನ್ ।
ಸ್ವರ್ಣವರ್ಣಾನ್ಕರ್ಣಿಕಾರಾನ್ರಂಭಾಸ್ತಂಭಶತಾವೃತಾನ್ ॥೮೪॥

ಈ ಬಾಲಕನು ವಿನಯ, ಆಚಾರ ಇವುಗಳಲ್ಲಿ ನಿರತನಾಗಿರುವುದನ್ನು ನೋಡಿ ತಂದೆಯು ಇವನಿಗೆ ಸರಿಯಾದ ಕಾಲದಲ್ಲಿ ಉಪನಯನವನ್ನು ಮಾಡಿದನು. ಅನಂತರ ಸಂಸ್ಕೃತನಾದ ಈ ಬಾಲಕನು ಕ್ರಮವಾಗಿ ವೇದಗಳನ್ನೂ ವೇದಾಂಗ ಗಳನ್ನೂ ಮತ್ತು ಶ್ರೀರುದ್ರಮಂತ್ರವೇ ಮುಂತಾದುವುಗಳನ್ನೂ ಕಲಿತನು. ॥೮೧॥

ಹೀಗೆ ಕೆಲವು ಕಾಲ ವೇದವೇದಾಂಗಗಳಲ್ಲಿ ಪಾರಂಗತನಾದ ಮೇಲೆ ಮಗನಿಗೆ ಆ ಉಚಥ್ಯಮುನಿಯು ಶಿವಪಂಚಾಕ್ಷರಮಂತ್ರವನ್ನುಪದೇಶಮಾಡಲು, ಆ ಮಹಾ ಕಾಲನು ಪ್ರತಿನಿತ್ಯವೂ ಬಿಡದೇ ಅದನ್ನು ಜಪಿಸುತ್ತಿದ್ದನು. ಹೀಗೆ ಸ್ವಲ್ಪದಿನಗಳಾದ ನಂತರ ತಪಸ್ಸುಮಾಡಬೇಕೆಂದು ನಿಶ್ಚಯಿಸಿ ತಂದೆಯ ಅಪ್ಪಣೆಯನ್ನು ಪಡೆದನು. ॥೮೨॥

ಅನಂತರ ತನ್ನ ತಪಸ್ಸಿಗೆ ಯೋಗ್ಯವಾದ ಸ್ಥಳವನ್ನು ಹುಡುಕುತ್ತಾ ಅನೇಕ ನದೀ, ಪರ್ವತ ಇವುಗಳಿಂದಲಂಕೃತವಾದ ನಾನಾದೇಶಗಳಲ್ಲಿ ಸಂಚರಿಸುತ್ತಾ ಅಲ್ಲಿ ಚೆನ್ನಾಗಿ ಅರಳಿದ ಹೂ ಮತ್ತು ಹಣ್ಣುಗಳಿಂದ ಕೂಡಿರುವ ದಾಳಿಂಬ, ನೆಲ್ಲಿ ಮುಂತಾದ ಮರಗಳನ್ನು ನೋಡಿದನು. ಮತ್ತು ॥೮೩॥

ಭಲ್ಲಾತಕಗಳು, (ಜೇಡೀಮರ) ಚೆನ್ನಾಗಿ ಚಿಗುರಿರುವ ಬಿಲ್ವವೃಕ್ಷಗಳು, ಅಡಿಕೆಮರಗಳು, ಚಿನ್ನದ ಬಣ್ಣದಂತಿರುವ ಹೂವುಳ್ಳ ಕಣಿಗಲೆ, ಬಾಳೆಯ ಮರಗಳ ಸಮೂಹ, ತೆಂಗು, ಕಬ್ಬು, ಉತ್ತಮವಾದ ದ್ರಾಕ್ಷೀಲತೆ, ಮುಂತಾದ ಮನೋಹರ

ನಾರಿಕೇಲೇಕ್ಷುಸದ್ರಾಕ್ಷಾ ಫಲವಲ್ಲೀಮನೋಹರಾನ್ ।
ಯವಗೋಧೂಮಸಂಪೂರ್ಣಾಂಛಾಲಿಸಸ್ಯವಿರಾಜಿತಾನ್ ॥೮೫॥

ಪಶ್ಯಂಸ್ತದಾ ಮಹಾಕಾಲೋ ಮಹಾಕಾಲಾಲಯಂ ಯಯೌ ।
ತತಶ್ಚೋಜ್ಜಯಿನೀಂ ಪ್ರಾಪ ವೈಜಯಂತೀಪತಾಕಿಕಾಂ ॥೮೬॥

ಸ್ನಾತ್ವಾ ಕ್ಷಿಪ್ರಾನದೀತೋಯೈರ್ಭಸ್ಮರುದ್ರಾಕ್ಷಭೂಷಣಃ ।
ಪಂಚಾಕ್ಷರಂ ಜಪನ್ಮಂತ್ರಂ ಪಂಚಾಸ್ಯಧ್ಯಾನಪೂರ್ವಕಂ ॥೮೭॥

ಮಹಾಕಾಲಾರ್ಚನಪರೋ ಬಿಲ್ವಪತ್ರಾದಿಸಾಧನೈಃ ।
ರುದ್ರಾವರ್ತನಶೀಲಶ್ಚ ರುದ್ರೇ ವಿನ್ಯಸ್ತಮಾನಸಃ ॥೮೮॥

ಭಸ್ಮನಿಷ್ಠೋ ಭಸ್ಮಶಾಯೀ ಭವಭಾವಸಮನ್ವಿತಃ ।
ಪಂಚಾಗ್ನಿಮಧ್ಯನಿರತೋ ಜ್ವಲಚ್ಛಿಖಿಶಿಖಾವೃತಃ ॥೮೯॥

---

ವಾದ ಬಳ್ಳಿಗಳು, ಯವಧಾನ್ಯ, ಗೋಧಿ, ಇವುಗಳಿಂದ ಪರಿಪೂರ್ಣವಾಗಿ ಶೋಭಿಸುತ್ತಿರುವ ಬತ್ತದ ಸಸಿಗಳು ಇವೇ ಮೊದಲಾದವುಗಳಿಂದ ಮನೋಹರವಾಗಿರುವ ಅನೇಕ ಊರುಗಳನ್ನೂ ವನಗಳನ್ನೂ ನೋಡುತ್ತಾ, ಆ ಮಹಾಕಾಲನು ಮಹಾಕಾಲೇಶ್ವರನ ದೇವಾಲಯಕ್ಕೆ ಹೋದನು. ಅವಕ್ಕಾಗಿ ವೈಜಯಂತೀಧ್ವಜದಿಂದ ಶೋಭಿಸುತ್ತಿರುವ ಉಜ್ಜಯಿನಿಗೆ ಪ್ರಯಾಣಮಾಡಿದನು. ॥೮೪-೮೫-೮೬॥

ಉಜ್ಜಯಿನಿಗೆ ಹೋದನಂತರ, ಸಮೀಪದಲ್ಲಿದ್ದ ಕ್ಷಿಪ್ರಾನದಿಯ ನೀರಿನಲ್ಲಿ ಸ್ನಾನಮಾಡಿ, ಭಸ್ಮ ರುದ್ರಾಕ್ಷ ಇವುಗಳನ್ನು ಧಾರಣೆಮಾಡಿ, ಪಂಚಮುಖನೆನಿಸಿದ ಮಹೇಶನನ್ನು ಜಪಮಾಡುವವನಾಗಿ, ಬಿಲ್ವಪತ್ರೆಗಳೇ ಮೊದಲಾದ ಪೂಜಾಸಲಕರಣೆಗಳಿಂದ ಆ ಮಹಾಕಾಲೇಶ್ವರನ ಪೂಜೆಯಲ್ಲಿ ನಿರತನಾದನು. ಪೂಜೆಮಾಡುವಾಗ ಆ ರುದ್ರನಲ್ಲಿಯೇ ಮನಸ್ಸಿಟ್ಟು, ರುದ್ರಮಂತ್ರವನ್ನು ಆವರ್ತಿಮಾಡುತ್ತಿದ್ದನು. ॥೮೭-೮೮॥

ಈ ಮಹಾಕಾಲನು ಭಸ್ಮಧಾರಣೆಮಾಡುತ್ತಲೂ, ಕೆಲವು ವೇಳೆ ಭಸ್ಮದ ಮೇಲೆ ಮಲಗುತ್ತಲೂ, ಶಿವಭಕ್ತಿತತ್ಪರನಾಗಿ, ಒಂದೊಂದು ವೇಳೆ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ಉರಿಯುತ್ತಿರುವ ಅಗ್ನಿಜ್ವಾಲೆಯಿಂದಾವೃತನಾಗಿ ತಪಸ್ಸು ಮಾಡುತ್ತಿದ್ದನು. ಕೆಲವು ವೇಳೆ ಪ್ರಚಂಡವಾದ ಸೂರ್ಯನ ಬಿಸಿಲಿನಲ್ಲಿ ತಲೆಯು

ಪ್ರಚಂಡಸೂರ್ಯಕಿರಣೈರ್ಮೂರ್ಧ್ನಿ ಸಂತಾಪಿತಸ್ತದಾ ।
ನಿರಾಲಂಬೋರ್ಧ್ವಪಾದಶ್ಚ ಕಟುಧೂಪಂ ಸದಾ ಪಿಬನ್ ॥೯೦॥

ಪಿಶಂಗಿತಜಟಾಭಾರೋ ಧೂಮಧೂಮ್ರಾಕೃತಾನನಃ ।
ವರ್ಷಾಸ್ವಭ್ರಾವಕಾಶಶ್ಚ ಹೇಮಂತೇ ಜಲಸಂಶ್ರಯಃ ॥೯೧॥

ಸುತ್ರಾಮಮುಖಸತ್ರಾಶವಿತ್ರಾಸನಕರಂ ತಪಃ ।
ಚಕಾರೋಂಕಾರಸುಭಗೋದ್ಗೀತಗಾಥಾಹೃದಂತರಃ ॥೯೨॥

ಏವಂ ತಪಸ್ಯತಸ್ತಸ್ಯ ಕಾಲೋ ಭೂಯಾನವರ್ತತ ।
ವಿಘ್ನಜಾಲಂ ಮಹಾಧೈರ್ಯಾತ್ಸ ತು ಸಂಜಘ್ನಿವಾಂಸ್ತದಾ ॥೯೩॥

ಸುಡುತ್ತಿದ್ದಾಗ್ಯೂ, ನಿರಾಲಂಬೋರ್ಧ್ವಪಾದವುಳ್ಳವನಾಗಿ ಒಂದು ಕಾಲನ್ನು ನೆಲದ ಮೇಲಿರಿಸಿ, ಇನ್ನೊಂದು ಕಾಲನ್ನು ಮೇಲಕ್ಕೆತ್ತಿ ಕಹಿಯಾದ ಧೂಪವನ್ನು ಸದಾ ವಾಸನೆ ನೋಡುತ್ತಾ ತಪವಂಗೈಯುತ್ತಿದ್ದನು. ||೮೯-೯೦||

ಅನವರತವೂ ಹೀಗೆ ತಪಸ್ಸುಮಾಡುತ್ತಿರುವುದರಿಂದ ಬಿಸಿಲು, ಗಾಳಿ, ಮಳೆ ಇವುಗಳು ಬಂದು ಜಡೆಗಳೆಲ್ಲಾ ಹೊಂಬಣ್ಣವಾದುವು. ಮುಖವೆಲ್ಲವೂ ಹೊಗೆಯಿಂದ ಧೂಮ್ರವರ್ಣವನ್ನು ಹೊಂದಿತು. ಆತನು ಮಳೆಗಾಲದಲ್ಲಿ ಅಂತರಿಕ್ಷದಲ್ಲಿಯೂ, ಹೇಮಂತಋತುವಿನಲ್ಲಿ ನೀರಿನಲ್ಲಿಯೂ ನಿಂತು ಘೋರತಪವನ್ನಾಚರಿಸುತ್ತಿದ್ದನು. ||೯೧||

ಓಂಕಾರಪೂರ್ವಕವಾಗಿ ಆ ಶಿವನಾಮವನ್ನು ಮನೋಹರವಾಗಿ ಬಾಹ್ಯಾಭ್ಯಂತರಗಳೆರಡರಲ್ಲಿಯೂ ಧ್ಯಾನಿಸುತ್ತಾ ಮಹಾಕಾಲನು, ಯಾಗಾದಿಗಳಲ್ಲಿ ಅಭಿರುಚಿಯುಳ್ಳ ಇಂದ್ರಾದಿದೇವತೆಗಳನ್ನೂ 'ತಮ್ಮ ಸ್ಥಾನವನ್ನು ಪಡೆಯಲೇನಾದರೂ ಈತನು ತಪಸ್ಸುಮಾಡುತ್ತಿರುವನೋ ಏನೋ' ಎಂದು ಹೆದರಿಸುತ್ತಿದ್ದಂತೆ ತಪಸ್ಸನ್ನಾಚರಿಸುತ್ತಿದ್ದನು. ||೯೨||

ಹೀಗೆ ಘೋರವಾಗಿ ತಪಸ್ಸುಮಾಡುತ್ತಿದ್ದ ಆ ಮಹಾಕಾಲನಿಗೆ ಬಹಳ ಕಾಲವು ಕಳೆದುಹೋಯಿತು. ಮಧ್ಯದಲ್ಲಿ ಒದಗಿದ ವಿಘ್ನಸಮೂಹಗಳೆಲ್ಲವನ್ನೂ ತುಂಬಾ ಧೈರ್ಯದಿಂದೆದುರಿಸಿ ಘೋರವಾಗಿ ತಪವಂಗೈದನು. ||೯೩||

ಹೇಮಾಕಾರಾಪ್ಸರೋಜಾಲಂ ತಿಮಿರಂ ಭಾಸ್ಕರೋ ಯಥಾ ।
ನಿಘ್ನನ್ನಘಘ್ನಪಾದಾಬ್ಜಧ್ಯಾನಶುದ್ಧಹೃದಂತರಃ ॥೯೪॥

ಮಾರಮಾರಕಬಾಣಾನಾಂ ನಾಂತರಂ ಸದದೌ ತದಾ ।
ವಯಂ ಸಬ್ರಹ್ಮಕಾ ದೇವಾಸ್ತತ್ರ ಪ್ರೋದರ್ಶನೇಪ್ಸವಃ ॥೯೫॥

ತದಭ್ಯರ್ಣಗತಾ ದೇವಾಸ್ತೂರ್ಣಂ ತೇನ ಪ್ರಪೂಜಿತಾಃ ।
ವತ್ಸೋತ್ತಿಷ್ಠೇತಿ ಚ ತದಾ ಮಯಾ ಪ್ರೋಕ್ತಃ ಸ ಬಾಲಕಃ ॥೯೬॥

ವರೈಃ ಸಂಛಾದಿತಶ್ಚಾಪಿ ನ ಚಕ್ರೇ ಸಂಮತಿಂ ತದಾ ।
ಸ ಮಾಂ ಪ್ರಣಮ್ಯ ಬಹುಶೋ ವಿನಯಾವನತಾನನಃ ॥೯೭॥

ಪ್ರಾಂಜಲಿಃ ಪ್ರಾಹ ಮಾಂ ಬಾಲೋ ಹ್ಯಬಾಲಮತಿರುತ್ತಮಃ ॥೯೮॥

ಈತನ ತಪಸ್ಸಿಗೆ ಏನಾದರೂ ವಿಘ್ನವುಂಟುಮಾಡಿ ಕೆಡಿಸಬೇಕೆಂದು ಬಂದು, ಚಿನ್ನದಂತೆ ಮೈಬಣ್ಣವುಳ್ಳ ಅಪ್ಸರಸ್ತ್ರೀಯರು ಬಹಳವಾಗಿ ನರ್ತನವೇ ಮೊದಲಾದವುಗಳನ್ನು ಮಾಡಿದರು. ಆದರೆ ಆ ಪರಮೇಶ್ವರನ ಪಾದಕಮಲದಲ್ಲಿಯೇ ಧ್ಯಾನತತ್ಪರನಾಗಿ ಶುದ್ಧಾಂತಃಕರಣಯುಕ್ತನಾದ ಮಹಾಕಾಲನು ಸೂರ್ಯನು ಕತ್ತಲೆಯನ್ನು ಹೊಡೆದೋಡಿಸುವಂತೆ ಎಲ್ಲವನ್ನು ನಿವಾರಣೆಮಾಡಿಕೊಂಡು ಧೈರ್ಯದಿಂದ ತಪಸ್ಸುಮಾಡಿದನು. ||೯೪||

ಮಹಾಕಾಲಮುನಿಕುಮಾರನು ಆ ಮನ್ಮಥನ ಕ್ರೂರವಾದ ಬಾಣಗಳಿಗೆ ತನ್ನಲ್ಲಿ ಎಡೆಯನ್ನೇ ಕೊಡಲಿಲ್ಲ. ಆ ಸಮಯದಲ್ಲಿ ಬ್ರಹ್ಮನೇ ಮೊದಲಾದ (ಅಂದರೆ ತಾನೇ ಮುಂತಾದ) ದೇವತೆಗಳೆಲ್ಲರೂ ಇದನ್ನು ನೋಡುವ ಕುತೂಹಲದಿಂದ ಅಲ್ಲಿಗೆ ಹೋದರು. ||೯೫

ಅನಂತರ ನಾವೆಲ್ಲರೂ ಅವನ ಸಮೀಪಕ್ಕೆ ಹೋದೆವು. ಆಗ ಮುನಿಕುಮಾರನು ಅಂತರ್ಮುಖನಾಗಿದ್ದನು. ತಪಸ್ಸುಮಾಡುತ್ತಿದ್ದ ಆ ಬಾಲಕನನ್ನು ಕುರಿತು ಮಗು, ಇನ್ನು ಸಾಕು, ತಪಸ್ಸನ್ನು ನಿಲ್ಲಿಸಿ ಮೇಲಕ್ಕೇಳುವನಾಗು ಎಂದು ನಾನು ಹೇಳಿದೆನು. ||೯೬||

ಮತ್ತು ಅವನಿಗೆ ಬೇಕಾದ ವರಗಳನ್ನು ಕೊಡುತ್ತೇನೆ ಬೇಡೆಂದು ನುಡಿಯಲು, ಆ ಬಾಲಕನು ಅದಕ್ಕೆ ಸಮ್ಮತಿಸಲಿಲ್ಲ. ಅನಂತರ ಬಾಲಕನಾದರೂ

ಪದ್ಮಾಸನಮುಖಾ ದೇವಾ ಮತ್ಸದ್ಮಾದ್ಯ ಸಮಾಗತಾಃ ।
ಭವಂತೋ ಭಗವಂತೋ ವೈ ವರಂ ದದ್ಯುರ್ಯದೀಪ್ಸಿತಂ ॥೯೯॥

॥ ಮಹಾಕಾಲ ಉವಾಚ ॥

ಭವೇ ಭವೇ ಭವೇ ಭೂಯಾದ್ಭಕ್ತಿರೇವ ಸದಾ ಮಮ ।
ಏಕದೇವ ವರಂ ಯಾಚೇ ನಾನ್ಯಂ ವಾಹಂ ಸುರೋತ್ತಮಾಃ ॥೧೦೦॥

ಭವತಾಂ ದರ್ಶನೇನಾದ್ಯ ನಿರ್ವೃತೋಽಸ್ಮಿ ನ ಸಂಶಯಃ ॥೧೦೧॥

ಇತ್ಥಂ ಮಹಾಕಾಲವಚೋ ನಿಶಮ್ಯ
ಸುರಾ ಯಯುಃ ಸ್ಥಾನಮತೀವ ಹೃಷ್ಟಾಃ ।
ಮಹೇಶ್ವರಸ್ಯಾಮಲಪಾದಪಂಕಜಂ
ದೃಷ್ಟ್ವಾಥ ತದ್ಭಕ್ತಿಮಪಾರಪುಣ್ಯಜಂ ॥೧೦೨॥

---

ಸಾಧಾರಣ ಹುಡುಗರಿಗೆ ಇಲ್ಲದಷ್ಟು ಬುದ್ಧಿಶಾಲಿಯೂ ಶ್ರೇಷ್ಠನೂ ಆದ ಆ ಬಾಲಕನು ವಿನಯದಿಂದ ಕೈಜೋಡಿಸಿ ಬಾರಿಬಾರಿಗೂ ನನಗೆ ನಮಸ್ಕಾರ ಮಾಡುತ್ತಾ ನನ್ನೊಡನೆ ಹೀಗೆಂದನು. ॥೯೭-೯೮॥

ಓ ಬ್ರಹ್ಮಾದಿದೇವತೆಗಳಿರಾ, ನೀವೆಲ್ಲರೂ ನನ್ನ ಭಾಗ್ಯದಿಂದ ಈ ಮನೆಗೆ ಬಂದಿರುವಿರಿ. ಷಡ್ಗುಣೈಶ್ವರ್ಯಭರಿತರಾದ ನೀವೆಲ್ಲರೂ ಬೇಕಾದ ವರಗಳನ್ನು ಕೊಡಲು ಸಮರ್ಥರಿರುವಿರಿ. ॥೯೯॥

ದೇವತೆಗಳಿರಾ, ನೀವು ವರವನ್ನು ಕರುಣಿಸುವುದಾದರೆ ನನಗೆ ಪ್ರತಿಜನ್ಮದಲ್ಲಿಯೂ ಆ ಪರಮೇಶ್ವರನಲ್ಲಿ ವಿಶೇಷವಾಗಿ ಭಕ್ತಿಯುಂಟಾಗುವಂತೆ ಹರಸಿರಿ. ಇದಲ್ಲದೆ ಮತ್ತೇನೂ ನನಗೆ ಬೇಡವು. ನಿಮ್ಮ ದಿವ್ಯದರ್ಶನದಿಂದಲೇ ನಾನು ಸುಖವುಳ್ಳವನಾಗಿದ್ದೇವೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಎಂದು ಆ ಮುನಿ ಬಾಲಕನು ಬ್ರಹ್ಮಾದಿದೇವತೆಗಳನ್ನು ಪ್ರಾರ್ಥಿಸಿದನು. ॥೧೦೦-೧೦೧॥

ಹೀಗೆ ನುಡಿದ ಆ ಮುನಿಕುಮಾರನ ಮಾತನ್ನು ಕೇಳಿ, ಆ ದೇವತೆಗಳು, ಮಹಾಕಾಲೇಶ್ವರನ ಪಾದಕಮಲಗಳಲ್ಲಿ ಆ ಬಾಲಕನಿಗೆ ವಿಶೇಷವಾದ ಪುಣ್ಯಫಲಗಳಿಂದ ಲಭಿಸಿರುವ ಭಕ್ತಿವಿಶೇಷವನ್ನು ನೋಡಿ ತುಂಬಾ ಸಂತೋಷದಿಂದ ಆ ಬಾಲಕನನ್ನು ಹಾಗೆಯೇ ಆಗಲೆಂದು ಹರಸಿ ತಮ್ಮ ತಮ್ಮ ಸ್ಥಳಕ್ಕೆ ತೆರಳಿದರು. ॥೧೦೨॥

ತದ್ಭಕ್ತಿದರ್ಶನಾನಂದವಿವಶಾಸ್ತೇ ಸುರಾಃಬ್ರುವನ್ ।
ಉತ್ಕಂಠಪುಲಕಾಃ ಸಂತಃ ಸಾನಂದಜಲಲೋಚನಾಃ ॥೧೦೩॥

॥ ಸೂತ ಉವಾಚ ॥

ಅತಿಷ್ಠದೇಕಪಾದೇನ ದಶವರ್ಷಾಣಿ ಬಾಲಕಃ ।
ಸ ಗೃಣನ್ಶತರುದ್ರೀಯಂ ಸ್ಥಾಣುಭೂತಃ ಸುನಿಶ್ಚಲಃ ॥೧೦೪॥

ಸ್ಥಾಣುಧ್ಯಾನಪರೋ ಭೂತ್ವಾ ಜೀರ್ಣಪರ್ಣಫಲಾಶನಃ ।
ಮಾಸಮೇಕಂ ನಿರಾಹಾರಃ ಸ್ಫುಟಿತಸ್ನಾಯುಬಂಧನಃ ॥೧೦೫॥

ಅಷ್ಟಾಕಪಾಲತಚ್ಛೀರ್ಷಾನ್ಮೂರ್ಧ್ನಿ ಧೂಮೋ ವ್ಯಜಾಯತ ।
ತದ್ಧೂಮತಾಂತಾ ದೇವಾದಿ ಮುನಯಃ ಸಾಸುರೋರಗಾಃ ॥೧೦೬॥

ಆ ಬಾಲಕನಲ್ಲಿರುವ ಶಿವಭಕ್ತಿಯನ್ನು ಕಂಡು ಆನಂದಭರಿತರಾಗಿ ರೋಮಾಂಚವನ್ನು ಹೊಂದಿ, ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತ್ತಾ ಮುಗ್ಧರಾಗಿರುವ ಆ ದೇವತೆಗಳು ಆಗ ಹೀಗೆಂದರು. ॥೧೦೩॥

"ಮುನಿಗಳಿರಾ, ಈ ಬಾಲಕನು ಶತರುದ್ರೀಯಮಂತ್ರವನ್ನು ಹೇಳುತ್ತಾ ಒಂದೇ ಕಾಲಿನಲ್ಲಿ ನಿಂತು ಸ್ಥಾಣುವಿನಂತೆ (ಮೋಟುಮರದಂತೆ) ಸ್ವಲ್ಪವೂ ಕದಲದೇ ಹತ್ತುವರ್ಷಗಳಕಾಲ ತಪಸ್ಸುಮಾಡಿದನು. ॥೧೦೪॥

ಅನಂತರ ಒಂದು ತಿಂಗಳಕಾಲ ಇತರ ಆಹಾರಗಳನ್ನಾವುದನ್ನೂ ತೆಗೆದುಕೊಳ್ಳದೆ ಒಣಗಿದ ಎಲೆ ಮತ್ತು ಹಣ್ಣು ಇವುಗಳನ್ನೇ ತಿನ್ನುತ್ತಾ ಸ್ಥಾಣುಸಂಜ್ಞಕನಾದ ಆ ಮಹೇಶನನ್ನೇ ಸ್ಥಿರವಾದ ಮನಸ್ಸಿನಿಂದ ಧ್ಯಾನಮಾಡುತ್ತಿದ್ದನು. ಈ ಘೋರವಾದ ತಪಶ್ಚರ್ಯೆಯಿಂದ ಅವನ ನರಗಳೆಲ್ಲವೂ ಕೃಶವಾಗಿ ಸಿಡಿಯುತ್ತಿದ್ದವು. ಮತ್ತು ಅಷ್ಟಾಕಪಾಲದಿಂದ ಕೂಡಿದ ತಲೆಯಿಂದ ಹೊಗೆಯು ಹೊರಡಲು ಆರಂಭವಾಯಿತು. ಆ ಹೊಗೆಯಿಂದ ದೇವತೆಗಳೂ ಮುನಿಗಳೂ ಮತ್ತೂ ರಾಕ್ಷಸರೂ ಪನ್ನಗರೂ ಇವರೇ ಮೊದಲಾದವರೆಲ್ಲರೂ ದಿಗಿಲುಬಿದ್ದು ಏನಾದರೂ ಮಾಡಿ ಈ ಮಹಾತ್ಮನ ತಪಸ್ಸನ್ನು ನಿಲ್ಲಿಸುವಂತೆ ಮಾಡಬೇಕೆಂದು ಆ ಮಹೇಶನನ್ನು ಮೊರೆಹೊಕ್ಕು, ಆ ಬಾಲಕನ ಇಷ್ಟಾರ್ಥವನ್ನು ಕೈಗೂಡಿಸಬೇಕೆಂದು ಕೈಲಾಸಕ್ಕೆ ಹೋದರು. ॥೧೦೫-೧೦೬॥

ಮಹೇಶಂ ಶರಣಂ ಜಗ್ಮುಸ್ತನ್ಮನೋಽಭೀಷ್ಟಸಿದ್ಧಯೇ ।
ಅಷ್ಟಮೂರ್ತಿಂ ಕೃಪಾವಿಷ್ಟಮುಮಾಶ್ಲಿಷ್ಟಾರ್ಧಭಾಗಕಂ ॥೧೦೭॥

ಪ್ರಣಮ್ಯ ಸಾಂಜಲಿಕರಾಃ ಶಾಂಕರಾಸ್ತೇ ಸುರಾಸ್ತದಾ ।
ತುಷ್ಟುವುರ್ಹೃಷ್ಟಮನಸೋ ದೇವಾ ವಿಶ್ವೇಶ್ವರಂ ಶಿವಂ ॥೧೦೮॥

॥ ದೇವಾ ಊಚುಃ ॥

ಹರ ಹರ ಮುರಹರಪೂಜಿತಪಾದ
ಪ್ರಹರ ಮಹಾಘಗಿರಾ ಕಟಾಕ್ಷವಜ್ರೈಃ ।
ಶಮಯ ಶಮನಜಾತಭೀತಿದುಃಖಂ
ಛೇದಯ ಪಾಶಮಯಭವೈಕಜಾಲಂ ॥೧೦೯॥

ತ್ರಿಪುರದಹನದಕ್ಷಧ್ವಂಸನಾಕ್ಷಿಪ್ರಕೋಣೋ- ।
ತ್ಥಿತ ವಿಶಿಖಾಗ್ರೈರ್ದಗ್ಧಮಾರ ಪ್ರಸೀದ ॥೧೧೦॥

---

ಅನಂತರ ಕೈಲಾಸದಲ್ಲಿ, ಸುಖಾಸೀನನಾಗಿ, ಎಂಟು ಮೂರ್ತಿಗಳುಳ್ಳವನೂ, ತನ್ನ ಅರ್ಧಶರೀರದಲ್ಲಿ ಉಮೆಯನ್ನು ಧರಿಸಿರುವವನೂ ಎಂದರೆ ಅರ್ಧನಾರೀಶ್ವರನೂ ಆದ ಮಂಗಳಕರನೆನಿಸಿದ ಆ ಮಹಾದೇವನನ್ನು ಶಂಕರನ ಭಕ್ತರಾದ ಬ್ರಹ್ಮಾದಿ ದೇವತೆಗಳೆಲ್ಲರೂ ಕೈಜೋಡಿಸಿ ನಮಸ್ಕಾರಮಾಡಿದ ನಂತರ ಸಂತುಷ್ಟಾಂತರಂಗ ವುಳ್ಳವರಾಗಿ ಸ್ತೋತ್ರಮಾಡಿದರು. ॥೧೦೭-೧೦೮॥

ಸಕಲ ಲೋಕಗಳ ದುಃಖಗಳನ್ನೂ ಪಾಪಗಳನ್ನೂ ಹೋಗಲಾಡಿಸುವ ಮಹಾದೇವನೇ, ಮುರಾಸುರಶತ್ರುವಾದ ವಿಷ್ಣುವಿನಿಂದಲೂ ಪೂಜಿಸಲ್ಪಟ್ಟ ಪಾದ ಗಳುಳ್ಳ ಸ್ವಾಮಿಯೇ, ನಿನ್ನ ಕಟಾಕ್ಷಗಳೆಂಬ ವಜ್ರಾಯುಧಗಳಿಂದ ನಮ್ಮ ಮಹಾ ಪಾಪಗಳೆಂಬ ಪರ್ವತಗಳನ್ನು ಧ್ವಂಸಮಾಡು. ದೇವ! ಆ ಯಮನ ದೆಸೆಯಿಂದ ಉಂಟಾಗುವ ಭಯಜಾಲವನ್ನು ಶಾಂತಿಗೊಳಿಸಿ, ಪಾಶರೂಪವಾದ ಈ ಸಂಸಾರ ಬಂಧನವನ್ನು ಕಡಿದುಹಾಕುವವನಾಗು. ॥೧೦೯॥

ಜಗನ್ಮಂಗಳಕರನಾದ ಶಿವನೇ, ಶಂಭುವೇ, ಚಂದ್ರಚೂಡನೂ ಜಟಾ ಧಾರಿಯೂ ಆದ ಮಹೇಶನೇ, ತ್ರಿಪುರಾಸುರರ ಪಟ್ಟಣವನ್ನು ದಹಿಸುವುದರಲ್ಲಿ ಸಮರ್ಥನೆನಿಸಿದ್ದ ನೇತ್ರಕೋಣದಿಂದ ಹೊರಟ ಬೆಂಕಿಯ ಜ್ವಾಲೆಗಳಿಂದ ಆ ಮನ್ಮಥ ನನ್ನು ಸುಟ್ಟು ಭಸ್ಮಮಾಡಿದ ಸ್ವಾಮಿಯೇ, ನಮ್ಮನ್ನನುಗ್ರಹಿಸು. ॥೧೧೦॥

ವಿಶ್ವಾಧಿಕ ತ್ರಿನಯನ ತ್ರಿಪುರಾಂತಕಾರೇ
ತ್ರಯ್ಯಂತವೇದ್ಯ ತ್ರಿದಶಾದ್ಯ ತ್ರಿಕಾಗ್ನಿಕಾಲ ।
ಶ್ರೀಮತ್ತ್ರಿಯಂಬಕ ತ್ರಿಲೋಕವಿಲಾಸಶೀಲ
ಲೀಲಾಕೃತಾಂಗ ತ್ರಿಗುಣಾತ್ಮಕ ಪಾಹಿ ಶಂಭೋ ॥೧೧॥

ಭಾವಗ್ರಾಹ್ಯಸ್ತ್ವಮಸಿ ಭಗವನ್ನಿಹ್ಮಭಾವೈರ್ನ ಲಭ್ಯ
ಸ್ತ್ವತ್ತೋ ಜಾತಂ ಭುವನಮಖಿಲಂ ನಾಮರೂಪೈರ್ವಿಚಿತ್ರಂ ।
ಸರ್ವಂ ರುದ್ರಸ್ತ್ವಮಸಿ ಭಗವನ್ವೇದವಾಕ್ಯೈಕಗಮ್ಯೋ
ಬ್ರಹ್ಮಣ್ಯಶ್ಚ ಪ್ರಭವಸಿ ವಿಭೋ ಬ್ರಾಹ್ಮಣಾರ್ಚ್ಯಂ ಪದಂ ತೇ ॥೧೨॥

ಮೂಕಾಸ್ತ್ವದ್ಗುಣವರ್ಣನೇ ಭವಶತೇಷ್ವದ್ವೈತವಾರ್ತಾಲಸಾಃ
ಕಾಮಾಂಧಾಃ ಸತತಂ ಸದಾ ಶಿವಕಥಾಂ ಶ್ರೋತುಂ ತಥಾ ದುಶ್ಶ್ರವಾಃ ।

ಜಗಚ್ಛ್ರೇಷ್ಠನೂ, ಮುಕ್ಕಣ್ಣನೂ, ತ್ರಿಪುರಾಸುರರ ಶತ್ರುವೂ ಆದ ಸ್ವಾಮಿಯೇ, ದೇವತೆಗಳಿಗೆಲ್ಲಾ ಆದಿಭೂತನೂ, ದಕ್ಷಿಣಾಗ್ನಿ ಗಾರ್ಹಪತ್ಯ ಮತ್ತು ಆಹವನೀಯವೆಂಬ ಮೂರು ಅಗ್ನಿಗಳಿಗೂ ಕಾಲಸ್ವರೂಪನಾಗಿರುವವನೂ ಆದ ನೀನು ವೇದಾಂತಗಳಿಂದ ಮಾತ್ರ ತಿಳಿಯಲ್ಪಡತಕ್ಕವನು. ಮೂರು ಕಣ್ಣುಗಳನ್ನು ಹೊಂದಿ ಈ ಮೂರು ಲೋಕಗಳನ್ನೂ ವಿಲಾಸಗೊಳಿಸುವ ಸ್ವಭಾವವುಳ್ಳ ನೀನು ಸತ್ವ ರಜಸ್ತಮೋರೂಪವಾದ ಮೂರು ಗುಣಗಳ ಸ್ವರೂಪನಾಗಿರುವೆ. ಈ ಪ್ರಪಂಚದ ವಿಲಾಸವೇ ನಿನ್ನ ಅವಯವಗಳ ಲೀಲೆಯಾಗಿರುವುದು. ಶಂಭುವೇ, ನಮ್ಮನ್ನು ಸಲಹು. ॥೧೧॥

ಎಲೈ ಭಗವಂತನೇ, ನೀನು ಭಕ್ತಿಭಾವದಿಂದ ಹೊಂದಲ್ಪಡತಕ್ಕವನಾಗಿರುವೆ. ಅದಲ್ಲದೆ, ಕೇವಲ ಕುಟಿಲಮಾರ್ಗಗಳಿಂದ ಎಂದಿಗೂ ವಶನಾಗಲಾರೆ. ಬೇರೆ ಬೇರೆ ಹೆಸರು ಮತ್ತು ಆಕಾರ ಇವುಗಳಿಂದ ವಿಚಿತ್ರವಾಗಿರುವ ಈ ಪ್ರಪಂಚವೆಲ್ಲವೂ ನಿನ್ನಿಂದಲೇ ನಿರ್ಮಾಣವಾಗಿದೆ. ಈ ಭುವನವೆಲ್ಲವೂ ರುದ್ರನೆನಿಸಿದ ನಿನ್ನ ಸ್ವರೂಪವೇ ಆಗಿದೆ. ಭಗವನ್, ವೇದವಾಕ್ಯಗಳಿಂದ ಗೋಚರನಾಗುವ ನೀನು ಬ್ರಾಹ್ಮಣಪ್ರಿಯನೆನಿಸಿರುವೆ. ಸರ್ವಸಮರ್ಥನಾದ ಸ್ವಾಮಿಯೇ, ಈ ನಿನ್ನ ಪಾದಗಳು ಬ್ರಾಹ್ಮಣರಿಂದ ಪೂಜಿಸಲು ಯೋಗ್ಯವಾಗಿದೆ. ॥೧೨॥

ಕಾಮಕ್ರೋಧಗಳಿಗೆ ಸಿಲುಕಿದವರು ನಿನ್ನ ಗುಣವರ್ಣನೆಯಲ್ಲಿ ಮೂಕರಂತಾಗುವರು. ಪ್ರಪಂಚವು ಮಿಥ್ಯೆಯೆಂಬುದನ್ನೂ, ಬ್ರಹ್ಮವೊಂದೇ ಸತ್ಯವಸ್ತು

ತ್ವದ್ಧ್ಯಾನೇ ಜಡಬುದ್ಧಯೋ ಹಿ ಸತತಂ ತ್ವತ್ಪಾದಪೂಜಾವಿಧೌ
ಭಿನ್ನಾಂಘ್ರ್ಯಶಯಯುಕಾಃ ಸದಾ ಕರಣತಃ ಸುಪ್ರಹೀಣಾಃ ಪ್ರಹೀಣಾಃ॥೧೧೩॥

॥ ಸೂತ ಉವಾಚ ॥

ಇತಿ ಸುರವಚನಂ ನಿಶಮ್ಯ ಶಂಭುಃ
ಪ್ರಣತಸುರಾಸುರಲಗ್ನಪಾದಪದ್ಮಃ ।
ಓಮಿತಿ ದೇವಗಣೈಃ ಸುಖಂ ವಿರೇಜೇ
ಗಿರಿಜಾದತ್ತಕರಸ್ತಥಾ ಪ್ರತಸ್ಥೇ ॥೧೧೪॥

ಸುತುಂಗಮಿತಶಾಕ್ವರಂ ಸಮಧಿಗಮ್ಯ ದೇವ್ಯಾ ಶಿವಃ
ಸುರಾಸುರಮುನೀಶ್ವರಪ್ರಣತಪಾದನಾಲೀಕಕಃ ।
ಗಣೇಶ್ವರಮುನೀಶ್ವರೈರ್ಜಯಯುರವೈರ್ಮುದಾ ಸಂಸ್ತುತಃ
ಉಮಾಮುಖಸುಪಂಕಜಂ ಮುಹುರಪಾರಸಂವೀಕ್ಷಣಃ ॥೧೧೫॥

---

ವೆಂಬುದನ್ನೂ ಮರೆಯುವರು. ಶಿವಕಥೆಗಳನ್ನು ಕೇಳುವುದರಲ್ಲಿ ಕಿವುಡರೆನಿಸುವರು. ನಿನ್ನ ಧ್ಯಾನದಲ್ಲಿ ಬುದ್ಧಿಶೂನ್ಯರಾಗುವರು. ಹಾಗೆಯೇ ನಿನ್ನ ಪಾದಪೂಜಾಕಾರ್ಯ ಗಳಲ್ಲಿ ಕೈಕಾಲುಗಳಿಲ್ಲದವರಂತಿದ್ದು, ಇಂದ್ರಿಯಪಾಟವವಿದ್ದರೂ, ಅವುಗಳಿಂದ ಶಿವಾರಾಧನೆಯನ್ನು ನಡೆಸದೆ ಅವುಗಳ ಶಕ್ತಿಯನ್ನೇ ಕುಂಠಿತವನ್ನಾಗಿ ಮಾಡಿಕೊ ಳ್ಳುವರು. ॥೧೧೩॥

ದೇವತೆಗಳೂ ರಾಕ್ಷಸರೂ ತನ್ನ ಅಡಿದಾವರೆಗಳಿಗೆ ನಮಸ್ಕಾರಮಾಡುತ್ತಿ ರಲು ಆಗ ಆ ಶಂಕರನು ಹೀಗೆ ತನ್ನನ್ನು ನಮಸ್ಕಾರಪೂರ್ವಕವಾಗಿ ಸ್ತೋತ್ರ ಮಾಡುತ್ತಿರುವ ಆ ದೇವತೆಗಳ ವಚನಗಳನ್ನು ಆಲಿಸಿ, “ಆಗಲಿ, ನೀವೇನೂ ಯೋಚಿಸಬೇಡಿ; ನಾನು ನಿಮ್ಮಭೀಷ್ಟವನ್ನು ನೆರವೇರಿಸುವೆ” ಎಂದು ಹೇಳುತ್ತಾ ದೇವಿಯ ಹಸ್ತಾವಲಂಬನವನ್ನು ಪಡೆದು ನಿಂತುಕೊಂಡು ಎಲ್ಲರಿಗೂ ಗೋಚರ ನಾದನು. ॥೧೧೪॥

ಅನಂತರ ಪರಮೇಶ್ವರನು ಒಳ್ಳೆಯ ಉನ್ನತವಾದ ಸಿಂಹಾಸನವನ್ನು ಗಿರಿಜಾ ದೇವಿಯೊಡನೆ ಏರಿದನು. ಆಗ ದೇವತೆಗಳೂ ರಾಕ್ಷಸರೂ ಮುನಿಪುಂಗವರೂ ಸಹ ತನ್ನ ಪಾದಕಮಲಗಳಿಗೆ ನಮಸ್ಕಾರಮಾಡುತ್ತಿರಲು ಇತ್ತಲಾಗಿ ಗಣಶ್ರೇಷ್ಠರೂ ಮುನಿವರ್ಯರೂ ಸಂತೋಷದಿಂದ ಜಯಜಯ ಎಂದು ಧ್ವನಿಮಾಡುತ್ತಿರುವ ಸಮಯ

**ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಮಹಾಕಾಲತಪೋ ವರ್ಣನೇ ದೇವತಾಪ್ರಾರ್ಥನಂ ನಾಮ ಪಂಚಮೋಽಧ್ಯಾಯಃ**

ದಲ್ಲಿ ಆ ಉಮಾದೇವಿಯ ಮುಖಕಮಲವನ್ನು ಆನಂದಪರವಶನಾಗಿ ಬಾರಿಬಾರಿಗೂ ನೋಡುತ್ತಿದ್ದನು. ॥೧೧೫॥

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗಸಂಜ್ಞಕವಾದ ಐದನೆಯ ಅಂಶದಲ್ಲಿ ಮಹಾಕಾಲನ ತಪಸ್ಸಿನ ವರ್ಣನೆಯ ಸಂದರ್ಭದಲ್ಲಿ ದೇವತೆಗಳು ಮಾಡಿದ ಪರಮೇಶ್ವರನ ಪ್ರಾರ್ಥನಾನಿರೂಪಣೆಯೆಂಬ ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಷಷ್ಠೋಽಧ್ಯಾಯಃ

॥ ದೇವಾ ಊಚುಃ ॥

ಜಯ ಜಯ ಜಗದೀಶ ದೀನಬಂಧೋ
ಜಯ ಜಯ ಸರ್ವಸುರಾಸುರಾಧಿನಾಥ ।
ಜಯ ಜಯ ತುಹಿನಾಂಶುಖಂಡಮೌಳೇ
ಜಯ ಜಯ ವಿಶ್ವವಿಧಾನಬದ್ಧದೀಕ್ಷ ॥೧॥

ಜಯ ಜಯ ಪುರಹರ ಭವಾಬ್ಧಿಪಾರ
ಜಯ ಜಯ ಕಾಮಹರ ಪ್ರಸೀದ ಶಂಭೋ

---

## ಆರನೆಯ ಅಧ್ಯಾಯ

ಸಿಂಹಾಸನಾಧಿರೂಢನಾದ ಪರಮೇಶ್ವರನನ್ನು ದೇವತೆಗಳು ಈರೀತಿ ಸ್ತೋತ್ರಮಾಡಿದರು:—

" ಓ ದೀನಬಂಧು, ಜಗದೀಶ್ವರ, ನೀನು ಸರ್ವೋತ್ಕೃಷ್ಟನು. ಸಕಲ ದೇವ ರಾಕ್ಷಸರುಗಳಿಗೂ ಸ್ವಾಮಿಯಾದ ದೇವನೇ, ನಿನಗೆ ಜಯವಾಗಲಿ. ಅರ್ಧಚಂದ್ರ ನನ್ನು ತಲೆಯಲ್ಲಿ ಅಲಂಕರಿಸಿಕೊಂಡು, ಸಕಲ ಪ್ರಪಂಚಗಳ ಸೃಷ್ಟಿ, ಸ್ಥಿತಿ, ಸಂಹಾರ ಕಾರ್ಯಗಳಲ್ಲಿ ಬದ್ಧಕಂಕಣನಾಗಿ ಸಮರ್ಥನಾಗಿರುವ ಪ್ರಭುವೇ, ನಿನ್ನ ವಿಜಯವು ಸರ್ವೋತ್ಕೃಷ್ಟವಾಗಲಿ. ॥೧॥

ತ್ರಿಪುರಾಸುರರನ್ನು ಧ್ವಂಸಮಾಡಿದವನೂ, ಈ ಸಂಸಾರವೆಂಬ ಸಮುದ್ರದ ಪಾರವನ್ನು ದಾಟಿಸುವವನೂ, ಮನ್ಮಥನನ್ನು ದಹನಮಾಡಿರುವವನೂ ಆದ

ಜಯ ಜಯ ದಕ್ಷಮಖಾಂತಕೇಶ ದೇವ
ಜಯ ಜಯ ಶೂಲಕರಾವ್ಯಯೇಶ ಪಾಹಿ ॥೨॥

ಜಯ ಜಯ ನೀಲಸುಕಂಧರಾಂಬಿಕೇಶ
ಜಯ ಜಯ ಗಾಂಗತರಂಗಶೋಭಿಮೌಳೇ ।
ಜಯ ಜಯ ವಿಧಿಜಾತಮುಂಡಮಾಲ
ಜಯ ಜಯ ತ್ರ್ಯಂಬಕ ಸುಂದರಾಮರೇಶ ॥೩॥

ಜಯ ಜಯ ವಿಷ್ಣುಸುಪೂಜಿತಾಂಘ್ರಿಪದ್ಮ
ಜಯ ಜಯ ಸುಂದರ ತಾಂಡವೇಶ ಶಂಭೋ ।
ಜಯ ಜಯ ಗಣನಾಥ ನಾಥ ದೇವ
ಜಯ ಜಯ ಸೂರ್ಯಶಶಾಂಕವಹ್ನಿನೇತ್ರ ॥೪॥

ಶಂಭುವೇ, ನಿನಗೆ ಜಯವಾಗಲಿ. ನಮ್ಮೆಲ್ಲನುಗ್ರಹಮಾಡು. ದೇವ, ನಿನ್ನನ್ನವ ಹೇಳನಮಾಡಿದ ಆ ದಕ್ಷಬ್ರಹ್ಮನ ಯಜ್ಞವನ್ನು ಧ್ವಂಸಮಾಡಿ, ಅವನನ್ನೂ ನಿಗ್ರಹಿಸಿ, ಸರ್ವಸಮರ್ಥನೆನಿಸಿದ ಸ್ವಾಮಿಯೇ, ತ್ರಿಶೂಲಾಯುಧಧಾರಿಯಾದ ನೀನು ನಾಶರಹಿತನು. ಜಗದೀಶ ನಿನಗೆ ವಿಜಯವಾಗಲಿ. ನಮ್ಮನ್ನು ಕಾಪಾಡು ಸ್ವಾಮಿ. ॥೨॥

ಸಮುದ್ರಮಥನಕಾಲದಲ್ಲಿ ಲೋಕರಕ್ಷಣೆಗಾಗಿ ಜಗತ್ತನ್ನೆಲ್ಲಾ ಸುಡುತ್ತಿದ್ದ ಮಹಾವಿಷವನ್ನೇ ಪಾನಮಾಡಿದುದರಿಂದ ಕಪ್ಪಾದ ಕತ್ತಿನಿಂದ ಶೋಭಿಸುತ್ತಿರುವ ಅಂಬಿಕಾರಮಣನೇ, ಗಂಗಾನದಿಯನ್ನು ಜಟೆಯಲ್ಲಿ ಧಾರಣೆಮಾಡಿರುವುದರಿಂದ ಆ ನದಿಯ ಪ್ರವಾಹಗಳ ಏರಿಳಿತಗಳಿಂದ ನಿನ್ನ ಶಿರಸ್ಸು ಶೋಭಿಸುತ್ತಿರುವುದು. ಬ್ರಹ್ಮನ ಶಿರಚ್ಛೇದ ಮಾಡಿದುದರಿಂದ (ಒಂದು ತಲೆಯನ್ನು) ಉಂಟಾದ ದೋಷಕ್ಕೋಸ್ಕರ ಆ ಮುಂಡವನ್ನೇ ಮಾಲೆಯಾಗಿ ಧರಿಸಿರುವ ನಿನಗೆ ವಿಜಯವಾಗಲಿ. ದೇವಾದಿ ದೇವನೂ, ಸುಂದರಾಂಗನೂ ಆದ ಮುಕ್ಕಣ್ಣನೇ, ನಿನಗೆ ಜಯವಾಗಲಿ. ॥೩॥

ಮಹಾವಿಷ್ಣುವಿನಿಂದ ಪೂಜಿಸಲ್ಪಟ್ಟಿರುವ ಪಾದಕಮಲಗಳುಳ್ಳ ಶಂಭುವೇ, ಸುಂದರಾಂಗನಾದ ನೀನು ತಾಂಡವನೃತ್ಯದಲ್ಲಿ ತುಂಬಾ ಪ್ರೀತಿಯುಳ್ಳವನು. ಗಣಾಧಿ ಪತಿಯೂ ಸಕಲ ಜಗದೊಡೆಯನೂ ನೀನೆ ಆಗಿರುವೆ. ಸೂರ್ಯ, ಚಂದ್ರ ಮತ್ತು

ಜಯ ಜಯ ಭೂತಪತೇ ಭವೋದ್ಭವಾದ್ಯ
ಜಯ ಜಯ ಕಾಲಕಾಲ ಪ್ರಭೋ ಪರಿಪಾಹಿ ॥೫॥

ಪ್ರಸೀದ ವಿಶ್ವೇಶ್ವರ ವೇದಗೀತ
ಪ್ರಸೀದ ದೇವೇಶ ದಯಾನಿಧಾನ ।
ಪ್ರಸೀದ ಸರ್ವೇಶ್ವರ ವಿಶ್ವನಾಥ
ಪ್ರಸೀದ ವಿಶ್ವಾಧಿಕ ಪಾಹಿ ನಃ ಸದಾ ॥೬॥

ಭಗವಂಸ್ತವ ಸುಂದರಾಂಘ್ರಿಪದ್ಮಂ
ಸತತಂ ಧ್ಯಾಯತಿ ವಿಪ್ರವರ್ಯಬಾಲಃ ।
ತಪಸಾ ಸ ತು ವಾರ್ಯತಾಂ ಮಹೇಶ
ಯದಯಂ ಮನಸೇಚ್ಛತೇಽಸ್ತು ತತ್ತದಸ್ಯ ॥೭॥

---

ಅಗ್ನಿ ಇವರೇ ನಿನ್ನ ಮೂರು ಕಣ್ಣುಗಳಾಗಿರುವರು. ಜಗದೀಶ, ನಿನಗೆ ವಿಜಯವಾಗಲಿ. ॥೪॥

ಎಲ್ಲಾ ಪೃಥಿವ್ಯಪ್ತೇಜೋಮಯವಾದ ಸಕಲ ಭೂತಗಳಿಗೂ ಸ್ವಾಮಿಯಾದ ದೇವನೇ, ಈ ಪ್ರಪಂಚವೆಲ್ಲವೂ ನಿನ್ನಿಂದಲೇ ಉಂಟಾಯಿತು. ಎಲ್ಲಕ್ಕೂ ನೀನೇ ಆದಿಕಾರಣನು. ಕಾಲಸ್ವರೂಪನಾದ ಯಮನನ್ನೂ ನಿಗ್ರಹಿಸಿದ ಪ್ರಭುವೇ, ನಿನಗೆ ವಿಜಯವಾಗಲಿ. ನಮ್ಮನ್ನು ಕಾಪಾಡುವನಾಗು. ॥೫॥

ಸಕಲ ಪ್ರಪಂಚಗಳಿಗೂ ಸ್ವಾಮಿಯಾದ ನೀನು ವೇದಸ್ತುತ್ಯನಾಗಿರುವೆ. (ಅಂದರೆ ವೇದಗಳು ನಿನ್ನ ಅನಂತಗುಣಜಾಲವನ್ನೂ ಗಾನಮಾಡುತ್ತಿರುವುವು) ದೇವೇಶ್ವರ, ದಯಾನಿಲಯನಾದ ನೀನು ನಮ್ಮಲ್ಲಿ ಅನುಗ್ರಹಮಾಡು. ಎಲ್ಲರಿಗೂ ಸ್ವಾಮಿಯೂ ಜಗದೊಡೆಯನೂ ನೀನೇ ಆಗಿರುವೆ. ಜಗಚ್ಛ್ರೇಷ್ಠನೇ, ನಮ್ಮನ್ನನುಗ್ರಹಿಸಿ ಯಾವಾಗಲೂ ಕಾಪಾಡು, ದೇವ. ॥೬॥

ಷಡ್ಗುಣೈಶ್ವರ್ಯಪರಿಪೂರ್ಣನಾದ ದೇವ, ನಿನ್ನ ಸುಂದರವಾದ ಚರಣಸರೋಜಗಳನ್ನು ಅನವರತವೂ ಒಬ್ಬ ಶ್ರೇಷ್ಠನಾದ ಬ್ರಾಹ್ಮಣಕುಮಾರನು ಧ್ಯಾನಮಾಡುತ್ತಾ ಘೋರವಾದ ತಪಸ್ಸನ್ನೆಸಗುತ್ತಿರುವನು. ಅವನ ತಪಶ್ಚರ್ಯೆಯಿಂದ ನಮಗೆ ದಿಕ್ಕೇ ತೋರದಂತಾಗಿದೆ. ಪ್ರಭೋ ಮಹೇಶ್ವರ, ಅವನ ಮನೋಭೀಷ್ಟವನ್ನು ಸಲ್ಲಿಸಿ ಆ ಬಾಲಕನು ತಪಸ್ಸಿನಿಂದ ಬಹಿರ್ಮುಖನಾಗುವಂತೆ ಮಾಡಿ

ತಚ್ಛ್ರುತ್ವಾ ದೇವವಚನಂ ದೇವದೇವೋ ಮಹೇಶ್ವರಃ ।
ಪ್ರತಸ್ಥೇ ಗಣಪೈಃ ಸಾರ್ಧಂ ಸುರೈರ್ಬ್ರಹ್ಮಾದಿಭಿಸ್ತದಾ ॥೮॥

ಗಣವೃಂದೈಶ್ಚಾಪಿ ವಿವಿಧೈರ್ನಾನಾಯುಧಧರೈರಪಿ ।
ತರಕ್ಷುರೂಕ್ಷವದನೈರ್ಮಾರ್ಜಾರೋಲೂಕಗೋಮುಖೈಃ ॥೯॥

ಸಿಂಹರಾಸಭವಕ್ತ್ರೈಶ್ಚ ಶುಕಸರ್ಪಾಶ್ವವಕ್ತ್ರಕೈಃ ।
ಮಹಾಸಿಂಧುರವಕ್ತ್ರೈಶ್ಚ ಲುಲಾಯವದನೈಸ್ತಥಾ ॥೧೦॥

ವ್ಯಾಲೀಮುಖೈರಾಖುಮುಖೈರ್ಗಣೇಂದ್ರೈರಿವ ಹಂತೃಭಿಃ
ವಾಮನೈರ್ವಿಕಟೈರ್ಮುಂಡೈರಕೃಶೈಃ ಕೃಶವಕ್ತ್ರಕೈಃ ॥೧೧॥

ನಮ್ಮನ್ನು ಕಾಪಾಡು ಸ್ವಾಮಿ, ಎಂದು ದೇವತೆಗಳು ಮಹೇಶ್ವರನನ್ನು ಭಕ್ತಿಪುರಸ್ಸರವಾಗಿ ಪ್ರಾರ್ಥಿಸಿದರು. ॥೭॥

ಹೀಗೆ ತನ್ನನ್ನು ಪ್ರಾರ್ಥನೆಮಾಡಿದ ಆ ದೇವತೆಗಳ ಮಾತುಗಳನ್ನು ಕೇಳಿ, ದೇವದೇವನಾದ ಮಹೇಶ್ವರನು ತನ್ನ ಗಣಾಧಿಪರೊಡನೆಯೂ, ಬ್ರಹ್ಮಾದಿದೇವತೆಗಳೊಡನೆಯೂ ಅಲ್ಲಿಂದ ಆ ಬಾಲಕನು ತಪಸ್ಸುಮಾಡುತ್ತಿದ್ದ ಸ್ಥಳಕ್ಕೆ ಹೊರಟನು. ॥೮॥

ಆ ಮಹೇಶನ ಜೊತೆಯಲ್ಲಿ ಹೊರಟ ಗಣಗಳ ಗುಂಪು ನಾನಾ ವಿಧವಾದ ಆಯುಧಗಳನ್ನು ಹಿಡಿದಿದ್ದರು. ಅವರಲ್ಲಿ ಕೆಲವರು, ಶಿವಂಗಿಯ ಮುಖವುಳ್ಳವರು, ಕೆಲವರು ಕರಡಿಯ ಮುಖದವರು, ಕೆಲವರು ಬೆಕ್ಕು, ಗೂಬೆ, ಹಸು, ಸಿಂಹ, ಕತ್ತೆ, ಈ ಪ್ರಾಣಿಗಳ ಮುಖವುಳ್ಳವರು. ಇನ್ನು ಕೆಲವರು ಗಿಳಿ, ಹಾವು, ಕುದುರೆ, ದೊಡ್ಡ ಆನೆ ಮತ್ತು ಕೋಣ ಇವುಗಳ ಮುಖಗಳಿಂದ ಕೂಡಿದವರು. ॥೯-೧೦॥

ಇನ್ನೂ ಕೆಲವು ಶಿವಗಣಗಳ ಮುಖಗಳು, ಕಿರುಬ, ಹಾವು, ಇಲಿ ಇವುಗಳಂತಿದ್ದವು. ಇವರೆಲ್ಲರೂ ಯುದ್ಧಮಾಡಲು ಸಿದ್ಧರಾಗಿರುವ ಗಣಶ್ರೇಷ್ಠರಂತೆಯೇ ತೋರುತ್ತಿದ್ದರು. ಕೆಲವರ ಕತ್ತು ವಕ್ರವಾಗಿಯೂ, ವಿಕಟವಾಗಿಯೂ, ದಪ್ಪವಾಗಿಯೂ, ಕೃಶವಾಗಿಯೂ ತೋರುತ್ತಿದ್ದವು. ॥೧೧॥

ಜಟಾಜೂಟತಟೋದ್ಭಾಸಿಚಂದ್ರಾರ್ಧಕೃತಶೇಖರೈಃ ।
ಶೂಲಹೇತಿಧರೈಃ ಕ್ರೂರೈಃ ಶರಕಾರ್ಮುಕಧಾರಿಭಿಃ ॥೧೨॥

ನಿಷಂಗಿಭಿಃ ಕವಚಿಭಿಃ ಖಡ್ಗಪಟ್ಟಿಶಪಾಣಿಭಿಃ ।
ನಿಃಸಾಣಭೇರೀಪಣವದುಂದುಭ್ಯಾಡಂಬರಾರವೈಃ ॥೧೩॥

ಶಂಖಕಾಹಲಶಬ್ದೈಶ್ಚ ಮುನೀಶಜಯಶಬ್ದಕೈಃ ।
ನಂದಿವೇತ್ರಾಗ್ರವಿತ್ರಸ್ತದೇವಸಂಘೈರಿತಸ್ತತಃ ॥೧೪॥

ದದರ್ಶ ಭೂತಪಃ ಶಂಭುಃ ಕೃಪಾದೃಷ್ಟ್ಯಾ ಸುರಾಸುರಾನ್ ।
ಸಕಂಪಾಂಸ್ತಾನ್ನಿಲಿಂಪಾದ್ಯಾನ್ಪ್ರಣಾಮಮುಖರಾನ್ಕ್ಷಿತೌ ॥೧೫॥

ಕೆಲವು ಗಣಗಳು ತಮ್ಮ ಜಟಾಭಾರದಲ್ಲಿ ಅರ್ಧಚಂದ್ರನನ್ನು ಧರಿಸಿ ಶೋಭಿಸುತ್ತಿದ್ದರು. ಕೆಲವರು ಕ್ರೂರವಾದ ಶೂಲಾಯುಧಗಳನ್ನು ಹಿಡಿದಿದ್ದರು. ಕೆಲವರು ಬಾಣ, ಬಿಲ್ಲು ಇವುಗಳನ್ನು ಧರಿಸಿದ್ದರು. ಕೆಲವರು ಬತ್ತಳಿಕೆ, ಯುದ್ಧ ಕವಚ ಇವುಗಳನ್ನು ಧರಿಸಿ, ಕತ್ತಿ, ಪಟ್ಟಿಶ ಇವುಗಳನ್ನು ಕೈಯಲ್ಲಿ ಹಿಡಿದಿದ್ದರು. ಹೀಗೆ ಆಯುಧಧಾರಿಗಳಾದ ಗಣಗಳೊಡನೆ ಪ್ರಯಾಣಮಾಡುತ್ತಿದ್ದಾಗ, ನಿಃಸಾಣ, ಭೇರಿ, ಪಣವ, ದುಂದುಭಿ ಈ ವಾದ್ಯಗಳ ಧ್ವನಿಯು ಆಡಂಬರಪೂರ್ವಕವಾಗಿ ಘೋಷಮಾಡುತ್ತಿದ್ದಿತು. ॥೧೨-೧೩॥

ಶಂಖ, ಕೊಂಬು ಇವುಗಳ ಶಬ್ದಗಳೂ, ಮುನಿಶ್ರೇಷ್ಠರು ಮಾಡುತ್ತಿರುವ 'ಜಯಜಯ' ಧ್ವನಿಗಳೂ ವಿಶೇಷವಾಗಿ ಕೇಳಿಬರುತ್ತಿದ್ದುವು. ಈರೀತಿಯಾಗಿ ದೇವತೆಗಳು, ರಾಕ್ಷಸರು, ಶಿವಗಣಗಳು, ಮುನಿಪುಂಗವರು ಇವರ ಗುಂಪನ್ನೆಲ್ಲಾ ಗಲಾಟೆಯಾಗದಂತೆ ಎಲ್ಲಾ ಕಡೆಯಲ್ಲಿಯೂ ನಂದಿಕೇಶ್ವರನು ಬೆತ್ತವನ್ನು ಕೈಯಲ್ಲಿ ಹಿಡಿದು ಸರಿಪಡಿಸುತ್ತಾ ಹೆದರಿಸುತ್ತಿದ್ದನು. ॥೧೪॥

ಹೀಗೆ ಗಣಸಮೂಹದೊಡನೆ ವಿಜೃಂಭಣೆಯಿಂದ ಬರುತ್ತಿರುವ ಭೂತಪತಿಯಾದ ಆ ಶಂಭುವು, ಭಯದಿಂದ ನಡುಗುತ್ತಾ ನೆಲದಮೇಲೆ ನಮಸ್ಕಾರ ಮಾಡುವಾಗ ಧ್ವನಿಮಾಡುತ್ತಿರುವ ಆ ದೇವರಾಕ್ಷಸಗಣಗಳನ್ನೆಲ್ಲಾ ತನ್ನ ದಯಾಪೂರ್ವಕವಾದ ದೃಷ್ಟಿಯಿಂದ ಒಂದುಬಾರಿ ನೋಡಿದನು. ॥೧೫॥

ಛತ್ರಂ ಶಶಿನಿಭಂ ಶಂಭೋರ್ಮೂರ್ಧ್ನಿ ದಧ್ರೇಽಮರೇಶ್ವರಃ ।
ಹಂಸಸಂಪೂರ್ಣಪಕ್ಷಾಭೇ ಚಾಮರೇ ಪರಮೇಶ್ವರಂ ॥೧೬॥

ದುಧುವೇ ತಾಸ್ತದಾ ವಿಪ್ರಾಃ ಶಂಕರಂ ಪವನಾನಲೌ ।
ವ್ಯಜನೋತ್ಥೈರ್ವಾತಪೋತೈರ್ವರುಣಸ್ತಮವೀಜಯತ್ ॥೧೭॥

ಧೂಪಪಾತ್ರಕರೈಶ್ಚೈವ ದಧಿದೂರ್ವಾಕ್ಷತಾಕರಾಃ ।
ಮಾಲ್ಯಮೋದಕಹಸ್ತಾಶ್ಚ ತಥಾ ದರ್ಶಕರಾಗಣಾಃ ॥೧೮॥

ಶಂಭೋಃ ಪುರಃಸರಾಃ ಸರ್ವೇ ಯಯುರ್ಗಣಗಣಾಸ್ತಥಾ ।
ಗಂಧರ್ವಾಶ್ಚ ತಥಾ ಸಿದ್ಧಾ ವೈಮಾನಿಕಗಣಾಸ್ತದಾ ॥೧೯॥

ಸ್ವರ್ಗೌಕಸಸ್ತದಾರಣ್ಯಸುಮನೈರ್ವವೃಷುಃ ಶಿವಂ ।
ನಾರದಾದ್ಯಾಶ್ಚ ಮುನಯೋ ತುಂಬುರುರ್ವಲ್ಲಕೀಕರಃ ॥೨೦॥

ಜಗೌ ನಾಮಾನಿ ಪುಣ್ಯಾನಿ ಶಂಕರಸ್ಯ ಮಹಾತ್ಮನಃ ॥೨೧॥

ಆಗ ದೇವೇಂದ್ರನು ಚಂದ್ರನಂತೆ ಕಾಂತಿಯುಕ್ತವಾದ ಶ್ವೇತಛತ್ರವನ್ನು ಆ ಮಹಾದೇವನಿಗೆ ಹಿಡಿದನು. ಹಂಸಪಕ್ಷಿಗಳ ರೆಕ್ಕೆಗಳಂತೆ ಸಂಪೂರ್ಣವಾಗಿ ಶುಭ್ರವರ್ಣವುಳ್ಳ ಚಾಮರಗಳನ್ನು ವಾಯ್ವಗ್ನಿಗಳು ಆ ಪರಮೇಶ್ವರನಿಗೆ ಬೀಸಿದರು. ವಾಯುವೂ ಮತ್ತು ಅಗ್ನಿಯೂ ಆ ರೀತಿ ಮಹೇಶ್ವರನಿಗೆ ಆನಂದವನ್ನುಂಟುಮಾಡಿದರು. ವರುಣನು ಬೀಸಣಿಗೆಯನ್ನು ಹಿಡಿದು ತಣ್ಣಗೆ ಗಾಳಿಯನ್ನು ಬೀಸುತ್ತಿದ್ದನು. ॥೧೬-೧೭॥

ಕೆಲವು ದೇವಗಣಗಳು ಧೂಪಪಾತ್ರೆಯನ್ನೂ ಕೆಲವರು ಮೊಸರು, ಗರಿಕೆ, ಅಕ್ಷತೆ ಇವುಗಳನ್ನೂ, ಕೆಲವರು ಹೂಮಾಲೆ, ಮೋದಕ ಇವುಗಳನ್ನೂ, ಹಲವರು ಕನ್ನಡಿಯನ್ನೂ ಕೈಯಿಂದ ಹಿಡಿದು ಆ ಶಂಭುವಿನ ಮುಂದುಗಡೆ ಸಾಲಾಗಿ ಹೋಗುತ್ತಿದ್ದರು. ರುದ್ರಗಣಗಳೂ, ಗಂಧರ್ವರೂ, ಸಿದ್ಧರೂ, ವಿಮಾನದಲ್ಲಿ ಸಂಚರಿಸುತ್ತಿದ್ದ ಗಣಗಳೂ ಸಹ ಆಗ ಆ ಪರಶಿವನನ್ನನುಸರಿಸಿ ನಡೆಯುತ್ತಿದ್ದರು. ॥೧೮-೧೯॥

ಆಗ ಸ್ವರ್ಗವಾಸಿಗಳಾದ ದೇವತೆಗಳು ಆ ಪರಶಿವನ ಮೇಲೆ ವನಕುಸುಮಗಳನ್ನು ಮಳೆಗರೆಯುತ್ತಿದ್ದರು. ನಾರದರೇ ಮೊದಲಾದ ಮುನಿಗಳೂ ವೀಣೆಯನ್ನು ಹಿಡಿದಿರುವ ತುಂಬುರುವೂ, ಮಹಾತ್ಮನೂ, ಜಗನ್ಮಂಗಳಕರನೂ ಆದ ಆ

ಕರನಖಮುಖಘಟ್ಟನೋತ್ಥತಂತ್ರೀಭವಶಬ್ದೈರ್ಮಧುರಪ್ರಭೇದಬಂಧೈಃ ।
ಸ್ವರಸಪ್ತಕಮೂರ್ಛನಾವಿಶೇಷೈರ್ಮಧುರಂ ಗಾಯತಿ ರುದ್ರವೀಣಯಾಗಣಃ ॥೨೨॥

ಮುನಿರೇವ ವಿಶೇಷದರ್ಶನಃ ಸಮರಕ್ತಾಮಲರಾಗಯುಕ್ತಕಂಠಃ ॥೨೩॥

॥ ನಾರದ ಉವಾಚ ॥

ಹರ ಹರ ಪುರಹರ ಭವಾಬ್ಧಿಪಾರ
ಸ್ಮರಹರ ಶಂಕರ ಜಾಯಯಾರ್ಯವಾರ್ಯ । (?)
ಗರಕಂಧರ ಭೂಧರೋರುಮಾಲ
ಕೃತಶೂಲಾಕೃತಕಾಲ ಬಾಲಪಾಲ ॥೨೪॥

---

ಮಹೇಶನ ದಿವ್ಯವೂ ಪುಣ್ಯಕರವೂ ಆದ ಹೆಸರುಗಳನ್ನು ಗಾನಮಾಡುತ್ತಿದ್ದರು. ॥೨೦-೨೧॥

ಆ ತುಂಬುರುಮುನಿಯು ತನ್ನ ಕೈಯುಗುರಿನ ತುದಿಯ ಅಮುಕುವಿಕೆಯಿಂದ ಉಂಟಾಗುತ್ತಿರುವ ತಂತಿಯ ಧ್ವನಿಯಿಂದ ಮೃದು, ಮಧುರ ಮುಂತಾದ ನಾನಾ ಭೇದಯುಕ್ತವಾಗಿರುವಂತೆಯೂ ನಿಷಾದ, ಋಷಭ, ಗಾಂಧಾರ, ಷಡ್ಜ, ಮಧ್ಯಮ, ಧೈವತ ಮತ್ತು ಪಂಚಮ ಎಂಬ ಏಳು ಸ್ವರ ಮತ್ತು ಮೂರ್ಛನಗಳು ಇವುಗಳನ್ನೇ ವಿಶೇಷವಾಗಿ ಪ್ರಕಟಪಡಿಸುತ್ತಾ ಮಧುರವಾಗಿ ರುದ್ರವೀಣೆಯನ್ನು ಬಾರಿಸುತ್ತಾ ಗಾನಮಾಡುತ್ತಿರುವನು. ॥೨೨॥

ಹೀಗೆ ಶಿವನ ದಿವ್ಯನಾಮಗಳನ್ನು ಗಾನಮಾಡುತ್ತಾ ಸಮಾನವಾದ ಅನುರಾಗವನ್ನು ತನ್ನ ಕಂಠದಲ್ಲಿ ಹೊರಡುವ ನಿರ್ಮಲವಾದ ರಾಗಗಳಿಂದ ಪ್ರಕಟಪಡಿಸುತ್ತಾ ಆ ತುಂಬುರು ನಾರದನು ಆ ಸಮಯದಲ್ಲಿ ನೋಡಲು ವಿಶೇಷವಾಗಿ ಶೋಭಿಸುತ್ತಿದ್ದನು. ॥೨೩॥

ಸಕಲ ಪಾಪಧ್ವಂಸಕನೂ, ತ್ರಿಪುರಾಸುರರನ್ನು ನಾಶಮಾಡಿದವನೂ, ಈ ಸಂಸಾರಸಾಗರವನ್ನು ದಾಟಿಸುವವನೂ, ಮನ್ಮಥಧ್ವಂಸಕನೂ, ಲೋಕಮಂಗಳಕರನೂ ಆದ ಮಹಾದೇವನೇ, ವಿಷಕಂಠನಾದ ನೀನು ಈ ಭೂಮಿಯನ್ನೇ ತನ್ನ ತಲೆಯಮೇಲೆ ಧರಿಸಿರುವ ಆದಿಶೇಷನನ್ನೇ ದೊಡ್ಡ ಮಾಲೆಯಾಗಿ ಮಾಡಿಕೊಂಡಿರುವೆ. ತನ್ನ ಭಕ್ತನೂ ಬಾಲಕನೂ ಆದ ಮಾರ್ಕಂಡೇಯನನ್ನು ಕಾಪಾಡುವುದ

ಶಶಿಖಂಡಶಿಖಂಡಮಂಡನೇ
ವಿಧಿಮುಂಡಾಮಲಹಸ್ತಮಂಡಲೇ ।
ಧೃತನಾಗಸುಕುಂಡಲೋರುಗಂಡೇ
ತ್ವಯಿ ಚೇತೋ ವಿದಧಾಮಿ ಶಂಕರೇ ॥೨೫॥

ಸಾಂಗೋಪನಿಷದಾ ವೇದಾಸ್ತದಾ ತುಷ್ಟುವುರೀಶ್ವರಂ ॥೨೬॥

॥ ಋಗ್ವೇದ ಉವಾಚ ॥

ಸಕಲಾಮರತುಲ್ಯಮೇಕಮೀಶಂ
ಭಗವಂತಂ ಮನುತೇ ವಿಮೂಢಚೇತಾಃ ।
ವದತೀಯಂ ಶ್ರುತಿರೀಶ ಬಹ್ವೃಚಾನಾಂ
ಮಾತ್ವಾ ರುದ್ರವಚೋಗಣೈರ್ಮಹೇಶ ॥೨೭॥

---

ಕ್ಕೋಸ್ಕರ ದೃಪ್ತನಾಗಿದ್ದ ಆ ಯಮನನ್ನೇ ತ್ರಿಶೂಲಾಯುಧದಿಂದ ನಿಗ್ರಹಿಸಿರುವೆ. ॥೨೪॥

ಚಂದ್ರಖಂಡವೆಂಬ (ಅರ್ಧಚಂದ್ರನೆಂಬ) ನವಿಲುಗರಿಯನ್ನು ತಲೆಯಲ್ಲಿ ಧರಿಸಿರುವವನೂ, ಬ್ರಹ್ಮನ ಶಿರಸ್ಸನ್ನೇ ಪರಿಶುದ್ಧವಾದ ತನ್ನ ಕೈಯಲ್ಲಿ ಕಪಾಲವಾಗಿ ಹಿಡಿದಿರುವವನೂ, ಗಂಡಸ್ಥಳದಲ್ಲಿ ಅಲುಗಾಡುತ್ತಿರುವ ಸರ್ಪವನ್ನೇ ಕುಂಡಲಾಭರಣದಂತೆ ಭಾವಿಸಿರುವವನೂ ಆದ ಶಂಕರನೆನಿಸಿದ ಈ ನಿನ್ನಲ್ಲಿ ನನ್ನ ಮನಸ್ಸನ್ನಿರಿಸುವೆನು. (ಅಂದರೆ ನಿನ್ನನ್ನು ಮನಃಪೂರ್ವಕವಾಗಿ ಧ್ಯಾನಮಾಡುತ್ತೇನೆಂದು ಭಾವ.) ॥೨೫॥

ಆ ಸಮಯದಲ್ಲಿ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪಗಳೆಂಬ ಆರು ಅಂಗಗಳುಳ್ಳ ಉಪನಿಷತ್ತುಗಳೂ ಮತ್ತು ವೇದಗಳೂ (ಋಗ್ಯಜುಸ್ಸಾಮಾಥರ್ವಣರೂಪವಾದ ನಾಲ್ಕು ವೇದಗಳೂ) ಆ ಪರಮೇಶ್ವರನನ್ನು ಸ್ತೋತ್ರಮಾಡಿದವು. ॥೨೬॥

ಅದರಲ್ಲಿ ಋಗ್ವೇದವು ಹೀಗೆ ಸ್ತೋತ್ರಮಾಡಿತು - "ಹೇ ಈಶ್ವರ, ಮೂರ್ಖರಾದವರು ಭಗವಂತನೂ, ಅದ್ವಿತೀಯನೂ ಆದ ನಿನ್ನನ್ನು ಸಕಲ ದೇವತೆಗಳಿಗೂ ಸಮಾನನೆಂದು ಹೇಳುವರು. ನಿಜವಾಗಿಯೂ ನೀನು ಸಕಲ

ಭವರೋಗಹರೌಷಧಪ್ರದಾನೇ
ಭಿಷಜಾಂ ನಾಯಕ ಇತ್ಯಪಿ ಶ್ರುತಿಃ ।
ಪರಮಂಹೋ ಗಿರಿರೂಪಿಣೋಽಪಿ ಯೋ ವೈ
ಭಗವಂಸ್ತ್ವಂ ಹಿ ಜಲಾಷಭೇಷಜಃ ॥೨೮॥

॥ ಯಜುರ್ವೇದ ಉವಾಚ ॥

ಸಂಸಾರಘೋರಜನಿತಾಂ ರುಜಮಾಶು ಚೇಶ
ಸದ್ಯೋ ವಿನಾಶಯ ಮಹೇಶ ಕೃಪಾಂಬುರಾಶೇ ।
ತ್ವಂ ರುದ್ರಮಾಹುರಖಿಲಾಗಮತತ್ವಸಾರಾಃ
ಧೀರಾಸ್ತ್ವದೀಯಚತುರಾ ವಿನಿವೃತ್ತಮಾರಾಃ ॥೨೯॥

ಸ್ತುತ್ವಾ ನಸ್ತವ ಹೇ ಮಹೇಶ್ವರ ಮಹಾದೇವೇತಿ ನಾಮಾಮೃತೈ
ರ್ಲೋಕಂ ಶೋಕಮಯಾಗ್ನಿದಗ್ಧತೃಣಕಂ ಸಿಂಚಂತಿ ವರ್ಷಂತಿ ಚ ।
ತೇಭ್ಯಶ್ಚಾಕರವಂ ಪ್ರಣಾಮಮಧುನಾ ವೇದೋಽಪಿ ವಕ್ತಿ ಸ್ವಯಂ
ತ್ವದ್ಭಕ್ತೇಷ್ವಖಿಲೇಷು ಪಾಹಿ ದಯಯಾ ವಿಶ್ವೇಶ ಸರ್ವಸ್ವಯಾ ॥೩೦॥

ದೇವತೋತ್ತಮನು. ನಿನ್ನ ಮಹಿಮೆಯನ್ನೆಲ್ಲಾ ನಾನು ರುದ್ರಸೂಕ್ತದಲ್ಲಿ ವಿಶೇಷ ವಾಗಿ ಪ್ರತಿಪಾದಿಸಿರುವೆನು. ॥೨೭॥

ಈ ಸಂಸಾರಬಂಧನ ರೂಪವಾದ ಪ್ರಬಲರೋಗಕ್ಕೆ ಔಷಧಿಕೊಡುವ ಸಕಲ ವೈದ್ಯರಲ್ಲಿಯೂ ನೀನೇ ಗಟ್ಟಿಗನೆಂದು ಶ್ರುತಿಯು ಹೇಳುತ್ತಿರುವುದು. ಓ ಭಗವಂತನೇ, ಬೆಟ್ಟಗಳಂತಿರುವ ಪರಮಪಾಪಗಳನ್ನೂ ಕರಗಿಸಿ ನೀರುಮಾಡುವೆಯಾದುದರಿಂದ ನಿನ್ನನ್ನು ಜಲಾಷಭೇಷಜನೆನ್ನುವರು.” ॥೨೮॥

ಆಗ ಯಜುರ್ವೇದವು ಹೀಗೆ ಸ್ತುತಿಸಿತು “ ಸರ್ವಸಮರ್ಥನೂ, ದಯಾಸಮುದ್ರನೂ ಆದ ಮಹೇಶ್ವರನೇ, ಈ ಘೋರವಾದ ಸಂಸಾರದಿಂದುಂಟಾಗಿರುವ ರೋಗವನ್ನು ಜಾಗ್ರತೆ ಈಗಲೇ ನಾಶಪಡಿಸುವನಾಗು ಸ್ವಾಮಿ. ಸಕಲ ವೇದಗಳ ಸಾರವನ್ನೂ ತಿಳಿದು ಮನ್ಮಥನನ್ನು ತಿರಸ್ಕರಿಸಿರುವ ಧೀರರಾದ ನಿನ್ನ ಭಕ್ತಶ್ರೇಷ್ಠರು ನಿನ್ನನ್ನು ರುದ್ರನೆಂದು ಸದಾ ಸ್ತೋತ್ರಮಾಡುತ್ತಿರುವರು. ॥೨೯॥

ಶಂಕರ, ಹೇ ಮಹೇಶ್ವರ, ಮಹಾದೇವ ಎಂಬ ಅಮೃತಸಮಾನವಾದ ನಾಮಗಳಿಂದ ನಿನ್ನನ್ನು ಸ್ತೋತ್ರಮಾಡಿ ಶೋಕಮಯವಾದ ಬೆಂಕಿಯಿಂದ

॥ ಸಾಮವೇದ ಉವಾಚ ॥

**ತ್ವಂ ಸಾಮಸ್ತೋಮಭೂಮಾ ಮದುದಿತವಚಸಾಂ ಪಾತ್ರಮೀಶಸ್ತ್ವಮಾದ್ಯೋ**
**ವೈದ್ಯಃ ಸರ್ವೈರಭೇದ್ಯಸ್ತ್ವಧಿಪತಿರಪಿ ಯತ್ಕ್ಷತ್ರಮಿತ್ರಾದಿವಾಕ್ಯೈಃ ।**
**ಅನ್ನಾನಾಂ ಪತಿರೇಕ ಏವ ಧನಪಸ್ತ್ವಂ ಸ್ತೋಮನಾಮಾತ್ಮಕೈ-**
**ರ್ಗೀತೈರ್ಗಾಯತಿ ಗಾನಲೋಲ ಭಗವನ್ನಾಮಶ್ರುತಿಃ ಶಂಕರಃ ॥೩೦॥**

**ಶಂಭೋ ಶಾಕ್ವರದೈವತೈಶ್ಚ ಭಗವನ್ವೈರಾಜಮಾಹೇಂದ್ರಕೈಃ**
**ರೌದ್ರೈರ್ದೇವವ್ರತಾದ್ಯೈಃ ಪ್ರತಿಪದನಮಸಾಂ ರಾಶಿಭಿಃ ಸ್ತೋಮಸಂಘೈಃ ।**
**ತ್ವಾಂ ಸ್ತವ್ಯಂ ಸ್ತುವತೇ ಮಹೇಶ್ವರ ಸದಾ ಸಾಮಶ್ರುತೀನಾಂ ಗಣೋ**
**ರಾಜದ್ರಾಜನಹಿಂಕೃತೈಃ ಪ್ರತಿಪದೈರಾದ್ಯಂತರೈರ್ಭೂರ್ತ್ಕೃತೈಃ ॥೩೧॥**

ಸುಡಲ್ಪಡುತ್ತಿರುವ ಅಣು, ರೇಣು, ತೃಣಕಾಷ್ಠಾದಿಗಳಿಂದ ಯುಕ್ತವಾದ ಈ ಲೋಕವನ್ನು ನಿನ್ನ ಪರಮಭಕ್ತರು ಅಮೃತದಿಂದ ನೆನೆಸುತ್ತಾ ಮಳೆಗರೆಯು ತ್ತಿರುವರು. ದೇವ, ಅಂತಹ ಮಹಾಮಹಿಮೆಯುಳ್ಳ ನಿನ್ನ ಭಕ್ತರಿಗೆ ಇಗೋ ಈಗ ನಮಸ್ಕಾರಮಾಡುತ್ತಿರುವೆನು. ಸಾಕ್ಷಾದ್ವೇದಗಳೇ ಹೇ ವಿಶ್ವೇಶ್ವರ, ನಿನ್ನ ಸಕಲ ಭಕ್ತರಲ್ಲಿ ನಿನ್ನ ಸಂಪೂರ್ಣ ದಯೆಯನ್ನು ಬೀರಿ ಕಾಪಾಡೆಂದು ಬಿನ್ನವತ್ತ ಸಾರುತ್ತಿರುವುವು. ॥೩೦॥

ಪರಮೇಶ್ವರನೇ, ನೀನು ಸಾಮಗಳ ಸಮೂಹಕ್ಕೆಲ್ಲಾ ಆಶ್ರಯನಾಗಿರುವೆ. ಆ ಸಾಮಸ್ತೋಮರೂಪವಾದ ನನ್ನ ವಾಕ್ಯಗಳಿಗೆಲ್ಲಾ ಈಶ್ವರನೂ, ಆದಿಪುರುಷನೂ ನೀನೇ ಆಗಿರುವೆ. ನೀನೇ ಈ ಭವರೋಗವೈದ್ಯನು. ಯಾರಿಂದಲೂ ಭೇದಿಸಲು ಅಸಾಧ್ಯನೆನಿಸಿ, ಸಕಲ ಚರಾಚರಾತ್ಮಕವಾದ ಪ್ರಪಂಚಕ್ಕೆಲ್ಲಾ ಒಡೆಯನಾದ ನೀನು 'ಕ್ಷತ್ರಮಿತ್ರ' ಮುಂತಾದ ಸಾಮವಾಕ್ಯಗಳಿಂದ ಹೊಗಳಿಸಲ್ಪಡುತ್ತಿರುವೆ. ಅಲ್ಲದೆ ಸ್ತೋಮ, ನಾಮ ಇವೇ ಮುಂತಾದ ಸ್ವರೂಪಗಳುಳ್ಳ ಗೀತಗಳಿಂದ ಅನ್ನಪತಿಯೂ, ಅದ್ವಿತೀಯನೂ, ದ್ರವ್ಯಾಧಿಪತಿಯೂ ಎಂದು ಗಾನಮಾಡಲ್ಪಡುತ್ತಿರುವ ನೀನು ಗಾನಲೋಲನು. ಮಂಗಳಕರವಾದ ಸಾಮವೇದವೇ ನೀನಾಗಿರುವೆ. ॥೩೦॥

ಶಾಕ್ವರದೇವತಾಮಂತ್ರಗಳು ವೈರಾಜ, ಮಹೇಂದ್ರ, ರೌದ್ರ, ರಾಜನ, ಹಿಂಕೃತಿ, ರಥಂತರ ಮುಂತಾದ ಸಾಮಭೇದಗಳಿಂದಲೂ, ಶ್ರುತಿಗಿಂಪಾದ ಸ್ತುತಿವಾಕ್ಯ

|| ಅಥರ್ವಣವೇದ ಉವಾಚ ||

**ಯೋ ವೈ ರುದ್ರೇತಿಮಂತ್ರೈಃ ಪ್ರತಿಪದನಮಸಾಂ ರಾಶಿಭಿಸ್ತ್ವಾಮತರ್ಕ್ಯಂ**
**ತರ್ಕಾದೀನಾಮಗಮ್ಯಂ ಪ್ರಣವಪದಹಿತಂ ಸೂಕ್ಷ್ಮಬುದ್ಧ್ಯಾದಿಪಶ್ಯನ್ ।**
**ಪಶ್ಯಂತ್ಯೇತೇ ಯಮಿತಕರುಣಾ ವಾಙ್ಮನೋಜಾತಮಾತ್ಮಾ**
**ಶಾಂತ್ಯಾ ಬುದ್ಧ್ಯಾ ಪ್ರಸನ್ನಸ್ತ್ವಮಸಿ ಹಿ ಭಗವನ್ನಂತರಾಯಾದ್ವಿಹೀನಃ॥ ೩೩॥**

**ಅಜಾತಸ್ತ್ವಂ ದೇವಃ ಶ್ರುತಿಶಿಖರವರ್ಯೈಕವಚನೈ**
**ರ್ಭವಾನೀಶೋ ವಕ್ತ್ರಂ ತವ ಚ ಭವಯಾಮ್ಯಂ ಭವಪರಂ ।**
**ಸ ಗಚ್ಛೇದತ್ಯಂತಂ ಜನಿಮರಣನಾಶಾಯ ಶರಣಂ**
**ಶರಣ್ಯಂ ಶಂಭುಂ ತ್ವಾಂ ಶರಣದವರೇಣ್ಯಂ ಪ್ರಭುಮಹೋ ॥೩೪॥**

ಗಳಿಂದಲೂ ನೀನು ತೃಪ್ತಿಪಡುವೆ. ಅದನ್ನರಿತೇ ಯಾಗಾದಿ ಕರ್ಮಗಳಲ್ಲಿ ನಿನ್ನನ್ನು ಸಾಮವೇದದಿಂದ ಬಹಳವಾಗಿ ಸ್ತುತಿಸುತ್ತಿರುವರು. ||೩೨||

ದೇವ, " ಯೋರುದ್ರೋ ಅಗ್ನೌ " ಮುಂತಾದ ಮಂತ್ರಗಳಿಂದಲೂ, ಪ್ರತಿಯೊಂದು ಪದದ ಕೊನೆಯೂ ನಮಶ್ಶಬ್ದವನ್ನು ಹೊಂದಿರುವ ರುದ್ರಾಧ್ಯಾಯದಿಂದಲೂ ಸ್ತುತ್ಯನಾಗಿರುವೆ. ಊಹಾತೀತನೂ, ತರ್ಕಾದಿಗಳಿಗೆ ಗೋಚರವಾಗದವನೂ, ಓಂಕಾರರೂಪವಾದ ಪ್ರಣವದಿಂದ ಯುಕ್ತನೂ ಮತ್ತು ಕೇವಲ ಸೂಕ್ಷ್ಮಬುದ್ಧಿಯೇ ಮೊದಲಾದವುಗಳಿಂದ ಗೋಚರನಾಗುವನೂ, ಆದ ನಿನ್ನನ್ನು ಜಿತೇಂದ್ರಿಯರಾದ ಈ ಮಹಾನುಭಾವರು ತಮ್ಮ ವಾಕ್ಕು ಮತ್ತು ಮನಸ್ಸು ಇವುಗಳಿಂದ ತಿಳಿದು ಪರಮಾತ್ಮನೆಂದು ವ್ಯವಹರಿಸುವರು. ಭಗವಂತನೇ, ಯಾವ ವಿಧವಾದ ವಿಪತ್ತುಗಳಿಗೂ ಒಳಗಾಗಿ ನೀನು ಶಾಂತವಾದ ಬುದ್ಧಿಯಿಂದ ಅಂತಹವರ ವಿಷಯದಲ್ಲಿ ಪ್ರಸನ್ನನಾಗಿರುವೆ. ||೩೩||

ಭವಾನೀರಮಣನಾದ ದೇವನೇ, ನೀನು ವೇದಾಂತಕ್ಕೆ ಮೂಲಭೂತವಾದ ಉಪನಿಷದ್ವಚನಗಳಿಂದ ಜನಿಸುವನಲ್ಲ. ನಿನ್ನ ದಕ್ಷಿಣಾಭಿಮುಖವಾಗಿರುವ ವದನವು (ಅಂದರೆ ದಕ್ಷಿಣಾಮೂರ್ತಿಯೆನಿಸಿದ ನೀನು) ಸರ್ವೋತ್ಕೃಷ್ಟವಾದದ್ದು. ಜನನ ಮರಣರೂಪವಾದ ಈ ಸಾಂಸಾರಿಕಬಂಧನವನ್ನು ಕಳೆದುಕೊಳ್ಳಬೇಕೆಂದಿಚ್ಛಿಸುವ ಮಾನವನು ಸರ್ವಸಮರ್ಥನೂ ಜಗನ್ಮಂಗಳಕರನೂ ಆದ ನಿನ್ನನ್ನೇ ಮರೆಹೊಗಬೇಕೇ ಹೊರತು ಅನ್ಯಥಾ ದಾರಿಯಿಲ್ಲ. ||೩೪||

॥ ಓಂಕಾರವಷಟ್ಕಾರಾ ಊಚುಃ ॥

ದೇವಸ್ತ್ವಂ ನಮಸಾಂ ಪತಿಃ ಶ್ರುತಿಶತೈರ್ಭೀತ್ಯಾ ನಮೋಂತಃ ಪದೈ
ರಾದ್ಯಂತೋಪರಿದಾರಯದ್ಭಯಹರಾಪಾರಾರ್ಥಸಂಸೂಚಕಂ ।
ಸ್ತೋಮಂಚೋಚ್ಚಾರರುದ್ರೈಃಶ್ರುತಿಪದತಿಲಕೈರ್ಬ್ರಹ್ಮಚೈಸ್ತೈತ್ತಿರೀಯೈಃ
ಸಾಮ್ನಾಂ ದೇವವ್ರತಾನಾಮಖಿಲಶಿಖರೋ ರತ್ನಭೂತಸ್ತ್ವಮೇವ॥೩೫॥

ತ್ವಾಮಧ್ವರೇ ಶಂಸಿತಾರಃ ಸ್ತುವಂತಿ
ರಥಂತರಂ ಸಾಮಗಾಶ್ಚೋಪಗಾಂತಿ ।
ಅಧ್ವರ್ಯವಃ ಕಲ್ಪಯಂತೇ ಚ ಭಾಗಂ
ಸೋಮಾತ್ಮಕಂ ಚಾಧ್ವರೇಶ ಪ್ರಸೀದ ॥೩೬॥

ಅಪರ್ಣಾರಮಣಂ ದೃಷ್ಟ್ವಾ ಸುಪರ್ಣಗತಿರುತ್ತಮಂ ।
ಪ್ರಾಂಜಲಿಃ ಶ್ರೀಮಹಾದೇವಂ ತುಷ್ಟಾವ ಪ್ರಣತಸ್ತದಾ ॥೩೭॥

"ಎಲೈ ಮಹಾನುಭಾವನೇ, ನೀನು ಸಕಲರಿಂದ ಒರುವ ನಮಸ್ಕಾರಗಳಿ ಗೆಲ್ಲಾ ಪತಿಯೆನಿಸಿರುವೆ. ಸಮಸ್ತ ವೇದಮಂತ್ರಗಳೂ ಆದ್ಯಂತದಲ್ಲಿ ಪ್ರಣವವನ್ನುಚ್ಚ ರಿಸುತ್ತಾ ಭಯಭಕ್ತಿಯಿಂದ ನಿನ್ನನ್ನು ಸ್ತುತಿಸುತ್ತಿರುವುವು. ಶ್ರುತಿಗಳಲ್ಲಿ ತಿಲಕ ಪ್ರಾಯವಾಗಿರುವ ರುದ್ರಸೂಕ್ತದ ಋಕ್ಕುಗಳಿಗೂ, ತೈತ್ತಿರೀಯೋಪನಿಷನ್ಮಂತ್ರ ಗಳಿಗೂ, ಸಾಮಗಾನದ ಮಂತ್ರಗಳಿಗೂ ನೀನು ಶಿರೋರತ್ನಪ್ರಾಯವಾಗಿರುವೆ. ಸಕಲ ಅರ್ಥವತ್ತಾದ ವೇದಮಂತ್ರಗಳಿಗೂ, ಪ್ರಣವವ್ಯಾಹೃತ್ಯಾದಿ ಮೂಲಮಂತ್ರ ಗಳಿಗೂ ನೀನೇ ಅರ್ಥಸ್ವರೂಪನು. ಅಧಿದೇವತೆಯೂ ನೀನೆ" ಎಂದು ಓಂಕಾರ ವಷಟ್ಕಾರಾದಿಗಳು ಸ್ತುತಿಸಿದುವು. ॥೩೫॥

ದೇವ, ಹೊಗಳುಭಟರು ನಿನ್ನನ್ನು ಯಾಗದಲ್ಲಿ ಸ್ತೋತ್ರಮಾಡುವರು. ಸಾಮವನ್ನು ಹಾಡುವುದರಲ್ಲಿ ನಿಪುಣರಾದವರು, ರಥಂತರವೆಂಬ ಸಾಮದಿಂದ ನಿನ್ನನ್ನು ಸ್ತುತಿಸುವರು. ಅಧ್ವರ್ಯುಗಳು ನಿನಗೆ ಸೋಮಸ್ವರೂಪವಾದ ಹವಿರ್ಭಾಗ ವನ್ನು ಸಮರ್ಪಿಸುವುದರಲ್ಲಿ ಸಮರ್ಥರಾಗುವರು. ಹೇ ಯಜ್ಞಸ್ವಾಮಿಯಾದ ಪ್ರಭುವೇ, ಪ್ರಸನ್ನನಾಗು." ॥೩೬॥

ಆಗ ಗರುಡಗಮನನಾದ ವಿಷ್ಣುವು ಗಿರಿಜಾರಮಣನನ್ನು ನೋಡಿ, ಸರ್ವೋ

ವಿಷ್ಣುರುವಾಚ

ಸೋಮಸ್ತ್ವಂ ಜನಿತಾ ಜಗಜ್ಜನಯಿತಾ ವಿಷ್ಣೋಸ್ತಥಾ ಬ್ರಹ್ಮಣಃ
ಸುತ್ರಾಮ್ಣಃ ಪವನಸ್ಯ ವಹ್ನಿಜನಕಃ ಪೃಥ್ವೀದಿವೌ ಶೀತಗೋಃ ।
ಅರ್ಕ್ಯಮ್ಣೋ ಜನಕಸ್ತ್ವಮೇವ ಭಗವನ್ದೇವಾಸುರಾಣಾಂ ಪುನ
ರ್ವಿಶ್ವಂ ತ್ವದ್ಭವಮೇವ ಸರ್ವಮಧುನಾ ವೇದೋಽಪಿ ವಕ್ತಿ ಸ್ವಯಂ ॥೩೮॥

ಅಗ್ನಿಷೋಮಮಯಂ ಜಗಚ್ಛ್ರುತಿಗಣೈಃ ಸರ್ವತ್ರ ಸಂಪೂಜ್ಯತೇ
ತಸ್ಮಾತ್ಸರ್ವಜಗದ್ಗತಂ ಚ ಭಗವನ್ವಹ್ನಿಶ್ಚ ಸೋಮಾತ್ಮಕಂ ।
ರುದ್ರೋ ವಾ ಏಷ ಚಾಗ್ನಿಃ ಶ್ರುತಿಪದಶತಕೈರ್ನಾಥ ಏಕಸ್ತ್ವಮೀಡ್ಯಃ
ಸೋಮಶ್ಚೋಮಾಮಹೇಶ ಪ್ರಕೃತಿಪುರುಷಜಂ ವಿಶ್ವಮೇತದ್ವಿಚಿತ್ರಂ ॥೩೯॥

ತ್ತಮನಾದ ಆ ಮಹಾದೇವನಿಗೆ ಕೈಜೋಡಿಸಿ ನಮಸ್ಕಾರಮಾಡಿ, ಹೀಗೆ ಸ್ತೋತ್ರ ಮಾಡಿದನು. ॥೩೭॥

"ಭಗವಂತನಾದ ಶಿವನೇ, ಯಾಗದಲ್ಲಿ ನೀನು ಸೋಮರೂಪನಾಗಿ ತೋರುವೆ. ಸಕಲ ಜಗತ್ತುಗಳೂ ನಿನ್ನಿಂದಲೇ ಉಂಟಾಗಿರುವುವು. ವಿಷ್ಣು, ಬ್ರಹ್ಮ, ಇಂದ್ರ, ವಾಯು, ಅಗ್ನಿ, ಭೂಮಿ, ಆಕಾಶ, ಚಂದ್ರ, ಸೂರ್ಯ, ಇವರೆಲ್ಲರಿಗೂ ನೀನೇ ಜನಕನಾಗಿರುವೆ. ಸ್ವಾಮಿಯೇ, ಎಲ್ಲಾ ದೇವ, ರಾಕ್ಷಸರಿಗೂ, ನೀನೇ ಉತ್ಪತ್ತಿಕಾರಣನಾಗಿರುವೆ. ದೇವ, ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ನಿನ್ನಿಂದಲೇ ಉಂಟಾಗಿರುವುದೆಂದು ಸಾಕ್ಷಾತ್ ವೇದವೇ ಹೇಳುತ್ತಿರುವುದು. ॥೩೮॥

ಅಗ್ನಿ ಮತ್ತು ಸೋಮ ಇವರುಗಳಿಂದ ವ್ಯಾಪ್ತವಾದ ಈ ಪ್ರಪಂಚವು ವೇದ ಸಮೂಹದಿಂದ ಎಲ್ಲಾ ಕಡೆಯಲ್ಲಿಯೂ ಪೂಜಿಸಲ್ಪಡುತ್ತದೆ. ಭಗವಂತನೇ, ಆದುದ ರಿಂದ ಈ ಪ್ರಪಂಚವೆಲ್ಲವೂ ಅಗ್ನಿ ಮತ್ತು ಸೋಮ ಇವರ ಸ್ವರೂಪವೇ ಆಗಿರುವುದೇ ಹೊರತು ಬೇರೆಯಲ್ಲ. ಈ ರೀತಿ ಅಗ್ನೀಷೋಮರೂಪವಾದ ಜಗತ್ತಿನಲ್ಲಿ ರುದ್ರ ನೆನಿಸಿದ ನೀನೇ ಅಗ್ನಿಯೆನಿಸಿರುವೆ. ಅಲ್ಲದೇ ಅನೇಕ ಶ್ರುತಿಗಳಿಂದ ಸ್ತೋತ್ರಮಾಡ ಲ್ಪಡುವ ಜಗದೊಡೆಯನಾದ ಸೋಮನೂ ನೀನೇ ಆಗಿರುವೆ. ಓ ಉಮಾಮಹೇ ಶ್ವರನೇ, ಪ್ರಕೃತಿ ಮತ್ತು ಪುರುಷರಿಂದ ನಿರ್ಮಿತವಾದ ಈ ಜಗತ್ತು ನಿನ್ನ ಲೀಲೆ ಯಿಂದ ವಿಚಿತ್ರವಾಗಿ ತೋರುತ್ತಿರುವುದು." ॥೩೯॥

**ಹಂಸಮಂತ್ರಾಕ್ಷರಗತಂ ಹಂಸವಾಹೋ ಮಹೇಶ್ವರಂ ।**
**ಪ್ರಾಂಜಲೀ ರುದ್ರಮಂತ್ರೈಶ್ಚ ತುಷ್ಟಾವ ಜಗದೀಶ್ವರಂ ॥೪೦॥**

॥ ಬ್ರಹ್ಮೋವಾಚ ॥

**ಅರುಣತರಣಿಸಂಸ್ಥಂ ತಾಮ್ರಮಾಶಾಸ್ಯವಿಸಾಶಂ**
**ನೀಲಗ್ರೀವಮುದಾರದಿಕ್ಷು ಸತತಂ ರುದ್ರೈಃ ಸದಾ ಸಂವೃತಂ ।**
**ಜ್ಯೋಕ್ಪಶ್ಯೇಮ ಸುಚಕ್ಷುಷಾ ಸುಲಲಿತಂ ವಿಶ್ವೇಶಮತ್ಯಾದರಾ**
**ದಾಗೋಪಾಲಘಟೋದಚೇಷ್ಟಿಭಿರಹೋ ದೃಶ್ಯಂ ಸದಾಯೋಗಿಭಿಃ ॥೪೧॥**

**ಬಭ್ರುರ್ಬಭ್ಲುಶ ಇತ್ಯಪಿ ಶ್ರುತಿಶತೈರುಚ್ಚೈಸ್ತ್ವಮುದ್ಘುಷ್ಯಸೇ**
**ಕ್ರೂರಾನ್ಕ್ರಂದಯಸೇ ರಿಪೂನ್ಪೃತನಯಾ ಪತ್ತೀಶ ಜೇಜೀಯಸೇ ।**
**ಸತ್ವಾನಸ್ತ್ರವಥಾವಸೇ ಸುಖಯಿತುಂ ಪಾಪಂ ತದೀಯಂ ಪುನಃ**
**ನಿಃಶೇಷಂ ಸಹಸೇ ತ್ವಮೀಶ ದಯಯಾ ಚಾನ್ನೇನ ಪುಷ್ಣಾಸಿ ತಾನ್ ॥೪೨॥**

---

ಅನಂತರ ಹಂಸಗಾಯತ್ರೀಮಂತ್ರಾಕ್ಷರಗಳಲ್ಲಿ ಅಡಗಿರುವ ಜಗದೊಡೆಯನಾದ ಆ ಮಹೇಶ್ವರನನ್ನು ಹಂಸವಾಹನನಾದ ಬ್ರಹ್ಮನು ಕೈಜೋಡಿಸಿ, ರುದ್ರಮಂತ್ರಗಳಿಂದ ಮುಂದೆ ಹೇಳುವಂತೆ ಸ್ತೋತ್ರಮಾಡಿದನು. ॥೪೦॥

ಸೂರ್ಯಮಂಡಲದಲ್ಲಿ ನೆಲಸಿರುವವನೂ, ಕೆಂಪುಬಣ್ಣದಿಂದ ಪ್ರಕಾಶಿಸುತ್ತಾ ಸ್ತೋತ್ರಾರ್ಹನೂ. ಸರ್ವೇಶ್ವರನೂ ಎನಿಸಿರುವ ಪರಶಿವನು ಕಪ್ಪಾದ ಕುತ್ತಿಗೆಯಿಂದ ಶೋಭಿಸುತ್ತಿರುವನು. ಉದಾರನೆನಿಸಿ ಯಾವಾಗಲೂ ಎಲ್ಲಾ ದಿಕ್ಕುಗಳಲ್ಲಿಯೂ ಏಕಾದಶರುದ್ರರಿಂದ ಸುತ್ತುವರಿಯಲ್ಪಟ್ಟಿರುವನಾದ ಪರಮೇಶ್ವರನನ್ನು ಜ್ಞಾನಚಕ್ಷುಸ್ಸಿನಿಂದ ಚಿರಕಾಲ ಧ್ಯಾನಮಾಡೋಣ. ಸುಂದರವಾದ ಆಕಾರವುಳ್ಳವನಾದ ವಿಶ್ವೇಶ್ವರನು, ಗೋಪಾಲಕರು, ಘಟ ಮತ್ತು ನೀರು ಇವೇ ಮೊದಲಾದವುಗಳಲ್ಲಿ ತಮ್ಮ ಚೇಷ್ಟಾಕ್ರಿಯೆಗಳನ್ನು ತೋರುತ್ತಿರುವ ಬಾಲಕರಂತೆ ನಿಷ್ಕಲ್ಮಶಚಿತ್ತದಿಂದ ಯೋಗಿಗಳಿಗೆ ಯಾವಾಗಲೂ ಗೋಚರನಾಗುವನು. ॥೪೧॥

ದೇವ, ನೂರಾರು ಶ್ರುತಿಗಳು ನಿನ್ನನ್ನು ವೃಷಭವಾಹನನೆಂದು (ಬಭ್ರು = ವೃಷಭ) ಉದ್ಘೋಷಮಾಡುತ್ತಿರುವುವು. ದುಷ್ಟರಾಗಿರುವ ಶತ್ರುಗಳನ್ನು ನಾಶಪಡಿಸುತ್ತಾ ಸೇನಾಧಿಪತಿಯಾಗಿ ನೀನು ವಿಜಯಶೀಲನಾಗಿರುವೆ. ನಮಗೆ ಸುಖವಾಗುವುದಕ್ಕೋಸ್ಕರ ನಿನ್ನ ಸತ್ವವಸ್ತುಗಳನ್ನೆಲ್ಲಾ ಉಪಯೋಗಿಸುವಾಗ ನಿನ್ನ ಭಕ್ತರು ಮಾಡುವ

ಸುಕುಮಾರಕುಮಾರೇಣ ಕೇಕಿಕಂಠೈಕವಾಹಿನಾ ।
ಸಂಸ್ತುತಃ ಪರಮೇಶಾನಸ್ತದಾ ಪ್ರಾಂಜಲಿನಾ ಶಿವಃ ॥೪೩॥

॥ ಸ್ಕಂದ ಉವಾಚ ॥

ತ್ವತ್ತೋ ನ ಓಜಸ್ವಿತರೋಽಸ್ತಿ ದೇವಃ
ಪತಿಃ ಪಶೂನಾಂ ಮಹಿಮಾಪ್ರತಿಷ್ಠಃ ।
ತ್ವಲ್ಲಿಂಗಸಂಪೂಜನಮಾತ್ರತುಷ್ಟಾಃ
ಸ್ಯಾಮೋ ರಯೀಣಾಂ ಪತಯೋ ವಯಂ ಹಿ ॥೪೪॥

ತ್ವಮಾತ್ಮನ್ಮಹಾತ್ಮನ್ಸುಖಾತ್ಮನ್ಭವಘ್ನಃ
ಪ್ರದೋಷೇ ಸ್ವದೋಷೈಕನಾಶೇಽಸ್ತದೋಷೇ ।
ತ್ವದೀಯಂ ಮಹಾಲಿಂಗಸಂಗಂ ಕದಾಚಿ
ತ್ಸಮುಕ್ತಿಂ ಲಭತ್ಯೇವ ಭಾವೋ ವಿಸಂಗಃ ॥೪೫॥

ಪಾಪಗಳನ್ನೆಲ್ಲಾ ಸಹಿಸುತ್ತಿರುವೆ. ಹೇ ಈಶ್ವರ, ಅಲ್ಲದೆ ನೀನು ದಯೆಯಿಂದ ಅವರಿಗೆಲ್ಲಾ ಅನ್ನವನ್ನು ಕೊಟ್ಟು ಪೋಷಿಸುತ್ತಿರುವೆ. ॥೪೨॥

ನವಿಲಿನ ಕೊರಳಿನಲ್ಲಿ ಕುಳಿತು ಸಂಚಾರಮಾಡುವ ಸುಕುಮಾರಶರೀರನಾದ ಕುಮಾರಸ್ವಾಮಿಯು ಕೈಜೋಡಿಸಿ ಆ ಪರಶಿವನನ್ನು ಹೀಗೆ ಸ್ತೋತ್ರಮಾಡಿದನು. ॥೪೩॥

"ದೇವ, ಬಲದಲ್ಲಿ ನಿನಗಿಂತಲೂ ಅಧಿಕನಾದವನು ಯಾರೂ ಇಲ್ಲ. ಪಶುಪತಿಯೆನಿಸಿದ ನೀನು ಸ್ವಪ್ರಭಾವದಿಂದ ಪ್ರತಿಷ್ಠೆಪಡೆದಿರುವೆ. ಗಣಾಧಿಪತಿಗಳಾದ ನಾವೆಲ್ಲರೂ ಆ ನಿನ್ನ ಶಿವಲಿಂಗಪೂಜೆಯಮಾತ್ರದಿಂದಲೇ ಸಂತುಷ್ಟರಾಗಿರುವೆವು. ॥೪೪॥

ನೀನೇ ಪರಮಾತ್ಮನು, ಮಹಾತ್ಮನು, ಸುಖಸ್ವರೂಪನು ಈ ಸಂಸಾರ ಬಂಧನವನ್ನು ನಾಶಪಡಿಸಿ ಮೋಕ್ಷವನ್ನುಂಟುಮಾಡುವವನೂ ನೀನೇ ಆಗಿರುವೆ. ದೇವ, ಯಾವ ದೋಷವೂ ಇಲ್ಲದೇ ಮಾನವರ ಸಕಲ ದೋಷಗಳನ್ನೂ ಧ್ವಂಸ ಮಾಡುವುದರಲ್ಲಿ ಮುಖ್ಯವಾಗಿರುವ ಪ್ರದೋಷಕಾಲದಲ್ಲಿ ಯಾವಾಗಲಾದರೂ ಒಂದುಸಲ ನಿನ್ನ ಶಿವಲಿಂಗದ ಸಂಬಂಧವುಂಟಾಗುವುದಾದರೆ ಅಂತಹ ನಿನ್ನ ಭಕ್ತನು

ನದದ್ದ್ವಿರದವಕ್ತ್ರೇಣ ಶುಂಡಾದಂಡೇನ ರಾಜತಾ ।
ಸಂಸ್ತುತಃ ಪರಮೇಶಾನಃ ಪ್ರಣತಾರ್ತಿಹರೋ ಹರಃ ॥೪೬॥

॥ ಗಣಪತಿರುವಾಚ ॥

ತ್ವಮುಗ್ರೋಽಹಮವ್ಯಗ್ರ ಏಕಸ್ತ್ವದೀಯಂ
ಪದಾಬ್ಜಂ ಸಮಗ್ರಂ ಮದೀಯೈಃ ಫಣೀಂದ್ರೈಃ
ಯಮೋದಗ್ರದುರ್ಗ್ರಾಹಸಂಗ್ರಾಮಮಾರ್ಗಂ
ನ ಪಶ್ಯಾಮಿ ಶಶ್ವತ್ಪ್ರಪನ್ನಃ ಪ್ರಪನ್ನಃ ॥೪೭॥

ಸುಧಾಮಂಡಲಾಖಂಡಲೋಚ್ಚಂಡತೇಜಃ
ಸ್ಫುರನ್ಮೇರುಕೋದಂಡಪಾಣೇಽಖಿಲಾಂಡಂ ।
ತ್ವದಾಜ್ಞಾವಶಂ ದಂಡಿತಾರಾತಿಷಂಡಂ
ಸಮುಚ್ಚಂಡಮುಂಡಾರಿಣೇಶಪ್ರಸನ್ನಃ ॥೪೮॥

ಈ ಸಂಸಾರಬಂಧನವನ್ನು ತೊಡೆದು ಕೂಡಲೇ ಮುಕ್ತಿಯನ್ನು ತಪ್ಪದೇ ಪಡೆಯುವನು." ॥೪೫॥

ಧ್ವನಿಮಾಡುತ್ತಿರುವ ಗಜಮುಖವುಳ್ಳ ವಿಘ್ನರಾಜನು ತನ್ನ ದಂಡದಂತೆ ಉದ್ದವಾದ ಸೊಂಡಲಿನಿಂದ ಶೋಭಿಸುತ್ತಾ ಶರಣಾಗತರಾದ ತನ್ನ ಭಕ್ತರ ಕಷ್ಟಗಳನ್ನು ಪರಿಹರಿಸುವ ಪರಮೇಶ್ವರನನ್ನು ಈ ರೀತಿ ಸ್ತೋತ್ರಮಾಡಿದನು. ॥೪೬॥

"ದೇವ, ನೀನು ಭಯಂಕರಸ್ವರೂಪನು, ನಾನಾದರೋ ನಿನ್ನನುಗ್ರಹದಿಂದಲೇ ಶಾಂತನಾಗಿರುವೆನು. ನಿನ್ನ ಒಂದು ಪಾವಕಮಲವು ನನ್ನ ದೋಷಗಳೆಂಬ ಸರ್ಪಶ್ರೇಷ್ಠರನ್ನು ಮೆಟ್ಟಿ ನಿಂತಿದೆ. ನಿನ್ನಲ್ಲಿ ಭಕ್ತಿಯಿಟ್ಟಿರುವ ನನಗೆ ಯಮನ ಮುಂದೆ ನಿಂತು ದುರ್ಗಮವಾದ ಯುದ್ಧವನ್ನು ಮಾಡಲು ಅವಕಾಶವೇ ಇಲ್ಲವಾಗಿದೆ. ದೇವ, ಈಗ ಮಹಾಮಹಿಮನಾದ ನಿನ್ನನ್ನು ಮೊರೆಹೊಕ್ಕಿರುವೆನು. ॥೪೭॥

ಮಹೇಶ್ವರನೇ, ಚಂದ್ರಸೂರ್ಯರಂತೆ ಅತಿಶಯವಾದ ತೇಜಸ್ಸಿನಿಂದ ನೀನು ಬೆಳಗುತ್ತಿರುವೆ. ಪ್ರಕಾಶಮಾನವಾದ ಮಹಾಮೇರುವೇ ನಿನಗೆ ಧನುಸ್ಸಾಗಿ ಕೈಯಲ್ಲಿ ಶೋಭಿಸುತ್ತಿರುವುದು. ಸಕಲ ಬ್ರಹ್ಮಾಂಡವೂ ನಿನ್ನ ಅಪ್ಪಣೆಯಂತೆ ನಡೆಯುತ್ತಿರುವುದು. ಶತ್ರುಗಳೆಂಬ ನಪುಂಸಕರೆಲ್ಲರನ್ನೂ ನೀನು ನಿಗ್ರಹಿಸುತ್ತಿರುವೆ.

ಪಠಜ್ಭಿಃ ಶ್ರೀರುದ್ರಸೂಕ್ತೇನ ಮುನಿವ್ರಾತೇನ ಶಂಕರಃ
ಸುಮನೋಗಣವರ್ಷೇಣ ಜಯಶಬ್ದೇನ ಭೂರಿಣಾ ॥೪೯॥

ಸಂಸ್ತುತಃ ಪರಮೇಶಾನಶ್ಚಂದ್ರಾರ್ಧಕೃತಶೇಖರಃ ॥೫೦॥

॥ ಮುನಯ ಊಚುಃ ॥

ಪುರಾಭಿದಂ ತ್ವಾಮಭಿತಃ ಪ್ರಣೋನುಮೋ
ಆಷಾಢಮುಗ್ರಂ ಸಹಮಾನಮೀಶಂ ।
ಜೇತಾರಮೀಶಂ ನ ಕುತೋಽಪರಾಜಿತಂ
ಧನುರ್ಧರಂ ಹೇತಿಧರಂ ನತಾಸ್ಸ್ಮಃ ॥೫೧॥

ಸ್ವಾಮಿಯೇ, ಅತಿಯಾಗಿ ಕೊಬ್ಬಿದ್ದ ಮುಂಡಾಸುರನನ್ನು ಧ್ವಂಸಮಾಡಿದ ಚಾಮುಂಡಾದೇವಿಯೇ ನಿನ್ನ ಪತ್ನಿಯಾಗಿರುವಳು. ದೇವ, ನಿನಗೆ ನಮಸ್ಕಾರ ಮಾಡುವೆನು." ॥೪೮॥

ಅನಂತರ ಮುನಿಗಳ ಗುಂಪು ಶ್ರೀರುದ್ರಸೂಕ್ತವನ್ನು ಹೇಳುತ್ತಾ ಆ ಶಂಕರನನ್ನು ಹೀಗೆ ಸ್ತೋತ್ರಮಾಡಿತು. ದೇವತೆಗಳು ಗುಂಪುಗುಂಪಾಗಿ ಪುಷ್ಪವೃಷ್ಟಿಯನ್ನು ಸುರಿಸುತ್ತಾ ಅಪಾರವಾದ "ಜಯ ಜಯ" ಧ್ವನಿಯನ್ನು ಮಾಡುತ್ತಾ ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿದ ಆ ಪರಮೇಶ್ವರನನ್ನು ವಿಧವಿಧವಾಗಿ ಸ್ತೋತ್ರ ಮಾಡಿದರು. ॥೪೯-೫೦॥

"ಸನಾತನನೂ, ತ್ರಿಪುರನಾಶಕನೂ ಆದ ನಿನ್ನನ್ನು ಎಲ್ಲಾ ರೀತಿಯಲ್ಲಿಯೂ ನಮಸ್ಕಾರಮಾಡುವೆವು ಮತ್ತು ಸ್ತೋತ್ರಗೈಯ್ಯುವೆವು. ದೇವ, ಗಜಚರ್ಮವನ್ನು ಧರಿಸಿದ ನೀನು ಭಯಂಕರಸ್ವರೂಪನು. ಸರ್ವಸಮರ್ಥನಾದ ನೀನು ಎಲ್ಲವನ್ನೂ ಸಹಿಸುವ ಸ್ವಭಾವವುಳ್ಳವನು. ಸ್ವಾಮಿಯೇ, ಯಾವಾಗಲೂ ವಿಜಯಶೀಲನೇ ಆಗಿರುವ ನಿನಗೆ ಎಂದಿಗೂ ಯಾರಿಂದಲೂ ಪರಾಜಯವೇ ಇಲ್ಲ. ಧನುರ್ಧಾರಿಯೂ, ಬಾಣವೇ ಮೊದಲಾದ ಸಕಲ ಆಯುಧಗಳನ್ನು ಧರಿಸಿರುವವನೂ ಆದ ನಿನಗೆ ನಮಸ್ಕಾರ ಮಾಡುವೆವು. ॥೫೧॥

ಭೂರೇರ್ದಾತಾರಂ ಸತ್ಪತಿಂ ರುದ್ರಸೂಕ್ತೈಃ
ಸ್ತೋಷ್ಯಾಮಸ್ತ್ವಾಂ ಭಾವಯುಕ್ತಾ ಗೃಣಾಮಃ ।
ತಸ್ಮಾದಸ್ಮಾನ್ರಕ್ಷ ರಕ್ಷೇಶ ಶಂಭೋ
ಗ್ರಾಮೇಽಸ್ಮಿನ್ನಾತುರಂ ನೈವ ಭೂಯಾತ್ ॥೫೨॥

॥ ದೇವಾ ಊಚುಃ ॥

ಭಗವಂಸ್ತವ ಸುಂದರಾಂಘ್ರಿಪದ್ಮಂ
ಪುರುಹೂತಾಮರವೃಂದಸಂನುತಂ ।
ಪ್ರಣತಾಃ ಸ್ಮ ಪುನಃ ಪುನರ್ಮುದಾ
ಶಮಿತಾಶೇಷದುರಂತದುಃಖಜಾಲಂ ॥೫೩॥

ಇತ್ಥಂ ಸುರಾಣಾಂ ವಚನಂ ಸ್ತುತಿಂ ಶ್ರುತ್ವಾ ಮಹೇಶ್ವರಃ ।
ಮಹಾಕಾಲಾಂತಿಕಂ ಪ್ರಾಪ ಘೋಷಯನ್ಭುವನತ್ರಯಂ ॥೫೪॥

---

ನಮಗೆ ಅನೇಕ ಇಷ್ಟಾರ್ಥಗಳನ್ನು ಹೇರಳವಾಗಿ ಕೊಡುವ ಶ್ರೇಷ್ಠನಾದ, ಸ್ವಾಮಿಯಾದ ನಿನ್ನನ್ನು ರುದ್ರಸೂಕ್ತಮಂತ್ರಗಳಿಂದ ಸ್ತೋತ್ರಮಾಡುವೆವು ಮತ್ತು ಭಕ್ತಿಪುರಸ್ಸರವಾಗಿ ನಿನ್ನನ್ನೇ ಧ್ಯಾನಮಾಡುವೆವು. ಆದುದರಿಂದ ಎಲೈ ಶಂಭುವೇ, ಸಮರ್ಥನಾದ ನೀನು ನಮ್ಮನ್ನು ಕಾಪಾಡು ಮತ್ತು ಈ ನಮ್ಮ ಗ್ರಾಮದಲ್ಲಿ ಯಾವ ವಿಧವಾದ ಉಪದ್ರವವೂ ಉಂಟಾಗದಂತೆ ಅನುಗ್ರಹಿಸು" ಎಂದು ಋಷಿಗಳು ಹೊಗಳಿದರು. ॥೫೨॥

"ಭಗವಂತನೇ! ನಿನ್ನ ಸುಂದರವಾದ ಅಡಿದಾವರೆಗಳಿಗೆ ಇಂದ್ರನೇ ಮೊದಲಾದ ದೇವತೆಗಳ ಸಮೂಹವು ಗುಂಪು ಗುಂಪಾಗಿ ನಮಸ್ಕಾರಮಾಡುತ್ತಿರುವುದು. ಈ ನಿನ್ನ ಪಾದಕಮಲವು ಕೊನೆಮೊದಲಿಲ್ಲದ ದುಃಖಸಮೂಹವನ್ನೆಲ್ಲಾ ನಾಶಗೊಳಿಸುವುದರಲ್ಲಿ ಸಾಮರ್ಥ್ಯವುಳ್ಳದ್ದು. ದೇವ! ಅಂತಹ ನಿನ್ನ ಪಾದಕಮಲಗಳಿಗೆ ಪದೇ ಪದೇ ಸಂತೋಷದಿಂದ ನಮಸ್ಕಾರ ಮಾಡುವೆವು" ಎಂದು ದೇವತೆಗಳು ಪ್ರಾರ್ಥಿಸಿದರು. ॥೫೩॥

ಹೀಗೆ ದೇವತೆಗಳ ವಚನಗಳನ್ನೂ ಸ್ತೋತ್ರಗಳನ್ನೂ ಕೇಳಿ ಮಹೇಶ್ವರನು, ಮೂರುಲೋಕವೂ ಶಬ್ದಾಯಮಾನವಾಗುವಂತೆ, ಅಲ್ಲಿಂದ ಹೊರಟು, ತನ್ನ ಭಕ್ತನಾದ ಮಹಾಕಾಲನ ಸಮೀಪಕ್ಕೆ ಬಂದನು. ॥೫೪॥

ಭಾಭಾಸಿತದಿಶಾಂಚಕ್ರೈಃ ಸುಧಾಂಶುಕಿರಣೈಃ ಶಿವಃ ।
ದಿವಾಕರಶತೋದ್ಭಾಸಿಸುಧಾಂಶುಕಿರಣೈಸ್ತದಾ ॥೫೫॥

ಮಹಾಕಾಳಾಂಗಸಂಸ್ಪರ್ಶಸ್ತಚ್ಛ್ರಮಂ ಸಮುಪಾನುದತ್ ।
ಶಿವಸಂದರ್ಶನಾನಂದಸಂಜಾತಪುಲಕೋದ್ಗಮಃ ॥೫೬॥

ಪ್ರಣನಾಮ ಸ ಸಾಷ್ಟಾಂಗಮಷ್ಟಾಂಗಸ್ಪೃಷ್ಟಭೂತಲಃ ।
ಹರಪಾದಾಂಬುಜದ್ವಂದ್ವನಿರ್ದ್ವಂದ್ವೀಕೃತಮಾನಸಃ ॥೫೭॥

ಸಮುತ್ಥಾಯ ಪ್ರಹೃಷ್ಟಾತ್ಮಾ ತುಷ್ಟಾವಾಷ್ಟಾಕೃತಿಂ ಹರಂ ॥೫೮॥

॥ ಮಹಾಕಾಲ ಉವಾಚ ॥

ಹರಹರ ದುರಿತಾನಿ ದೀನಬಂಧೋ
ಪುರಹರ ಪಾಹಿ ದಯಾಕರಾಕ್ಷಿಲೇಶೈಃ ।
ಮುರಹರಶರಹರ ಕಾಕೋದರ
ನದ್ಧಾಭರಣ ಪ್ರಸೀದ ಶಂಭೋ ॥೫೯॥

---

ಆಗ ಪರಮೇಶ್ವರನು ನೂರಾರು ಸೂರ್ಯರ ತೇಜಸ್ಸಿನಿಂದಲೂ, ಅಮೃತ ಕಿರಣನಾದ ಚಂದ್ರನ ಪ್ರಕಾಶದಿಂದಲೂ ಯುಕ್ತವಾದ ತನ್ನ ದಿವ್ಯವಾದ ಕಾಂತಿಯಿಂದ ದಿಙ್ಮಂಡಲವನ್ನೆಲ್ಲಾ ದೇದೀಪ್ಯಮಾನವನ್ನಾಗಿ ಮಾಡುತ್ತಿದ್ದನು. ॥೫೫॥

ಪರಮೇಶ್ವರನು ಆ ಮಹಾಕಾಲನ ಅವಯವವನ್ನು ಮುಟ್ಟಿದುದರಿಂದ ಅಂದಿನವರೆಗೆ ಅವನು ಹೊಂದಿದ್ದ ಶ್ರಮವೆಲ್ಲವೂ ಕೂಡಲೇ ನಾಶವಾಯಿತು. ಅನಂತರ ಪರಶಿವನ ಸಂದರ್ಶನದಿಂದುಂಟಾದ ಆನಂದಾತಿಶಯದಿಂದ ಅವನ ಮೈಯೆಲ್ಲಾ ರೋಮಾಂಚಿತವಾಯಿತು. ॥೫೬॥

ಆ ಮೇಲೆ ಮಹಾಕಾಲನು ಭೂಮಿಯಲ್ಲಿ ತನ್ನ, ಎಂಟು ಅಂಗಗಳೂ ತಗಲುವಂತೆ ಸಾಷ್ಟಾಂಗ ನಮಸ್ಕಾರಮಾಡಿದನು. ಹಾಗೆಯೇ ಹರನ ಪಾದಕಮಲಗಳೆರಡರಲ್ಲಿಯೂ ಸ್ಥಿರವಾದ ಮನಸ್ಸುಳ್ಳವನಾಗಿ, ಎದ್ದುನಿಂತು, ಸಂತೋಷದಿಂದ ಅಷ್ಟಮೂರ್ತಿಯಾದ ಪರಮೇಶ್ವರನನ್ನು ಈರೀತಿ ಸ್ತೋತ್ರಮಾಡಿದನು. ॥೫೭-೫೮॥

"ದೀನಬಂಧುವಾದ ಪರಮೇಶನೇ! ನನ್ನ ಪಾಪಗಳೆಲ್ಲವನ್ನೂ ನಾಶಮಾಡು. ತ್ರಿಪುರಾಸುರ ಧ್ವಂಸಕನಾದ ದೇವನೇ, ದಯೆಗೆ ಆಶ್ರಯವಾಗಿರುವ ನಿನ್ನ ಅಲ್ಪವಾದ

ತಪನದಹನಪದ್ಮಜಾತಮಿತ್ರ
ಪ್ರತಿಕೃತಭೂತಪ್ರಭೂತವರ್ಗ ।
ಮಧುಮಥನಾಕ್ಷಿಪೂಜ್ಯಪಾದಪದ್ಮ
ಪ್ರಮಥಸನಾಥ ಮಹೇಶ ಪಾಹಿ ಶಂಭೋ ॥೬೦॥

ಮತ್ತಾನಂಗಕರೀಂದ್ರಧಾರಣಪಟುಂ ಪಂಚಾಸ್ಯಪಂಚಾನನಂ
ಗಂಗಾತುಂಗತರಂಗಸಂಗತಮಹಾಮೌಲೌ ಪಿಶಂಗಾಯಿತಂ ।
ಶೃಂಗಾಸಂಗಹರಂ ಕುರಂಗವಿಲಸತ್ಪಾಣಿಪ್ರಭಾಮಂಡಲಂ
ತುಂಗಾತೀರಪತಂಗಸೋದರಮಹಾಮೂಲಸ್ಥಲಿಂಗಾಕೃತಿಂ ॥೬೧॥

ಕಡೆಗಣ್ಣಿನ ದೃಷ್ಟಿಯನ್ನು ನನ್ನ ಮೇಲೆ ಬೀರಿ ನನ್ನನ್ನು ಸಲಹು. ನಾರಾಯಣ ನನ್ನೇ ಬಾಣವಾಗಿ ಧರಿಸಿರುವ ಪರಶಿವನೇ! ಸರ್ಪವೇ ನಿನಗೆ ಆಭರಣಸ್ಥಾನದಲ್ಲಿ ಶೋಭಿಸುತ್ತಿರುವುದಲ್ಲವೇ! ಶಂಭುವೇ! ದೀನನಾದ ನನ್ನನ್ನು ಸಲಹು. ॥೫೯॥

ಸೂರ್ಯ, ಅಗ್ನಿ, ಬ್ರಹ್ಮ ಇವರಿಗೆ ಮಿತ್ರನಾದ ಸ್ವಾಮಿಯೇ! ಪಾಂಚಭೌತಿಕ ವಾದ ಈ ಭೂತವರ್ಗವೆಲ್ಲವೂ ನಿನ್ನ ಪ್ರಕೃತಿಯೇ ಆಗಿರುವುವು. (ಅಂದರೆ ನೀನು ಅಷ್ಟಮೂರ್ತಿ ಸ್ವರೂಪನೆಂದು ಭಾವ) ಮಧುವೆಂಬ ರಾಕ್ಷಸನನ್ನು ಧ್ವಂಸಮಾಡಿದ ಮಹಾವಿಷ್ಣುವಿನ ಕಣ್ಣಿನಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳ ನೀನು ಪ್ರಥಮಗಣ ಗಳಿಗೆಲ್ಲಾ ಒಡೆಯನಾಗಿರುವೆ. ಎಲೈ ಮಹೇಶ್ವರನೇ! ಲೋಕಮಂಗಳಕರನಾದ ನೀನು ನನ್ನನ್ನು ಸಲಹುವವನಾಗು. (ಇಲ್ಲಿ ಹಿಂದೆ ವಿಷ್ಣುವು ಶಿವನನ್ನು ಪೂಜೆ ಮಾಡಲು ಸಾವಿರ ಕಮಲಗಳನ್ನು ಸಿದ್ಧಮಾಡಿಕೊಂಡಿದ್ದನೆಂದೂ, ಆಗ ಶಿವನು ಇವನ ಭಕ್ತಿಯನ್ನು ಪರೀಕ್ಷಿಸಲು ಒಂದು ಕಮಲವನ್ನು ಮುಚ್ಚಿಟ್ಟುಕೊಂಡ ನೆಂದೂ, ಆಗ ವಿಷ್ಣುವು ಖಿನ್ನನಾಗಿ, ತನ್ನ ಕಣ್ಣನ್ನೇ ಕಿತ್ತು ಶಿವನಿಗೆ ಸಾವಿರ ಕಮಲದ ಸ್ಥಾನದಲ್ಲಿ ಅರ್ಪಿಸಿದನೆಂದೂ, ಆಗ ಪರಮೇಶ್ವರನು ಆ ರೀತಿಯಾದ ವಿಷ್ಣುವಿನ ಭಕ್ತಿಗೆ ಮೆಚ್ಚಿ ಅವನಿಗೆ ಸುದರ್ಶನಚಕ್ರವನ್ನು ಕೊಟ್ಟನೆಂದೂ ಕಥೆ ಯನ್ನು ತಿಳಿಯಬೇಕು.) ॥೬೦॥

ಕೊಬ್ಬಿದ ಮನ್ಮಥನೆಂಬ ಸಲಗನನ್ನು ಸೀಳುವುದರಲ್ಲಿ ಸಮರ್ಥನೂ, ವಿಶಾಲ ವಾದ ಐದು ಮುಖಗಳಿಂದ ಯುಕ್ತನಾದವನೂ, ತನ್ನ ಉನ್ನತವಾದ ಶಿರಸ್ಸಿನಲ್ಲಿ ದೊಡ್ಡ ದೊಡ್ಡ ಅಲೆಗಳಿಂದ ಕೂಡಿರುವ ಗಂಗಾನದಿಯನ್ನು ಧರಿಸಿ ಹೊಂಬಣ್ಣ

ಹಿರಣ್ಯೈಕಬಾಹುಂ ಹಿರಣ್ಯೈಕವರ್ಣಂ
ಹಿರಣ್ಯೈಕರೂಪಂ ಹಿರಣ್ಯಾದಿದೇವಂ ।
ಹಿರಣ್ಯಾಖ್ಯಯೋರ್ಹಂತೃಹಂತಾರವಿಶಂ
ಹಿರಣ್ಯಾಚಲಾವೂತ್ಮಕನ್ಯಾಸಮೇತಂ ॥೬೨॥

ಗಂಭೀರಸಾಗರ ನಿಷಂಗಪಿನಾಕಪಾಣಿಂ
ಸೋಮಾಗ್ನಿವಿಷ್ಣುಶರಕೃತ್ತಪುರಾದಿವರ್ಗಂ ।
ಕ್ಷ್ಮಾತ್ಮಸ್ಯಂದನಾಂತರಗತಂ ಶಶಿಸೂರ್ಯಚಕ್ರಂ
ವೇದಾಶ್ವಸಾರಥಿವಿಧಿಂ ರಥಿನಾಂ ವರೇಣ್ಯಂ ॥೬೩॥

ವಾಗಿರುವನೂ, (ಕೊಂಬಿನಲ್ಲಿ ನೀರನ್ನು ತನಗೆ ಅಭಿಷೇಕಮಾಡುವುದರಿಂದ ಭಕ್ತರ ಪಾಪಗಳನ್ನು ನಾಶಮಾಡುವನೂ) ಜಿಂಕೆಯಿಂದ ಶೋಭಿಸುತ್ತಿರುವ ಕೈಯ ಕಾಂತಿಯ ಸಮೂಹವುಳ್ಳವನೂ, ತುಂಗಾನದಿಯ ತೀರದಲ್ಲಿರುವ ಋಷ್ಯಮೂಕಾದ್ರಿಯಲ್ಲಿ ಶಿವಲಿಂಗರೂಪದಿಂದ ನೆಲಸಿರುವವನೂ ಆದ ಪರಶಿವನನ್ನೇ ಸರ್ವದಾ ಧ್ಯಾನಮಾಡುವೆನು. ॥೬೧॥

ಶಂಕರನು ಸುವರ್ಣಮಯವಾದ ಆಭರಣಗಳಿಂದ ಅಲಂಕೃತನಾದವನು. ಶಿವನ ದೇಹವೆಲ್ಲವೂ ಚಿನ್ನದಂತೆ ಹೊಳೆಯುತ್ತಿರುವುದು. ಅವನ ರೂಪವಾದರೋ ಸುವರ್ಣದಂತೆ ಅವಿಕಾರಿಯಾದದ್ದು. ಹಿರಣ್ಯಗರ್ಭನೇ ಮೊದಲಾದ ದೇವತೆಗಳಿಗೆಲ್ಲಾ ಆದಿಭೂತನೆನಿಸಿದವನು. ಹಿರಣ್ಯಾಕ್ಷ ಹಿರಣ್ಯಕಶಿಪುಗಳನ್ನು ಕೊಂದ ಮಹಾವಿಷ್ಣುವನ್ನೂ ಶರಭಾವತಾರದಿಂದ ಸೋಲಿಸಿದವನು. ಮತ್ತು ಮೇರುಪರ್ವತದ ಸ್ನೇಹಿತನಾದ ಹಿಮಗಿರಿಯ ಪುತ್ರಿಯಿಂದ ಕೂಡಿದವನು. ಇಂತಹ ಮಹಾದೇವನನ್ನು ನಾನು ಸದಾ ಭಜಿಸುವೆನು. ॥೬೨॥

ಗಂಭೀರವಾದ ಸಾಗರವೆಂಬ ಬತ್ತಳಿಕೆಯನ್ನೂ, ಪಿನಾಕವೆಂಬ ಧನುಸ್ಸನ್ನೂ ಕೈಯಲ್ಲಿ ಧರಿಸಿರುವವನೂ, ಚಂದ್ರ, ಅಗ್ನಿ, ವಿಷ್ಣು, ಇವರನ್ನೇ ಬಾಣಗಳನ್ನಾಗಿ ಮಾಡಿಕೊಂಡು, ಅವರಿಂದ ತ್ರಿಪುರಾಸುರರನ್ನು ಅವರ ಪರಿವಾರದೊಡನೆ ಕತ್ತರಿಸಿದವನೂ, ಚಂದ್ರ ಸೂರ್ಯರೆಂಬ ಚಕ್ರಗಳನ್ನು ಹೊಂದಿದ, ಭೂಮಿಯೆಂಬ ರಥದಲ್ಲಿ ನಾಲ್ಕು ವೇದಗಳೆಂಬ ಕುದುರೆಗಳನ್ನು ಕಟ್ಟಿ, ಬ್ರಹ್ಮನನ್ನೇ ಸಾರಥಿಯನ್ನಾಗಿ ಮಾಡಿಕೊಂಡಿರುವ ಮಹಾರಥಿಕನೂ ಶ್ರೇಷ್ಠನೂ ಆಗಿರುವ ಆ ಮಹೇಶ್ವರನಿಗೆ ನಾನು ನಮಸ್ಕರಿಸುವೆನು. ॥೬೩॥

ನತೋಽಸ್ಮೀಶಮಾದ್ಯಂ ಸುರಾದ್ಯೈರಪೀಡ್ಯಂ
ಸುಗಂಧಿಂ ನತೋಽಸ್ಮಿ ಪ್ರಪದ್ಯೇ ಹ ಶಶ್ವತ್ ।
ನತೋಽಸ್ಮೀಷ್ಟಸಿದ್ಧ್ಯೈ ನತೋಽಸ್ಮೀಶ ಮುಕ್ತ್ಯೈ
ನತೋಽಸ್ಮೀಶ ಭಕ್ತ್ಯಾ ಪ್ರಪದ್ಯೇ ಪ್ರಪದ್ಯೇ ॥೬೪॥

ನೃತ್ಯಕೃತ್ಯಕರಿಮಸ್ತಪದಾಬ್ಜ
ಧ್ವಸ್ತದಕ್ಷಮುಖಕೃತ್ತಿಸುವಾಸಃ ।
ಮಾರಮಾರಕ ಚಿರಂತನದುಃಖಾ
ನ್ಯಾಶು ಸಂಹರ ವಿಭೋ ದುರಿತಾನಿ ॥೬೫॥

ಭವೋದ್ಭವ ಮನೋನ್ಮನೀಸಹಿತ ದಿವ್ಯಗಂಧೋಲ್ಲಸ
ನ್ಮರಂದ ಸುಮಶೀತಲ ಸ್ಫುರದುರುಪ್ರಕರ್ಷಾಂಗಕ ।

---

ದೇವತೆಗಳೇ ಮುಂತಾದವರುಗಳಿಂದಲೂ ಸ್ತೋತ್ರಾರ್ಹನಾದ ಆ ಆದಿಪುರುಷ ನೆನಿಸಿದ ನಾನು ಮಹೇಶ್ವರನನ್ನು ಸದಾ ವಂದಿಸುವೆನು. ಸುಗಂಧಭರಿತನಾದ ಆ ಈಶ್ವರನಿಗೆ ಪದೇ ಪದೇ ನಮಿಸಿ, ಅವನನ್ನು ಮೊರೆಹೊಗುವೆನು. ಹೇ ಈಶ್ವರ, ಸಕಲ ಇಷ್ಟಾರ್ಥಗಳ ಸಿದ್ಧಿಗಾಗಿಯೂ, ಮುಕ್ತಿಯನ್ನು ಹೊಂದುವುದಕ್ಕಾಗಿಯೂ, ಭಕ್ತಿ ಯಿಂದ ನಿನಗೆ ನಮಸ್ಕಾರಮಾಡುತ್ತಾ ನಿನ್ನನ್ನೇ ಶರಣುಹೊಂದುವೆನು. ॥೬೪॥

ದಕ್ಷಯಜ್ಞಧ್ವಂಸಕನೇ (ತಾಂಡವ ನೃತ್ಯದಲ್ಲಿ ತತ್ಪರನಾಗಿದ್ದ ಪರಶಿವನು, ದಕ್ಷಬ್ರಹ್ಮನು ಯಾಗದಲ್ಲಿ ತನಗೆ ಮಾಡಿದ ಅವಮಾನವನ್ನು ಸಹಿಸಲಾರದೇ ಅವನನ್ನು ನಿಗ್ರಹಿಸುವುದಕ್ಕೋಸ್ಕರ, ಕೋಪದಿಂದ, ತನ್ನ ಪಾದಕಮಲವನ್ನು ಭೂಮಿಯಮೇಲೆ ಆನೆಯಂತೆ ಜೋರಾಗಿ ಒತ್ತಲು, ಆಗ ವೀರಭದ್ರನೆಂಬುವನು ಹುಟ್ಟಿ, ಆ ದಕ್ಷಬ್ರಹ್ಮನ ಯಜ್ಞವನ್ನು ಧ್ವಂಸಮಾಡಿದನು. ಅನಂತರ ಶಿವನು ಆ ದಕ್ಷಬ್ರಹ್ಮನೇ ಮೊದಲಾದವರನ್ನೆಲ್ಲಾ ನಾಶಮಾಡಿದನೆಂದು ಕಥೆಯುಂಟು) ಪರಶಿವನೇ! ನೀನು ಯಾವಾಗಲೂ, ಆನೆಯ ಚರ್ಮವನ್ನೇ ಹೊದಿಯು ತ್ತೀಯೆ. ಮನ್ಮಥನನ್ನು ಸುಟ್ಟು ಭಸ್ಮಮಾಡಿದ ಎಲೈ ಸ್ವಾಮಿಯೇ! ಪ್ರಭುವಾದ ನೀನು, ನಮ್ಮ ಹಿಂದಿನ ದುಃಖಗಳನ್ನೂ, ಮತ್ತು ಪಾಪಗಳನ್ನೂ ಜಾಗ್ರತೆಯಾಗಿ ಹೋಗಲಾಡಿಸು, ದೇವ! ॥೬೫॥

ಸಕಲ ಜಗದುತ್ಪತ್ತಿಕಾರಣನಾದ ದೇವನೇ! ಮನೋನ್ಮನೀ ದೇವಿಯೊಡನೆ, ದಿವ್ಯಗಂಧದಿಂದ ಪರಿಶೋಭಿಸುತ್ತಿರುವ, ಮತ್ತು ಮಕರಂದಭರಿತವಾದ, ಶೀತಲ

ಮಹೇಶ್ವರ ಮಹಾಗಣೋಚ್ಛ್ವಸಿತಭೋಗಿಭೋಗಪ್ರಿಯಾ
ಪ್ರಪಂಚರಚನಾದರಪ್ರವರ ದೇವ ಮಾಂ ಪಾಲಯ ||೬೬||

ಭವ ಭವ ಹೃದಂತರಾಬ್ಜಗ
ಪ್ರಭವಾಭಾವಭವಸ್ಥಿತಿಪ್ರದ ।
ಗತಭಾವವಿದೂರ ಶಂಭೋ
ಭವಬಂಧಂ ಪ್ರವಿನಾಶಯಾಶು ಮೇ ||೬೭||

ಭವ ಭೂತಪತೇ ಭವೋದ್ಭವಾದ್ಯ
ತ್ವಯಿ ಭಕ್ತ್ಯಾ ಭಗವನ್ಭವಾಬ್ಧಿಪಾರಂ ।
ಭಸಿತೈರ್ಭವ ಪಾಶನಾಶಕ್ಯೈಃ
ಪರಿಧೂಲ್ಯ ಕ್ರಮಶಸ್ತರಂತಿ ಭಾವಾಃ ||೬೮||

---

ವಾಗಿರುವ ಹೂವುಗಳನ್ನು ಧರಿಸಿ, ವಿಶೇಷವಾಗಿ ಆನಂದಯುಕ್ತವಾಗಿರುವ ಅವಯವಗಳಿಂದ ಶೋಭಿಸುತ್ತಿರುವೆ. ಹೇ ಮಹೇಶ್ವರ! ದೊಡ್ಡ ಹೆಡೆಯಿಂದ ಕೂಡಿ, ದೀರ್ಘವಾದ ಉಚ್ಛ್ವಾಸದಿಂದ ಶೋಭಿಸುತ್ತಿರುವ ಸರ್ಪಶರೀರವನ್ನು ಧರಿಸುವುದರಲ್ಲಿ ನೀನು ತುಂಬಾ ಪ್ರೀತಿಯುಳ್ಳವನು. ಪ್ರಪಂಚದ ಸೃಷ್ಟಿಕಾರ್ಯದಲ್ಲಿ ಹೆಚ್ಚು ಆದರವುಳ್ಳ ದೇವನೇ, ನಮ್ಮನ್ನು ಸಲಹು. ||೬೬||

ಶಿವನೇ, ನನ್ನ ಹೃದಯಕಮಲದೊಳಗೆ ನೆಲಸುವವನಾಗು. ಉತ್ಪತ್ತಿ ಶೂನ್ಯನಾದ ಸ್ವಾಮಿಯೇ, ನಿನ್ನ ವಿಷಯಕವಾದ ಜ್ಞಾನವೇ ನನಗೆ ಉಂಟಾಗುವಂತೆ ಅನುಗ್ರಹಿಸು. ಈ ಸಂಸಾರಬಂಧನದಿಂದ ಬಹಳ ದೂರದಲ್ಲಿರುವ ಶಂಭುವೇ, ನನ್ನ ಈ ಸಂಸಾರಬಂಧನವನ್ನು ಕೂಡಲೇ ನಾಶಪಡಿಸು. ||೬೭||

ಪೃಥಿವ್ಯಾದಿ ಪಂಚಮಹಾಭೂತನಾಥನಾದ ಶಿವನೇ, ಆದಿಪುರುಷನಾದ ನೀನು ಸಕಲ ಲೋಕಗಳಿಗೂ ಸೃಷ್ಟಿಕರ್ತನಾಗಿರುವೆ. ಎಲೈ ಭಗವಂತನೆ, ನಿನ್ನಲ್ಲಿ ಭಕ್ತಿಯುಳ್ಳ ನಿನ್ನ ಭಕ್ತರು ಈ ಸಂಸಾರವೆಂಬ ಪಾಶವನ್ನು ನಾಶಪಡಿಸುವ ಶುಭ್ರವಾದ ಭಸ್ಮತ್ರಿಪುಂಡ್ರವನ್ನು ಧಾರಣೆಮಾಡಿ, ಕ್ರಮವಾಗಿ, ಈ ಸಂಸಾರವೆಂಬ ಘೋರಸಮುದ್ರದ ದಡವನ್ನು ಹೊಂದುತ್ತಾರೆ. ||೬೮||

ಚಿತ್ತಂ ತ್ರಿನೇತ್ರಸುಚರಿತ್ರ ಪವಿತ್ರಗಾಥಾ
ಶ್ರೋತ್ರಶ್ರವೇಣ ನಿಖಿಲಂ ಚ ಪವಿತ್ರಗಾತ್ರಂ ।
ವಾಂಛಾ ನ ಮಾಂ ಭಜತಿ ಪುತ್ರಕಲತ್ರಮಿತ್ರ
ಸತ್ರಾತಿರಾತ್ರವಿವಿಧೇಷು ಮಖೇಷು ಶಂಭೋ ॥೧೯॥

ತುರಂಗದಂತ್ಯುತ್ತಮಭೂಮಿದಾನೈಃ
ರತ್ನಾದಿಕನ್ಯಾಸುಮಹಾನ್ನದಾನೈಃ ।
ಅರ್ಘ್ಯಪ್ರದಾನೈರಖಿಲೈಶ್ಚ ಧರ್ಮೈ
ರಲಂ ಮಹೇಶಾನಪದಂ ವ್ರಜಾಮಿ ॥೨೦॥

॥ ಸೂತ ಉವಾಚ ॥

ಸ್ತುತ್ವೈವಂ ಸ ಮಹಾದೇವಂ ತೇಜೋರಾಶಿಂ ಘೃಣಾನಿಧಿಂ ।
ಶಿವಂ ನನಾಮ ಸಾಷ್ಟಾಂಗಂ ಮುಹುರ್ಮುಹುರನನ್ಯಧೀಃ ॥೨೧॥

ಮುಕ್ಕಣ್ಣನಾದ ಆ ನಿನ್ನ ದಿವ್ಯಚರಿತ್ರೆಯ ಸಂಬಂಧಿಯಾದ ಪವಿತ್ರಗಾದೆಗಳನ್ನು ಕಿವಿಗಳಿಂದ ಕೇಳಿರುವ ನನ್ನ ಮನಸ್ಸೂ ಮತ್ತು ನನ್ನ ಶರೀರವೂ ಪಾವನವಾಗಿರುವುದು. ಹೇ ಶಂಭೋ, ಮಕ್ಕಳು, ಹೆಂಡತಿಯರು, ಗೆಳೆಯರು, ಮತ್ತು ಅತಿರಾತ್ರವೇ ಮೊದಲಾದ ನಾನಾವಿಧವಾದ ಯಾಗಗಳು ಇವುಗಳಾವುದರಲ್ಲಿಯೂ ನನಗೆ ಸ್ವಲ್ಪವೂ ಅಪೇಕ್ಷೆಯೇ ಉಂಟಾಗುತ್ತಿಲ್ಲ. ॥೧೯॥

ಕುದುರೆ, ಆನೆ, ಉತ್ತಮವಾದ ಭೂಮಿ, ರತ್ನವೇ ಮೊದಲಾದ ಶ್ರೇಷ್ಠ ಪದಾರ್ಥಗಳು, ಕನ್ಯಾ, ವಿಶೇಷವಾದ ಅನ್ನ ಇವುಗಳ ದಾನವು ಸಾಕು. ಪೂಜಾರ್ಥವಾಗಿ ಅರ್ಘ್ಯವನ್ನು ಕೊಡುವುದು, ಸಮಸ್ತ ಧರ್ಮಕಾರ್ಯಗಳನ್ನೆಸಗುವುದು ಇವಾವುದರಿಂದಲೂ ಏನೂ ಪ್ರಯೋಜನವಿಲ್ಲ. ಇವೆಲ್ಲಾ ದಾನಾದಿಗಳಿಗಿಂತಲೂ ಸರ್ವೋತ್ಕೃಷ್ಟವಾದ ( ನಿನ್ನ ) ಮಹೇಶ್ವರನ ಪಾದಗಳನ್ನೇ ಸದಾ ಭಜಿಸುವೆನು." ॥೨೦॥

ಹೀಗೆ ಆ ಮಹಾಕಾಲನು, ತೇಜೋರಾಶಿಯೂ, ದಯಾನಿಧಿಯೂ ಆಗಿರುವ ಆ ಮಹಾದೇವನನ್ನು ಸ್ತೋತ್ರಮಾಡಿ, ಅವನಲ್ಲಿಯೇ ನೆಟ್ಟಮನಸ್ಸುಳ್ಳವನಾಗಿ ಆ ಪರಶಿವನಿಗೆ ಅನೇಕಬಾರಿ ಸಾಷ್ಟಾಂಗಪ್ರಣಾಮವನ್ನು ಮಾಡಿದನು. ॥೨೧॥

ಪ್ರಣಮಂತಂ ಮಹಾಕಾಲಂ ಸಮುತ್ಥಾಪ್ಯ ಮಹೇಶ್ವರಃ ।
ಪಸ್ಪರ್ಶ ತಸ್ಯ ಸರ್ವಾಂಗಂ ಶಂತಮೇನಾಥ ಪಾಣಿನಾ ॥೭೨॥

ಕೃಶಾನುರೇತಸೋತ್ಫುಲ್ಲಹಸ್ತಾಬ್ಜಸ್ಪರ್ಶತರ್ಷಿತಃ ।
ತಪಃ ಕೃಶತ್ವಂ ವಿಜಹೌ ಸುಧಾಂಶುರಿವ ನಿರ್ಮಲಃ ॥೭೩॥

ಚತುರ್ಬಾಹುರುದಾರಾಂಗಃ ಪಿನಾಕಮೃಗಸತ್ಕರಃ ।
ಕಪರ್ದಭಾರವಿಲಸಚ್ಚಂದ್ರಾರ್ಧಕೃತಶೇಖರಃ ॥೭೪॥

ಮಹಾಕಾಲಃ ಸುರೈರ್ದೃಷ್ಟೋ ದ್ವಿತೀಯ ಇವ ಶಂಕರಃ ।
ವಿಭ್ರಾಜಂ ದೇವತಾನೀಕಂ ಮುನೀನ್ವಿಸ್ಮಾಪಯಂಸ್ತದಾ ॥೭೫॥

ಸುರಾನ್ಸಂಹರ್ಷಯನ್ಶಂಭುರ್ಮಹಾಕಾಲಮಥಾಬ್ರವೀತ್ ॥೭೬॥

---

ಈ ರೀತಿಯಾಗಿ ಭಕ್ತಿಯಿಂದ ತನಗೆ ನಮಸ್ಕಾರಮಾಡುತ್ತಿರುವ ಆ ಮಹಾಕಾಲನನ್ನು ಮಹೇಶ್ವರನು ಹಿಡಿದೆತ್ತಿ ಘೋರವಾದ ತಪಸ್ಸಿನಿಂದ ಕ್ಲೇಶಹೊಂದಿದ್ದ ಅವನ ಶರೀರವನ್ನೆಲ್ಲಾ ತನ್ನ ಅತ್ಯಂತ ತೋಷಪ್ರದವಾದ ಕೈಯಿಂದ ಸವರಿದನು. ॥೭೨॥

ಅಗ್ನಿಯನ್ನೇ ವೀರ್ಯವಾಗುಳ್ಳ ಆ ಪರಮೇಶನ, ಅರಳಿದ ಕೈಕಮಲಗಳಿಂದ ಸ್ಪರ್ಶಮಾಡಲ್ಪಟ್ಟ ಆ ಮಹಾಕಾಲನು ಸಂತುಷ್ಟನಾಗಿ, ತನ್ನ ತಪಸ್ಸಿನ ಕ್ಲೇಶವನ್ನೆಲ್ಲಾ ತೊರೆದನಲ್ಲದೆ, ಪರಿಶುದ್ಧನಾದ ಚಂದ್ರನಂತೆ ಪ್ರಕಾಶಿಸಿದನು. ॥೭೩॥

ಮಹೇಶ್ವರನ ಹಸ್ತಸ್ಪರ್ಶದಿಂದ ಮಹಾಕಾಲನು ನಾಲ್ಕು ತೋಳುಗಳುಳ್ಳವನೂ, ಉದಾರವಾದ ಅವಯುವದಿಂದ ಶೋಭಿಸುವವನೂ, ಪಿನಾಕ ಮತ್ತು ಜಿಂಕೆ ಇವುಗಳಿಂದ ಪ್ರಕಾಶಿಸುತ್ತಿರುವ ಕೈಗಳುಳ್ಳವನೂ, ಜಡೆಯ ಭಾರದಿಂದ ಬೆಳಗುವ ಅರ್ಧಚಂದ್ರನನ್ನೇ ತನ್ನ ತಲೆಯಲ್ಲಿ ಧರಿಸಿರುವವನೂ ಆಗಿ, ಎರಡನೆಯ ಶಂಕರನಂತೆಯೇ ದೇವತೆಗಳಿಗೆ ಕಾಣಿಸಿಕೊಂಡನು. ॥೭೪॥

ಆಗ ದೇವತೆಗಳ ಗುಂಪನ್ನೆಲ್ಲಾ ತನ್ನ ದಿವ್ಯತೇಜಸ್ಸಿನಿಂದ ದೇದೀಪ್ಯವನ್ನಾಗಿ ಮಾಡುತ್ತಲೂ, ಮುನಿಗಳಿಗೆ ಆಶ್ಚರ್ಯವನ್ನುಂಟುಮಾಡುತ್ತಲೂ, ದೇವತೆಗಳಿಗೆ ಆನಂದವನ್ನುಂಟುಮಾಡುತ್ತಲೂ, ಶಂಕರನು ತನ್ನ ಭಕ್ತಶಿರೋಮಣಿಯಾದ ಮಹಾಕಾಲನನ್ನು ಕುರಿತು ಇಂತೆಂದನು. ॥೭೫-೭೬॥

॥ ಈಶ್ವರ ಉವಾಚ ॥

ಮಹಾಕಾಲಾನಯಾ ಸ್ತುತ್ಯಾ ತುಷ್ಟೋಽಹಂ ತ್ವಯಿ ಹರ್ಷಿತಃ ।
ಗಣಾಧಿಪತ್ಯಂ ದತ್ತಂ ತಚ್ಛಾಶ್ವತಂ ತವ ಪುತ್ರಕ ॥೭೭॥

ಶರ್ವಾಣೀತನಯೋಽಸಿ ತ್ವಂ ಗೀರ್ವಾಣಗಣವಂದಿತಃ ।
ಗಜಾನನಗುಹಾವೇತೌ ತತ್ಪೂಜ್ಯಭ್ರಾತರೌ ತವ ॥೭೮॥

ನಂದಿಕೇಶಾದಯಸ್ತೇಽದ್ಯ ಸಖಾಯಸ್ತೇ ಕಿಲಾಮಲಾಃ ।
ಮಹಾಕಾಲಮಿದಂ ಲಿಂಗಂ ಮಹಾಶೈವಸಮರ್ಚಿತಂ ॥೭೯॥

ಮಹಾಪ್ರದೋಷವೇಲಾಸು ಮಹಾದೇವಗಣೋ ಭವೇತ್ ।
ಕ್ಷೇತ್ರಮೇತತ್ಪ್ರಿಯತರಂ ಮಮ ನಿತ್ಯಂ ಗಣೇಶ್ವರ ॥೮೦॥

ಅಸ್ಮಾನ್ನಾನ್ಯತ್ರ ಗಚ್ಛಂತಿ ಸ್ಥಾನಮಾಹಾತ್ಮ್ಯವೇದಿನಃ ।
ಇತಿ ದೇವವಚಃ ಶ್ರುತ್ವಾ ದೇವಾ ವಚನಮಬ್ರುವನ್ ॥೮೧॥

"ಓ ಮಹಾಕಾಲನೇ! ನಿನ್ನ ಈ ಸ್ತೋತ್ರದಿಂದ ನಾನು ತೃಪ್ತನಾಗಿ ಸಂತೋಷ ಹೊಂದಿರುವೆನು. ವತ್ಸನೇ! ನಿನಗೆ ಶಾಶ್ವತವಾದ ಗಾಣಾಪತ್ಯಸ್ಥಾನವನ್ನೇ ಕೊಟ್ಟಿರುವೆನು. ನೀನು ಆ ಗಿರಿಜಾದೇವಿಯ ಮಗನೇ ಆಗಿದ್ದೀಯೆ, ದೇವತೆಗಳೆಲ್ಲರೂ ನಿನಗೆ ನಮಸ್ಕಾರಮಾಡುತ್ತಾರೆ. ಈ ಗಣಪತಿಯೂ, ಕುಮಾರಸ್ವಾಮಿಯೂ ನಿನ್ನ ಪೂಜ್ಯರಾದ ಅಣ್ಣಂದಿರೆಂದೇ ತಿಳಿ. ॥೭೭-೭೮॥

ಪರಮಪಾವನರಾದ ನಂದಿಕೇಶ್ವರನೇ ಮೊದಲಾದವರೆಲ್ಲರೂ ನಿನ್ನ ಸ್ನೇಹಿತರೆಂದು ತಿಳಿ. ನನ್ನ ಭಕ್ತವರ್ಯನಾದ ನಿನ್ನಿಂದ ಪೂಜಿಸಲ್ಪಟ್ಟ ಈ ಲಿಂಗಕ್ಕೆ ಮಹಾಕಾಲಲಿಂಗವೆಂದೇ ಹೆಸರಾಗಲಿ. ಈ ಮಹಾಕಾಲಲಿಂಗವನ್ನು ಪ್ರದೋಷಕಾಲಗಳಲ್ಲಿ ಪೂಜಿಸಿದವನು ಮಹಾದೇವನ ಗಣದಲ್ಲಿ ಸೇರುವನು. ಎಲೈ ಗಣಾಧಿಪತಿಯಾದ ಮಹಾಕಾಲನೇ! ಈ ಕ್ಷೇತ್ರವು ನಿತ್ಯವೂ ನನಗೆ ತುಂಬಾ ಪ್ರೀತಿಕರವಾಗಿರುವುದು. ॥೭೯-೮೦॥

ಕ್ಷೇತ್ರಸ್ಥಾನಗಳ ಮಹಿಮೆಯನ್ನರಿತವರು ಈ ಪುಣ್ಯಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಎಂದೂ ಹೋಗುವುದಿಲ್ಲ" ಎಂದು ಪರಮೇಶ್ವರನು ಮಹಾಕಾಲನಿಗೆ ಹೇಳಿದ ಈ ಮಾತನ್ನು ಕೇಳಿ ದೇವತೆಗಳು ಮಹಾದೇವನನ್ನು ಕುರಿತು ಇಂತೆಂದರು. ॥೮೧॥

॥ ದೇವಾ ಊಚುಃ ॥

ಧನ್ಯೋಽಯಂ ಕೃತಕೃತ್ಯೋಽಯಂ ಭವತ್ಪಾದಾರ್ಚನೇ ರತಃ ।
ಗಣಾಧಿಪತ್ಯಂ ಸಂಪ್ರಾಪ ತ್ರಿದಶೇಂದ್ರಸುದುರ್ಲಭಂ ॥೮೨॥

ತ್ವತ್ಕೃಪಾಪಾತ್ರಭೂತೋಽಯಂ ಮಹಾಕಾಲೋ ಗಣಾಗ್ರಣೀಃ ।
ತವ ಹಸ್ತಾಂಬುಜಸ್ಪರ್ಶಾದ್ವಿಜ್ಞಾನತನುರಾಸ್ತಿಕಃ ॥೮೩॥

ಇತಿ ದೇವಂ ಪ್ರಣಮ್ಯೇಂದ್ರಪೂರ್ವಕಾ ವಿಬುಧಾಬ್ರುವನ್ ॥೮೪॥

॥ ವಿಬುಧಾ ಊಚುಃ ॥

ಧನ್ಯಸ್ತ್ವಮಸಿ ಭೂಪಾಲ ಮಹಾಕಾಲಪದಾಶ್ರಯಃ ।
ತವ ಭಾಗ್ಯಸ್ಯ ನಾಂತೋಽಸ್ತಿ ಶಿವೈಕಶರಣಃ ಸದಾ ॥೮೫॥

ಇತ್ಥಂ ದೇವೈಸ್ತಿರೋಧತ್ತ ಮಹಾಕಾಲೇನ ಶಂಕರಃ ।
ತ್ವಂ ಚಾಪಿ ಗಣಪಶ್ರೇಷ್ಠೋ ಭವಿಷ್ಯಸಿ ನೃಪೋತ್ತಮ ॥೮೬॥

"ಮಹಾದೇವ! ಈತನೇ ಧನ್ಯನು, ಮತ್ತು ಕೃತಕೃತ್ಯನು, ನಿಮ್ಮ ಪಾದ ಪೂಜೆಯಲ್ಲಿಯೇ ತತ್ಪರನಾಗಿದ್ದ ಇವನು, ದೇವೇಂದ್ರನಿಂದಲೂ ಸುಖವಾಗಿ ಹೊಂದಲು ಅಸಾಧ್ಯವಾದ ಗಣಾಧಿಪತಿಯ ಸ್ಥಾನವನ್ನು ಅನಾಯಾಸವಾಗಿ ಪಡೆದನು. ॥೮೨॥

ನಿನ್ನ ದಯೆಗೆ ಪಾತ್ರನಾದ ಈ ಮಹಾಕಾಲನು ಗಣಶ್ರೇಷ್ಠನೆನಿಸಿದನು. ಅಲ್ಲದೇ ನಿನ್ನ ಹಸ್ತಕಮಲಸ್ಪರ್ಶದಿಂದ ಕೇವಲ ಜ್ಞಾನಸ್ವರೂಪನೂ, ಆಸ್ತಿಕನೂ ಆದನು. ಹೇ ದೇವ! ನಿನ್ನ ಮಹಿಮೆಯು ಅದ್ಭುತವಾದದ್ದು" ಎಂದು ಇಂದ್ರನೇ ಮೊದಲಾದ ದೇವತೆಗಳು ಆ ಮಹೇಶ್ವರನಿಗೆ ಪ್ರಣಾಮಮಾಡಿ, ಮಹಾಕಾಲ ನನ್ನು ಕುರಿತು ಹೀಗೆಂದರು. ॥೮೩-೮೪॥

ಅಯ್ಯ ರಾಜನೇ! ಮಹಾಕಾಲನ ಪಾದವನ್ನು ಆಶ್ರಯಿಸಿರುವ ನೀನೇ ಧನ್ಯನು. ನಿನ್ನ ಭಾಗ್ಯಕ್ಕೆ ಎಣೆಯೇ ಇಲ್ಲ. ಯಾವಾಗಲೂ ಆ ಶಿವನಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿರುವೆ. ॥೮೫॥

ಹೀಗೆಂದನಂತರ ಆ ದೇವತೆಗಳೊಡನೆಯೂ, ಮತ್ತು ಆ ಮಹಾಕಾಲನೊಡ ನೆಯೂ ಶಂಕರನು ಅಲ್ಲಿಯೇ ಮರೆಯಾದನು. ಅಯ್ಯ ರಾಜೇಂದ್ರನೇ! ಅವನಂತೆಯೇ ನೀನೂ ಗಣಾಧಿಪತಿಯಾಗುತ್ತೀಯೆ. ॥೮೬॥

ಏತತ್ಕಥಾನಕಂ ಪುಣ್ಯಂ ಮಹಾಕಾಲಗಣಾಶ್ರಯಂ ।
ಶ್ರುತ್ವಾ ದ್ವಿಜೇಷು ಸತತಂ ಭವಭಕ್ತಿಂ ಲಭೇತ ಸಃ ॥೮೭॥

ಚಿತ್ರಸೇನೋ ವಿಚಿತ್ರಾರ್ಥಾಂ ತ್ರಿನೇತ್ರಪ್ರಿಯಕೃತ್ಕಥಾಂ ।
ಶ್ರುತ್ವಾಥ ಬ್ರಹ್ಮಣೋ ವಕ್ತ್ರಾದ್ವವಂದೇ ತಂ ಪಿತಾಮಹಂ ॥೮೮॥

ಸನಂದನಾದ್ಯೈರ್ಮುನಿಭಿಸ್ತಮಾಶೀರ್ಭಿಸ್ತ್ವಯೋಜಯತ್
ಮಹಾಕಾಲಂ ಪ್ರಣಮ್ಯೇಶಂ ಗೀರ್ವಾಣಗಣವಂದಿತಃ ॥೮೯॥

ಸ್ವಂ ಧಾಮ ಹಂಸಯಾನೇನ ಯಯೌ ಪದ್ಮಾಸನಃ ಸುರೈಃ ।
ಮಹಾಕಾಲಾರ್ಚನಾಚಾರ್ಾಂಶೇ ಚಿತ್ರಸೇನೋ ಗಣೋಽಭವತ್ ॥೯೦॥

ಯೇನಾನಂತಮಹಾಧ್ವರೈರ್ವಿಧಿಕೃತೈರ್ಗೋದಾನಕನ್ಯಾದಿಭಿ
ರ್ಭೂದಾನೈರಘಹಾರಿಭಿರ್ದ್ವಿಜವರೈರ್ದತ್ತೈಶ್ಚ ಯತ್ಸಾಧ್ಯಫಲಂ ।

ಮಹಾಕಾಲಸಂಬದ್ಧವಾದ ಪುಣ್ಯಕರವಾದ ಈ ಕಥೆಯನ್ನು ಕೇಳುವ ಬ್ರಾಹ್ಮಣನು ಯಾವಾಗಲೂ ಪರಶಿವನ ಭಕ್ತಿಯನ್ನು ಅತಿಶಯವಾಗಿ ಪಡೆಯು ತ್ತಾನೆ. ॥೮೭॥

ಹೀಗೆ ಚಿತ್ರಸೇನ ಮಹಾರಾಜನು ವಿಚಿತ್ರವಾದ ಅರ್ಥಗಳಿಂದಲೂ ಸನ್ನಿ ವೇಶಗಳಿಂದಲೂ ಯುಕ್ತವಾಗಿ, ಆ ಮಹಾದೇವನಿಗೆ ಪ್ರೀತಿಪಾತ್ರವಾದ ಶಿವಕಥೆ ಯನ್ನು ಬ್ರಹ್ಮನ ಮುಖದಿಂದ ಕೇಳಿ, ಮತ್ತೆ ಮತ್ತೆ ಬ್ರಹ್ಮನಿಗೆ ನಮಸ್ಕಾರ ಮಾಡಿದನು. ॥೮೮॥

ಆಗ ಸನಂದನರೇ ಮೊದಲಾದ ಮುನಿಗಳೆಲ್ಲರೂ ಅವನಿಗೆ ಆಶೀರ್ವಾದ ಮಾಡಿ ದರು. ಅನಂತರ ಕಮಲಾಸನನಾದ ಬ್ರಹ್ಮನು, ಮಹಾಕಾಲೇಶ್ವರನಿಗೆ ಪ್ರಣಾಮ ಮಾಡಿ, ದೇವತೆಗಳಿಂದ ನಮಸ್ಕಾರ ಹೊಂದುತ್ತಾ ತನ್ನ ಹಂಸವನ್ನೇರಿ ಸತ್ಯಲೋ ಕಕ್ಕೆ ತೆರಳಿದನು. ಚಿತ್ರಸೇನ ರಾಜನೂ ಕೂಡ ಮಹಾಕಾಲೇಶ್ವರನನ್ನು ಪೂಜೆ ಮಾಡಿ, ಪೂಜೆಯೆಲ್ಲವೂ ಮುಗಿದನಂತರ ತಾನೂ ಈಶ್ವರಾಜ್ಞೆಯಂತೆ ಗಣಾಧಿ ಪತಿಯೇ ಆದನು. ॥೯೦॥

ವಿಧಿಪೂರ್ವಕವಾಗಿ ಮಾಡಿದ ಅಪಾರವಾದ ಮಹಾಯಾಗಗಳು, ಗೋದಾನ, ಕನ್ಯಾದಾನ, ಭೂದಾನವೇ ಮೊದಲಾದ ದಾನಫಲಗಳೂ, ಅಲ್ಲದೇ ಪಾಪವನ್ನು ನಾಶಮಾ

ತೇನೈವಾಖಿಲಘೋರಪಾತಕಹರೀಂ ಭಕ್ತಿಂ ಲಭೇಚ್ಛಾಂಭವೀಂ
ಧನ್ಯಃ ಶಂಕರಕಿಂಕರಃ ಶಿವಮನುವ್ಯಾಹಾರಮಾತ್ರಾದರಃ ॥೯೧॥

ಗೌರೀಶಂಕರಕಿಂಕರಃ ಸಿತಲಸದ್ಭಸ್ಮತ್ರಿಪುಂಡ್ರಾದರೋ ।
ರುದ್ರಾಕ್ಷಾಭರಣಃ ಶಿವೈಕಶರಣಃ ಕಶ್ಚಿದ್ಭವೇದ್ವೈ ಕಲೌ ॥೯೨॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಮಹಾಕಾಲ ತಪೋವರ್ಣನಂ, ದೇವಸ್ತುತಿಃ, ಶಿವಾಗಮನಂ, ಶಿವಸ್ತುತಿಃ, ಗಾಣಪತ್ಯ ವರಪ್ರದಾನಂ ಚಿತ್ರಸೇನರಾಜಾ ಗಣಾಗ್ರಣಿಭವೇದಿತಿ ಕಥಾವರ್ಣನಂ ನಾಮ ಷಷ್ಠೋಽಧ್ಯಾಯಃ

---

ಡುವ ಇತರ ಅನೇಕ ಧರ್ಮಗಳು, ದಾನಗಳನ್ನು ಬ್ರಾಹ್ಮಣರಿಗೆ ಸಮರ್ಪಣೆಮಾಡುವುದರಿಂದುಂಟಾಗುವ ಫಲವನ್ನೂ, ಮತ್ತು ಸಮಸ್ತ ಘೋರಪಾಪಗಳನ್ನೂ ತಪ್ಪದೇ ನಾಶಮಾಡುವ ಶಿವಭಕ್ತಿಯನ್ನೂ ಸಹ ಆ ಶಿವಭಕ್ತನು ಪಡೆಯುವನು. ಕೇವಲ ಶಿವಮಂತ್ರೋಚ್ಚಾರಣೆಯಲ್ಲಿಯೇ ಆದರವುಳ್ಳ ಶಂಕರನ ಭಕ್ತನೇ ಧನ್ಯನು. ॥೯೧॥

ಗೌರೀ ಮತ್ತು ಶಂಕರ, ಇವರ ದಾಸನಾಗಿಯೂ, ಶುಭ್ರವರ್ಣವುಳ್ಳ ಮತ್ತು ಪ್ರಕಾಶಮಾನವಾದ ಭಸ್ಮತ್ರಿಪುಂಡ್ರದಲ್ಲಿ ಆದರವುಳ್ಳವನೂ, ರುದ್ರಾಕ್ಷವನ್ನೇ ಆಭರಣವನ್ನಾಗಿ ಧರಿಸಿರುವನೂ ಆಗಿರುವ ಶಿವನಲ್ಲೇ ಮುಖ್ಯವಾಗಿ ಭಕ್ತಿಯುಳ್ಳವನು ಈ ಕಲಿಯುಗದಲ್ಲಿ ಎಲ್ಲಿಯೋ ಒಬ್ಬನು ಹುಟ್ಟಬಹುದು. (ಅಂದರೆ ಅಂತಹಮಹಾನುಭಾವರು ಹುಟ್ಟುವದು ಬಹಳ ಅಪರೂಪವೆಂದರ್ಥ.) ಎಂದು ಶಂಕರನು ಪಾರ್ವತಿಗೆ ತಿಳಿಸಿದನು. ॥೯೨॥

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗಸಂಜ್ಞಕವಾದ ಐದನೆಯ ಅಂಶದಲ್ಲಿ, ಮಹಾಕಾಲನ ತಪಸ್ಸಿನ ವರ್ಣನೆ, ದೇವತೆಗಳು ಮಾಡಿದ ಸ್ತೋತ್ರ, ಶಿವನ ಬರುವಿಕೆ ಶಿವನಸ್ತೋತ್ರ, ಗಾಣಾಪತ್ಯರೂಪವಾದ ವರವನ್ನು ಈಶ್ವರನು ಮಹಾಕಾಲನಿಗೆ ಕೊಡುವುದು, ಮತ್ತು ಚಿತ್ರಸೇನರಾಜನು ಈ ಮಹಾಕಾಲಲಿಂಗವನ್ನು ಪೂಜೆಮಾಡಿ, ಗಣಶ್ರೇಷ್ಠನಾಗುವಿಕೆ, ಎಂಬ ಕಥೆಯನ್ನು ತಿಳಿಸುವ ಆರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಸಪ್ತಮೋಽಧ್ಯಾಯಃ

|| ಸೂತ ಉವಾಚ ||

ಪುನಃ ಪಪ್ರಚ್ಛ ಸಾ ದೇವೀ ಪಾರ್ವತೀ ಪರಮೇಶ್ವರಂ ।
ಪ್ರಪನ್ನಾನಂದಜನನಂ ಜಗಜ್ಜನಕಮೀಶ್ವರಂ ॥೧॥

ಮಹಾದೇವ ಮಹಾನಂದ ಕರುಣಾರಸಸಾಗರ ।
ಶ್ರುತಮುತ್ತಮಮಾಖ್ಯಾನಂ ಮಹಾಕಾಲಗಣಸ್ಯ ಚ ॥೨॥

ಕಿಂ ವಾನ್ಯತ್ಪ್ರೀತಿಜನಕಂ ಕ್ಷೇತ್ರಮಸ್ತಿ ಮಹೇಶ್ವರ ।
ಕ್ಷೇತ್ರಾಣಾಂ ತ್ವಂ ಪತಿಃ ಶಂಭೋ ವಿಶಿಷ್ಟಂ ವಕ್ತುಮರ್ಹಸಿ ॥೩॥

---

### ಏಳನೆಯ ಅಧ್ಯಾಯವು

ಪಾರ್ವತೀದೇವಿಯು ಪುನಃ, ತನ್ನ ಭಕ್ತರಿಗೆ ಆನಂದವನ್ನುಂಟುಮಾಡುವವನೂ, ಮತ್ತು ಜಗದುತ್ಪತ್ತಿಕಾರಣನೂ, ಸರ್ವೇಶ್ವರನೂ ಆದ ಪರಮೇಶ್ವರನನ್ನು ಕುರಿತು ಈರೀತಿ ಪ್ರಶ್ನೆಮಾಡಿದಳು. ||೧||

ಸಂಪೂರ್ಣಾನಂದಪ್ರದನಾದ ಮಹಾದೇವನೇ, ನೀನು ದಯಾರಸಕ್ಕೆ ಸಾಗರದಂತಿರುವೆ. ನಿನ್ನಿಂದ ಉತ್ತಮವಾದ ಮಹಾಕಾಲಗಣನಾಥನ ಕಥೆಯನ್ನು ಈಗ ಕೇಳಿದೆನು. ||೨||

ಮಹೇಶ್ವರ! ನಿನಗೆ ಪ್ರೀತಿಯನ್ನುಂಟುಮಾಡುವ ಬೇರೆ ಕ್ಷೇತ್ರವಾವುದುಂಟು? ಹಾಗಿದ್ದರೆ, ಕ್ಷೇತ್ರಗಳಿಗೆಲ್ಲಾ ಸ್ವಾಮಿಯಾದ ನೀನು ಅದರ ವೈಶಿಷ್ಟ್ಯವೇನೆಂಬುದನ್ನು ತಿಳಿಸಲು ನೀನೊಬ್ಬನೇ ಸಮರ್ಥನಲ್ಲವೆ! ||೩||

ಕ್ಷೇತ್ರಮಸ್ತ್ಯೇಕಮುತ್ಕೃಷ್ಟಮುತ್ಫುಲ್ಲಕಮಲಾನನೇ ।
ಓಂಕಾರನಾಮವಿಮಲಂ ಕಲಿಕಲ್ಮಷನಾಶನಂ ॥೪॥

ತತ್ರ ಶೈವವರಾ ನಿತ್ಯಂ ನಿವಸಂತಿ ಸಹಸ್ರಶಃ ।
ತೇ ಸರ್ವೇ ಮಮ ಲಿಂಗಾರ್ಚಾಂ ಕುರ್ವಂತ್ಯೇವ ಪ್ರತಿಕ್ಷಣಂ ॥೫॥

ಭಾಸಿತಾಭಸಿತೈರ್ನಿತ್ಯಂ ಶಾಂತಾ ದಾಂತಾ ಜಿತೇಂದ್ರಿಯಾಃ ।
ರುದ್ರಾಕ್ಷವರಭೂಷಾಢ್ಯಾಃ ಫಾಲಾಕ್ಷನ್ಯಸ್ತಮಾನಸಾಃ ॥೬॥

ತತ್ರಾಸ್ತಿ ಸರಿತಾಂ ಶ್ರೇಷ್ಠಾ ಲಿಂಗಸಂಗತರಂಗಿತಾ ।
ನರ್ಮದಾ ಶರ್ಮದಾ ನಿತ್ಯಂ ಸ್ನಾನಾತ್ಪಾನಾವಗಾಹನಾತ್ ॥೭॥

ಎಂದು ಕೇಳಲು ಆಗ ಶಂಕರನು ಹೀಗೆಂದನು—ಅರಳಿದ ತಾವರೆಯಂತೆ ಮುಖವುಳ್ಳ ದೇವಿಯೇ! ಭೂಮಿಯಲ್ಲಿ ಉತ್ಕೃಷ್ಟವಾದ ಮತ್ತೊಂದು ಕ್ಷೇತ್ರವಿರುವುದು. ಆ ಕ್ಷೇತ್ರವು ಕಲಿಸಂಬಂಧಿಯಾದ ದೋಷಗಳನ್ನೆಲ್ಲಾ ಹೋಗಲಾಡಿಸುತ್ತಾ ಓಂಕಾರವೆಂಬ ಪರಿಶುದ್ಧವಾದ ಹೆಸರಿನಿಂದ ಮೆರೆಯುತ್ತಿದೆ. ॥೪॥

ಅಲ್ಲಿ ಸಾವಿರಾರು ನನ್ನ ಭಕ್ತಶ್ರೇಷ್ಠರು ವಾಸಮಾಡುತ್ತಿರುವರು. ಅವರೆಲ್ಲರೂ ಪ್ರತಿಕ್ಷಣದಲ್ಲಿಯೂ ತಪ್ಪದೇ ನನ್ನ ಶಿವಲಿಂಗವನ್ನು ಪೂಜೆಮಾಡುತ್ತಿರುವರು. ॥೫॥

ಪ್ರಕಾಶಮಾನವಾದ ಭಸ್ಮತ್ರಿಪುಂಡ್ರಗಳನ್ನು ಧರಿಸಿ, ನಿತ್ಯವೂ, ಶಾಂತರೂ, (ಶಾಂತಸ್ವಭಾವವುಳ್ಳವರೂ,) ಅಂತರಿಂದ್ರಿಯ ನಿಗ್ರಹವುಳ್ಳವರೂ, ಜಿತೇಂದ್ರಿಯರೂ ಆಗಿ, ಶ್ರೇಷ್ಠವಾದ ರುದ್ರಾಕ್ಷಾಭರಣಗಳನ್ನು ಧರಿಸಿ, ಯಾವಾಗಲೂ, ಅಲ್ಲಿ ಹಣೆಗಣ್ಣನಾದ ಆ ಮಹಾದೇವನಲ್ಲಿಯೇ ತಮ್ಮ ಮನಸ್ಸನ್ನಿರಿಸಿ ಭಕ್ತಿಯಿಂದ ಕಾಲಕಳೆಯುತ್ತಿರುವರು. ॥೬॥

ಆ ಓಂಕಾರಕ್ಷೇತ್ರದಲ್ಲಿ ಶ್ರೇಷ್ಠವಾದ ನರ್ಮದಾನದಿಯು ತನ್ನಲ್ಲಿ ಸ್ನಾನ, ಪಾನ ಮಾಡುವುದರಿಂದ ಜನರಿಗೆ ಸುಖವನ್ನುಂಟುಮಾಡುತ್ತಾ ತನ್ನ ದಡದಲ್ಲಿರುವ ಶಿವಲಿಂಗಗಳ ಮೇಲೆ ತನ್ನ ಅಲೆಗಳನ್ನು ಹಾಯಿಸುತ್ತಾ ಆನಂದಗೊಳಿಸುತ್ತಿರುವುದು. ॥೭॥

ಪಾಪೌಘಸಂಘಭಂಗಾಢ್ಯಾ ವಾತಪೋತಸುಶೀತಲಾ ।
ತತ್ರಾಸ್ತಿ ಕುಂಡಮುತ್ಕೃಷ್ಟಮೋಂಕಾರಾಖ್ಯಂ ಶುಚಿಸ್ಮಿತೇ ॥೮॥

ತತ್ಕುಂಡದರ್ಶನಾದೇವ ಮಲ್ಲೋಕೇ ನಿವಸೇಚ್ಚಿರಂ ।
ತತ್ಕುಂಡೋದಕಪಾನೇನ ಹೃದಿ ಲಿಂಗಂ ಪ್ರಜಾಯತೇ ॥೯॥

ಭಾವಾಃ ಪಿಬಂತಿ ತತ್ಕುಂಡಜಲಂ ಶೀತಂ ವಿಮುಕ್ತಯೇ ।
ತೃಪ್ತಿಂ ಪ್ರಯಾಂತಿ ಪಿತರಸ್ತತ್ಕುಂಡಜಲತರ್ಪಿತಾಃ ॥೧೦॥

ಸದಾ ತತ್ಕುಂಡರಕ್ಷಾರ್ಥಂ ಗಣಾಃ ಸಂಸ್ಥಾಪಿತಾ ಮಯಾ ।
ಕುಂಡೋದರಪ್ರಭೃತಯಃ ಶೂಲಮುದ್ಗರಪಾಣಯಃ ॥೧೧॥

ಆ ನರ್ಮದಾನದಿಯು ಪಾಪಗಳ ಸಮೂಹವನ್ನೆಲ್ಲಾ ನಾಶಮಾಡುವುದರಲ್ಲಿ ಸಮರ್ಥವಾದುದು. ಅಲ್ಲದೇ, ಮಂದಮಾರುತದಿಂದ ಕೂಡಿ ಶೀತಲವಾಗಿರುವುದು. ಶುಭ್ರವಾದ ಮಂದಹಾಸದಿಂದ ಕೂಡಿದ ನಗುಮುಖವುಳ್ಳ ದೇವಿಯೇ, ಅಲ್ಲಿ ಓಂಕಾರವೆಂಬ ಉತ್ಕೃಷ್ಟವಾದ ಒಂದು ಕುಂಡವಿರುವುದು. ॥೮॥

ಆ ಓಂಕಾರ ಕುಂಡದ ದರ್ಶನಮಾತ್ರದಿಂದಲೇ ಮಾನವನು ನನ್ನ ಲೋಕವನ್ನು ಹೊಂದಿ ಅಲ್ಲಿ ಬಹಳಕಾಲ ವಾಸಮಾಡುತ್ತಾನೆ. ಆ ಕುಂಡದ ನೀರನ್ನು ಕುಡಿಯುವುದರಿಂದ ಅವನ ಹೃದಯದಲ್ಲಿ ಶಿವಲಿಂಗವೇ ಆವಿರ್ಭವಿಸುತ್ತದೆ. ॥೯॥

ನನ್ನ ಭಕ್ತರು ಆ ಕುಂಡದ ತಂಪಾದ ನೀರನ್ನು ಮೋಕ್ಷಪ್ರಾಪ್ತಿಗೋಸ್ಕರ ಪಾನಮಾಡುತ್ತಾರೆ. ಈ ಕುಂಡದ ನೀರಿನಿಂದ ತರ್ಪಣಮಾಡಲ್ಪಟ್ಟ ಪಿತೃದೇವತೆಗಳೂ ಸಹ ನಿತ್ಯತೃಪ್ತಿಯನ್ನು ಹೊಂದುತ್ತಾರೆ. ॥೧೦॥

ಯಾವಾಗಲೂ ಆ ಕುಂಡವನ್ನು ಕಾಪಾಡುವುದಕ್ಕೋಸ್ಕರ ಕುಂಡೋದರನೇ ಮೊದಲಾದ ಗಣಗಳನ್ನು ನಾನು ಅಲ್ಲಿ ನಿಯಮಿಸಿರುವೆನು. ಅವರು ಸದಾ ಶೂಲ, ಮುದ್ಗರ ಮುಂತಾದ ಆಯುಧಗಳನ್ನು ಕೈಗಳಲ್ಲಿ ಹಿಡಿದು ಯಾವಾಗಲೂ ಆ ಕುಂಡವನ್ನು ಕಾಯುತ್ತಿರುವರು. ॥೧೧॥

ಗಜೇಂದ್ರಚರ್ಮವಸನಾ ಮೃಗೇಂದ್ರಸಮವಿಕ್ರಮಾಃ ।
ಹರೀಂದ್ರಾನಪಿ ತೇ ಹನ್ಯುರ್ಗಿರೀಂದ್ರಸಮವಿಗ್ರಹಾಃ ॥೧೨॥

ಧನುಃ ಶರಕರಾಃ ಸರ್ವೇ ಜಟಾಶೋಭಿತಮಸ್ತಕಾಃ ।
ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮೋದ್ಧೂಲಿತವಿಗ್ರಹಾಃ ॥೧೩॥

ಸಂಗ್ರಾಮಮುಖರಾಃ ಸರ್ವೇ ಗಣಾ ಮೇದುರವಿಗ್ರಹಾಃ ।
ಕದಾಚಿದನನುಜ್ಞಾಪ್ಯ ತಾನ್ಗಣಾನ್ಮದದರ್ಪಿತಃ ॥೧೪॥

ಅಪ್ಸರೋಭಿಃ ಪರಿವೃತೋ ಮರುತಾಂ ಪತಿರುದ್ಧತಃ ।
ಆರುಹ್ಯಾಭ್ರಮುನಾಥಂ ತಂ ಕ್ರೀಡಿತುಂ ನರ್ಮದಾಜಲೇ ॥೧೫॥

ಸಮಾಜಗಾಮ ತ್ವರಿತೋ ಶಚ್ಯಾ ಸಾಕಂ ಶಿವೇ ತದಾ ।
ತದಾ ತಂ ಗಣಪಾಃ ಕ್ರುದ್ಧಾಃ ಸರ್ವೇ ತೇ ಹ್ಯತಿಮನ್ಯವಃ ॥೧೬॥

ಶ್ರೇಷ್ಠವಾದ ಆನೆಯ ಚರ್ಮವನ್ನು ಹೊದೆದು, ಸಿಂಹಗಳಿಗೆ ಸಮಾನವಾದ ಪರಾಕ್ರಮದಿಂದ ಕೂಡಿದ ಅವರು, ಹಿಮಾಲಯಪರ್ವತಕ್ಕೆ ಸಮವಾದ ಉನ್ನತ ಶರೀರವುಳ್ಳವರಾಗಿ, ವಿಷ್ಣು, ದೇವೇಂದ್ರ ಇವರನ್ನೂ ನಿಗ್ರಹಿಸುವ ಸಾಮರ್ಥ್ಯವನ್ನು ಹೊಂದಿರುವರು. ॥೧೨॥

ಬಿಲ್ಲುಬಾಣಗಳನ್ನು ಕೈಯ್ಯಲ್ಲಿ ಹಿಡಿದು, ಜಡೆಗಳಿಂದ ಶೋಭಿಸುತ್ತಿರುವ ಶಿರಸ್ಸುಗಳುಳ್ಳ ಆ ಗಣಗಳು, 'ಅಗ್ನಿರ್ಮೂರ್ಧಾ' ಮುಂತಾದ ಮಂತ್ರಪೂರ್ವಕವಾಗಿ ಶರೀರಕ್ಕೆಲ್ಲಾ ಭಸ್ಮವನ್ನು ಧಾರಣೆಮಾಡಿಕೊಂಡಿರುವರು. ॥೧೩॥

ಪ್ರಕಾಶಮಾನವಾದ ಸಾಂದ್ರದೇಹವುಳ್ಳ ಆ ಗಣಗಳೆಲ್ಲಾ ಯುದ್ಧೋನ್ಮುಖರಾಗಿರುವರು. ಒಂದುಸಲ ದೇವೇಂದ್ರನು ಆ ಗಣಗಳಿರುವುದನ್ನು ಕೇಳಿ ಅಪ್ಪಣೆಯನ್ನು ಪಡೆಯದೇ ದರ್ಪದಿಂದ ಐರಾವತವನ್ನೇರಿ ತನ್ನ ಅಪ್ಸರಸ್ತ್ರೀಯರೊಡನೆ ಹೊರಟು ಆ ನರ್ಮದಾನದಿಯ ನೀರಿನಲ್ಲಿ ಜಲಕ್ರೀಡೆಯಾಡಲು ಬಂದನು. ॥೧೪-೧೫॥

ಗಿರಿಜೆ! ಹೀಗೆ ತನ್ನ ಪಟ್ಟದ ರಾಣಿಯಾದ ಶಚಿಯೊಡನೆ ಜಾಗ್ರತೆಯಾಗಿ ಬಂದು, ಜಲಕ್ರೀಡೆಯಾಡುತ್ತಿದ್ದ ಆ ಇಂದ್ರನಮೇಲೆ ಕೋಪಗೊಂಡು ಬಹಳ ಕೋಪಸ್ವಭಾವವುಳ್ಳಗ ಆ ಣಾಧಿಪತಿಗಳೆಲ್ಲರೂ, ಇಂದ್ರನನ್ನೂ, ಮತ್ತು ಶಚಿಯನ್ನೂ, ಐರಾವತದೊಡನೆ ಸಮುದ್ರದಲ್ಲಿ ತಳ್ಳಿದರು. ॥೧೬॥

ಸಗಜಂ ಪಾತಯನ್ನಬ್ಧೌ ಶಚ್ಯಾ ಸಾಕಂ ಸುರೇಶ್ವರಂ ।
ಸುರಾಂಸ್ತದಾ ಸ ವರುಣಾನ್ವಿಭಿದುಃ ಪವನಾನಲಾನ್ ॥೧೭॥

ನಿಸ್ತ್ರಿಂಶವರಧಾರಾಭಿಃ ಸುತೀಕ್ಷ್ಣಾಗ್ರೈಃ ಶಿಲೀಮುಖೈಃ ।
ಮುದ್ಗರೈರ್ಬಿಭಿದುಶ್ಚಾನ್ಯೇ ಸವಾಹಾಯುಧಭೂಷಣಾನ್ ॥೧೮॥

ವಿವಾಹನಾಂಸ್ತದಾ ದೇವಾಂತ್ಸ್ರವದ್ರಕ್ತಾನ್ಸ್ಖಲತ್ಪದಾನ್ ।
ಕಾಂದಿಶೀಕಾನ್ಮುಕ್ತಕೇಶಾನ್ಕ್ಷಣಾಚ್ಚಕ್ರುರ್ಗಣೇಶ್ವರಾಃ ॥೧೯॥

ಅಪ್ಸರಾಸ್ತಾ ವಿಕಬರಾ ರುದಂತ್ಯೋ ಮುಕ್ತಮೂರ್ಧಜಾಃ ।
ಹಾಹಾ ಬತೇತಿ ಕ್ರಂದಂತ್ಯಃ ಸ್ರವದ್ರಕ್ತಾರ್ದ್ರವಾಸಸಃ ॥೨೦॥

ತಥಾ ದೇವಗಣಾಃ ಸರ್ವೇ ಶಕ್ರಾದ್ಯಾ ಭಯಕಂಪಿತಾಃ ।
ಓಂಕಾರಂ ತತ್ರ ತಲ್ಲಿಂಗಂ ಶರಣಂ ಜಗ್ಮುರೀಶ್ವರಂ ॥೨೧॥

ಅಲ್ಲದೇ ವರುಣ, ವಾಯು, ಅಗ್ನಿ ಮೊದಲಾದ ದೇವತೆಗಳನ್ನೆಲ್ಲಾ ಶಿವಗಣಗಳು ಹೊಡೆದು, ಹರಿತವಾದ ಕತ್ತಿಯ ಅಲಗುಗಳಿಂದಲೂ, ತೀಕ್ಷ್ಣವಾದ ಬಾಣಗಳಿಂದಲೂ, ಮುದ್ಗರ ಮುಂತಾದ ಇತರ ಆಯುಧಗಳಿಂದಲೂ, ಹಿಂಸಿಸುತ್ತಾ ಆ ವರುಣನೇ ಮುಂತಾದ ದೇವತೆಗಳ, ವಾಹನ, ಆಯುಧ ಮತ್ತು ಆಭರಣಾದಿಗಳನ್ನೆಲ್ಲಾ ಕತ್ತರಿಸಿ ಹಾಕಿದರು. ॥೧೭-೧೮॥

ಆಗ ಕುಂಡೋದರನೇ ಮೊದಲಾದ ಗಣಗಳು, ಆ ದೇವತೆಗಳನ್ನು ವಾಹನರಹಿತರನ್ನಾಗಿ ಮಾಡಿ, ಅವರು ಗಾಯದಿಂದ ಹರಿಯುತ್ತಿರುವ ರಕ್ತವುಳ್ಳವರಾಗಿ, ಪದೇ ಪದೇ ಎಡವುತ್ತಾ, ತಲೆಯನ್ನು ಕೆದರಿಕೊಂಡು, ದಿಕ್ಕುದಿಕ್ಕಿಗೆ ಹೆದರಿ ಓಡುವಂತೆ ಒಂದು ಕ್ಷಣದಲ್ಲಿ ಮಾಡಿಬಿಟ್ಟರು. ॥೧೯॥

ಆಗ ಅಪ್ಸರಸ್ತ್ರೀಯರೆಲ್ಲಾ ತಮ್ಮ ಕೇಶಪಾಶವನ್ನೆಲ್ಲಾ ಕೆದರಿಕೊಂಡು, ಆಭರಣಾದಿಗಳಿಲ್ಲದೇ ಅಳುತ್ತಾ ಸುರಿಯುತ್ತಿರುವ ರಕ್ತಧಾರೆಗಳಿಂದ ನೆನೆದ ಬಟ್ಟೆಯುಳ್ಳವರಾಗಿ, ಅಯ್ಯೋ, ಕೆಟ್ಟೆವು. ಎಂದು ಗೋಳಿಡುತ್ತಿದ್ದರು. ಹಾಗೆಯೇ ದೇವತೆಗಳ ಗಣವೆಲ್ಲವೂ ಇಂದ್ರನೇ ಮೊದಲಾದವರೂ, ಆ ಶಿವಗಣಗಳಿಗೆ ಹೆದರಿ, ನಡುಗುತ್ತಾ ಆ ನದಿಯ ತೀರದಲ್ಲಿದ್ದ ಓಂಕಾರಸ್ವರೂಪವಾದ ಶಿವಲಿಂಗವನ್ನು ಮೊರೆಹೊಕ್ಕರು. ॥೨೦-೨೧॥

ಮಹಾಪುಣ್ಯಸಂಗಂ ಕೃತಾನಂಗಭಂಗಂ
ಸುಗಂಗಾತರಂಗೈಃ ಪಿಶಂಗಂ ಜಟಾಂತೇ ।
ಸುಚಂದ್ರಾರ್ಧಮೌಲಿಂ ಮಹಾಶಾಂಗಸಂಗಂ
ಮಹಾಲಿಂಗಮೋಂಕಾರಮೀಶಂ ಪ್ರಪನ್ನಾಃ ॥೨೨॥

ವಿನಾಯಕಸುಚಾರುಸುಪೂಜಿತಪದಂ ಚಾರುಮುಕ್ತಿಪ್ರದಂ
ವಿನಾಯಕಗುರುಂ ವಿಬುಧಮಾನಸಾಂತರ್ಗತಂ ।
ವಿಶೋಷಿತಮಹಾಂಬುಧಿಪ್ರಣತಮೀಶಮಾಶಾಮುಖಂ
ನತಾಃಸ್ಮಃ ಶಿವಮೋಂಕೃತಿಂ ಪ್ರಣವಲಿಂಗಸಂಸ್ಥಂ ಶಿವಂ ॥೨೩॥

ಇತ್ಥಂ ಸಂಸ್ತುತವತಾಂ ತೇಷಾಂ ಶಕ್ರಾದೀನಾಂ ಮಹೇಶ್ವರಃ ।
ಓಂಕಾರಮೂಲಲಿಂಗಾತ್ಸ ಪ್ರಾದುರಾಸಿತ್ಕೃಪಾನಿಧಿಃ ॥೨೪॥

---

ಆಗ ಇಂದ್ರಾದಿದೇವತೆಗಳೂ ಮತ್ತು ಅಪ್ಸರೆಯರೂ ಈರೀತಿ ಮಹೇಶ್ವರನನ್ನು ಸ್ತೋತ್ರಮಾಡಿದರು.

"ಅತಿಶಯ ಪುಣ್ಯಸಂಬಂಧವುಳ್ಳವನೂ, ಅನಂಗನೆನಿಸಿದ ಮನ್ಮಥನನ್ನು ಧ್ವಂಸಮಾಡಿದವನೂ, ಉತ್ತಮವಾದ ದೇವಗಂಗೆಯನ್ನು ತಲೆಯಲ್ಲಿ ಧರಿಸಿ, ಅದರ ಅಲೆಗಳಿಂದ ಜಡೆಗಳ ಕೊನೆಯಲ್ಲಿ ಹೊಂಬಣ್ಣವನ್ನು ಹೊಂದಿರುವವನೂ, ಅರ್ಧಚಂದ್ರನನ್ನೇ ತನ್ನ ತಲೆಯಲ್ಲಿ ಧಾರಣೆಮಾಡಿರುವವನೂ, ಮಹಾಮಹಿಮನೂ ಆದ ಆ ಶಂಗನ (ಸುಖಸ್ವರೂಪನಾದ ಶಿವನ) ಸಂಬಂಧವುಳ್ಳದದ್ದೂ, ಆದ ಓಂಕಾರವೆಂಬ ಹೆಸರುಳ್ಳ ಈಶ್ವರನ ಮಹಾಲಿಂಗವನ್ನು ಈಗ ಮೊರೆಹೊಕ್ಕಿರುವೆವು. ॥೨೨॥

ವಿಘ್ನರಾಜನಿಂದ ಮನೋಹರವಾಗಿ ಪೂಜಿಸಲ್ಪಟ್ಟಿರುವ ಪಾದಗಳುಳ್ಳವನೂ, ಶ್ರೇಷ್ಠವಾದ ಮುಕ್ತಿಯನ್ನು ಕರುಣಿಸುವವನೂ, ವಿನಾಯಕನ ತಂದೆಯೂ, ಸಕಲ ದೇವತೆಗಳ ಮನಸ್ಸಿನಲ್ಲಿಯೂ ಅಡಗಿರುವವನೂ, ಮಹಾಸಮುದ್ರಗಳನ್ನೇ ತನ್ನ ಸಾಮರ್ಥ್ಯದಿಂದ ಒಣಗಿಸಿದ ಅಗಸ್ತ್ಯನಿಂದ ಸ್ತುತ್ಯನೂ, ಸಕಲ ದಿಕ್ಕುಗಳೇ ತನ್ನ ಮುಖವಾಗುಳ್ಳವನೂ, ಓಂಕಾರಲಿಂಗದಲ್ಲಿ ಅಡಗಿರುವವನೂ ಆದ ಓಂಕಾರ ಸ್ವರೂಪನಾದ ಶಿವನಿಗೆ ನಾವು ನಮಸ್ಕರಿಸುವೆವು." ॥೨೩॥

ಹೀಗೆ ತನ್ನನ್ನು [illegible]ದೈನ್ಯದಿಂದ ಸ್ತೋತ್ರಮಾಡುತ್ತಿರುವ ದೇವೇಂದ್ರಾದಿಗಳ ಎದುರಿನಲ್ಲಿ ದಯಾಸಮುದ್ರನಾದ ಆ ಮಹೇಶ್ವರನು ಓಂಕಾರಸ್ವರೂಪವಾದ ಮೂಲ ಲಿಂಗದ ಒಳಭಾಗದಿಂದ ಪ್ರತ್ಯಕ್ಷನಾದನು. ॥೨೪॥

ಅನಂತಸೋಮಸೂರ್ಯಾಗ್ನಿವಿದ್ಯುತ್ಸದೃಶವಿಗ್ರಹಃ ।
ಪಿಶಂಗಿತಜಟಾಜೂಟತಟಿಬದ್ಧಾರ್ಧಚಂದ್ರಕಃ ॥೨೫॥

ಉಮಾವಾಮಾರ್ಧಸಂರಾಜದ್ಭೋಗಿಭೋಗವಿಭೂಷಣಃ ।
ತ್ರಿಶೂಲೋದ್ಯತ್ಕರೋಲ್ಲಗ್ನಡಮರುಧ್ವನಿಡಂಬರಃ ॥೨೬॥

ಚಂಡತಾಂಡವಸನ್ನಾಹಪಿಂಡಿತಾಖಿಲಭೂತಲಃ ।
ಭಸ್ಮೋದ್ಧೂಲಿತಸರ್ವಾಂಗಸ್ತ್ರಿಪುಂಡ್ರೋಜ್ಜ್ವಲಫಾಲಕಃ ॥೨೭॥

ದೇವಾನ್ಸಂಹ್ಲಾದಯನ್ದೇವಃ ಶಂಕರಶ್ಚಂದ್ರಶೇಖರಃ ।
ಘನಗಂಭೀರಘೋಷೇಣ ವಾಚಮೂಚೇಽಮರಾನ್ಪ್ರತಿ ॥೨೮॥

ಆ ಸಮಯದಲ್ಲಿ ಮಹೇಶ್ವರನು ಅನೇಕ ಚಂದ್ರಸೂರ್ಯಾಗ್ನಿಗಳ ಕಾಂತಿಗೆ ಸಮಾನವಾದ ದಿವ್ಯತೇಜಸ್ಸಿನಿಂದೊಪ್ಪುವ ಶರೀರವುಳ್ಳವನಾಗಿ, ಹೊಂಬಣ್ಣವಾಗಿರುವ ತನ್ನ ಜಡೆಗಳ ಸಮೂಹದಿಂದಲೂ, ಜಟೆಯ ತುದಿಯಲ್ಲಿ ಕಟ್ಟಿರುವ ಅರ್ಧಚಂದ್ರನಿಂದಲೂ ಶೋಭಿಸುತ್ತಿದ್ದನು. ॥೨೫॥

ತನ್ನ ಎಡಪಾರ್ಶ್ವದಲ್ಲಿ ಉಮಾದೇವಿಯ ಶರೀರವನ್ನು ಧರಿಸಿ, ಅರ್ಧನಾರೀಶ್ವರನೆಂದು ಪ್ರಕಾಶಿಸುತ್ತಾ, ಆದಿಶೇಷನ ಶರೀರವೆಂಬ ಆಭರಣದಿಂದಲಂಕೃತನಾಗಿ ತನ್ನ ಕೈಯಲ್ಲಿ ತ್ರಿಶೂಲವನ್ನೂ ಡಮರುಗವನ್ನೂ ಧರಿಸಿ ಅದರ ಧ್ವನಿಯಿಂದ ದಿಕ್ಕುಗಳನ್ನು ಮೊಳಗಿಸುತ್ತಿದ್ದನು. ॥೨೬॥

ಪ್ರಚಂಡ ತಾಂಡವನೃತ್ಯದ ಸನ್ನಾಹದಿಂದ ಸಕಲ ಭೂಮಂಡಲವನ್ನೂ ಪಿಂಡಾಕಾರವಾಗಿ ಮಾಡುತ್ತಿದ್ದನು. ಅಲ್ಲದೇ ತನ್ನ ಸರ್ವಾವಯವದಲ್ಲಿಯೂ ಭಸ್ಮವನ್ನು ಬಳಿದುಕೊಂಡು ಭಸ್ಮತ್ರಿಪುಂಡ್ರದಿಂದ ಶೋಭಿಸುತ್ತಿದ್ದ ಹಣೆಯಿಂದ ಹೊಳೆಯುತ್ತಿದ್ದನು. ॥೨೭॥

ಈರೀತಿಯಾಗಿ ಚಂದ್ರಶೇಖರನಾದ ಆ ಶಂಕರನು ದೇವತೆಗಳನ್ನು ಸಂತೋಷಪಡಿಸುತ್ತಾ ಮೇಘದಂತೆ ಗಂಭೀರವಾದ ಧ್ವನಿಯಿಂದ ಆ ದೇವತೆಗಳನ್ನು ಕುರಿತು ಕೆಲವು ಮಾತುಗಳನ್ನಾಡಿದನು. ॥೨೮॥

|| ಈಶ್ವರ ಉವಾಚ ||

ಲಿಂಗಮೇತತ್ಸುರಶ್ರೇಷ್ಠ ಮುಕ್ತಿದಂ ದರ್ಶನಾತ್ಸದಾ ।
ಬ್ರಹ್ಮವಿಷ್ಣ್ವಾದಿವಿಬುಧೈಃ ಪೂಜಿತಂ ಸರ್ವಕಾಮದಂ ||೨೯||

ಅಸ್ಯ ಲಿಂಗಸ್ಯ ಮಹಿಮಾ ವೇದೈರ್ನಜ್ಞಾತ ಏವ ಹಿ ।
ಕೃತಾದಿಷು ಪರಂ ಲಿಂಗಮೋಂಕಾರಪ್ರಭವಂ ಸುರಾಃ ||೩೦||

ಲಿಂಗೇತ್ವಂತರ್ಗತಾ ವೇದಾಃ ಸಾಂಗೋಪನಿಷದಾ ಸಹ ।
ಓಂಕಾರಪ್ಲುತಿರೇವಾತ್ರ ದೃಶ್ಯತೇ ನ ತಥಾ ಶ್ರುತಿಃ ||೩೧||

ಅತ್ರೇತಿಹಾಸಂ ವಕ್ಷ್ಯಾಮಿ ಶೃಣ್ವಂತು ಸುರಸತ್ತಮಾಃ ।
ಪುರಾ ಕೃತಯುಗೇ ದೇವಾ ದೈತ್ಯಾ ವಿಗ್ರಹಮಾಶ್ರಿತಾಃ ||೩೨||

ಸ್ವಾಹಾಸ್ವಧಾ ವಷಟ್ಕಾರತರ್ಪಿತಾಃ ಪಿತರಃ ಸುರಾಃ ।
ನಿಜಘ್ನುರಸುರಾನೀಕಂ ಸಂತಪ್ತಶರವೃಷ್ಟಿಭಿಃ ||೩೩||

---

“ ಎಲೈ ದೇವತೋತ್ತಮನಾದ ಇಂದ್ರನೇ, ಈ ಲಿಂಗವು ದರ್ಶನಮಾತ್ರದಿಂದಲೇ ಶಾಶ್ವತವಾದ ಮುಕ್ತಿಯನ್ನು ಕೊಡಬಲ್ಲದು. ಸಕಲೇಷ್ಟಾರ್ಥಗಳನ್ನೂ ಕೊಡುವ ಈ ಲಿಂಗವನ್ನು ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೂ ಸಹ ಪೂಜೆಮಾಡಿರುವರು. ||೨೯||

ಓ ದೇವತೆಗಳಿರಾ, ಈ ಲಿಂಗದ ಮಹಿಮೆಯು ವೇದಗಳಿಗೇ ಸರಿಯಾಗಿ ಗೊತ್ತಿಲ್ಲ. ಕೃತತ್ರೇತಾದಿಯುಗಗಳಲ್ಲಿಯೂ ಓಂಕಾರದಿಂದ ಜನಿಸಿದ ಈ ಲಿಂಗವು ಸರ್ವಶ್ರೇಷ್ಠವೇ ಆಗಿರುವುದು. ||೩೦||

ಸಕಲ ವೇದಗಳೂ ಅಂಗೋಪಾಂಗಸಹಿತವಾದ ಉಪನಿಷತ್ತುಗಳೊಡನೆ ಈ ಲಿಂಗದಲ್ಲಿ ಅಂತರ್ಗತವಾಗಿರುವುವು. ಈಗ ಈ ಲಿಂಗದಲ್ಲಿ ಕೇವಲ ಓಂಕಾರದ ಪ್ಲುತಿಯೇ ಕಾಣುತ್ತಿರುವುದೇ ಹೊರತು ವೇದಗಳು ಗೋಚರಿಸುತ್ತಿಲ್ಲ. ||೩೧||

ಈ ಓಂಕಾರಲಿಂಗದ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳುವೆನು ಕೇಳಿರಿ. ಹಿಂದೆ ಕೃತಯುಗದಲ್ಲಿ ದೇವತೆಗಳೂ ಮತ್ತು ದೈತ್ಯರೂ ಸಹ ಪರಸ್ಪರ ಜಗಳವಾಡುತ್ತಿದ್ದರು. ||೩೨||

ಸ್ವಾಹಾಕಾರ ಮತ್ತು ಸ್ವಧಾಕಾರರೂಪವಾದ ಯಜ್ಞಾಹುತಿಗಳಿಂದ ತೃಪ್ತರಾದ

ದೇವೈಃ ಸಂಪೀಡಿತಾ ದೈತ್ಯಾಃ ಶಂಖಾದ್ಯಾಃ ಸುಮಹಾಬಲಾಃ ।
ಶುಕ್ರಂ ಸಂಮಾನ್ಯ ಸಂಮಂತ್ರ್ಯ ಪೌರೋಹಿತ್ಯೇ ವ್ಯವಸ್ಥಿತಂ ॥೩೪॥

ತಂ ಪ್ರಣಮ್ಯಾಥ ತೇ ಸರ್ವೇ ಸಂಖ್ಯಾದ್ಯಾ ದಿತಿಜೋತ್ತಮಾಃ ।
ವಿನಯಾವನತಾ ಭೂತ್ವಾ ತಮಾಹುರ್ದ್ವಿಜಸತ್ತಮಂ ॥೩೫॥

॥ ದೈತ್ಯಾ ಊಚುಃ ॥

ಸಂಗ್ರಾಮೇ ವಿಮುಖಾ ದೇವಾಃ ಪುನರಾಪ್ಯಾಯಿತಾ ದ್ವಿಜೈಃ ।
ಸ್ವಾಹಾ ಸ್ವಧಾವಷಟ್ಕಾರೈಃ ಸೋಮಾಜ್ಯಹವಿಷಾ ಸುರಾಃ ॥೩೬॥

ಓ ಮಾದ್ಯಂತಿ ಪ್ರಹೃಷ್ಯಂತಿ ಘ್ನಂತ್ಯಸ್ಮಾನ್ಸಪರೇವ ಹಿ ।
ಉಪಾಯಂ ಸಂವದಾಸ್ಮಾಕಂ ವಿಜಯಾಯಾದ್ಯ ಭಾರ್ಗವ ॥೩೭॥

ದೇವತೆಗಳೂ ಮತ್ತು ಪಿತೃಗಳೂ ರಾಕ್ಷಸರ ಸಮೂಹವನ್ನು ಚೆನ್ನಾಗಿ ಕಾದ ಬಾಣಗಳ ಪರಂಪರೆಯಿಂದ ಕೊಲ್ಲುತ್ತಿದ್ದರು. ॥೩೩॥

ಹೀಗೆ ದೇವತೆಗಳಿಂದ ಚೆನ್ನಾಗಿ ಹಿಂಸಿಸಲ್ಪಟ್ಟ ಮಹಾ ಬಲಶಾಲಿಗಳಾದ ಶಂಖನೇ ಮೊದಲಾದ ದೈತ್ಯರು ತಮ್ಮ ಕುಲದ ಪುರೋಹಿತವೃತ್ತಿಯಲ್ಲಿ ನಿಯುಕ್ತ ರಾಗಿರುವ ಶುಕ್ರಾಚಾರ್ಯರನ್ನು ಗೌರವಿಸಿ, ಅವರೊಡನೆ ಈ ವಿಷಯವನ್ನು ಆಲೋ ಚಿಸುವುದಕ್ಕೋಸ್ಕರ ಆಹ್ವಾನಿಸಿದರು. ಹಾಗೆಯೇ ಆ ಬ್ರಾಹ್ಮಣೋತ್ತಮನಿಗೆ ವಿನಯ ದಿಂದ ತಲೆಬಾಗಿ ನಮಸ್ಕಾರಮಾಡಿ, ಆ ಶಂಖನೇ ಮೊದಲಾದ ದೈತ್ಯಶ್ರೇಷ್ಠರು ಶುಕ್ರಾಚಾರ್ಯರೊಡನೆ ಹೀಗೆ ಹೇಳಿಕೊಂಡರು. ॥೩೪-೩೫॥

ಗುರುವೇ, ಮೊದಲು ಯುದ್ಧದಲ್ಲಿ ನಮ್ಮಿಂದ ಸೋತು ಹಿಮ್ಮೆಟ್ಟಿದ ದೇವತೆಗಳು, ಪುನಃ ಯಾಜಕರು ತಮಗೆ ಕೊಡುವ ಸ್ವಾಹಾಕಾರ, ಸ್ವಧಾಕಾರ ಮತ್ತು ವಷಟ್ಕಾರರೂಪವಾದ ಹವಿರ್ಭಾಗಗಳಿಂದಲೂ ಮತ್ತು ಸೋಮರಸ, ತುಪ್ಪ ಮುಂತಾದ ಹವಿಸ್ಸುಗಳಿಂದಲೂ ಮತ್ತರಾಗಿ, ಸಂತೋಷದಿಂದ ಕುಣಿಯುತ್ತಾ, ಓಂಕಾರವನ್ನು ಪಠಿಸುತ್ತಾ ಪುನಃ ನಮ್ಮ ಮೇಲೆ ಯುದ್ಧಕ್ಕೆ ಬಂದು ನಮ್ಮನ್ನು ಕೊಲ್ಲುತ್ತಿರುವರು. ಭೃಗುವಂಶಶ್ರೇಷ್ಠನಾದ ಎಲೈ ಆಚಾರ್ಯನೇ, ಆದುದರಿಂದ ನಮಗೆ ವಿಜಯವುಂಟಾಗುವರೀತಿಯನ್ನೂ ಅದರ ಉಪಾಯವನ್ನೂ ತಿಳಿಸಬೇಕು ಎಂದು ದೈತ್ಯರು ಪ್ರಾರ್ಥಿಸಿದರು. ॥೩೬-೩೭॥

ಇತಿ ಶಂಖಮುಖೋದ್ಗೀತಂ ವಾಕ್ಯಂ ಶ್ರುತ್ವಾ ಸ ಭಾರ್ಗವಃ ।
ವಿಚಾರ್ಯ ತಪಸಾ ದೈತ್ಯಾನಿದಮಾಹ ಪ್ರಹರ್ಷಯನ್ ॥೩೮॥

॥ ಶುಕ್ರ ಉವಾಚ ॥

ದೇವಾಶ್ಚ ಬಲಿನೋ ಯೇನ ಯೂಯಂ ಹೀನಪರಾಕ್ರಮಾಃ ।
ದೇವಾನಾಪ್ಯಾಯಯಂತ್ಯೇತೇ ಕ್ರತುಭಿರ್ಮುನಯಃ ಸುಖಂ ॥೩೯॥

ಸ್ವಾಹಾಸ್ವಧಾವಷಟ್ಕಾರೈಸ್ತೇಽಪಿ ವೇದೇಷು ಸಂಸ್ಥಿತಾಃ ।
ವೇದಾನ್ಪ್ರಸಹ್ಯ ಹರಂತ ಅರ್ಣವಾಂತರ್ಜಲೇಶಯಾಃ ॥೪೦॥

ವೇದೇಷ್ವೇಷು ವಿನಷ್ಟೇಷು ವಿನಷ್ಟಾಃ ಸುರಸತ್ತಮಾಃ ।
ಯಜ್ಞಭಾಗವಿಹೀನಾಶ್ಚ ನಿಃಸ್ವಾಧ್ಯಾಯವಷಟ್ಕೃತಾಃ ॥೪೧॥

ಯಜ್ಞಹೀನಂ ಜಗತ್ಸರ್ವಂ ನಿರಣ್ಯೌಷಧಿವರ್ಜಿತಂ ।
ಹೀನಾನ್ನಾ ಬ್ರಾಹ್ಮಣಾ ಗಾವೋ ನಶ್ಯಂತೇ ವೃಷ್ಟಿವರ್ಜಿತಾಃ ॥೪೨॥

ಹೀಗೆ ಶಂಖನ ಮುಖದಿಂದ ಬಂದ ಮಾತುಗಳನ್ನು ಕೇಳಿ ಶುಕ್ರಾಚಾರ್ಯನು ಸ್ವಲ್ಪಹೊತ್ತು ತನ್ನ ತಪಃಶಕ್ತಿಯಿಂದ ಆಲೋಚಿಸಿ, ಅನಂತರ ಆ ದೈತ್ಯರನ್ನೆಲ್ಲಾ ಸಂತೋಷಪಡಿಸುತ್ತಾ ಹೀಗೆಂದನು. ॥೩೮॥

ಯಾಗಾದಿಗಳ ಹವಿರ್ಭಾಗಗಳಿಂದ ದೇವತೆಗಳು ಬಲಶಾಲಿಗಳಾಗಿಯೂ, ಅದಿಲ್ಲದೆ ನೀವು ಬಲಹೀನರಾಗಿಯೂ ಆಗಿದ್ದೀರಿ. ಮುನಿಗಳು ಯಾಗಗಳನ್ನುಮಾಡಿ, ಸ್ವಾಹಾ, ಸ್ವಧಾ ಮತ್ತು ವಷಟ್ಕಾರರೂಪವಾದ ಆಜ್ಯಾಹುತಿಗಳನ್ನು ಕೊಡುತ್ತಾ ದೇವತೆಗಳಿಗೆ ಸುಖವಾಗುವಂತೆ ಆಚರಿಸುತ್ತಿರುವರು. ಸ್ವಾಹಾ, ಸ್ವಧಾ, ವಷಟ್ಕಾರಗಳು ಆ ವೇದಗಳಲ್ಲಿ ಪಠಿತವಾಗಿವೆ. (ಅಡಕವಾಗಿವೆ) ಆದುದರಿಂದ ನೀವು ಬಲಾತ್ಕಾರದಿಂದ ಆ ವೇದಗಳನ್ನು ಅಪಹರಿಸಿ, ಸಾಗರದ ಮಧ್ಯದಲ್ಲಿರುವ ನೀರಿನಲ್ಲಿ ಮುಳುಗಿಸಿರಿ. ॥೩೯-೪೦॥

ವೇದಗಳೆಲ್ಲಾ ಆ ರೀತಿ ನಿಮ್ಮಿಂದ ಅಪಹರಿಸಲ್ಪಟ್ಟು ನಷ್ಟವಾದಮೇಲೆ ಈ ದೇವತೆಗಳೆಲ್ಲರೂ ಯಜ್ಞಭಾಗಗಳಿಲ್ಲದೆ, ವೇದಾಧ್ಯಯನ ಮತ್ತು ವಷಟ್ಕಾರ ಪೂರ್ವಕವಾದ ಆಹುತಿಗಳನ್ನು ಹೊಂದದೆ, ನಷ್ಟವೀರ್ಯವುಳ್ಳವರಾಗಿ ದುರ್ಬಲರಾಗುವರು. ॥೪೧॥

ತೇಷು ಸರ್ವೇಷು ನಿರ್ಯಜ್ಞಾಃ ವಿನಶ್ಯಂತ್ಯಸುರಾಃ ಸುರಾಃ ।
ಭವತಾಂ ವಶಗಂ ಭೂಯಾತ್ತ್ರೈಲೋಕ್ಯಂ ಸ ಚರಾಚರಂ ॥೪೩॥

ಇತಿ ಶ್ರುತ್ವಾ ಕವೇರ್ವಾಕ್ಯಂ ಶಂಖಾಸುರಮುಖಾಸುರಾಃ ।
ಬ್ರಹ್ಮಲೋಕಂ ತದಾ ಗತ್ವಾ ಮೂರ್ತೀಭೂತಾಂ ತಥಾ ಶ್ರುತಿಂ ॥೪೪॥

ಬ್ರಹ್ಮಪಾರಿಷದಾನ್ಹತ್ವಾ ಜಹಾರಾಮರಸೂದನಃ ।
ವೇದಾಃ ಸಾಂಗೋಪನಿಷದಃ ಪುರಾಣಾಗಮಸಂಯುತಾನ್ ॥೪೫॥

ಸಂಹೃತ್ಯ ವೇದಮಖಿಲಮರ್ಣವಂ ಪ್ರವಿವೇಶ ಹ ।
ನಷ್ಟವೇದಸ್ತಥಾ ಲೋಕೋ ನಿಃಸ್ವಾಧ್ಯಾಯವಷಟ್ಕೃತಃ ॥೪೬॥

ಆಗ ಈ ಪ್ರಪಂಚವೆಲ್ಲವೂ ಯಜ್ಞಯಾಗಾದಿಗಳಿಲ್ಲದೇ ಹೋಗುವುದರಿಂದ, ದೇವತೆಗಳಿಗೆ ನಿಮ್ಮ ಮೇಲಿನ ಯುದ್ಧದಲ್ಲಿ ಔಷಧದಂತೆ ದೊರೆಯುವ ಹವಿರ್ಭಾಗಗಳೆಲ್ಲಾ ತಪ್ಪಿಹೋಗುವುವು. ಬ್ರಾಹ್ಮಣರು ಹೀನವಾದ ಅನ್ನವನ್ನು ಊಟ ಮಾಡುವವರಾಗುವರು. ಮಳೆಯಿಲ್ಲದೇ ದೇಶದಲ್ಲಿ ಹುಲ್ಲು ನೀರುಗಳಿಗೆ ತೊಂದರೆಯಾಗುವುದರಿಂದ ಗೋವುಗಳೂ ನಾಶವಾಗುವುವು. ॥೪೨॥

ಆಗ ದೇವತೆಗಳೆಲ್ಲರೂ ಯಜ್ಞವಿಲ್ಲದೇ ನಾಶಹೊಂದುವರು. ಎಲೈ ರಾಕ್ಷಸರಿರಾ! ಆಗ ಸ್ಥಾವರಜಂಗಮಾತ್ಮಕವಾದ ಈ ಮೂರು ಲೋಕವೆಲ್ಲವೂ ನಿಮ್ಮ ಅಧೀನವಾಗುವುದು ಎಂದು ಶುಕ್ರಾಚಾರ್ಯನು ದೈತ್ಯರಿಗೆ ಹೇಳಿದನು. ॥೪೩॥

ಹೀಗೆ ತಮಗೆ ಉಪಾಯವನ್ನು ಹೇಳಿದ ಶುಕ್ರಾಚಾರ್ಯರ ಮಾತನ್ನು ಕೇಳಿ, ಶಂಖನೇ ಮೊದಲಾದ ರಾಕ್ಷಸರು ಕೂಡಲೇ ಬ್ರಹ್ಮಲೋಕಕ್ಕೆ ಹೋಗಿ, ಅಲ್ಲಿದ್ದ ಬ್ರಹ್ಮನ ಪರಿವಾರದವರನ್ನೆಲ್ಲಾ ಕೊಂದರು. ಅನಂತರ ದೇವತೆಗಳ ಶತ್ರುವಾದ ಆ ಶಂಖಾಸುರನು ಅಲ್ಲಿ ಆಕಾರವನ್ನು ಧರಿಸಿದ್ದ ವೇದಪುರುಷನನ್ನು ಅಪಹರಿಸಿದನು. ಸಕಲ ವೇದಗಳು, ಅಂಗೋಪಾಂಗಸಹಿತವಾದ ಉಪನಿಷತ್ತುಗಳು, ಪುರಾಣ ಮತ್ತು ಆಗಮ ಇವುಗಳಿಂದ ಯುಕ್ತವಾದ ಶ್ರುತಿಯನ್ನೆಲ್ಲಾ ತೆಗೆದುಕೊಂಡು, ಎಲ್ಲವನ್ನೂ ಸಮುದ್ರದ ಒಳಗೆ ಬಚ್ಚಿಟ್ಟನು. ॥೪೪-೪೫॥

ಹೀಗೆ ವೇದವು ನಷ್ಟವಾಗಲು, ಎಲ್ಲಿಯೂ ವೇದಾಧ್ಯಯನವಿಲ್ಲದೇ ವಷಟ್ಕಾರಾದಿ ಯಜ್ಞಾಹುತಿಗಳು ನಿಂತುಹೋದವು. ಆಗ ಇಂದ್ರಾದಿ ದೇವತೆಗಳೆಲ್ಲರೂ ಅತ್ಯಂತ ದುಃಖವನ್ನು ಹೊಂದಿ ಕಾಂತಿಗುಂದಿದ ಮುಖವುಳ್ಳವರಾದರು.

ಶಕ್ರಾದ್ಯಾಃ ಖೇದಮಾಪನ್ನಾ ವಿವರ್ಣವದನಾಸ್ತದಾ ।
ಕೃಶಾನುರೇತನಿರ್ಧೂಮೋ ಧಾಮಹೀನೋಽತಿದೀನವಾಕ್ ॥೪೭॥

ವಾಯುರಾಯುರ್ವಿಹೀನಶ್ಚ ಚಲಿತುಂ ಚಾಪಿ ನ ಕ್ಷಮಃ ।
ರುಗ್ಣಃ ಸವರುಣೋ ಭೀತ್ಯಾ ವಜ್ರೀ ಜೀವಿತವರ್ಜಿತಃ ॥೪೮॥

ಕುಬೇರಃ ಕೃತಬೇರಶ್ಚ ಶಂಕಾತಂಕಾನ್ವಿತೋಽಂತಕಃ ।
ಮುನಯಃ ಕ್ಷುತ್ಪ್ರತಾನ್ವಿಷ್ಟಾಸ್ತ್ಯಕ್ತಾಚಾರಾ ಯಥಾತಥಂ ॥೪೯॥

ಇತ್ಯೇವಂ ವಿದ್ರುತೇ ಲೋಕೇ ಯಜ್ಞೋತ್ಸವವಿವರ್ಜಿತೇ ।
ದೇವಾಸ್ತೇ ನರ್ಮದಾಮೇತ್ಯ ಸ್ನಾತ್ವಾ ಭಸ್ಮವಿಭೂಷಿತಾಃ ॥೫೦॥

ರುದ್ರಾಕ್ಷಮಾಲಾಭರಣಾ ರುದ್ರಸೂಕ್ತಜಪಾದರಾಃ ।
ಕಾಕೋದರಮಹಾಹಾರಂ ಸದಾರಾಃ ಸುರಸತ್ತಮಾಃ ॥೫೧॥

ಶರಣಂ ತೇ ಯಯುಃ ಸರ್ವೇ ವಶೀಕೃತಗಣೇಂದ್ರಿಯಾಃ ॥೫೨॥

ಅಗ್ನಿಯು ಹೊಗೆಯಾಡದಂತಾಯಿತು. ಅಗ್ನಿಗೆ ತೇಜಸ್ಸೇ ಇಲ್ಲದೆ ಅತಿ ದೀನವಾದ ನುಡಿಗಳುಳ್ಳವನಾದನು. ॥೪೬-೪೭॥

ವಾಯುವಿಗೆ ಆಯುಸ್ಸೇ ಹೀನವಾಯಿತು. ಅದರಿಂದ ಅವನು ಸಂಚಾರ ಮಾಡುವುದಕ್ಕೇ ಸಾಮರ್ಥ್ಯವಿಲ್ಲದಂತಾದನು. ವರುಣನಾದರೋ ರೋಗಿಯಾದನು. ವೃತ್ರರ ಭಯದಿಂದ ವಜ್ರಾಯುಧಪಾಣಿಯಾದ ದೇವೇಂದ್ರನಾದರೋ ಪ್ರಾಣವೇ ಇಲ್ಲದ ಮೃತಶರೀರದಂತಾದನು. ॥೪೮॥

ಕುಬೇರನ ಶರೀರವು ಯೋಚನೆಯಿಂದ ಕೃಶವಾಯಿತು. ಯಮನು ಸಂದೇಹಕ್ಕೊಳಗಾದನು. ಮುನಿಗಳಾದರೋ ಹಸಿವಿನ ಬಾಧೆಗಳಿಗೀಡಾಗಿ ತಮ್ಮ ಆಚಾರವ್ಯವಹಾರಗಳನ್ನು ತೊರೆದರು. ॥೪೯॥

ಹೀಗೆ ಯಜ್ಞಯಾಗಾದಿಗಳ ಸಂರಂಭವಿಲ್ಲದೇ ಲೋಕವೆಲ್ಲವೂ ಹಾಹಾಕಾರಕ್ಕೊಳಗಾಗಲು, ಆಗ ದೇವತೆಗಳು ಈ ನರ್ಮದಾನದಿಗೆ ಬಂದು ಸ್ನಾನಮಾಡಿ, ಭಸ್ಮವನ್ನು ಧಾರಣಮಾಡಿಕೊಂಡು, ರುದ್ರಾಕ್ಷಮಾಲೆಗಳನ್ನು ಅಲಂಕರಿಸಿಕೊಂಡು,

ಸುಧಾಮಪಿ ಬುಧಾ ಮುದಾ ಪಿತೃಗಣಾಃ ಸ್ವಧಾಮಪ್ಯಹೋ
ವಿನಿಂದ್ಯ ಜನಿನಾಶದಾನ್ವಿವಿಧಕಷ್ಟಧರ್ಮಾಧಮಾನ್ ।
ಭಜಂತಿ ಶಿವತತ್ಪರಾ ಹರಿಣಪೋತಗರ್ಭಾರ್ಧಕೆ
ಸ್ಫುರತ್ಸುರಸರಿಜ್ಜಟಂ ನಿಟಿಲಲೋಚನಂ ಶಂಕರಂ ॥೫೩॥

ಮಹೇಶ್ವರಮುಮಾಸಖಂ ಸತತಮಂದಹಾಸೋನ್ಮುಖಂ
ಚಿದಾದಿಮುಭವತ್ಸುಖಂ ಮಧುಹರಾಗ್ನಿಬಾಣೋನ್ಮುಖಂ ।
ಅನಂಗಪುರಭೇದನಂ ಕ್ಷಪಿತದಕ್ಷಕಾಲೋನ್ಮುಖಂ
ಸುಶಂಖಪರಿಪೀಡಿತಾ ಸುರಗಣಾಸ್ತೇ ಯಯುಃ ಸುಖಂ ॥೫೪॥

ರುದ್ರಸೂಕ್ತಮಂತ್ರ ಜಪದಲ್ಲಿ ಆಸಕ್ತರಾದರು. ಆ ದೇವತೋತ್ತಮರೆಲ್ಲರೂ ತಮ್ಮ ಭಾರ್ಯೆಯರೊಡನೆ ಜಿತೇಂದ್ರಿಯರಾಗಿ, ಸರ್ಪಹಾರನಾದ ಆ ಮಹಾದೇವನನ್ನು ಮೊರೆಹೊಕ್ಕರು. ॥೫೦-೫೧-೫೨॥

ದೇವತೆಗಳು ಅಮೃತವನ್ನೂ, ಪಿತೃಗಣಗಳು ಸ್ವಧೆಯನ್ನೂ ನಿಂದಿಸಿ, ಈಗ ಆ ರಾಕ್ಷಸರ ಹಾವಳಿಯಿಂದ ಜನನಮರಣಕ್ಕೆ ಕಾರಣವಾದ ಅನೇಕ ಅಧರ್ಮಗಳಿಗೆ ಒಳಗಾಗಿ, ಜಿಂಕೆಯ ಮರಿಯನ್ನು ತನ್ನ ಗರ್ಭದಲ್ಲಿ ಧರಿಸಿರುವ ಚಂದ್ರನನ್ನೂ, ಪ್ರಕಾಶಮಾನಳಾದ ದೇವಗಂಗೆಯನ್ನೂ ತನ್ನ ಜಟೆಯಲ್ಲಿ ಧಾರಣೆ ಮಾಡಿ, ಹಣೆಯಲ್ಲಿ ಕಣ್ಣುಳ್ಳ ಆ ಶಂಕರನನ್ನು ಸ್ತೋತ್ರಮಾಡಲು ಪ್ರಾರಂಭಿಸಿದರು. ॥೫೩॥

ಉಮಾರಮಣನೂ, ಯಾವಾಗಲೂ ಮಂದಹಾಸವನ್ನು ಬೀರುತ್ತಿರುವ ಮುಖದಿಂದ ಕೂಡಿರುವನೂ, ಸಚ್ಚಿದಾನಂದಸ್ವರೂಪನೆನಿಸಿ ಪ್ರಾಣಿಗಳಿಗೆಲ್ಲಾ ಸುಖ ಸ್ವರೂಪನಾಗಿ ತೋರುತ್ತಿರುವವನೂ, ವಿಷ್ಣು, ಅಗ್ನಿ ಇವರುಗಳನ್ನೇ ಬಾಣವಾಗಿ ಮಾಡಿಕೊಂಡಿದ್ದವನೂ, ಮನ್ಮಥ ಮತ್ತು ತ್ರಿಪುರಾಸುರ ಇವರುಗಳನ್ನು ಧ್ವಂಸ ಮಾಡಿದವನೂ, ದೃಪ್ತರಾಗಿದ್ದ ದಕ್ಷಬ್ರಹ್ಮ ಮತ್ತು ಯಮ ಇವರ ಗರ್ವವನ್ನು ಹೋಗಲಾಡಿಸಿದವನೂ ಆದ ಆ ಮಹೇಶ್ವರನನ್ನು ಪ್ರಸಿದ್ಧನಾದ ಆ ಶಂಖದೈತ್ಯನಿಂದ ಪೀಡಿಸಲ್ಪಟ್ಟ ದೇವತೆಗಳ ಗಣವು ಭಕ್ತಿಯಿಂದ ಸ್ತೋತ್ರಮಾಡುತ್ತಾ ಮೊರೆ ಹೊಕ್ಕಿತು. ॥೫೪॥

ದೃಷ್ಟ್ವಾ ಲಿಂಗಮಹೋಂಕೃತೀಶ್ವರಸುಧಾಕರ್ಪೂರಖಂಡದ್ರವಾ
ಪಾರಾವಾರನಿದಾನಸಾರಸುಭಗಂ ದೇವಾಃ ಸಮಭ್ಯರ್ಚ್ಯ ಚ ।
ಫುಲ್ಲೈಃ ಪುಷ್ಪಮರಂದಸೌರಭಗಣೈರ್ನೈವೇದ್ಯಧೂಪಾದಿಭಿಃ
ವಾದ್ಯೈಶ್ಚಂದನನಂದನೈಃ ಸುಖಮುಖಂ ಸಂತುಷ್ಟುವುಸ್ತೇ ಶಿವಂ ॥೫೫॥

॥ ದೇವಾ ಊಚುಃ ॥

ಕಾಂತಂ ಕಾರಣಕಾರಣಂ ಕರಲಸತ್ಕಲ್ಯಾಣಭೂಭೃದ್ಧನುಂ
ಕರ್ಪೂರಾಭಕಲೇಬರಂ ಕ್ರತುಪತಿಂ ಕಾರುಣ್ಯಸಾರಾಕರಂ ।
ಕಾಮಾರಾತಿಮಕಾಮಿನಾಂ ಸುಕೃತಿನಾಂ ಕೈವಲ್ಯದಂ ಕಾಮದಂ
ಸಂಪ್ರಾಪ್ತಾಃ ಶರಣಂ ಕಲಾನಿಧಿಕಲಾರಾಜಜ್ಜಟಂ ಶಂಕರಂ ॥೫೬॥

ದೇವತೆಗಳು ಅಮೃತ, ಕರ್ಪೂರ, ಚಂದನದ್ರವ ಇವೇ ಮೊದಲಾದ ಅಪಾರವಾದ ಸುಗಂಧಪದಾರ್ಥಗಳಿಗೆ ಮೂಲಭೂತವಾಗಿ, ಅವುಗಳ ಸಾರದಿಂದ ಮನೋಹರವಾಗಿರುವ ಈ ಓಂಕಾರಲಿಂಗವನ್ನು ನೋಡಿ, ಅರಳಿದ ಸುಗಂಧಭರಿತವಾದ ಮಕರಂದದಿಂದ ಯುಕ್ತವಾಗಿರುವ ಒಳ್ಳೆಯ ಹೂವುಗಳಿಂದಲೂ ದಿವ್ಯವಾದ ನೈವೇದ್ಯಪದಾರ್ಥ, ಘಮಘಮಿಸುವ ಧೂಪವೇ ಮೊದಲಾದವುಗಳಿಂದಲೂ ಚಂದನ ಲೇಪನದಿಂದಲೂ ಪೂಜೆಮಾಡಿ ಹಾಗೆಯೇ ಸುಖಸ್ವರೂಪನಾದ ಶಿವನಿಗೆ ನಮಸ್ಕಾರಮಾಡಿ ಸ್ತೋತ್ರಮಾಡಿದರು. ॥೫೫॥

ಮನೋಹರವಾದ ಆಕಾರವುಳ್ಳವನೂ. ಸಕಲ ಕಾರಣಭೂತವಾದ ವಸ್ತುಗಳಿಗೂ ಮೂಲಕಾರಣನೂ, ಮಂಗಳಕರವಾದ ಮೇರುಪರ್ವತವೆಂಬ ಧನುಸ್ಸನ್ನು ಹಿಡಿದು ಶೋಭಿಸುತ್ತಿರುವವನೂ, ಕರ್ಪೂರದ ಕಾಂತಿಯಂತಿರುವ ಶರೀರವುಳ್ಳವನೂ, ಯಾಗಗಳಿಗೆಲ್ಲಾ ಸ್ವಾಮಿಯೂ, ದಯಾನಿಧಿಯೂ, ನಿಷ್ಕಾಮಕರ್ಮವುಳ್ಳವರಿಗೆ (ವಿಷಯಾಸಕ್ತಿಯಲ್ಲಿ ವಿರಕ್ತಿಹೊಂದಿರುವವರಿಗೆ) ಸುಲಭನೂ, ಮನ್ಮಥನ ಶತ್ರುವಾಗಿರುವವನೂ, ಪುಣ್ಯಶಾಲಿಗಳಿಗೆ ಮೋಕ್ಷಪ್ರಾಪ್ತಿರೂಪವಾದ ಇಷ್ಟಾರ್ಥವನ್ನು ಸಲ್ಲಿಸುವವನೂ, ಕಲಾನಿಧಿಯಾದ ಚಂದ್ರನ ದಿವ್ಯವಾದ ಕಲೆಗಳಿಂದ ಶೋಭಿಸುತ್ತಿರುವ ಜಡೆಗಳುಳ್ಳವನೂ, ಆದ ಶಂಕರನನ್ನು ದೇವತೆಗಳು ಶರಣುಹೊಂದಿದರು. ॥೫೬॥

ಖದ್ಯೋತೇಂದ್ವಗ್ನಿನೇತ್ರಂ ಶತಮುಖಮುಖಖೇಚಾರಹ್ಯತೋತ್ತಮಾಂಗಂ
ಖರ್ವಂ ಖರ್ವಾದಖರ್ವಂ ಜಗತಿ ತು ವಿದಿತಾದ್ವಸ್ತುನೋ ಖರ್ವಜೋಽಪಿ ।
ಖಂಡೇನೇಂದೋಃ ಕಪರ್ದೇ ಖಚಿತಮಜಮುಖಸ್ತುತ್ಯಮಾಖುಪ್ರಿಯೇಷ್ಟಂ
ಖೇದೋತ್ಪಾತಾಯ ಪ್ರಾಪ್ತಾನಖದಲಿತಕಕಂ ಖಂಡಿತಾಖಂಡಲಾರಿಂ ॥೫೭॥

ಗೋನೇತ್ರಂ ಗೋಶಯೇಡ್ಯಂ ಗಗನಮಯತನುಂ ನಿತ್ಯಂಗೋಮೌಳಿಗಮ್ಯಂ
ಗೋರಾಶಿಂ ಗೋಧಿಗಾಧಿಂ ಸಕಲಗುರುಗುರುಂ ಗೋಜಗೋಪತ್ರಗೋಪಂ ।
ಗೋಪಶ್ಯಂ ಗೋಗುಣಾಢ್ಯಂ ಗುಣಗಣಸಹಿತಂ ಗಾಂಧರೇಡ್ಜಾಸಹಾಯಂ
ಗೋಜಾಂಯ್ಯೈ ಗೋಜಭೂಷಂ ಗಲಗಿಲಿತವಿಷಂ ಗೋಭಿರಾಭಿಸ್ತುನೋಽದ್ಯ ॥೫೮॥

ಸೂರ್ಯ, ಚಂದ್ರ, ಮತ್ತು ಅಗ್ನಿ ಇವರನ್ನೇ ಕಣ್ಣುಗಳನ್ನಾಗಿ ಹೊಂದಿರುವವನೂ, ಇಂದ್ರನೇ ಮೊದಲಾದ ಅಂತರಿಕ್ಷಸಂಚಾರಿಗಳಾದ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಶಿರಸ್ಸುಳ್ಳವನೂ, ಸೂಕ್ಷ್ಮಸ್ವರೂಪನೂ, ಸ್ಥೂಲಸ್ವರೂಪಕ್ಕಿಂತಲೂ ಹೆಚ್ಚಿನ ಸ್ಥೂಲರೂಪವನ್ನು ಹೊಂದಿ, ಪ್ರಪಂಚದಲ್ಲಿ ತುಂಬಾ ಹ್ರಸ್ವವೆಂದು ಪ್ರಸಿದ್ಧಿಹೊಂದಿರುವ ಪದಾರ್ಥಗಳಿಗಿಂತಲೂ ಸೂಕ್ಷ್ಮರೂಪನೆನಿಸಿ, ತನ್ನ ಜಟಾಭಾರದಲ್ಲಿ ಚಂದ್ರಖಂಡವನ್ನು ಧರಿಸಿರುವವನೂ, ಬ್ರಹ್ಮನೇ ಮೊದಲಾದವರಿಂದ ಸ್ತೋತ್ರಮಾಡಲ್ಪಡುವವನೂ, ಇಲಿಗಳಿಗೆ ಪ್ರಿಯನಾದ ವಿಘ್ನೇಶ್ವರನಿಗೆ ಇಷ್ಟನಾದವನೂ, ಇಂದ್ರನ ಶತ್ರುಗಳಾದ ರಾಕ್ಷಸರನ್ನು ನಿಗ್ರಹಿಸಿದವನೂ ಆದ ಮಹೇಶ್ವರನನ್ನು ಸದಾ ಸ್ತೋತ್ರಮಾಡೋಣ. ॥೫೭॥

ಅಗ್ನಿನೇತ್ರನೂ, ಮಹಾವಿಷ್ಣುವಿನಿಂದ ಸ್ತೋತ್ರಮಾಡಲ್ಪಡುವವನೂ, ಅಂತರಿಕ್ಷಸ್ವರೂಪವಾದ ಶರೀರವುಳ್ಳವನೂ, ನಿತ್ಯನೂ, ವೇದಾಂತಗಳಿಂದ ತಿಳಿಯಲು ಸಾಧ್ಯನೂ, ಜ್ಞಾನರಾಶಿಯೂ, ಹಣೆಯಲ್ಲಿ ಕಣ್ಣುಳ್ಳವನೂ, ಸಕಲ ಗುರುವರ್ಯರಿಗೂ ಮಾರ್ಗಪ್ರದರ್ಶಕನಾದ ಗುರುವೂ, ಗೋವುಗಳಂತಿರುವ ಅಜ್ಞಾನಿರಕ್ಷಕನೂ, ವಿದ್ಯಾಗುಣಗಳಿಂದ ಪರಿಪೂರ್ಣನೂ, ಸಕಲ ಸದ್ಗುಣಗಳಿಂದ ಶೋಭಿಸುತ್ತಿರುವವನೂ, ಪರ್ವತರಾಜಕುಮಾರಿಯಾದ ಪಾರ್ವತೀದೇವಿಯ ವಲ್ಲಭನೂ, ಸಮುದ್ರ ಮಥನ ಕಾಲದಲ್ಲಿ ಲೋಕಸಂರಕ್ಷಣೆಗೋಸ್ಕರ ಜಗತ್ತನ್ನೆಲ್ಲಾ ದಹಿಸುತ್ತಿದ್ದ ಮಹಾವಿಷವನ್ನು ನುಂಗಿ, ತನ್ನ ಗಂಟಲಿನಲ್ಲಿ ಧರಿಸಿರುವವನೂ, ಆದ ಮಹಾದೇವನನ್ನು ಈ ಸ್ತುತಿ ವಾಕ್ಯಗಳಿಂದ ಸ್ತೋತ್ರಮಾಡುವೆವು. ॥೫೮॥

ಘರ್ಮಾಂತೇ ದೀರ್ಘಘನಂ ಘೃಣಿಭಿರಪಘೃಣೈರ್ಘರ್ಮಘೃಷ್ಟೇ ಘನಾಂತೇ
ವಾತ್ಯಾಘೈರ್ದೀರ್ಘದೀರ್ಘೈರನಿಶಮುಪಘನಂ ಕ್ಲೇಶಯಂತೋ
ನಘೇಂದ್ರಾಃ ।
ದ್ರಾಘೀಯಾಂಸಂ ತವಾಂಘ್ರಿಂ ಘುಸೃಣಸಮಘೃಣಿಂ ಕಾಮಘಾತಿಂ
ಘೃಣಾಮೋ
ದೀರ್ಘಾಘ್ರಾತಾನ್ಯಘೌಘಾನ್ಯಪಿ ವಿಮಲಧಿಯಃ ಶೀಘ್ರಮೇವ ತ್ಯಜಾಮಃ
॥೫೯॥

ಚಾರುಸ್ಮೇರಮುಖಂ ಚರಾಚರವಿಭುಂ ಚಾಪೀಭವದ್ಭೂಧರಂ
ಚಕ್ಷುಃಶ್ರೋತ್ರವಿಭೂಷಣಂ ಚಲದೃಶಾ ಸಂಶ್ಲಿಷ್ಟವಾಮಾಂಗಕಂ ।
ಚಿತ್ತೇ ಚೀರವಸಂ ಚಿದಾತ್ಮಕತಯಾ ಸಂಚಿಂತ್ಯಮಾನಂ ಚಿರಂ
ಚೇತೋಭೂಹರಚಕ್ಷುಷಂ ಚಿರಚಿತ್ತೈಃ ಸಂಚಿಂತಯಾಮಃ ಶಿವಂ ॥೬೦॥

---

ಬಿಸಿಲುಕಾಲದ ಕೊನೆಯಲ್ಲಿ ದೀರ್ಘವಾದ ಮೇಘರೂಪದಿಂದ ಕೂಡುವವನೂ, ಅಲ್ಲದೆ ಆ ಕಾಲದಲ್ಲಿ ಸ್ವಲ್ಪವೂ ದಯೆಯೇ ಇಲ್ಲದಂತೆ ತನ್ನ ಪ್ರಚಂಡವಾದ ಕಿರಣಗಳನ್ನು ಜನಗಳಮೇಲೆ ಬೀರುವವನೂ, ಹಾಗೆ ಬಿಸಿಲಿನ ತಾಪದಿಂದ ನೊಂದಿರುವ ಜನರಿಗೆ ಮಳೆಗಾಲದಲ್ಲಿ ದೀರ್ಘವಾದ ನೀರಿನ ಪ್ರವಾಹಗಳಿಂದ ಅನವರತವೂ ಸಂತೋಷವನ್ನುಂಟುಮಾಡುವವನೂ, ಆದ ಮಹಾದೇವನನ್ನು ಸದಾ ಧ್ಯಾನ ಮಾಡುವೆನು. ಮತ್ತು ಸೂರ್ಯಕಿರಣದಂತೆ ಹೊಳೆಯುವ ಕಾಮನನ್ನು ಮೆಟ್ಟಿ ತುಳಿದ ಜನ್ಮಜನ್ಮಾಂತರಗಳಿಂದ ಅನುಸ್ಯೂತವಾಗಿ ಬಂದಿದ್ದ ಪಾಪರಾಶಿಯನ್ನು ನಿರ್ಮೂಲಗೊಳಿಸಿದ ಪರಶಿವನ ಪಾದದ್ವಂದ್ವಗಳನ್ನು ಸೇವಿಸಿ ನಾವು ಪಾಪಮುಕ್ತರಾಗಿ ಸೇವೆಮಾಡುವೆವು. ಸಕಲ ಇಷ್ಟಾರ್ಥಗಳೂ ಸಿದ್ಧಿಸುವಾಗ ಪರಶಿವನ ಆರಾಧನೆಯನ್ನಲ್ಲದೆ ಮತ್ತೇನನ್ನು ತಾನೆ ಮಾಡಬಲ್ಲೆವು? ॥೫೯॥

ಪರಶಿವನ ಮುಖವು ಸದಾ ಮುಗುಳ್ನಗೆಯಿಂದ ಸುಂದರವಾಗಿರುವುದು. ಚರಾಚರವಸ್ತುಗಳಿಗೆಲ್ಲಾ ಪರಶಿವನು ವಿಭುವಾಗಿರುವನು. ಮೇರುಪರ್ವತವೇ ಶಂಕರನಿಗೆ ಒಂದು ಧನುಸ್ಸಾಗಿರುವುದು. ಆದಿಶೇಷನೇ ಆಭರಣವಾಗಿರುವನು. ಚಂಚಲನೇತ್ರೆಯಾದ ಪಾರ್ವತಿಯಿಂದ ಆಲಿಂಗಿತವಾದ ಎಡಭಾಗವುಳ್ಳವನು. ಚೀರವಸ್ತ್ರವನ್ನುಟ್ಟು, ಚಿತ್ಸ್ವರೂಪದಿಂದ ಧ್ಯಾನವಿಷಯನಾಗುವ ಮತ್ತು ಮನ್ಮಥ ಧ್ವಂಸಕವಾದ ಕಣ್ಣುಗಳಿಂದ ಕೂಡಿರುವ ಪರಮೇಶ್ವರನನ್ನು ನಾವು ಸರ್ವದಾ ಧ್ಯಾನಮಾಡುವೆವು. ॥೬೦॥

ಗಚ್ಛಾಮೋ ಬಹುಬಿಲ್ವಸಂವೃತವನಂ ತತ್ರಾಚ್ಛಕುಂಡೇ ಪಯಃ
ಸ್ನಾಸ್ಯಾಮೋಽದ್ಯ ವಸಂತಸೂರಕಿರಣೈಃ ಸಂತಪ್ತಗಾತ್ರಾ ವಯಂ ।
ರುದ್ರಾಕ್ಷೈಃ ಸಿತಭಸ್ಮಪೂರನಿಕರೈರುದ್ಧೂಲಯಾಮಸ್ತನುಂ
ಯಾಸ್ಯಾಮೋಽದ್ಯ ಸುನಿರ್ವೃತಿಂ ಶಿವಮಹಾದೇವೇತಿ ಸಂಕೀರ್ತನೈಃ ॥೬೧॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಸಪ್ತಮಾಂಶೇ ಓಂಕಾರೇಶ್ವರ
ಮಾಹಾತ್ಮ್ಯೇ ದೇವಸಂಘಸ್ತುತಿರ್ನಾಮ ಸಪ್ತಮೋಽಧ್ಯಾಯಃ

ಅನೇಕ ಬಿಲ್ವವೃಕ್ಷಗಳಿಂದ ಸುತ್ತುವರಿಯಲ್ಪಟ್ಟಿರುವ ಆ ವನಕ್ಕೆ ಹೋಗೋಣ. ಅಲ್ಲಿ ನಿರ್ಮಲವಾದ ನೀರಿನಿಂದ ಕೂಡಿದ ತೀರ್ಥಕುಂಡವಿರುವುದು. ನಾವು ಅಲ್ಲಿಗೆ ಹೋದನಂತರ ವಸಂತಋತುವಿನ ಸೂರ್ಯಕಿರಣಗಳಿಂದ ಚೆನ್ನಾಗಿ ಕಾದಿರುವ ಮೈಯುಳ್ಳವರಾಗಿ ಈದಿನವೇ ಆ ಕುಂಡದಲ್ಲಿ ಸ್ನಾನಮಾಡೋಣ. ಸ್ನಾನವಾದ ನಂತರ ರುದ್ರಾಕ್ಷಮಾಲೆಗಳನ್ನೂ, ಶುಭ್ರವಾದ ಭಸ್ಮತ್ರಿಪುಂಡ್ರಗಳನ್ನೂ ಧರಿಸಿ, ನಮ್ಮ ಶರೀರಕ್ಕೆಲ್ಲಾ ಭಸ್ಮವನ್ನು ಹಚ್ಚಿಕೊಳ್ಳೋಣ. ಹಾಗೆಯೇ ಶಿವ, ಮಹಾದೇವ, ಎಂಬ ಆ ಲೋಕಶಂಕರನ ದಿವ್ಯನಾಮಸಂಕೀರ್ತನೆಯಿಂದ ಕಾಲಕಳೆಯುತ್ತಾ ಕೊನೆಗೆ ಶ್ರೇಷ್ಠವಾದ ಸುಖವನ್ನೇ ಪಡೆಯೋಣ ಎಂದು ದೇವತೆಗಳು ಯೋಚಿಸಿ ಆ ಪರಮೇಶ್ವರನನ್ನು ಸ್ತೋತ್ರಮಾಡಿದರು. ॥೬೧॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಭರ್ಗಸಂಜ್ಞಕವಾದ ಏಳನೆಯ ಅಂಶದಲ್ಲಿ
ಓಂಕಾರೇಶ್ವರನ ಮಹಿಮೆಯ ವರ್ಣನೆಯ ಪ್ರಕರಣದಲ್ಲಿ
ದೇವತೆಗಳು ಮಾಡಿದ ಪರಮೇಶ್ವರನ ಸ್ತೋತ್ರವೆಂಬ
ಏಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಅಷ್ಟಮೋಽಧ್ಯಾಯಃ

॥ ಸೂತ ಉವಾಚ ॥

ಇತ್ಥಂ ಗೀರ್ವಾಣವಾಣೀಂ ತಾಂ ಶ್ರುತ್ವಾ ವಾಣೀಶಸಂಸ್ತುತಃ ।
ಉವಾಚ ಹರ್ಷಯನ್ದೇವಾಂಛಂಕರೋ ಲೋಕಶಂಕರಃ ॥೧॥

॥ ಈಶ್ವರ ಉವಾಚ ॥

ಸ್ತುತ್ಯಾನಯಾದ್ಯ ಸುಪ್ರೀತೋ ಭವತಾಂ ಸುರಸತ್ತಮಾಃ ।
ಈಪ್ಸಿತಂ ವೋ ವದಂತ್ವಾಶು ತದ್ದಾಸ್ಯಾಮ್ಯಹಮೇವ ಹಿ ॥೨॥

ಸದಾಶಿವವಚಃ ಶ್ರುತ್ವಾ ಪ್ರಣಮ್ಯೇಂದ್ರಮುಖಾಃ ಸುರಾಃ ।
ಇದಮೂಚುರ್ವಚೋ ಹೃಷ್ಟಾಃ ವಿನಯಾವನತಾನನಾಃ ॥೩॥

---

## ಎಂಟನೆಯ ಅಧ್ಯಾಯ

ಹೀಗೆ ದೇವತೆಗಳ ಸ್ತೋತ್ರರೂಪವಾದ ಮಾತನ್ನು ಕೇಳಿ, ಬ್ರಹ್ಮನಿಂದ ಸ್ತುತಿಸಲ್ಪಟ್ಟ ಲೋಕಮಂಗಳಕರನಾದ ಶಂಕರನು, ದೇವತೆಗಳನ್ನೆಲ್ಲಾ ಸಂತೋಷ ಪಡಿಸುತ್ತಾ ಅವರಿಗೆ ಹೀಗೆ ಹೇಳಿದನು. ॥೧॥

ಓ ದೇವತೆಗಳಿರಾ! ನಿಮ್ಮ ಈ ಸ್ತೋತ್ರಕ್ಕೆ ಮೆಚ್ಚಿ ಸಂತೋಷಹೊಂದಿರು ವೆನು. ನಿಮಗೆ ಬೇಕಾದ ವರಗಳನ್ನು ಕೂಡಲೇ ತಿಳಿಸಿರಿ. ನಾನೇ ನಿಮಗೆ ಆ ವರ ಗಳನ್ನು ಕೊಡುವೆನು ಎಂದು ಮಹೇಶನು ದೇವತೆಗಳಿಗೆ ಹೇಳಿದನು. ॥೨॥

ಸದಾಶಿವನು ಹೀಗೆ ಹೇಳಿದ ವಚನಗಳನ್ನು ಕೇಳಿ, ಇಂದ್ರನೇ ಮೊದಲಾದ

॥ ದೇವಾ ಊಚುಃ ॥

ಭಗವಂಛಂಖನಾಮಾದ್ಯ ದೈತ್ಯೋಽಸ್ಮಾನ್ಬಾಧತೇಽನಿಶಂ ।
ತ್ರಿವಿಷ್ಟಪಾಚ್ಚ್ಯಾವಿತಾಃಸ್ಮೋ ಜೀವಾಮಃ ಕಷ್ಟಜೀವನೈಃ ॥೪॥

ಬ್ರಹ್ಮಣಃ ಪ್ರಸಭಂ ಹೃತ್ವಾ ವೇದಾನ್ಸಾಂಗಾನ್ಮಹೇಶ್ವರ ।
ತ್ವಯೋಪದಿಷ್ಟಾನ್ವಿಶ್ವೇಶ ಸ ಶಾಸ್ತಿ ಭುವನತ್ರಯಂ ॥೫॥

ನಿಃಸ್ವಾಧ್ಯಾಯವಷಟ್ಕಾರೋ ಲೋಕಃ ಸಂಪ್ರತಿ ವರ್ತತೇ ।
ಯಜ್ಞಭಾಗವಿಹೀನಾಸ್ಮೋ ಹತಸ್ವರ್ಗಾ ಹೃತೌಜಸಃ ॥೬॥

ಶರಣಂ ತ್ವಾಂ ಪ್ರಪನ್ನಾಸ್ಸ್ಮಃ ಪಾಹಿ ನಃ ಶರಣಾಗತಾನ್ ।
ಪುನಃ ಪ್ರಣಮ್ಯ ವಿಶ್ವೇಶಂ ಭಕ್ತ್ಯಾ ತುಷ್ಟುವುರೀಶ್ವರಂ ॥೭॥

ದೇವತೆಗಳೆಲ್ಲರೂ ಮಹೇಶ್ವರನಿಗೆ ನಮಸ್ಕಾರಮಾಡಿ, ಸಂತೋಷದಿಂದ ತಲೆಯನ್ನು ಬಗ್ಗಿಸಿ ವಿನಯದಿಂದ ಹೀಗೆ ಹೇಳಿದರು. ॥೩॥

ಭಗವಂತನೇ! ಶಂಖನೆಂಬ ಪ್ರಸಿದ್ಧನಾದ ದೈತ್ಯನು ನಮ್ಮನ್ನು ಅನವರತವೂ ಪೀಡಿಸುತ್ತಿರುವನು. ಅವನಿಂದ ನಾವು ಸ್ವರ್ಗದಿಂದ ತಳ್ಳಲ್ಪಟ್ಟು ಬಹಳ ಕಷ್ಟವಾದ ಜೀವನದಲ್ಲಿ ಬದುಕಿರುವೆವು. ॥೪॥

ಹೇ ಮಹೇಶ್ವರ! ನಿನ್ನಿಂದ ಉಪದೇಶಮಾಡಲ್ಪಟ್ಟ, ಅಂಗಸಹಿತವಾದ ವೇದಗಳನ್ನು ಆ ಬ್ರಹ್ಮನ ಹತ್ತಿರದಿಂದ ಬಲಾತ್ಕಾರವಾಗಿ ಕಿತ್ತುಕೊಂಡು ಈ ಶಂಖನು ಈಗ ಮೂರುಲೋಕವನ್ನೂ ತಾನೇ ಆಳುತ್ತಿರುವನು. ॥೫॥

ಈಗ ಲೋಕವೆಲ್ಲವೂ ವೇದಾಧ್ಯಯನ, ಮತ್ತು ವಷಟ್ಕಾರಾದಿ ಯಜ್ಞಾಹುತಿಗಳಿಲ್ಲದೆ ಇದೆ. ಇದರಿಂದ ನಮಗೆ ಯಜ್ಞದ ಹವಿರ್ಭಾಗಗಳೇ ಇಲ್ಲದೇ ಸ್ವರ್ಗವನ್ನೂ ಕಳೆದುಕೊಂಡು, ಬಲಹೀನರಾಗಿರುತ್ತೇವೆ. ॥೬॥

ಆದುದರಿಂದ ನಾವು ಈಗ ನಿನ್ನನ್ನು ಮರೆಹೊಕ್ಕಿರುವೆವು. ಹೇ ಮಹೇಶ್ವರ! ಶರಣಾಗತರಾದ ನಮ್ಮನ್ನು ಈ ಕಷ್ಟದಿಂದ ಪಾರುಮಾಡಿ ಕಾಪಾಡು. ಎಂದು ಪುನಃ ಆ ಜಗದೀಶ್ವರನಿಗೆ ನಮಸ್ಕರಿಸಿ, ಪರಮೇಶ್ವರನನ್ನು ಹೀಗೆ ಸ್ತೋತ್ರಮಾಡಿದರು. ॥೭॥

ಜಗದುದ್ಭವನಾಶಸಂಸ್ಥಿತಿಪ್ರಲಯಾಪಾರಗಭೀರಸಾಗರಂ ।
ಭಗವಂಸ್ತವ ಭಕ್ತಿಭಾವನಾಪರಪಾರಂ ಸಮುತರ್ತುಮಿಚ್ಛವಃ ॥೮॥

ಕನಿಷ್ಠಂ ವರಿಷ್ಠಂ ತಥಾ ಜ್ಯೇಷ್ಠಮೀಶಂ
ಗರಿಷ್ಠಂ ವಸಿಷ್ಠಾದಿಸಂಪೂಜಿತಾಂಘ್ರಿಂ ।
ವಿಶಿಷ್ಟಂ ಸುರಾಣಾಂ ವಿಶಿಷ್ಟೇಷು ಪೂಜ್ಯಂ
ನತಾಸ್ಸ್ಮೋ ನತಾಸ್ಮೋ ನತಾಸ್ಸ್ಮೋ ನತಾಸ್ಸ್ಮಃ ॥೯॥

ದೇವಾನ್ಸಂಪೀಡಿತಾನ್ಜ್ಞಾತ್ವಾ ಸಸ್ಮಾರ ಗಣನಾಯಕಂ ।
ನಂದಿನಂ ನಂದಿತಾನೇಕವಿಬುಧವ್ರಜಸಂಸ್ತುತಂ ॥೧೦॥

॥ ಸೂತ ಉವಾಚ ॥

ಸ್ಮೃತಮಾತ್ರಃ ಶಿವೇನಾತ್ರ ಪ್ರಣತಃ ಸಂಸ್ಥಿತಂ ಪುರಃ ।
ಬದ್ಧಾಂಜಲಿಪುಟಸ್ತೂರ್ಣಂ ಕಿಂಕರೋಮೀತಿ ಶಂಕರಂ ॥೧೧॥

ಭಗವಂತನೇ, ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರರೂಪವಾದ ಕಾರ್ಯಗಳನ್ನು ಮಾಡುವವನೂ, ಅಪಾರವಾದ ಗಂಭೀರಸಾಗರದಂತಿರುವವನೂ, ಭಕ್ತಿಭಾವನೆಯೆಂಬ ಮತ್ತೊಂದು ದಡವುಳ್ಳವನೂ ಆದ ನಿನ್ನನ್ನು ಸೇರಲು ನಾವು ಅಪೇಕ್ಷೆಪಡುವೆವು. (ಅಂದರೆ ಭಗವಂತನು ದಡವೇ ಸಿಕ್ಕದ ಗಂಭೀರವಾದ ಸಮುದ್ರದಂತಿದ್ದರೂ ತನ್ನಲ್ಲಿ ಭಕ್ತಿವಿಶ್ವಾಸಗಳಿಂದ ನಡೆದುಕೊಳ್ಳುವರಿಗೆ ಆ ಸಮುದ್ರದ ದಡವನ್ನು ತೋರಿಸುವ ನಾದ್ದರಿಂದ ಭಕ್ತಿಪೂರ್ವಕವಾಗಿ ನಾವು ನಿನ್ನನ್ನು ಧ್ಯಾನಮಾಡುವೆವೆಂದು ತಾತ್ಪರ್ಯವು.) ॥೮॥

ಪರಮೇಶ್ವರನು ಎಲ್ಲರಿಗಿಂತಲೂ ಕನಿಷ್ಠನೂ, ಶ್ರೇಷ್ಠನೂ, ಹಿರಿಯವನೂ, ಸರ್ವೇಶ್ವರನೂ, ದೊಡ್ಡವನೂ, (ದೇವತೆಗಳಲ್ಲಿ ಅವಸ್ಥಾಭೇದಗಳಿಂದ ಆಯಾ ಭಾವವು ಮಾನವರಿಗೆ ತೋರುವುದರಿಂದ ಹೀಗೆ ಹೇಳಿದೆ) ವಸಿಷ್ಠನೇ ಮೊದಲಾದ ಮಹರ್ಷಿಗಳಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನೂ, ದೇವತೆಗಳಲ್ಲೆಲ್ಲಾ ಉತ್ಕೃಷ್ಟನಾದವನೂ, ಉತ್ತಮರಾದವರಿಗೂ ಪೂಜಾರ್ಹನಾದ ಆ ಪರಮೇಶ್ವರನಿಗೆ ನಾವು ಪದೇ ಪದೇ ನಮಸ್ಕಾರಮಾಡುವೆವು. ॥೯॥

ಎಂದು ಹೇಳಿದ ದೇವತೆಗಳು ಆ ಶಂಖಾಸುರನಿಂದ ಪೀಡಿತರಾಗಿರುವರೆಂದು ತಿಳಿದು ಸಕಲ ರುದ್ರಗಣಗಳಿಗೂ ಒಡೆಯನಾದ, ಸಂತುಷ್ಟರಾದ ಅನೇಕ ಮಂದಿ

ಸಮ್ಯಕ್ತುಷ್ಟಾವ ಹೃಷ್ಟಾತ್ಮಾ ನಂದೀಶೋ ಗಣಪಾಗ್ರಣೀಃ ॥೧೨॥

॥ ನಂದಿಕೇಶ ಉವಾಚ ॥

ಶಂಭೋ ಚಂದ್ರಲಲಾಮ ಸೋಮಭಗವನ್ವಿಶ್ವೇಶ ವಿಶ್ವಾಧಿಕ
ಬ್ರಧ್ನೇಂದುಸ್ಫುರದಾಶ್ರಯಾಶನಯನಾಪಾರವ್ಯಥಾಂ ಸಂಹರ ।
ಶ್ರೀಮೃತ್ಯುಂಜಯ ವೇದವೇದ್ಯ ಭವತಃ ಪಾದಾರವಿಂದಂ ಸದಾ
ಧ್ಯಾಯನ್ಧ್ಯೇಯಮಘಂ ಹರಾಮಿ ಸತತಂ ತ್ವಲ್ಲಿಂಗಸಂಪೂಜನಾತ್ ॥೧೩॥

ಪಾಯಂ ಜ್ಞಾನಮಪಾಯವಾನರಹಿತೋ ಧ್ಯಾನಂ ತ್ವದೀಯಂ ಪದಃ
ಹಾಯಂ ದುಃಖಮಶೇಷಸಂಸೃತಿಭಯಂ ತ್ವದ್ಭಕ್ತಸಂಸೇವನಾತ್ ।
ತ್ವತ್ತೋನ್ಯಾಮರಪೂಜನಂ ಚ ಭಗವನ್ನಾಯಂ ಹ್ಯುಪಾಯಕ್ರಮಃ
ಕಾಯಂ ಪ್ರಾಪ್ಯ ವಿಮುಕ್ತಯೇ ಹಿ ಯತತೇ ಭೂಯಸ್ತ್ವಯಾ ಪ್ರೇರಿತಃ
॥೧೪॥

ದೇವತೆಗಳಿಂದ ಸ್ತೋತ್ರಮಾಡಲ್ಪಟ್ಟಿರುವ ನಂದಿಕೇಶ್ವರನನ್ನು ಪರಮೇಶನು ಸ್ಮರಿಸಿಕೊಂಡನು. ॥೧೦॥

ಪರಶಿವನು ಸ್ಮರಣೆಮಾಡಿದ ಮಾತ್ರದಿಂದಲೇ ಎದುರಿಗೆ ಬಂದು ಕೈಗಳನ್ನು ಜೋಡಿಸಿ, ನಮಸ್ಕಾರಮಾಡಿ ಏನಪ್ಪಣೆ, ನನ್ನಿಂದೇನಾಗಬೇಕೆಂದು ಪ್ರಾರ್ಥಿಸುತ್ತಾ, ಗಣಶ್ರೇಷ್ಠನಾದ ನಂದಿಕೇಶನು ಸಂತೋಷಭರಿತನಾಗಿ, ಆ ಮಹಾದೇವನನ್ನು ಚೆನ್ನಾಗಿ ಸ್ತೋತ್ರಮಾಡಿದನು. ॥೧೧-೧೨॥

“ ಶಂಭೋ, ಚಂದ್ರಶೇಖರ, ಉಮಾರಮಣನಾದ ಭಗವಂತನೇ, ಜಗದೊಡೆಯನಾದ ನೀನು, ಲೋಕೋತ್ತರವ್ಯಕ್ತಿಯೆನಿಸಿರುವೆ. ಸೂರ್ಯ, ಚಂದ್ರ ಮತ್ತು ಅಗ್ನಿ ನೇತ್ರನಾದ ಮಹೇಶ್ವರನೇ. ಅನಂತವಾದ ನಮ್ಮ ದುಃಖವನ್ನೆಲ್ಲಾ ಹೋಗಲಾಡಿಸು. ವೇದಗೋಚರನಾದ ಶ್ರೀಮೃತ್ಯುಂಜಯಸ್ವಾಮಿಯೇ, ಧ್ಯಾನಮಾಡಲು ಯೋಗ್ಯವಾದ ನಿನ್ನ ಪಾದಗಳನ್ನು ಯಾವಾಗಲೂ ಧ್ಯಾನಮಾಡುತ್ತಾ, ನಿನ್ನ ಲಿಂಗವನ್ನು ಪೂಜೆಮಾಡಿ ನನ್ನ ಪಾಪಗಳನ್ನೆಲ್ಲಾ ಕಳೆದುಕೊಳ್ಳುತ್ತೇನೆ. ॥೧೩॥

ಹೊಂದಲು ಅಸಾಧ್ಯವಾದ ದಿವ್ಯಜ್ಞಾನವನ್ನು ಹೊಂದಿ, ನಿನ್ನ ಪಾದಕಮಲಕ್ಕೆ ಧ್ಯಾನಮಾಡುವ ಭಕ್ತನು ಸುಲಭವಾಗಿಯೇ ಹೊಂದಬಲ್ಲನು. ಅಪಾರವಾದ

ನಂದಿಕೇಶಮುಹಾಸ್ತುತ್ವಾ ನಂದಿತಃ ಸ್ರಾಹ ತಂ ಶಿವಃ ।
ಮಹಾನಂದಘನಃ ಶಂಭುರ್ನಂದಿತೋ ಲಿಂಗದರ್ಶನಾತ್ ॥೧೫॥

॥ ಈಶ್ವರ ಉವಾಚ ॥

ಗಣೇಂದ್ರ ಶಾಂಕರಶ್ರೇಷ್ಠ ಗಣೇಶೈಃ ಪರಿವಾರಿತಃ ।
ಗಚ್ಛ ವೈಕುಂಠಭವನಂ ಸಮಾನಯ ಹರಿಂ ದ್ರುತಂ ॥೧೬॥

ದೇವಾನಾಂ ಕಾರ್ಯಸಿದ್ಧ್ಯರ್ಥಂ ಆಶು ತ್ವಂ ಸುಯಶಾಪತೇ ।
ತಥೇತಿ ನತ್ವಾ ದೇವೇಶಮೋಂಕಾರಕೃತಕೇತನಂ ॥೧೭॥

ಈ ಸಂಸಾರದ ಭಯವನ್ನೂ, ನಿನ್ನ ಭಕ್ತರಿಂದ ಸೇವಿಸಲ್ಪಟ್ಟ ನೀನು ಸುಲಭವಾಗಿ ದಾಟುವಂತೆಯೇ ಮಾಡುವೆ. ಭಗವಂತನೇ! ನಿನ್ನುಳಿದು ಬೇರೆ ದೇವತೆಗಳನ್ನು ಪೂಜಿಸುವುದು ಎಂದೂ ಸರಿಯಾದ ಮಾರ್ಗವಲ್ಲ. ಮಾನವನು ಈ ಶರೀರವನ್ನು ಹೊಂದಿ ಬಾರಿಬಾರಿಗೂ ನಿನ್ನಿಂದ ಪ್ರೇರಿಸಲ್ಪಡುತ್ತಾ ಮೋಕ್ಷವನ್ನು ಪಡೆಯಲು ಪ್ರಯತ್ನಿಸುತ್ತಾನೆ." ॥೧೪॥

ಆನಂದಘನನೆನಿಸಿದ (ಆನಂದವೆಂಬ ಮೇಘದಂತಿರುವ) ಶಂಕರನು, ನಂದಿಕೇಶ್ವರನ ಈ ಸ್ತುತಿಯಿಂದ ಸಂತೋಷಹೊಂದಿ, ಶಿವಲಿಂಗದರ್ಶನದಿಂದ ಆನಂದಭರಿತನಾಗಿ ಅವನನ್ನು ಕುರಿತು ಹೀಗೆಂದನು. ॥೧೫॥

ನನ್ನ ಭಕ್ತರಲ್ಲಿ ಶ್ರೇಷ್ಠನೆನಿಸಿದ ಗಣೋತ್ತಮನೇ! ನಿನ್ನ ಗಣಗಳೊಡನೆ ಸುತ್ತುವರಿಯಲ್ಪಟ್ಟವನಾಗಿ, ಈಗಲೇ, ವೈಕುಂಠಕ್ಕೆ ಹೋಗಿ ಅಲ್ಲಿಂದ ವಿಷ್ಣುವನ್ನು ಜಾಗ್ರತೆಯಾಗಿ ಕರೆದುಕೊಂಡು ಬಾ. ॥೧೬॥

ಎಲೈ ಸುಯಶಾದೇವಿಯ ಪತಿಯಾದ ನಂದಿಕೇಶನೇ! ದೇವತೆಗಳ ಕಾರ್ಯ ಸಿದ್ಧಿಗೋಸ್ಕರ ನೀನು ಜಾಗ್ರತೆಯಾಗಿ ಹೊರಡುವನಾಗು ಎಂದು ಶಿವನು ಹೇಳಲು, ನಂದಿಕೇಶ್ವರನು ಹಾಗೆಯೇ ಆಗಲಿ, ಎಂದು ಹೇಳಿ, ಓಂಕಾರವೆಂಬ ಧ್ವಜದಿಂದ ಯುಕ್ತನಾದ ದೇವೋತ್ತಮನಿಗೆ ನಮಸ್ಕರಿಸಿ, ಜಾಗ್ರತೆಯಾಗಿ, ತನ್ನ ಪರಿವಾರ ಗಣಗಳಿಂದ ಸ್ತೋತ್ರಮಾಡಿಸಿಕೊಳ್ಳುತ್ತಾ ಹೊರಟನು. ॥೧೭॥

ಯಯೌ ದ್ರುತಂ ವಿಮಾನೇನ ಗಣೇಂದ್ರೈಃ ಸಂಸ್ತುತಸ್ತದಾ ।
ಭಸ್ಮೋದ್ಧೂಲಿತದಿವ್ಯಾಂಗಃ ಶಾಂಗಲಿಂಗಾರ್ಚನೇ ರತಃ ॥೧೮॥

ನಂದೀ ಸುನಂದಯನ್ಲೋಕಾನ್ನಗಾಮಾದೌ ತ್ರಿವಿಷ್ಟಪಂ ।
ಮಹೇಂದ್ರೇಣ ಗಣೇಂದ್ರೋಽಪಿ ಪೂಜಿತೋ ಭೋಜಿತಸ್ತದಾ ॥೧೯॥

ಪೃಷ್ಟ್ವಾ ಚಾನಾಮಯಂ ಶಕ್ರಂ ಶಿವಪಾದಾಂಬುಜಾರ್ಚಕಂ ।
ಪ್ರಪಚ್ಛ ನಂದಿಕೇಶಸ್ತಂ ಬೃಹಸ್ಪತಿಮತೇ ಸ್ಥಿತಂ ॥೨೦॥

॥ ನಂದಿಕೇಶ ಉವಾಚ ॥

ತ್ರಿವಿಷ್ಟಪಂ ಸುಖಂ ಪ್ರಾಪ್ಯ ಶಿವಿವಿಷ್ಟಾರ್ಚನೇ ರತಃ ।
ದುರದೃಷ್ಟವಿನಾಶಾಯ ಪ್ರಕೃಷ್ಟಂ ಶರಣಂ ಗತಃ ॥೨೧॥

ನಂದಿಕೇಶವಚಃ ಶ್ರುತ್ವಾ ಮಹೇಂದ್ರಃ ಪ್ರಾಹ ಸಾಂಜಲಿಃ ॥೨೨॥

ಸುಖಸ್ವರೂಪನಾದ ಪರಶಿವನ ಲಿಂಗಾರ್ಚನೆಯಲ್ಲಿ ತತ್ಪರನಾದ ಆ ನಂದಿಕೇಶ್ವರನು, ಭಸ್ಮೋದ್ಧೂಲಿತಶರೀರನಾಗಿ, ಲೋಕಕ್ಕೆಲ್ಲಾ ಆನಂದವನ್ನುಂಟುಮಾಡುತ್ತಾ, ಮೊದಲು ಸ್ವರ್ಗಲೋಕಕ್ಕೆ ಹೋದನು. ॥೧೮॥

ಅಲ್ಲಿ ಮಹೇಂದ್ರನು, ಗಣಶ್ರೇಷ್ಠನಾದ ನಂದಿಕೇಶ್ವರನನ್ನು ಮರ್ಯಾದೆಯಿಂದ ಪೂಜಿಸಿ, ಅವನಿಗೆ ಉಚಿತವಾದ ಭೋಜನಾದಿಗಳನ್ನೆಲ್ಲಾ ಮಾಡಿಸಿದನು. ಅದರಿಂದ ಸಂತುಷ್ಟನಾದ ನಂದಿಕೇಶ್ವರನು, ಶಿವಪದಕಮಲಸೇವಕನಾಗಿ, ಬೃಹಸ್ಪತ್ಯಾಚಾರ್ಯರ ಮಂತ್ರಿತ್ವವನ್ನು ಹೊಂದಿ ನ್ಯಾಯರೀತಿಯಿಂದ ರಾಜ್ಯವಾಳುತ್ತಿರುವ ಇಂದ್ರನನ್ನು ಕುರಿತು ನಂದಿಕೇಶ್ವರನು, ಆರೋಗ್ಯವೇ ಎಂದು ಕುಶಲಪ್ರಶ್ನೆ ಮಾಡಿದನು. ॥೧೯-೨೦॥

ಹಾಗೆಯೇ, ಶಿಪಿವಿಷ್ಟನೆನಿಸಿದ ಆ ಮಹಾದೇವನ ಪೂಜೆಯಲ್ಲಿ ತತ್ಪರನಾದ ನೀನು ಈ ಸ್ವರ್ಗಲೋಕವನ್ನು ಸುಖವಾಗಿ ಹೊಂದಿ, ನಿನ್ನ ದುರದೃಷ್ಟಗಳನ್ನು ಕಳೆದುಕೊಳ್ಳುವುದಕ್ಕೋಸ್ಕರ ಶ್ರೇಷ್ಠನಾದ ಆ ಪರಮೇಶ್ವರನನ್ನೆ ಮರೆಹೊಕ್ಕಿರುವೆ, ಎಂದು ನಂದಿಕೇಶ್ವರನು ಇಂದ್ರನನ್ನು ಹೊಗಳಿದನು. ॥೨೧॥

ಆ ನಂದಿಕೇಶ್ವರನ ಮಾತನ್ನು ಕೇಳಿ ದೇವೇಂದ್ರನು, ಕೈಮುಗಿದು ಹೀಗೆಂದನು. ॥೨೨॥

॥ ಶಕ್ರ ಉವಾಚ ॥

ಶಂಖಾಸುರೇಣ ದೇವಾನಾಂ ಮಹದ್ಭಯಮುಪಸ್ಥಿತಂ ।
ನಂದಿನ್ನಪ್ಸರಸಾಂ ಪೂರ್ವಂ ರಂಭಾಸಂಭೋಗಕಾಮಿನಾಂ ॥೨೩॥

ಚಂದನಾಂಗೇನ ಚ ಮಯಾ ನಂದನಾದಿಸಮಾವೃತಃ ।
ಸುಖತಲ್ಪಗತಶ್ಚಾಹಂ ಮಾರಸಾಯಕಗೋಚರಃ ॥೨೪॥

ನಾಭ್ಯರ್ಚ್ಯಂ ಭಗವತ್ಪದಾಂಬುಜಮಹೋ ಪುಣ್ಯೇ ಪ್ರದೋಷೇಷ್ವಹಂ
ಲಿಂಗಂ ಪುಣ್ಯಪವಿತ್ರಶೀತಲಮಹಾಕರ್ಪೂರನೀರೈಸ್ತದಾ ।
ಪ್ರಾಜ್ಯೈರ್ಮಧ್ವಾಜ್ಯದುಗ್ಧೈರ್ವರದಧಿಸಿತಯಾ ಚಂದನಾದ್ಯೈಶ್ಚ ಹೃದ್ಯೈ
ರ್ನೈವೇದ್ಯೈರ್ಬಹುಬಿಲ್ವಪಲ್ಲವಸುಮೈಸ್ತೇನೇದೃಶೀಂ ದುರ್ಗತಿಂ ॥೨೫॥

ನಂದಿಕೇಶ್ವರಸ್ವಾಮಿಯೇ, ಈಗ ದುಷ್ಟನಾದ ಶಂಖಾಸುರನಿಂದ ದೇವತೆಗಳಾದ ನಮಗೆಲ್ಲಾ ಅತ್ಯಂತ ಭಯವುಂಟಾಗಿದೆ. ಗಣಶ್ರೇಷ್ಠನೇ, ರಂಭಾದ್ಯಪ್ಸರಸ್ತ್ರೀಯರೊಡನೆ ಸುಖವಾಗಿ ಹಿಂದೆ ಸಂಭೋಗವನ್ನು ಅಪೇಕ್ಷಿಸಿ, ಆನಂದದಿಂದ ಕಾಲಕಳೆಯುತ್ತಿದ್ದ ದೇವತೆಗಳೆಲ್ಲರೂ ಈಗ ಕಡುದುಃಖಕ್ಕೊಳಗಾಗಿರುವರು. ನಾನೂ ಸಹ ಹಿಂದೆ ಚಂದನಲಿಪ್ತವಾದ ದಿವ್ಯಶರೀರದಿಂದ ಪುತ್ರಾದಿ ಪರಿವೃತನಾಗಿ ಆ ಅಪ್ಸರಸ್ತ್ರೀಯರೊಡನೆ ವಿಹಾರಮಾಡುತ್ತಾ, ಯಾವಾಗಲೂ ಸುಖಶಯನವನ್ನು ಪಡೆದು ಮನ್ಮಥನ ಬಾಣಕ್ಕೆ ಗುರಿಯಾದೆನು. ॥೨೩-೨೪॥

ಅಯ್ಯಾ ಗಣಾಧಿಪನೇ, ಪುಣ್ಯಕರವಾದ ಪ್ರದೋಷಕಾಲಗಳಲ್ಲಿ ನಾನು ಆ ಭಗವಂತನ ಅಡಿದಾವರೆಗಳನ್ನು ಪೂಜೆಮಾಡಲಿಲ್ಲ. ಪರಮಪಾವನವಾದ ಶಿವಲಿಂಗವನ್ನು ಪುಣ್ಯಕರವೂ, ಪವಿತ್ರವೂ, ಶೀತಲವೂ ಆಗಿರುವ ಕರ್ಪೂರದಿಂದ ಬೆರೆಸಿದ ನೀರುಗಳಿಂದಲೂ ವಿಶೇಷವಾಗಿ, ಜೇನು, ತುಪ್ಪ, ಹಾಲು, ಉತ್ತಮವಾದ ಮೊಸರು, ಕಲ್ಲುಸಕ್ಕರೆ, ಚಂದನವೇ ಮೊದಲಾದ ದಿವ್ಯಗಂಧಗಳು, ಮನೋಹರವಾದ ನೈವೇದ್ಯಪದಾರ್ಥಗಳು, ಒಳ್ಳೆಯ ಚಿಗುರು ಬಿಲ್ವದಳಗಳು, ಶ್ರೇಷ್ಠವಾದ ಹೂಗಳು, ಇವುಗಳಿಂದಲೂ ಪೂಜಿಸಲಿಲ್ಲ. ಆದುದರಿಂದ ನನಗೆ ಈ ದುರವಸ್ಥೆಯುಂಟಾಗಿದೆ. ॥೨೫॥

ಸಂಪ್ರಾಪ್ತೋಽಸ್ಮಿ ಸುರಾಸುರೈಶ್ಚ ವಿಹಿತೇನ್ಯೈವಾಭವನ್ಮೇ ಭಯಂ
ಯುದ್ಧೇ ಶೌಂಡಸುದೃಪ್ತಶಂಖಸಚಿವೈಃ ಸಂತಾಡಿತೋ ಮುದ್ಗರೈಃ ।
ದೇವೈರ್ವಾಹನಭೂಷಣಾದಿರಹಿತೈರ್ನಷ್ಟಂ ಸದಾ ವಿಷ್ಟಪಂ
ಕಷ್ಟಂ ಪ್ರಾಪ್ತಮಹೋ ಗಣೇಂದ್ರ ಭಗವತ್ಪಾದಾರ್ಚನಾಹೀನತಃ ॥೨೬॥

ದುಃಖಮಿಂದ್ರಸ್ಯ ತಜ್ಜ್ಞಾತ್ವಾ ನಂದಿಕೇಶೋಽಮರಾಧಿಪಂ ।
ಪ್ರಾಹ ತಂ ವಿನಯೋಪೇತಂ ಪ್ರದೋಷಾರ್ಚನವೈಭವಂ ॥೨೭॥

॥ ನಂದಿಕೇಶ ಉವಾಚ ॥

ದಾರಿದ್ರ್ಯಾರ್ಣವಮಧ್ಯಗಸ್ತ್ವನುದಿನಂ ಪುಣ್ಯೇ ಪ್ರದೋಷೇ ಶಿವಂ
ಸಂಪೂಜ್ಯಾಮಲಬಿಲ್ವಪಲ್ಲವಲವೈರ್ನೀರೈಃ ಫಲೈರ್ವಾ ಹರೇ ।
ಸಂಪ್ರಾಪ್ಯ ಪ್ರಮಥಾಧಿನಾಥಪದವೀಂ ಭೂಮೌ ಪರಂ ಜಾಯತೇ
ದೃಪ್ತೋತ್ತುಂಗತುರಂಗದಂತಿನಿವಹೈರ್ಭೂಮಂಡಲೇಶೋ ನೃಪಃ ॥೨೮॥

ನಾನು ಸರಿಯಾಗಿ ಆ ದೇವನಲ್ಲಿ ಭಕ್ತಿಯಿಂದ ಕೂಡಿದ್ದಾಗ ನನಗೆ ದೇವ ರಾಕ್ಷಸರಿಂದಲೂ ಭಯವುಂಟಾಗಲಿಲ್ಲ. ಈಗ ಯುದ್ಧದಲ್ಲಿ ಕೊಬ್ಬಿದ ಆ ಶಂಖ ದೈತ್ಯನ ದುಷ್ಟಮಂತ್ರಿಗಳು ಮುದ್ಗರಾಯುಧವನ್ನು ಹಿಡಿದು ನನ್ನನ್ನು ಹೊಡೆದು ಓಡಿಸಿರುವರು. ದೇವತೆಗಳೂ ಆ ದುಷ್ಟರ ಹಾವಳಿಯಿಂದ ವಾಹನ, ಆಭರಣ ಇವುಗಳನ್ನು ಕಳೆದುಕೊಂಡು, ಈ ಸ್ವರ್ಗದಲ್ಲಿ ಬಹಳ ಕಷ್ಟಕ್ಕೊಳಗಾಗಿರುವರು. ಎಲೈ, ಗಣಶ್ರೇಷ್ಠನಾದ ಭಗವಂತನೇ, ಈರೀತಿ ಆ ಭಗವಂತನಾದ ಮಹಾದೇವನ ಪಾದಪೂಜೆಯನ್ನು ಮಾಡದೇ ಹೋದ ಫಲವಾಗಿ ಈಗ ಸ್ವರ್ಗಲೋಕವೇ ಕಷ್ಟಕ್ಕೊಳಗಾಗಿ ಪೇಚಾಡುತ್ತಿದೆಯೆಂದು ಇಂದ್ರನು ನಂದಿಕೇಶ್ವರನಿಗೆ ಅರಿಕೆಮಾಡಿದನು. ||೨೬||

ಹೀಗೆ ದೇವೇಂದ್ರನ ದುಃಖಸಮಾಚಾರವನ್ನು ಕೇಳಿ ನಂದಿಕೇಶ್ವರನು, ವಿನಯದಿಂದ ಕೂಡಿದ ಆ ದೇವರಾಜನಿಗೆ, ಪ್ರದೋಷಕಾಲದಲ್ಲಿ ಮಹಾದೇವನನ್ನು ಪೂಜಿಸುವ ಕ್ರಮವನ್ನೂ ಮತ್ತು ಅದರ ವೈಭವವನ್ನೂ ಮುಂದೆ ಹೇಳುವಂತೆ ನಿರೂಪಿಸಿದನು. ||೨೭||

ಇಂದ್ರನೇ, ದಾರಿದ್ರ್ಯವೆಂಬ ಸಮುದ್ರದ ಮಧ್ಯದಲ್ಲಿ ಮುಳುಗಿರುವವನು ಪ್ರತಿದಿನವೂ ಪುಣ್ಯಕರವಾದ ಪ್ರದೋಷಕಾಲಗಳಲ್ಲಿ ಪರಮೇಶ್ವರನನ್ನು ನಿರ್ಮಲ

ಅತಃ ಪರಂ ಭೂತಿವಿಭೂಷಣಸ್ತ್ವಂ
ಲಿಂಗಂ ಸಮಭ್ಯರ್ಚ್ಯ ಸುರೈಃ ಸಮೇತಃ ।
ಪುಣ್ಯಪ್ರದೋಷೇಷು ತಯಾಥ ವಜ್ರಿ
ನ್ಪ್ರಾಪ್ಸ್ಯಸಿ ಭಾಗ್ಯಾನ್ಯಮಿತಾನಿ ತಾನಿ ॥೨೯॥

ಇತ್ಯುಕ್ತ್ವಾ ನಂದಿಕೇಶಸ್ತಮನುಜ್ಞಾಪ್ಯ ಗಣೈರ್ವೃತಃ ।
ವಿಮಾನೇನಾರ್ಕವರ್ಣೇನ ಬ್ರಹ್ಮಧಾಮ ಸಮಾಯಯೌ ॥೩೦॥

ಬ್ರಹ್ಮಣಾ ಪೂಜಿತಸ್ತತ್ರ ನಿಷಣ್ಣಃ ಪರಮಾಸನೇ ।
ಉವಾಚ ದೇವಂ ಬ್ರಹ್ಮಾಣಂ ನಂದಿಕೇಶೋ ಗಣಾಗ್ರಣೀಃ ॥೩೧॥

ವಾದ ಬಿಲ್ವಪತ್ರೆಗಳಿಂದಲೂ, ಸ್ವಚ್ಛವಾದ ನೀರು ಮತ್ತು ಹಣ್ಣು ಇವೇ ಮೊದಲಾದವುಗಳಿಂದಲೂ, ಭಕ್ತಿಪೂರ್ವಕವಾಗಿ ಪೂಜಿಸಬೇಕು. ಅದರಿಂದ ಅವನು ಪ್ರಮಥ ಗಣಗಳಿಗೆ ಸ್ವಾಮಿಯಾದ ಪರಮೇಶ್ವರನ ಪದವಿಯನ್ನೇ ಹೊಂದುವನು. ಕಾಲಕ್ರಮದಲ್ಲಿ ಈ ಭೂಲೋಕದಲ್ಲಿ ಕೊಬ್ಬಿದ ಮತ್ತು ಉನ್ನತವಾಗಿರುವ ಕುದುರೆ, ಆನೆ ಇವುಗಳ ಸಮೂಹದಿಂದ ಯುಕ್ತನಾದ ಚಕ್ರವರ್ತಿಯಾಗಿ ಜನಿಸುವನು. ॥೨೮॥

ಓ ದೇವೇಂದ್ರ, ಇನ್ನು ಮುಂದೆ ನೀನು, ಭಸ್ಮವೆಂಬ ಆಭರಣವನ್ನಲಂಕರಿಸಿಕೊಂಡು, ನಿನ್ನ ಪರಿವಾರದೇವತೆಗಳೊಡನೆ, ಪುಣ್ಯಕರವಾದ ಪ್ರದೋಷಸಮಯಗಳಲ್ಲಿ ಪರಶಿವನ ಲಿಂಗವನ್ನು ಪೂಜಿಸು. ಈ ರೀತಿಯಾದ ಶಿವಲಿಂಗಪೂಜೆಯಿಂದ ಅಪಾರವಾದ ಐಶ್ವರ್ಯವನ್ನು ಪಡೆಯುತ್ತೀಯೆ ಎಂದು ನಂದಿಕೇಶ್ವರನು ದೇವೇಂದ್ರನಿಗೆ ಪ್ರದೋಷಕಾಲದ ಪೂಜಾಮಹಿಮೆಯನ್ನು ತಿಳಿಸಿದನು. ॥೨೯॥

ನಂದೀಕೇಶ್ವರನು ಹಾಗೆ ಇಂದ್ರನಿಗೆ ಉಪದೇಶಿಸಿ ಅವನನುಜ್ಞೆಯನ್ನು ಪಡೆದು, ಅಲ್ಲಿಂದ ತನ್ನ ಗಣಗಳೊಡನೆ ಹೊರಟು, ಸೂರ್ಯನಂತೆ ಶುಭ್ರವಾದ ದಿವ್ಯ ವಿಮಾನದಲ್ಲಿ ಕುಳಿತು, ಬ್ರಹ್ಮಲೋಕಕ್ಕೆ ಹೋದನು. ॥೩೦॥

ಅಲ್ಲಿ ಆ ಬ್ರಹ್ಮನಿಂದ ಪೂಜಿಸಲ್ಪಟ್ಟವನಾಗಿ, ಶ್ರೇಷ್ಠವಾದ ಆಸನದ ಮೇಲೆ ಕುಳಿತು ಗಣಾಧಿಪನಾದ ನಂದಿಕೇಶ್ವರನು, ಆ ಬ್ರಹ್ಮನೊಡನೆ ಹೀಗೆ ಮಾತನಾಡಿದನು. ॥೩೧॥

॥ ನಂದಿಕೇಶ ಉವಾಚ ॥

ಪದ್ಮಾಸನ ಕಥಂ ಚಿತ್ತಮಧುನಾ ಭವತಃ ಸದಾ ।
ದೇವಾನಾಂ ಕಾರ್ಯಸಿದ್ಧ್ಯರ್ಥಂ ಸ್ಮಾರಿತಃ ಶಂಕರೇಣ ಹಿ ॥೩೨॥

ವಿಷ್ಣುರೋಚಿಷ್ಣುರತ್ಯರ್ಥಂ ತಸ್ಮಾದ್ಗಚ್ಛಾಮಿ ವೇಗತಃ ।
ದೀನೋಽಸಿ ನಿತರಾಂ ಬ್ರಹ್ಮನ್ಸೃಷ್ಟಿವ್ಯಾಪಾರವರ್ಜಿತಃ ॥೩೩॥

ಸದಸ್ಯೈಶ್ಚಾಪಿ ಖಿನ್ನೈಶ್ಚ ತಥಾ ಪೂರ್ವಂ ನ ತೇ ಸಭಾ ।
ಇತಿ ಪೃಷ್ಟೋ ಗಣೇಶೇನ ಉವಾಚ ಚತುರಾನನಃ ॥೩೪॥

॥ ಬ್ರಹ್ಮೋವಾಚ ॥

ಪೂರ್ವಂ ತಪಸ್ಯಯಾ ಲಬ್ಧಾ ಮಯಾ ವೇದಾಃ ಪ್ರಸಾದತಃ ।
ಮಹಾದೇವಸ್ಯ ವೈ ನಂದಿನ್ ಪೂರ್ವಮೀಶಾನವಕ್ತ್ರತಃ ॥೩೫॥

ಎಲೈ ಕಮಲಾಸನನಾದ ಬ್ರಹ್ಮನೇ, ಈಗ ನಿನ್ನ ಮನಸ್ಸು ಯಾವ ರೀತಿ ಯಿರುವುದು? ಯಾವಾಗಲೂ ದೇವತೆಗಳ ಕಾರ್ಯಸಿದ್ಧಿಯ ವಿಷಯದಲ್ಲಿ ಆ ಲೋಕ ಶಂಕರನು ನಿನ್ನನ್ನು ಜ್ಞಾಪಿಸಿಕೊಳ್ಳುತ್ತಿರುವನು. ॥೩೨॥

ಪ್ರಕಾಶಮಾನವಾದ ದೇಹಕಾಂತಿಯಿಂದ ಶೋಭಿಸುತ್ತಿರುವ ವಿಷ್ಣುವಿನ ಆವಶ್ಯಕತೆಯು ಈಗ ನಮಗೆ ಬೇಕಾಗಿರುವುದರಿಂದ, ಜಾಗ್ರತೆಯಾಗಿ, ಆವನ ಸಮೀಪಕ್ಕೆ ಹೋಗುವೆನು. ಬ್ರಹ್ಮನೇ, ಏಕೆ ಇಷ್ಟು ದೀನನಾಗಿರುವೆ? ಸೃಷ್ಟಿಕಾರ್ಯ ವನ್ನೂ ಬಿಟ್ಟಿರುವೆಯಲ್ಲಾ! ನಿನ್ನ ಸದಸ್ಯರೂ ಸಹ ಬಹಳ ಖಿನ್ನರಾಗಿರುವುದರಿಂದ ನಿನ್ನ ಸಭೆಯು ಹಿಂದಿನಂತೆ ಕಾಣುವುದಿಲ್ಲ. ಇದಕ್ಕೆ ಕಾರಣವೇನು? ಎಂದು ಕೇಳಲು, ಆಗ ಚತುರ್ಮುಖಬ್ರಹ್ಮನು ನಂದಿಕೇಶ್ವರನಿಗೆ ಹೀಗೆ ಉತ್ತರವಿತ್ತನು. ॥೩೩-೩೪॥

"ಅಯ್ಯಾ ನಂದಿಕೇಶ್ವರನೇ, ಹಿಂದೆ ನಾನು ತಪಸ್ಸುಮಾಡಿ ಮಹಾದೇವನ ಅನುಗ್ರಹವನ್ನು ಸಂಪಾದಿಸಿ, ಈಶ್ವರನ ಮುಖದಿಂದಲೇ ವೇದಗಳನ್ನು ಉಪದೇಶ ಹೊಂದಿದೆನಷ್ಟೆ. ॥೩೫॥

ಯೋ ವೇದಾದಿಃ ಸ್ವರಃ ಶಂಭುಃ ವೇದಾಂತಮಹಿಮಾ ಶಿವಃ ।
ಮಾಂದ್ಯಾನ್ಮದಾಚ್ಚ ತತ್ಪೂಜಾ ಮಯಾ ತ್ಯಕ್ತಾ ದುರಾತ್ಮನಾ ॥೩೬॥

ಶಂಖಾಸುರೇಣ ಮೇ ವೇದಾ ಹೃತಾ ನಷ್ಟಸ್ಮೃತಿಃ ಸದಾ ।
ಇತಿ ಕರ್ತವ್ಯತಾಮೂಢಶ್ಚಿಂತಯಾ ಸಂಸ್ಥಿತೋಽಸ್ಮ್ಯಹಂ ॥೩೭॥

ಶಾಂಗಾಂಗಸಂಗತಶ್ಚಾದ್ಯ ಶೈಲಾದೇ ಮೇಽಭವನ್ಮತಿಃ ।
ಮಹಾದೇವಮಹಾಲಿಂಗಪೂಜಾಧ್ಯಾನಾರ್ಚನಾದಿಷು ॥೩೮॥

ವಿಸ್ಮಯಂ ಪರಮಂ ಗತ್ವಾ ಶ್ರುತ್ವಾ ಚ ಬ್ರಹ್ಮಣೋ ವಚಃ ।
ಉವಾಚ ಪದ್ಮಜಂ ನಂದೀ ಸಸದಸ್ಯಂ ಪ್ರಹೃಷ್ಟವತ್ ॥೩೯॥

ಭವಾನ್ಲೋಕನಿಯಂತಾ ಹಿ ಕಥಂ ತ್ವಾಂ ಮೋಹ ಆವಿಶತ್ ।
ಮಹಾಂತೋಽಪಿ ಚ ಮುಹ್ಯಂತಿ ಕಾಲಕಾಲಕೃಪೋಜ್ಝಿತಾಃ ॥೪೦॥

---

ವೇದಗಳಿಗೆ ಆದಿಭೂತವಾದ ಸ್ವರವೇ ಶಂಭುವಾಗಿರುವನು. ಆ ಶಿವನೇ ವೇದಾಂತಪ್ರಭಾವವುಳ್ಳವನೂ ಸರ್ವೇಶ್ವರನೂ ಆಗಿರುವನು. ಹೀಗಿರುವಾಗ ದಡ್ಡತನದಿಂದಲೂ, ಕೊಬ್ಬಿನಿಂದಲೂ ದುರಾತ್ಮನಾದ ನಾನು ಆ ಮಹಾಮಹಿಮನ ಪೂಜೆಯನ್ನು ಬಿಟ್ಟೆನು. ॥೩೬॥

ಈಗ ಶಂಖಾಸುರನು ನನ್ನಲ್ಲಿದ್ದ ವೇದಗಳನ್ನೆಲ್ಲಾ ಕದ್ದಿರುವನು. ಇದರಿಂದ ಸ್ಮೃತಿಗಳೆಲ್ಲವೂ ನಾಶವಾಗಿರುವುವು. ಆದರಿಂದ ನಾನು ಮುಂದೇನುಮಾಡಬೇಕೆಂದು ತೋರದೇ ಚಿಂತಾಕ್ರಾಂತನಾಗಿರುವೆನು. ॥೩೭॥

ಸುಖಸ್ವರೂಪನಾದ ಆ ಶಿವನ ಅವಯವಸಂಬಂಧದಿಂದ ಈಗ ಶಿಲಾದ ಮಹರ್ಷಿಯ ಪುತ್ರನಾದ ನಿನ್ನಲ್ಲಿ ನನಗೆ ಭಕ್ತಿಯುಂಟಾಗಿರುವುದು. ಮಹಾನುಭಾವನಾದ ನಿನ್ನ ದಿವ್ಯಸಂದರ್ಶನದಿಂದ ಆ ಮಹಾದೇವನ ಮಹಾಲಿಂಗದ ಧ್ಯಾನ, ಪೂಜಾ ಮತ್ತು ಅರ್ಚನಾದಿಗಳಲ್ಲಿ ಉತ್ಸಾಹವುಂಟಾಗಿರುವುದು” ॥೩೮॥

ಬ್ರಹ್ಮನ ಮಾತನ್ನು ಕೇಳಿ ಆಶ್ಚರ್ಯಗೊಂಡು ನಂದೀಶ್ವರನು ಸದಸ್ಯರೊಡನೆ ಕುಳಿದಿದ್ದ ಬ್ರಹ್ಮನನ್ನು ಕುರಿತು ಸಂತೋಷವನ್ನು ತೋರ್ಪಡಿಸುತ್ತಾ ಇಂತೆಂದನು. ॥೩೯॥

ಎಲೈ ಬ್ರಹ್ಮನೇ, ನೀನೇ ಲೋಕನಿಯಾಮಕನಾಗಿರುವೆ. ಹೀಗಿರುವಾಗ ನಿನಗೆ ಹೀಗೆ ಅಜ್ಞಾನವುಂಟಾಗಲು ಕಾರಣವೇನು? ಅಥವಾ ನಿನ್ನ ತಪ್ಪೇನೂ ಇಲ್ಲ.

ಧನ್ಯಾನಾಂ ಪರಮಿಂದುಚೂಡಚರಣಾಂಭೋಜಾರ್ಚನೇ ಜಾಯತೇ
ಶ್ರೀರುದ್ರಾಕ್ಷವಿಭೂಷಣೇ ಸಿತಲಸದ್ಭಸ್ಮತ್ರಿಪುಂಡ್ರೇ ಸದಾ ।
ರುದ್ರಾವರ್ತನಪಂಚಪಾತಕಹರೇ ಪಂಚಾಕ್ಷರೇ ಮುಕ್ತಿದೇ
ಸಾಯಂ ಬಿಲ್ವದಲೈಶ್ಚ ಪೂಜನಮತಿಃ ಪುಣ್ಯೈಃ ವರಂ ಜಾಯತೇ ॥೪೧॥

ಯೋ ವಾ ಪ್ರದೋಷಸಮಯೇ ಶಿವಲಿಂಗಪೂಜಾಂ
ಕರ್ತುಂ ಯತೇತ ವಿಭವೈರಭಿಷೇಚನೀಯೈಃ ।
ತಂ ತಾವದಂತಕರಿಪುಂ ಪ್ರಮಥಾಧಿನಾಥಂ
ದೇವಾಃಸ್ತುವಂತಿ ಪ್ರಣಮಂತಿ ತದಂಘ್ರಿಯುಗ್ಮಂ ॥೪೨॥

ಕಾಲಕಾಲನೆನಿಸಿದ (ಮೃತ್ಯುಂಜಯನೆನಿಸಿದ) ಆ ಮಹಾದೇವನ
ತಪ್ಪಿದರೆ ಮಹಾತ್ಮರೂ ಸಹ ಮೋಹಹೊಂದುವುದು ಸ್ವಭಾವವೇ ಆಗಿದೆ. ॥೪೦॥

ಧನ್ಯರಾದ ಕೆಲವು ಮಂದಿಗೆ ಮಾತ್ರ ಚಂದ್ರಶೇಖರನಾದ ಆ ಮಹೇಶ್ವರನ ಚರಣಕಮಲಪೂಜೆಯಲ್ಲಿಯೂ, ಸಂಪತ್ಕರವಾದ ರುದ್ರಾಕ್ಷಾಭರಣ ಮತ್ತು ಶುಭ್ರವಾದ ಭಸ್ಮತ್ರಿಪುಂಡ್ರ ಇವುಗಳ ಧಾರಣೆಯಲ್ಲಿಯೂ ಬುದ್ಧಿಯುಂಟಾಗುವುದು. ರುದ್ರ ಮಂತ್ರವು (ಬ್ರಹ್ಮಹತ್ಯಾ, ಸುರಾಪಾನ, ಚಿನ್ನ ಕದಿಯುವುದು, ಗುರುಪತ್ನೀ ಸಮಾಗಮ ಮತ್ತು ಇವರೊಡನೆ ಬೆರೆಯುವುದು) ಈ ಪಂಚಮಹಾಪಾತಕಗಳನ್ನೂ ನಾಶಪಡಿಸುವುದು ಮತ್ತು ಮೋಕ್ಷವನ್ನುಂಟುಮಾಡುವ ಶಿವಪಂಚಾಕ್ಷರಮಂತ್ರ ಜಪದಲ್ಲಿಯೂ ಬುದ್ಧಿಯನ್ನುಂಟುಮಾಡುವುದು. ಆದರೆ ಅದಕ್ಕೆ ಪ್ರದೋಷಕಾಲ ಗಳಲ್ಲಿ ಒಳ್ಳೆಯ ಬಿಲ್ವಪತ್ರೆಗಳಿಂದ ಶಿವನನ್ನು ಪೂಜೆಮಾಡಬೇಕು. ಹಾಗೆ ಪೂಜೆ ನಡೆಸಲು ವಿಶೇಷ ಪುಣ್ಯವೇ ಕಾರಣವಾಗುವುದು. ॥೪೧॥

ಪವಿತ್ರವಾದ ಪ್ರದೋಷಕಾಲಗಳಲ್ಲಿ ಯಾರು ಯೋಗ್ಯವಾದ ವೈಭವಗಳಿಂದ ಆ ಶಿವಲಿಂಗಕ್ಕೆ ಅಭಿಷೇಕಾದಿಗಳಿಂದ ಪೂಜೆ ಸಲ್ಲಿಸುವರೋ, ಅಂತಹ ಪುಣ್ಯಾತ್ಮ ರನ್ನು ದೇವತೆಗಳು ಸಾಕ್ಷಾದ್ಯಮನನ್ನು ನಿಗ್ರಹಿಸಿದ ಪ್ರಮಥಗಣಗಳಿಗೊಡೆಯನಾದ ಪರಶಿವನೇ ಎಂದು ತಿಳಿದು ಅವನನ್ನು ಸ್ತೋತ್ರಮಾಡುತ್ತಾ, ಆ ಶಿವಭಕ್ತನ ಪಾದಕಮಲಗಳಿಗೆ ನಮಸ್ಕಾರಮಾಡುತ್ತಾರೆ. ॥೪೨॥

ನ ಜಾನಂತಿ ಗೌರೀಸಹಾಯೋರುಗಾಯಂ
ಮಹಾಯೋಗಸಂಸಿದ್ಧಕಾಯಂ ಸಖಾಯಂ ।
ಕರ್ಪೂರಖಂಡಸಮತಾಕೃತಿಶೋಭಿಕಾಯಂ
ವಂದೇ ಮಹೇಶ್ವರಮಹಂ ತಮುಮಾಸಹಾಯಂ ॥೪೩॥

ಬ್ರಹ್ಮಾಣಂ ಸಮನುಜ್ಞಾಪ್ಯ ಯಯೌ ಶ್ರೀನಂದಿಕೇಶ್ವರಃ ।
ತತೋ ಗಣೇಶ್ವರೈರ್ಯುಕ್ತೋ ವೈಕುಂಠಭವನಂ ಯಯೌ ॥೪೪॥

ವಿಷ್ವಕ್ಸೇನಾದಿಭಿಸ್ತತ್ರ ಶೋಭಿತಂ ವೈಷ್ಣವೈರ್ಗಣೈಃ ।
ಸ ತೈರ್ನಿವೇದಿತೋ ವಿಷ್ಣುಃ ಸಾರ್ಘ್ಯಹಸ್ತಸ್ತದುನ್ಮುಖಃ ॥೪೫॥

ಸಮಾಯಯೌ ಬಹಿರ್ದ್ರಷ್ಟುಂ ನಂದೀಶ್ವರಮುಖಾನ್ಗಣಾನ್ ।
ದದರ್ಶ ಚ ವಿಮಾನಾಗ್ರಸ್ಥಿತಂ ನಂದೀಶ್ವರಂ ಗಣೈಃ ॥೪೬॥

---

ಸಾಮಾನ್ಯವಾಗಿ ಜನರು ಗೌರೀರಮಣನೆನಿಸಿದ ಆ ಮಹಾದೇವನ ದೊಡ್ಡ ಯೋಗ್ಯತೆಯನ್ನು ತಿಳಿಯಲಾರರು. ಅನೇಕ ಮಹಾಯೋಗಗಳಿಂದ ಸಿದ್ಧಿಸಿರುವ ದಿವ್ಯಶರೀರವುಳ್ಳ ಆ ಮಹಾದೇವನು ಸಕಲ ಪ್ರಪಂಚದ ಜನರಿಗೂ ಮಿತ್ರ ಸ್ವರೂಪನು. ಕರ್ಪೂರದ ರಾಶಿಗೆ ಸಮಾನವಾದ ಆಕೃತಿಯಿಂದ ಶೋಭಿಸುತ್ತಿರುವ ಶರೀರವುಳ್ಳವನು. ಅಂತಹ ಉಮಾರಮಣನೆನಿಸಿದ ಮಹಾದೇವನಿಗೆ ನಾನು ಸದಾ ನಮಸ್ಕರಿಸುತ್ತೇನೆ. ॥೪೩॥

ಹೀಗೆ ನಂದಿಕೇಶ್ವರನು ಬ್ರಹ್ಮನಿಗೆ ಸಮಾಧಾನವನ್ನು ಹೇಳಿ ಅವನ ಅನುಮತಿಯನ್ನು ಪಡೆದು, ಗಣಾಧಿಪತಿಗಳೊಡನೆ ಅಲ್ಲಿಂದ ಹೊರಟು ವೈಕುಂಠ ಲೋಕಕ್ಕೆ ಬಂದನು. ॥೪೪॥

ವೈಕುಂಠದಲ್ಲಿ ವಿಷ್ವಕ್ಸೇನನೇ ಮೊದಲಾದ ವೈಷ್ಣವಗಣಗಳಿಂದ ಶೋಭಿಸುತ್ತಾ ಕುಳಿತಿದ್ದ ಮಹಾವಿಷ್ಣುವು, ತನ್ನ ಗಣಗಳಿಂದ ನಂದಿಕೇಶ್ವರನ ಬರುವಿಕೆಯನ್ನರಿತು ಅರ್ಘ್ಯಪಾತ್ರೆಯನ್ನು ಕೈಯಲ್ಲಿ ಹಿಡಿದು ಅವನನ್ನು ಎದುರುಗೊಳ್ಳಲು ಹೊರಟನು. ॥೪೫॥

ಹೀಗೆ ಅವನನ್ನು ಎದುರುಗೊಳ್ಳಲು ವಿಷ್ಣುವು ಹೊರಗೆ ಬಂದು ನಂದೀಶ್ವರನೇ ಮೊದಲಾದ ಗಣಗಳನ್ನು ನೋಡುತ್ತಾ, ತನ್ನ ಗಣಗಳೊಡನೆ ವಿಮಾನದ ತುದಿಯಲ್ಲಿ ಕುಳಿದಿದ್ದ ಆ ನಂದಿಕೇಶ್ವರನನ್ನು ಕಂಡನು. ॥೪೬॥

ಶೈಲಾದಿಂ ತಮುದಾರಾಂಗಂ ದ್ವಿತೀಯಮಿವ ಶಂಕರಂ ॥೪೭॥

ವಿಜಿತವಿಪಿನವಾತಪ್ರೋತಪೂತಾನ್
ಗಗನಾಭೋಗವಿಹಾರಚಾರುಸಿದ್ಧಾನ್ ।
ಭವದಾರುಣನಖಪ್ರಭಾವಿದೀಪ್ತಿದೀಪ್ತಾಂ
ಛಿವಭಕ್ತಾನ್ದದೃಶೇಽಥ ವಾಸುದೇವಃ ॥೪೮॥

ಪ್ರಣಮ್ಯ ಕುಶಲಪ್ರಶ್ನೈಃ ಪೂಜಯಾಮಾಸ ನಂದಿನಂ ।
ಭೋಜಯಾಮಾಸ ಶುದ್ಧಾನ್ನೈರ್ಮಹಾದೇವನಿವೇದಿತೈಃ ॥೪೯॥

ಸಮಭ್ಯರ್ಚ್ಯ ಮಹಾಲಿಂಗಮಿಂದ್ರನೀಲಮಯಂ ಹರಿಃ ।
ಬಿಲ್ವಪತ್ರೈರ್ಧೂಪದೀಪೈರ್ನಂದಿಕೇಶೇನ ಸಂಯುತಃ ॥೫೦॥

ಶಿಲಾದಮುನಿಯ ಕುಮಾರನಾದ ನಂದಿಕೇಶ್ವರನು ದಿವ್ಯವಾದ ಅವಯವ ಕಾಂತಿಯಿಂದ ಶೋಭಿಸುತ್ತಾ ಎರಡನೆಯ ಶಂಕರನಂತೆಯೇ ಕಾಣುತ್ತಿದ್ದನು ॥೪೭॥

ಅರಣ್ಯದಲ್ಲಿ ಮನೋಹರವಾಗಿ ಬೀಸುವ ಮಾರುತವನ್ನು ಜಯಿಸಿ, ಪರಿಶುದ್ಧರಾಗಿ ಆ ವಾಯುವನ್ನೇ ಪವಿತ್ರವನ್ನಾಗಿ ಮಾಡಿಕೊಂಡಿರುವ (ಅಂದರೆ ವಾಯುವಿನಂತೆ ಅಂತರಿಕ್ಷದಲ್ಲಿ ಸಂಚಾರಮಾಡುವ ಸಾಮರ್ಥ್ಯವುಳ್ಳ) ಪರಶಿವ ಭಕ್ತರು ಅಂತರಿಕ್ಷಪ್ರದೇಶದಲ್ಲಿ ಸಂಚಾರಮಾಡುವ ಮನೋಹರವಾದ ಸಿದ್ಧಿಯನ್ನು ಪಡೆದಿರುವರು. ಈ ಸಂಸಾರವೆಂಬ ಭಯಂಕರವಾದ ಸಮುದ್ರವನ್ನು ಹೊಡೆದೋಡಿಸಲು ಹೊರಟಿರುವ ಶಿವನ ಉಗುರಿನ ಕಾಂತಿಯ ಜ್ವಾಲೆಗಳಿಂದ ಹೊಳೆಯುತ್ತಿರುವರು. ಅಂತಹ ದೇವನ ಭಕ್ತರನ್ನು ಮಹಾವಿಷ್ಣುವು ದರ್ಶನಮಾಡಿದನು. ॥೪೮॥

ವಾಸುದೇವನು ನಂದಿಕೇಶ್ವರನಿಗೆ ನಮಸ್ಕಾರಮಾಡಿ, ಕುಶಲಪ್ರಶ್ನೆಯನ್ನು ನಡೆಸಿ, ಅತಿಥಿಸತ್ಕಾರಪೂರ್ವಕವಾಗಿ ಪೂಜೆಮಾಡಿದನಂತರ, ಆ ಮಹೇಶ್ವರನಿಗೆ ನಿವೇದನಮಾಡಿದ್ದ ದಿವ್ಯವೂ, ಪರಿಶುದ್ಧವೂ ಆದ ಅನ್ನದಿಂದ ನಂದೀಶ್ವರನನ್ನು ತೃಪ್ತಿಪಡಿಸಿದನು. ॥೪೯॥

ಮಹಾವಿಷ್ಣುವು ನಂದೀಶ್ವರನೊಡನೆ ಇಂದ್ರನೀಲಮಣಿಯಿಂದ ನಿರ್ಮಿತವಾದ ಮಹಾದೇವನ ದಿವ್ಯಲಿಂಗವನ್ನು ಚಿಗುರಾದ ಬಿಲ್ವಪತ್ರೆಗಳಿಂದಲೂ ಮತ್ತು

ಗಣಾಶ್ಚ ಕೈರ್ಲಿಂಗಪೂಜಾಂ ಸ್ವೇಷು ಲಿಂಗೇಷು ಸತ್ತಮಾಃ ।
ಬುಭುಜುಸ್ತೇ ಪರಂ ಹೃಷ್ಟಾಃ ವಿಷ್ಣುನಾ ಗಣಪಾಸ್ತದಾ ॥೫೦॥

ಗಂಧಧೂಪಾದಿಭಿಃ ಪುಷ್ಪೈರ್ವಸ್ತ್ರೈರಾಭರಣೈಸ್ತದಾ ।
ಸೋಽತ್ಸಾಹಂ ನಂದಿನಂ ವಿಷ್ಣುಃ ಸೋಽಪಚಾರಮಥಾಽಬ್ರವೀತ್ ॥೫೨॥

॥ ವಿಷ್ಣುರುವಾಚ ॥

ಭವದ್ಭದ್ರಸಂದರ್ಶನಂ ಜಾತಮದ್ಯ
ಫಲಂ ಪ್ರಾಪ್ತಮಕ್ಷ್ಣೋರ್ಮಹಾಘಪ್ರಣಾಶಃ ।
ಮಹಾತ್ಮೈವಸಂಗೇನ ಶಂಗಃ ಪ್ರಸನ್ನೋ
ಭವತ್ಯೇವ ಮಹ್ಯಂ ನಮಸ್ತೇ ಗಣೇಶ ॥೫೩॥

ಧೂಪ, ದೀಪ ಮುಂತಾದುವುಗಳಿಂದಲೂ ವಿಧಿಪೂರ್ವಕವಾಗಿ ಪೂಜೆಮಾಡಿದನು. ॥೫೦॥

ಅನಂತರ ಶ್ರೇಷ್ಠರಾದ ಆ ನಂದೀಶನ ಗಣಗಳೆಲ್ಲವೂ ತಮ್ಮ ಆರಾಧ್ಯಲಿಂಗಗಳನ್ನು ಅಲ್ಲಿ ಭಕ್ತಿಯಿಂದ ಪೂಜಿಸಿದರು. ಆಗ ಮಹಾವಿಷ್ಣುವು ಅವರ ಪೂಜೆಯು ಮುಗಿದನಂತರ ಶಿವಗಣಗಳಿಗೆ ಸಂತೋಷವಾಗುವಂತೆ ದಿವ್ಯವಾದ ಭೋಜನವನ್ನು ಮಾಡಿಸಿ ತೃಪ್ತಿಪಡಿಸಿದನು. ॥೫೧॥

ಹಾಗೆಯೇ ವಿಷ್ಣುವು, ಗಂಧ, ಧೂಪ ಮೊದಲಾದವುಗಳಿಂದಲೂ, ದಿವ್ಯವಾದ ಹೂ, ವಸ್ತ್ರ, ಮತ್ತು ಆಭರಣ ಇವುಗಳಿಂದಲೂ ಆ ನಂದಿಕೇಶ್ವರನಿಗೂ ಮತ್ತು ಅವನ ಗಣಗಳಿಗೂ ಉಪಚಾರಮಾಡಿ, ಉತ್ಸಾಹಭರಿತನಾಗಿ ಆ ನಂದಿಕೇಶ್ವರನನ್ನು ಕುರಿತು ಹೀಗೆಂದನು. ॥೫೨॥

" ಓ ನಂದೀಶ್ವರನೇ, ನಿಮ್ಮ ಮಂಗಳಕರವಾದ ದಿವ್ಯಸಂದರ್ಶನದಿಂದ ನಮ್ಮ ಕಣ್ಣುಗಳು ಸಫಲವಾದವು. ಅಲ್ಲದೇ ಮಹಾಪಾತಕಗಳೆಲ್ಲವೂ ನಿನ್ನ ದರ್ಶನಮಾತ್ರದಿಂದಲೇ ದೂರವಾದವು. ಮಹಾತ್ಮನಾದ ಶಿವಭಕ್ತನ ಸಂಬಂಧವಾದ ಪೂಜೆ ಮತ್ತು ಉಪಚಾರಗಳಿಂದ ಆ ಮಹೇಶ್ವರನು ನಿಜವಾಗಿಯೂ ನನ್ನಲ್ಲಿ ಅನುಗ್ರಹವನ್ನು ಮಾಡಿಯೇ ಮಾಡುವನು. ಓ ಗಣಾಧಿಪತಿಯೇ, ನಿನಗೆ ಪ್ರಣಾಮ ಮಾಡುವೆನು. ॥೫೩॥

ಕಿಮಾಗಮನಕೃತ್ಯಂ ತೇ ನಂದಿಕೇಶಾಶು ಸಂವದ ।
ಭವದಾಗಮನೇ ಹೇತುಸ್ತತ್ತುಷ್ಟ್ಯೈ ಶರಣಂ ಭವೇತ್ ॥೫೪॥

ಅನಂಗರಿಪುರತ್ಯರ್ಥಂ ಮಯಿ ತುಷ್ಟೋ ನ ಸಂಶಯಃ ।
ತತ್ಕೃಪಾಪಾತ್ರಭೂತಸ್ಯ ಮಮ ಶ್ರೀಃ ಸುಯಶಾಪತೇ ॥೫೫॥

ಮದ್ಗೃಹೇ ಮಂಗಲಾನ್ಯೇವ ಭವಂತ್ಯೇವ ಪದೇ ಪದೇ ।
ಚಂಚಲಾಪಿ ಸದಾ ಲಕ್ಷ್ಮೀಃ ಸ್ಥಿರಾ ಮಯಿ ಶಿವಾರ್ಚನಾತ್
ನಂದಿಕೇಶಸ್ತಮಾಹೇದಂ ಶ್ರುತ್ವಾ ತದ್ವೈಷ್ಣವಂ ವಚಃ ॥೫೬॥

॥ ನಂದಿಕೇಶ್ವರ ಉವಾಚ ॥

ರಮಾಪತೇ ಮಹೇಶಸ್ಯ ಕೃಪಾಪೂರ್ಣಾ ತ್ವಯಿ ಸ್ಥಿರಾ ।
ಶಿವಾಜ್ಞಾಪಾಲಕೋಽಸಿ ತ್ವಂ ಯತಃ ಶಿವಪದಾಶ್ರಯಃ ॥೫೭॥

ಅಯ್ಯಾ ನಂದೀಶ್ವರನೇ, ನೀನು ಬಂದ ಕೆಲಸವಾವುದು? ಅದನ್ನು ಅಪ್ಪಣೆ ಮಾಡು. ನಿನ್ನ ಬರುವಿಕೆಯಿಂದ ಲೋಕನಾಯಕನಾದ ಮಹೇಶ್ವರನಿಗೆ ತೃಪ್ತಿಯಾಗುವ ಕಾರ್ಯವಿದೆಯೆಂದು ತಿಳಿದಿರುವೆನು. ॥೫೪॥

ನಿನ್ನ ಬರುವಿಕೆಯಿಂದ ಮನ್ಮಥಶತ್ರುವಾದ ಮಹಾದೇವನು ವಿಶೇಷವಾಗಿ ನನ್ನಲ್ಲಿ ಸಂತುಷ್ಟನಾಗಿರುವನು. ಇದರಲ್ಲಿ ಸಂಶಯವಿಲ್ಲ ಓ ಸುಯಶಾರಮಣನೇ, ಮಹೇಶ್ವರನ ದಯೆಗೆ ಪಾತ್ರನಾದ ನನಗೆ ಸಕಲ ಸೌಭಾಗ್ಯಗಳೂ ಉಂಟಾಗುವುವು. ॥೫೪॥

ಆ ಮಹಾನುಭಾವನ ಅನುಗ್ರಹದಿಂದಲೇ ನನ್ನ ಮನೆಯಲ್ಲಿ ಪದೇ ಪದೇ ಮಂಗಳಕಾರ್ಯಗಳು ತಪ್ಪದೇ ನಡೆಯುತ್ತಿರುವುವು. ಚಂಚಲಸ್ವಭಾವವುಳ್ಳ ಲಕ್ಷ್ಮಿಯೂ ಸಹ ಶಿವನ ಪೂಜಾಮಹಿಮೆಯಿಂದ ನನ್ನಲ್ಲಿ ಶಾಶ್ವತವಾಗಿ ನೆಲಸಿರುವಳು." ॥೫೫॥

ಎಂದು ವಿಷ್ಣುವು ಹೇಳಿದ ಮಾತುಗಳನ್ನು ಕೇಳಿ ನಂದೀಶ್ವರನು ಅವನನ್ನು ಕುರಿತು ಹೀಗೆಂದನು. ॥೫೬॥

ಲಕ್ಷ್ಮೀಕಾಂತನೇ, ಶಿವನ ಆಜ್ಞೆಯನ್ನು ಸರಿಯಾಗಿ ನಡೆಸುತ್ತಾ ಆ ಪರಶಿವನ ಪದಗಳನ್ನೇ ಆಶ್ರಯಿಸಿರುವ ನಿನ್ನಲ್ಲಿ ಮಹೇಶ್ವರನ ದಯೆಯೂ ಪೂರ್ಣವಾಗಿ ಸ್ಥಿರವಾಗಿರುವುದು. ॥೫೭॥

ಶಿವಲಿಂಗಾರ್ಚನರತೋ ಭಸ್ಮಫಾಲಃ ಸದಾಮಲಃ ।
ರುದ್ರಾಕ್ಷಧಾರಕೋಽಸಿ ತ್ವಂ ಪಂಚಾಕ್ಷರಪರಾಯಣಃ ॥೫೮॥

ನೀಲತೋಯದಮಧ್ಯಸ್ಥವಿದ್ಯುಲ್ಲೇಖೇವ ಭಾಸುರಾ ।
ತ್ರಿಪುಂಡ್ರರೇಖಾ ದೇಹೇ ತೇ ಭಾತಿ ಪಾಪವಿನಾಶಿಕಾ ॥೫೯॥

ತ್ವಯಿ ಪ್ರೀತೋ ಮಹಾದೇವೋ ಜಗತಾಂ ಪಾಲನೇ ರತಃ ।
ದೇವಾನಾಂ ಕಾರ್ಯಸಿದ್ಧ್ಯರ್ಥಮಾಜುಹಾವಾಮರೋತ್ತಮಃ ॥೬೦॥

ನಿರ್ಯಾಹಿ ದೇವದೇವೇಶಂ ದ್ರಷ್ಟುಂ ತಂ ಶಶಿಶೇಖರಂ ।
ಶೈಲಾದಿನೋ ವಚಃ ಶ್ರುತ್ವಾ ಸಮಾರುಹ್ಯ ಖಗಾಧಿಪಂ ॥೬೧॥

ನಂದಿನಾ ಸ ಜಗಾಮಾಥ ದ್ರಷ್ಟುಂ ದೇವಂ ಪಿನಾಕಿನಂ ।
ಅವತೀರ್ಯ ಖಗಾದ್ವಿಷ್ಣುರ್ವಿಮಾನಾಗ್ರಾದ್ಗಣೇಶ್ವರಃ ॥೬೨॥

ಭಸ್ಮವನ್ನು ಹಣೆಯಲ್ಲಿ ಧರಿಸಿ, ಯಾವಾಗಲೂ ಪಾವನನಾದ ನೀನು ರುದ್ರಾಕ್ಷಗಳನ್ನು ಧಾರಣೆಮಾಡಿ, ಸದಾ ಶಿವಪಂಚಾಕ್ಷರಮಹಾಮಂತ್ರವನ್ನು ತಪ್ಪದೇ ಪಾರಾಯಣಮಾಡುತ್ತಾ ಆ ಪರಶಿವನ ಲಿಂಗವನ್ನು ಪೂಜೆಮಾಡುವುದರಲ್ಲಿ ನಿರತನಾಗಿರುವೆ. ॥೫೮॥

ಕಪ್ಪಾದ ಮಳೆಯ ಮೇಘದ ಮಧ್ಯದಲ್ಲಿ ಶೋಭಿಸುವ ಶುಭ್ರವಾದ ಮಿಂಚಿನ ಬಳ್ಳಿಯಂತೆ, ನೀಲಮೇಘಶ್ಯಾಮನಾದ ನಿನ್ನ ದೇಹದಲ್ಲಿ ಸಕಲ ಪಾಪಗಳನ್ನೂ ನಾಶಮಾಡುವ ಈ ಭಸ್ಮತ್ರಿಪುಂಡ್ರರೇಖೆಯು ಬೆಳಗುತ್ತಿರುವುದು. ॥೫೯॥

ಜಗದ್ರಕ್ಷಣೆಯಲ್ಲಿ ತತ್ಪರನಾದ ಆ ಮಹಾದೇವನು ನಿನ್ನಲ್ಲಿ ಪ್ರೀತನಾಗಿರುವನು. ಆ ದೇವತಾಸಾರ್ವಭೌಮನು ದೇವತೆಗಳ ಕೆಲಸಕ್ಕೋಸ್ಕರ ನಿನ್ನನ್ನು ಆಹ್ವಾನಿಸಿರುವನು. ॥೬೦॥

ದೇವದೇವನೂ, ಚಂದ್ರಶೇಖರನೂ ಆದ ಆ ಮಹಾದೇವನನ್ನು ನೋಡಲು ಹೊರಡು" ಎಂದು ಹೇಳಲು, ಆಗ ವಿಷ್ಣುವು ನಂದೀಶ್ವರನ ಮಾತನ್ನು ಕೇಳಿ, ಕೂಡಲೆ ತನ್ನ ವಾಹನವಾದ ಗರುಡನನ್ನೇರಿ ಆ ನಂದೀಶ್ವರನೊಡನೆ ಪಿನಾಕಪಾಣಿಯಾದ ಮಹೇಶ್ವರನನ್ನು ನೋಡಲು ಹೊರಟನು. ಹೀಗೆ ಹೊರಟು ನರ್ಮದಾ ತೀರಕ್ಕೆ ಬಂದು ವಿಷ್ಣುವು ಗರುಡನ ಮೇಲಿಂದ ಇಳಿದನು. ಹಾಗೆಯೇ ಗಣೋತ್ತಮನಾದ ನಂದಿಕೇಶ್ವರನೂ ತನ್ನ ವಿಮಾನದಿಂದ ಅಲ್ಲಿಳಿದನು. ॥೬೧-೬೨॥

ಸ್ನಾತ್ವಾಥ ನರ್ಮದಾತೋಯೇ ಭಸ್ಮರುದ್ರಾಕ್ಷಭೂಷಣಾಃ ।
ದೃಷ್ಟ್ವೋಂಕಾರಮಹಾಲಿಂಗಮಷ್ಟಾಂಗಸ್ಪೃಷ್ಟಭೂತಲಾಃ ॥೬೩॥

ಪ್ರಣೇಮುಃ ಪ್ರಮಥಾಧೀಶಂ ತುಷ್ಟುವುಶ್ಚ ಮುಹುಸ್ತದಾ ॥೬೪॥

॥ ಗಣೇಶ್ವರಾ ಊಚುಃ ॥

ವಯಸ್ಕರ ಮಹೇಶ್ವರ ಪ್ರಬಲಪಾಪತಾಪಂ ಹರ
ಗರಾದರ ಗಿರೀಂದ್ರಜಾಕುಚಗಿರೌ ವಿಹಾರಾದರ ।
ಗದಾಧರಮುಖಾಮರಪ್ರವರಧೀರವಿಶ್ವೇಶ್ವರ
ಪ್ರಸೀದ ಪರಮೇಶ್ವರ ಜನಿಜರಾಮೃತಿಂ ಸಂಹರ ॥೬೫॥

ಸಮಾಗತೋಽಯಂ ವಿಶ್ವೇಶವಿಷ್ಣುರ್ವಿಶ್ವೈಕಪಾಲಕಃ ।
ದೇವಾನಾಂ ಕಾರ್ಯಸಿದ್ಧ್ಯರ್ಥಮಾಜ್ಞಾಪಯ ಮಹೇಶ್ವರ ॥೬೬॥

---

ಅನಂತರ ಆ ನರ್ಮದಾ ನದಿಯಲ್ಲಿ ಸ್ನಾನಮಾಡಿ, ಭಸ್ಮ, ರುದ್ರಾಕ್ಷ ಇವುಗಳನ್ನು ಅಲಂಕರಿಸಿಕೊಂಡು, ಅಲ್ಲಿರುವ ಓಂಕಾರೇಶ್ವರನ ಮಹಾಲಿಂಗವನ್ನು ನೋಡಿ ಎಲ್ಲರೂ, ಭೂಮಿಯನ್ನು ಮುಟ್ಟುವಂತೆ ಸಾಷ್ಟಾಂಗ ಪ್ರಣಾಮಮಾಡಿ ಪದೇ ಪದೇ ಪರಮ ಶಿವಲಿಂಗಕ್ಕೆ ನಮಸ್ಕಾರಮಾಡುತ್ತಾ ಈ ರೀತಿಯಾಗಿ ಆ ಮಹೇಶ್ವರನನ್ನು ಸ್ತೋತ್ರಮಾಡಿದರು. ॥೬೩-೬೪॥

“ತೇಜಸ್ಸುಗಳಿಗೆ ಆಕರನಾದ ಮಹೇಶ್ವರನೇ, ನಮ್ಮ ಅಪಾರವಾದ ಪಾಪಗಳ ದುಃಖವನ್ನು ಹೋಗಲಾಡಿಸು. ವಿಷವನ್ನು ಭಕ್ಷಣಮಾಡುವುದರಲ್ಲಿ ಆದರವುಳ್ಳ ಸ್ವಾಮಿಯೇ, ಗಿರಿರಾಜಕುಮಾರಿಯ ಸ್ತನಗಳೆಂಬ ಪರ್ವತಗಳಲ್ಲಿ ವಿಹಾರಮಾಡುವುದರಲ್ಲಿ ನಿನಗೆ ತುಂಬಾ ಆದರವು. ಗದಾಯುಧವನ್ನು ಧಾರಣೆಮಾಡಿರುವ ಮಹಾವಿಷ್ಣುವೇ ಮೊದಲಾದ ದೇವತೋತ್ತಮರೆಲ್ಲರಿಗಿಂತಲೂ ಧೀರನಾದ ಜಗದೊಡೆಯನೇ, ಪರಮೇಶ್ವರನೆನಿಸಿದ ನೀನು ನಮ್ಮಲ್ಲಿ ಅನುಗ್ರಹಮಾಡಿ, ನಮಗೆ ಉಂಟಾಗುವ ಜನನ, ಮುಪ್ಪು, ಮತ್ತು ಮರಣರೂಪವಾದ ವ್ಯಾಧಿಗಳನ್ನು ಹೋಗಲಾಡಿಸು. ॥೬೫॥

ವಿಶ್ವೇಶ್ವರಸ್ವಾಮಿಯೇ, ಲೋಕಪಾಲನಾದ ಮಹಾವಿಷ್ಣುವು ಈಗ ಬಂದಿರುವನು. ಮಹೇಶ್ವರ, ದೇವತೆಗಳ ಕಾರ್ಯಕ್ಕೋಸ್ಕರ ಅವನನ್ನು ಉಚಿತವಾದ ಕಾರ್ಯದಲ್ಲಿ ಆಜ್ಞಾಪಿಸುವನಾಗು,” ಎಂದು ಪ್ರಾರ್ಥಿಸಿದರು. ॥೬೬॥

ನಂದಿಕೇಶಗಣಾನಾಂ ಚ ಶ್ರುತ್ವಾ ವಾಕ್ಯಂ ಮಹೇಶ್ವರಃ ।
ಸುಧಾರ್ದ್ರಕರುಣಾದೃಷ್ಟ್ಯಾ ಫಾಲಾಕ್ಷೋ ವಿಷ್ಣುಮೈಕ್ಷತ ॥೬೭॥

ತದಾನಂಗಹರಾಪಾಂಗಸಂಗಾನಂದಾಂಗಸಂಗಕಃ ।
ತುಷ್ಟಾವ ಪ್ರಣತಃ ಶಂಭುಮೋಂಕಾರೇಶಂ ಮಹೇಶ್ವರಂ ॥೬೮॥

॥ ವಿಷ್ಣುರುವಾಚ ॥

ಅಪರ್ಣಾನಾಥ ತ್ವಾಂ ಶರಣದ ಸುರಾಣಾಮಭಯದಂ
ಸುಪರ್ಣಾಧೀಶಾದ್ಯೈಃ ಸುರಗಣಗಣೇಂದ್ರೈರ್ನತಪದಂ ।
ಗರಂ ಗೀರ್ಣಂ ಕಂಠೇ ಭವಹರ ಮಹತ್ಯರ್ಣವಗತಂ
ಪರಂ ಶಂಭೋ ತೂರ್ಣಂ ಭವಭಯಹರಾಭ್ಯರ್ಣಗತಿಕಾ ॥೬೯॥

ನಂದೀಶ್ವರನ ಗಣಗಳ ಈ ಸ್ತೋತ್ರರೂಪವಾದ ಮಾತುಗಳನ್ನು ಕೇಳಿ ಹಣೆಗಣ್ಣನಾದ ಮಹೇಶ್ವರನು ಅಮೃತದಂತೆ ತಂಪಾದ ದಯಾದೃಷ್ಟಿಯಿಂದ ಆ ವಿಷ್ಣುವನ್ನು ನೋಡಿದನು. ॥೬೭॥

ಮನ್ಮಥಧ್ವಂಸಕನಾದ ಆ ಮಹಾದೇವನ ಅಪಾಂಗದೃಷ್ಟಿಯ ಸಂಬಂಧ ದಿಂದಲೂ ಶಿವನ ಅವಯವಸಂಬಂಧದಿಂದಲೂ ಆನಂದಭರಿತನಾದ ಆ ವಿಷ್ಣುವು ಓಂಕಾರೇಶ್ವರನಾದ ಆ ಮಹಾದೇವನನ್ನು ನಮಸ್ಕರಿಸಿ, ಸ್ತೋತ್ರಮಾಡಿದನು.॥೬೮॥

"ಅಪರ್ಣೆಯೆನಿಸಿದ (ಅಂದರೆ ದೇವಿಯು ಮೊದಲು ತಪಸ್ಸುಮಾಡುತ್ತಿದ್ದಾಗ ಕೆಲವು ದಿವಸ ಆಹಾರಾದಿಗಳನ್ನು ತೆಗೆದುಕೊಳ್ಳದೇ ತಪಸ್ಸನ್ನಾಚರಿಸಿದಳು. ಮತ್ತೆ ಕೆಲವು ದಿನ ಎಲೆಗಳನ್ನು ತಿಂದು ಕಾಲಕಳೆಯುತ್ತಿದ್ದಳು. ಆ ಮೇಲೆ ಕೆಲವು ದಿನ ಆ ಒಣ ಎಲೆಗಳನ್ನೂ ತಿನ್ನದೇ ಕಠಿಣವಾಗಿ ತಪಸ್ಸುಮಾಡಿದಳು. ಆಗ ಇವಳಿಗೆ ಅಪರ್ಣೆಯೆಂಬ ಹೆಸರು ರೂಢಿಯಾಯಿತು) ಗಿರಿರಾಜಕುಮಾರಿಯ ರಮಣನಾದ ದೇವನೆ, ಶರಣಾಗತರಾದ ದೇವತೆಗಳೇ ಮೊದಲಾದೆಲ್ಲರಿಗೂ ಅಭಯವನ್ನು ಕೊಟ್ಟು ರಕ್ಷಿಸುವ ನಿನ್ನನ್ನು ವಿಷ್ಣುವೇ ಮೊದಲಾದ ದೇವತೆಗಳ ಗುಂಪೆಲ್ಲವೂ ಸ್ತೋತ್ರ ಮಾಡುತ್ತಾ ನಿನ್ನ ಪಾದಕಮಲಗಳಿಗೆ ನಮಸ್ಕಾರಮಾಡುತ್ತಿರುವುದು. ದೇವ, ನೀನು ಲೋಕೋದ್ಧಾರಕ್ಕೋಸ್ಕರ ಕೊರಳಲ್ಲಿ ವಿಷವನ್ನು ನುಂಗಿರುವೆ. ಈ ಸಂಸಾರಕ್ಲೇಶ ವನ್ನು ನಾಶಮಾಡುವ ಸ್ವಾಮಿಯೇ, ಈ ಘೋರವಾದ ಸಮುದ್ರದಲ್ಲಿ ಬಿದ್ದು ನರಳುತ್ತಿರುವ ನಮ್ಮನ್ನು ದಡಕ್ಕೆ ಒಯ್ದು ಜಾಗ್ರತೆಯಾಗಿ ಕಾಪಾಡು, ದೇವಾ.॥೬೯॥

ಮಾರಮಾರ ಸುಕುಮಾರಪಿತಸ್ತ್ವಂ
ವಾರಯಾಶು ಭವಜಾಲಕಪಾಶಂ ।
ಪಾಹಿ ಪಾಹಿ ಪರಮೇಶ ಮಮಾಘಂ
ನಾಶಯಾಶು ದುರದೃಷ್ಟಜಕಷ್ಟಂ ॥೨೦॥

ನಂದಿವಿಷ್ಣುಪ್ರಭೃತಿಭಿಃ ಸಂಸ್ತುತಃ ಪರಮೇಶ್ವರಃ ।
ಪ್ರಾಹ ಪ್ರಗಲ್ಭಯಾ ವಾಚಾ ತಂ ಮುರಾರಿಂ ಪುರೌಘಭಿತ್ ॥೨೧॥

॥ ಈಶ್ವರ ಉವಾಚ ॥

ಶಂಖಾದ್ಯಾ ದಿತಿಜಾ ವಿಷ್ಣೋ ಹೃತ್ವಾ ವೇದಗಣಾನ್ಸುರಾನ್ ।
ಬಾಧಂತೇ ಸತತಂ ದೈತ್ಯಾ ಅರ್ಣವಾಂತರ್ಜಲೇಶಯಾಃ ॥೨೨॥

ಮತ್ತೇಜಸಾ ಪೂರಿತಸ್ತ್ವಂ ಯಾಹಿ ಯುದ್ಧಾಯ ವೈ ಹರೇ ।
ಜಯಸ್ತೇ ಭವಿತಾ ನೂನಮಾಪ ವೇದಾನಥಾನ್ಪುನಃ ॥೨೩॥

ಮನ್ಮಥನನ್ನು ನಿಗ್ರಹಿಸಿದ ಸ್ವಾಮಿಯೇ, ಸುಕುಮಾರವಾದ ಶರೀರವುಳ್ಳ ಆ ಕುಮಾರಸ್ವಾಮಿಗೆ ನೀನು ತಂದೆಯಾಗಿರುವೆ. ಸ್ವಾಮಿ, ಜಾಗ್ರತೆಯಾಗಿ ಈ ಸಂಸಾರವೆಂಬ ಬಲೆಯ ಹಗ್ಗವನ್ನು ಕತ್ತರಿಸಿ, ನನ್ನನ್ನು ಉದ್ಧಾರಮಾಡು. ಹೇ ಪರಮೇಶ್ವರ, ನನ್ನ ಪಾಪಗಳನ್ನೆಲ್ಲಾ ನಾಶಮಾಡಿ, ನನ್ನ ದುರದೃಷ್ಟದಿಂದ ಒದಗಿರುವ ಕಷ್ಟವನ್ನು ನಿವಾರಣೆಮಾಡಿ ಸಲಹು, ಸ್ವಾಮೀ. ॥೨೦॥

ನಂದೀಶ್ವರ, ವಿಷ್ಣು ಮುಂತಾದವರಿಂದ ಹೀಗೆ ಸ್ತುತಿಸಲ್ಪಟ್ಟ, ತ್ರಿಪುರಾಸುರರನ್ನು ಅವರ ಪರಿವಾರದೊಡನೆ ಭೇದಿಸಿದ ಆ ಪರಮೇಶ್ವರನು, ಆಗ ಗಂಭೀರವಾದ ಧ್ವನಿಯಿಂದ ಆ ಮುರಾಸುರಶತ್ರುವಾದ ವಿಷ್ಣುವನ್ನು ಕುರಿತು, ಹೀಗೆ ಹೇಳಿದನು. ॥೨೧॥

"ಎಲೈ ವಿಷ್ಣುವೇ, ಶಂಖನೇ ಮೊದಲಾದ ದೈತ್ಯರು ವೇದಗಣಗಳನ್ನೆಲ್ಲಾ ಅಪಹರಿಸಿ, ಯಾವಾಗಲೂ ದೇವತೆಗಳಿಗೆ ತೊಂದರೆಕೊಡುತ್ತಾ ಸಮುದ್ರದ ಮಧ್ಯದಲ್ಲಿ ನೀರಿನಲ್ಲಿ ವಾಸಮಾಡುತ್ತಿರುವರು. ನನ್ನ ತೇಜಸ್ಸಿನಿಂದ ಯುಕ್ತನಾದ ನೀನು ಹೊರಟು ಅವರೊಡನೆ ಯುದ್ಧಮಾಡು. ನಿನಗೆ ನಿಜವಾಗಿಯೂ ವಿಜಯುವಾಗುವುದು. ಪವಿತ್ರವಾದ ವೇದಗಳನ್ನು ಉದ್ಧಾರಮಾಡು. ॥೨೨-೨೩॥

ಮಾತ್ಸ್ಯಂ ಕೃತ್ವಾ ಮಹದ್ರೂಪಂ ಅರ್ಣವಾಂತರ್ಜಲೇಶಯಃ ।
ದಶವರ್ಷಸಹಸ್ರಾಣಿ ಶತಯೋಜನಮುನ್ನತಃ ॥೭೪॥

ಭವಿಷ್ಯೇ ಚಾಕ್ಷುಷೇ ವಿಷ್ಣೋ ಮನೌ ಕಾಲಾಂತರೇ ಪುನಃ ।
ಹಿರಣ್ಯಾಕ್ಷೋಹಿ ಭವಿತಾ ಸ ಏವ ಕಶಿಪುಃ ಪುನಃ ॥೭೫॥

ಭವಿತಾ ದಿತಿಜೇಂದ್ರಾದ್ಯೈಃ ಶಕ್ರಂ ಸಚ್ಯಾವಯಿಷ್ಯತಿ ।
ಸ್ಥಾನಾತ್ಸುರಗಣೈಃ ಸಾರ್ಧಂ ತಸ್ಯ ಯುದ್ಧಂ ಭವಿಷ್ಯತಿ ॥೭೬॥

ಭೂತ್ವಾ ಯಜ್ಞವರಾಹಸ್ತ್ವಂ ಹಿರಣ್ಯಾಕ್ಷಂ ಹನಿಷ್ಯಸಿ ।
ಹಿರಣ್ಯಕಶಿಪುಂ ಚಾಪಿ ಮೃಗೇಂದ್ರಾರ್ಧಶರೀರಭಾಕ್ ॥೭೭॥

ಭೂತ್ವಾ ಖರೋಗ್ರನಖರೈರ್ನಖೈಸ್ತಂ ದಾರಯಿಷ್ಯಸಿ ।
ದಿತಿಜಾಂಗಮಹಾಸಂಗವಿಸಂಜ್ಞಸ್ತ್ವಂ ಭವಿಷ್ಯಸಿ ॥೭೮॥

ಈ ಶಂಖಾಸುರನನ್ನು ಕೊಲ್ಲುವುದಕ್ಕೋಸ್ಕರ ನೀನು ನೂರುಯೋಜನದಷ್ಟು ಎತ್ತರವಾದ ದೊಡ್ಡ ಮೀನಿನ ಆಕಾರವನ್ನು ಹೊಂದಿ ಹತ್ತುಸಾವಿರ ವರ್ಷಗಳಕಾಲ ಆ ಸಮುದ್ರದ ಮಧ್ಯದ ನೀರಿನಲ್ಲೇ ಸಂಚರಿಸುತ್ತಾ, ಆ ರಾಕ್ಷಸನನ್ನು ಪರಿವಾರ ಸಮೇತನಾಗಿ ಕೊಂದುಹಾಕು. ಮುಂದಿನ ಚಾಕ್ಷುಷಮನ್ವಂತರಕಾಲದಲ್ಲಿ ಈ ಶಂಖ ದೈತ್ಯನೇ ಹಿರಣ್ಯಾಕ್ಷನಾಗಿಯೂ ಮತ್ತು ಹಿರಣ್ಯಕಶಿಪುವಾಗಿಯೂ ಹುಟ್ಟುವನು. ॥೭೪-೭೫॥

ಆ ಹಿರಣ್ಯಕಶಿಪು ಹಿರಣ್ಯಾಕ್ಷರು ಅನೇಕ ದೈತ್ಯರೊಡನೆ ಹೊರಟು ಇಂದ್ರನನ್ನು ಸ್ವರ್ಗಲೋಕದಿಂದ ಕೆಳಗೆ ತಳ್ಳುತ್ತಾರೆ. ಆಗ ದೇವತೆಗಳಿಗೆ ಆ ದೈತ್ಯರೊಡನೆ ಘೋರವಾದ ಯುದ್ಧವು ನಡೆಯುವುದು. ಅದೇ ಸಮಯದಲ್ಲಿ ನೀನು ಯಜ್ಞ ವರಾಹರೂಪವನ್ನು ತಾಳಿ, ಆ ಹಿರಣ್ಯಾಕ್ಷನನ್ನೂ, ನರಸಿಂಹರೂಪವನ್ನು ಹೊಂದಿ ಆ ಹಿರಣ್ಯಕಶಿಪುವನ್ನೂ ಸಂಹಾರಮಾಡುತ್ತೀಯೆ. ॥೭೬-೭೭॥

ರಾಕ್ಷಸಸಂಹಾರಕ್ಕಾಗಿ ನರಸಿಂಹಾವತಾರಮಾಡಿದಾಗ ನೀನು ನಿನ್ನ ಉಗ್ರವಾದ ಉಗುರುಗಳ ತುದಿಯಿಂದ ಆ ಹಿರಣ್ಯಕಶಿಪುವನ್ನು ಸೀಳಿಹಾಕುತ್ತೀಯೆ. ಆ ಸಮಯದಲ್ಲಿ ಆ ದೈತ್ಯನ ಅವಯವದ ಸಂಬಂಧದಿಂದ ನೀನು ಪ್ರಜ್ಞೆತಪ್ಪಿ ಮೂರ್ಛಿತನಾಗುವೆ. ॥೭೮॥

ತದ್ರಕ್ತಪಾನಾನ್ಮತ್ತಸ್ತ್ವಂ ಜಗತ್ಸಂಶೋಷಯಿಷ್ಯಸಿ ।
ತದಾ ದೇವಜಗದ್ರಕ್ಷಾಶಿಕ್ಷಾರ್ಥಂ ತ್ವಾಂ ಸುರೋತ್ತಮ ॥೨೯॥

ಮಾತ್ಸ್ಯವಾರಾಹಸಿಂಹಾರ್ಧಶರೀರಂ ತ್ವಾಂ ಸಂಹರಾಮ್ಯಹಂ ।
ತ್ವದ್ದಂಷ್ಟ್ರಾಂ ಧಾರಯಿಷ್ಯಾಮಿ ಸಿಂಹಚರ್ಮಾಂಬರಂ ಪುನಃ ॥೩೦॥

ಶಾರಭಂ ರೂಪಮಾಸ್ಥಾಯ ತವೋನ್ಮಾದನಿವೃತ್ತಯೇ ।
ಮತ್ಪಾದಪೂಜಕೇನಾದ್ಯ ಭೃಗುಣಾ ಶಾಪಿತೋಽಸ್ಯಸಿ ॥೩೧॥

ತತ್ಪತ್ನೀನಾಶದುಃಖೇನ ತಸ್ಯಾಂತಸ್ತೇ ಭವಿಷ್ಯತಿ ।
ಇತ್ಥಂ ಶಂಭೋರ್ವಚಃ ಶ್ರುತ್ವಾ ವಿಷ್ಣುರ್ನತ್ವಾ ಮಹೇಶ್ವರಂ ॥೩೨॥

ಜಗಾಮಾರ್ಣವಮುದ್ದಿಶ್ಯ ದೇವಸಂಘೈರಭಿಷ್ಟುತಃ ॥೩೩॥

ಆ ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪುಗಳ ರಕ್ತಪಾನದಿಂದ ನೀನು ಮದ ಹೊಂದಿ ಜಗತ್ತನ್ನೆಲ್ಲಾ ಒಣಗಿಸುವೆ. ದೇವಶ್ರೇಷ್ಠನೇ, ಆಗ ದೇವತೆಗಳ ಮತ್ತು ಈ ಜಗತ್ತಿನ ರಕ್ಷಣೆಯನ್ನು ಮಾಡುವುದಕ್ಕೋಸ್ಕರ ಮತ್ಸ್ಯ, ವರಾಹ ಮತ್ತು ಸಿಂಹ ಇವುಗಳ ಅರ್ಧಶರೀರದಿಂದ ಯುಕ್ತನಾಗಿರುವ ನಿನ್ನನ್ನು ನಾನು ಸಂಹಾರ ಮಾಡುವೆನು. (ನಿನ್ನ ನಿಜಸ್ವರೂಪವನ್ನು ಅನುಗ್ರಹಿಸುವೆನು.) ॥೨೯॥

ನಿನ್ನನ್ನು ಹಾಗೆ ಸೀಳಿದ ಮೇಲೆ ನಿನ್ನ ಸಿಂಹಚರ್ಮವನ್ನೇ ನಾನು ಹೊದೆಯುತ್ತೇನೆ. ॥೩೦॥

ಆ ಕಾಲದಲ್ಲಿ ನಾನು ಶರಭದ ರೂಪವನ್ನು ಧರಿಸಿ, ನಿನ್ನ ನರಸಿಂಹರೂಪ ದಿಂದುಂಟಾದ ಮದವನ್ನು ಹೋಗಲಾಡಿಸುತ್ತೇನೆ. ಈಗಾಗಲೇ ನಿನಗೆ ನನ್ನ ಪಾದಪೂಜಕನಾದ ಭೃಗುಮಹರ್ಷಿಯಿಂದ ಶಾಪಬಂದಿರುವುದು. ಪತ್ನಿಯ ನಾಶ ದಿಂದುಂಟಾದ ದುಃಖದಲ್ಲಿ ಮಗ್ನನಾಗಿರುವೆ. ಈ ಶಾಪವೂ ಪರಿಹಾರವಾಗುವುದು, ಎಂದು ಮಹೇಶ್ವರನು ವಿಷ್ಣುವಿಗೆ ಹೇಳಿದನು. ಆಗ ಮಹಾವಿಷ್ಣುವು ಎಲ್ಲ ವನ್ನೂ ಕೇಳಿ ಆ ಮಹಾದೇವನಿಗೆ ನಮಸ್ಕಾರಮಾಡಿದನು. ॥೩೧-೩೨॥

ಅನಂತರ ಮಹಾದೇವನ ಮಾತಿನಂತೆ, ಅಲ್ಲಿಂದ ಹೊರಟು, ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳುತ್ತಾ, ಆ ಶಂಖಾಸುರನಡಗಿದ್ದ ಸಮುದ್ರಕ್ಕೆ ಹೋದನು. ॥೩೩॥

ಅರ್ಣವಗದೈತ್ಯಜಾತಭೀತ್ಯಾ
ಫಲಪರ್ಣಾಶನಿನೋ ಸುಧಾಂಧಸಃ ।
ಉತ್ಕೃಷ್ಟಾರ್ತಿಹರಂ ಭಜಂತಿ ತೂರ್ಣಂ
ತಮುಪರ್ಣಾಪತಿಮೇಕಮೀಶಮಾದ್ಯಂ ॥೮೪॥

ಮಾತ್ಸ್ಯಂ ಕೃತ್ವಾ ಮಹಾರೂಪಂ ಸ್ಫುಲಿಂಗೋತ್ತಮಲೋಚನಃ ।
ದಶಯೋಜನಮೌನ್ನತ್ಯಂ ಶತಯೋಜನಮಾಯತಂ ॥೮೫॥

ದಂಷ್ಟ್ರಾಕರಾಲಪುಚ್ಛಾಗ್ರವಿಘಟ್ಟಿತಮಹಾಗಿರಿಂ ।
ತರಂಗೋತ್ಥಮಹಾವಾತಘೋರಾರಾವಕೃತಾರ್ಣವಂ ॥೮೬॥

ಫೇನಡಿಂಡಿಮಸಂರಾಜತ್ತರಂಗಾಸ್ಫಾಲಘಟ್ಟಿತಂ ।
ತೇನಾಸುರೇಣ ಮಹತಾ ತಥಾನ್ಯೈರ್ದಾನವೋತ್ತಮೈಃ ॥೮೭॥

ವಿಶಾಲವಾದ ಸಮುದ್ರ ಮಧ್ಯದಲ್ಲಿ ಅಡಗಿರುವ ದೈತ್ಯರ ಗುಂಪಿನಿಂದುಂಟಾದ ಭಯದಿಂದ ಅಮೃತವನ್ನು ಪಾನಮಾಡುತ್ತಿದ್ದ ದೇವತೆಗಳು ಹಣ್ಣು, ಎಲೆ, ಮುಂತಾದುವುಗಳನ್ನೂ ಭಕ್ಷಿಸುತ್ತಿದ್ದರು. ಆ ದೇವತೆಗಳು ಅತಿಯವಾದ ತೊಂದರೆಗಳನ್ನು ನಾಶಮಾಡುವ ಅಪರ್ಣಾದೇವಿಯ ಪತಿಯಾದ ಆದಿಪುರುಷನೆನಿಸಿದ, ಸರ್ವೇಶ್ವರನನ್ನು ಜಾಗ್ರತೆಯಾಗಿ ಧ್ಯಾನಮಾಡುತ್ತಾ ಸೇವಿಸುತ್ತಿದ್ದರು. ||೮೪||

ಆಗ ವಿಷ್ಣುವು ಹತ್ತುಯೋಜನದಷ್ಟು ಎತ್ತರವಾಗಿಯೂ, ನೂರುಯೋಜನದಷ್ಟು ವಿಸ್ತಾರವಾಗಿಯೂ ಇರುವ ಮೀನಿನ ದೊಡ್ಡ ಆಕಾರವನ್ನು ಧರಿಸಿ, ಕೊಡದಂತೆ ಹೊಳೆವ ಶ್ರೇಷ್ಠವಾದ ಕಣ್ಣುಗಳಿಂದ ಪ್ರಕಾಶಿಸುತ್ತಿದ್ದನು. ||೮೫||

ಆಗ ದೊಡ್ಡ ದೊಡ್ಡ ಪರ್ವತಗಳನ್ನೇ ಚೂರುಚೂರುಮಾಡುತ್ತಿದ್ದನು. ಅವನು ಸಂಚರಿಸುತ್ತಿದ್ದಾಗ ಉಂಟಾದ ದೊಡ್ಡದೊಡ್ಡ ಅಲೆಗಳಿಂದ ಆ ಸಮುದ್ರವೆಲ್ಲವೂ ಭಯಂಕರವಾದ ಧ್ವನಿಯಿಂದ ಕೂಡಿದ್ದಿತು. ||೮೬||

ನೊರೆಗಳ ಸಮೂಹದಿಂದ ಪ್ರಕಾಶಿಸುತ್ತಿರುವ ದೊಡ್ಡ ಅಲೆಗಳ ಹೊಡೆತದಿಂದ ಸಮುದ್ರವು ಅಲ್ಲೋಲಕಲ್ಲೋಲವಾಗುತ್ತಿದ್ದಿತು. ಆಗ ಆ ಮತ್ಸ್ಯರೂಪಿಯಾದ ವಿಷ್ಣುವು ಆ ಶಂಖಾಸುರನೊಡನೆಯೂ, ಮತ್ತು ಇತರ ಅವನ ಪರಿವಾರದ

ದಶವರ್ಷಸಹಸ್ರಾಣಿ ಯುದ್ಧಮುನ್ಮತ್ತಮಾತನೋತ್ ।
ವಕ್ರಪುಚ್ಛಾಗ್ರನಿರ್ಘಾತೈರ್ದಂಷ್ಟ್ರಾಘಾತೈಸ್ತದಾಽಸುರಾನ್ ॥೮೮॥

ಹತ್ವಾ ಶಂಖಮಹಾದೈತ್ಯಂ ದೇವಸಂಘೈರಭಿಷ್ಟುತಃ ।
ಜಗಾಮಾದಾಯ ತಾನ್ವೇದಾಂಛಿವತೇಜೋಪಬೃಂಹಿತಃ ॥೮೯॥

ತಚ್ಛರೀರಂ ಮಹಾಮಾತ್ಸ್ಯಂ ಕೈರಾತವಪುಷಾ ಹರಃ ।
ವಿಸಂಜ್ಞಂ ಪಾತಯಾಮಾಸ ತದ್ಗರ್ವವಿನಿವೃತ್ತಯೇ ॥೯೦॥

ಮತ್ಸ್ಯಪಾತಮಭೂತ್ತೀರ್ಥಂ ಪಶ್ಚಿಮಾಂಭೋಧಿಮಧ್ಯಗಂ ।
ತತ್ರ ಸ್ನಾತ್ವಾಥ ಸಂತರ್ಪ್ಯ ಪಿತೄನ್ಪೂಯೇತ ಮಾನವಃ ॥೯೧॥

ದದೌ ವೇದಾನ್ಮಹೇಶಾಯ ವೇದವೇದ್ಯಾಯ ವೈ ಹರಿಃ ।
ಪ್ರಣಮ್ಯ ದೇವದೇವೇಶಂ ಜಗಾಮ ಸ್ವಂ ನಿಕೇತನಂ ॥೯೨॥

ದಾನವಶ್ರೇಷ್ಠರೊಡನೆಯೂ, ಹತ್ತುಸಾವಿರವರ್ಷಗಳ ಕಾಲ ಘೋರವಾಗಿ ಯುದ್ಧ ಮಾಡಿದನು. ॥೮೭॥

ವಿಷ್ಣುವು ವಕ್ರವಾದ ತನ್ನ ಬಾಲದ ತುದಿಯಿಂದಲೂ, ಕೋರೆದಾಡೆಗಳ ಏಟುಗಳಿಂದಲೂ, ಆ ದಾನವರನ್ನೆಲ್ಲಾ ಹೊಡೆದು, ಆ ಶಂಖಾಸುರನನ್ನು ಪರಿವಾರ ಸಮೇತವಾಗಿ ಕೊಂದು, ದೇವತೆಗಳ ಸಮೂಹದಿಂದ ಸ್ತೋತ್ರಮಾಡಲ್ಪಡುತ್ತಾ, ವೇದಗಳನ್ನೆಲ್ಲಾ ತೆಗೆದುಕೊಂಡು, ಆ ಶಿವನ ತೇಜಸ್ಸಿನಿಂದ ಪೂರ್ಣನಾದ ಆ ಮಹಾ ವಿಷ್ಣುವು, ಹೊರಹೊರಟು ಬಂದನು. ॥೮೮-೮೯॥

ಆಗ ಮಹೇಶ್ವರನು, ಬೇಡನ ವೇಷವನ್ನು ತಾಳಿ, ದೊಡ್ಡ ಮೀನಿನ ರೂಪವುಳ್ಳ ಆ ಮಹಾವಿಷ್ಣುವಿನ ಶರೀರವನ್ನು, ಅವನ ಗರ್ವವು ಶಾಂತವಾಗುವುದಕ್ಕೋಸ್ಕರ, ಮೂರ್ಛೆ ಬೀಳುವಂತೆ ಕೆಡವಿದನು. ॥೯೦॥

ಹೀಗೆ ಮಹಾವಿಷ್ಣುವಿನ ಮೀನಿನ ರೂಪವು ಮಹೇಶ್ವರನಿಂದ ಬೀಳಿಸಲ್ಪಟ್ಟ ಜಾಗವೇ ಮತ್ಸ್ಯತೀರ್ಥವೆಂದು ಪಶ್ಚಿಮಸಮುದ್ರದ ಮಧ್ಯದಲ್ಲಿ ಪ್ರಸಿದ್ಧವಾಗಿದೆ. ಅಲ್ಲಿ ಸ್ನಾನಮಾಡಿ ಪಿತೃಗಳಿಗೆ ತರ್ಪಣಕೊಡುವ ಮಾನವನು ಪಾವನನಾಗುತ್ತಾನೆ.॥೯೧॥

ಅನಂತರ ವಿಷ್ಣುವು ವೇದ್ಯವೇದನಾದ (ವೇದಗಳಿಂದ ತಿಳಿಯಲ್ಪಡುವ ಸ್ವರೂಪವುಳ್ಳ) ಆ ಮಹೇಶ್ವರನಿಗೆ ತಾನು ತಂದಿದ್ದ ವೇದಗಳನ್ನು ಸಮರ್ಪಿಸಿ,

ಓಂಕಾರೇಶ್ವರಲಿಂಗಮಧ್ಯವಿಲಸದ್ವೇದಾಸ್ತದಾ ತೇ ಸುರಾಃ
ದೃಷ್ಟ್ವಾ ಚೋಂಕೃತಿಮಾತ್ರರೂಪಮನಿಶಂ ಸರ್ವೇ ತದಾ ವಿಸ್ಮಿತಾಃ ।
ಸ್ತುತ್ವಾ ಸ್ತವ್ಯಮಪಾರವೇದಶಿಖರೈರುದ್ಬುದ್ಧಬೋಧಪ್ರದಂ
ತಂ ಸಾಯಂ ಮುಹುರಾದ್ಯಹೃದ್ಯವಚಸಾ ಧಾಮ ಸ್ವಕಂ ತೇ ಯಯುಃ॥೯೩॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಓಂಕಾರೇಶ್ವರ
ಮಾಹಾತ್ಮ್ಯವರ್ಣನಂ ನಾಮ ಅಷ್ಟಮೋಽಧ್ಯಾಯಃ

ದೇವದೇವೇಶ್ವರನೆನಿಸಿದ ಆ ಮಹಾದೇವನಿಗೆ ನಮಸ್ಕಾರ ಮಾಡಿ, ಅವನ ಅಪ್ಪಣೆ ಪಡೆದು ತನ್ನ ಲೋಕಕ್ಕೆ ಹಿಂದಿರುಗಿದನು. ॥೯೨॥

ಅದರಂತೆ ಓಂಕಾರೇಶ್ವರನ ಲಿಂಗಮಧ್ಯದಲ್ಲಿ ಪ್ರಕಾಶಿಸುತ್ತಿರುವ ವೇದಗಳನ್ನು ನೋಡಿ, ಆ ಓಂಕಾರ ಮಾತ್ರರೂಪನಾದ ಮಹಾದೇವನ ಸಂದರ್ಶನದಿಂದ ದೇವತೆಗಳೆಲ್ಲರೂ ಆಶ್ಚರ್ಯಗೊಂಡರು. ಅನಂತರ ಅವರು ಸ್ತೋತ್ರಾರ್ಹನೂ, ಅಪಾರವಾದ ವೇದಾಂತ ಶಾಸ್ತ್ರಗಳಿಂದ ಜ್ಞಾನಪ್ರದನೂ, ಆದ ಮಹಾದೇವನನ್ನು ಸಾಯಂಕಾಲದಲ್ಲಿ ವೇದವಾಕ್ಯಗಳಿಂದ ಮನೋಹರವಾಗಿ ಸ್ತೋತ್ರಮಾಡಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ॥೯೩॥

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗಸಂಜ್ಞಕವಾದ ಐದನೆಯ ಅಂಶದಲ್ಲಿ ಓಂಕಾರೇಶ್ವರ
ಮಹಿಮಾವರ್ಣನೆಯೆಂಬ ಎಂಟನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ನವಮೋಽಧ್ಯಾಯಃ

॥ ಈಶ್ವರ ಉವಾಚ ॥

ಏವಂ ಚಿರಗತೇ ಕಾಲೇ ಸೋಮಭಾಗವಿವರ್ಜಿತಾಃ ।
ಓಂಕಾರೇಶಂ ಮಹಾಲಿಂಗಂ ಜಗ್ಮುಃ ಶರಣಮೀಶ್ವರಂ ॥೧॥

ಪ್ರಣಮ್ಯ ತುಷ್ಟುವುರ್ಹರ್ಷಾತ್ಸ್ತ್ರಿವಿಷ್ಟಪನಿವಾಸಿನಃ ॥೨॥

॥ ದೇವಾ ಊಚುಃ ॥

ಭೋ ಶಂಭೋ ಮರುತಾಂ ಪಿತಸ್ತವ ಕಥಾ ಪೀಯೂಷಪಾನೈರ್ವಯಂ
ಜೀವಾಮೋಽದ್ಯ ಸುಚಾತಕೋ ಹಿ ತೃಷಿತೋ ಮೇಘೋತ್ಥಪಾಥೋಽಲವೈಃ।
ಯದ್ವತ್ತದ್ವದುಮಾಸಹಾಯ ಭಗವನ್ಮೇರೌ ಯಥಾ ತರ್ಪಿತಂ
ಸೋಮೇ ಚಾಪಿ ಮಹಾಧ್ವರೇಷು ಸತತಂ ಪೀತ್ವಾ ಸುರೈಸ್ತೃಪ್ಯಸಿ ॥೩॥

## ಒಂಬತ್ತನೆಯ ಅಧ್ಯಾಯವು

ಹೀಗೆಯೇ ಅನೇಕ ದಿವಸಗಳು ಕಳೆಯಲು, ದೇವತೆಗಳು ಯಜ್ಞಗಳಲ್ಲಿ ಸೋಮಭಾಗಗಳಿಲ್ಲದೇ ಖಿನ್ನರಾಗಿ ಓಂಕಾರೇಶ್ವರ ಮಹಾಲಿಂಗದ ಸಮೀಪಕ್ಕೆ ಬಂದು ಅಲ್ಲಿ ಶಿವಲಿಂಗಕ್ಕೆ ಪ್ರಣಾಮ ಮಾಡಿ, ಸಂತೋಷದಿಂದ ಆ ದೇವನನ್ನು ಹೀಗೆ ಸ್ತೋತ್ರ ಮಾಡಿದರು. ॥೧-೨॥

" ಹೇ ಶಂಭುವೇ ! ನೀನೇ ದೇವತೆಗಳಿಗೆಲ್ಲಾ ತಂದೆಯು ; ನಾವೆಲ್ಲರೂ ನಿನ್ನ ದಿವ್ಯಕಥಾಕಾಲಕ್ಷೇಪಗಳಿಂದ ಯಾವಾಗಲೂ ನಿನ್ನ ಕಥಾಮೃತವನ್ನು ಪಾನಮಾ

ಕ್ಷಿತ್ಯಾಕ್ಷ್ಣಂತಾ ಭಗವಂಸ್ತ್ರಿವಿಷ್ಟಪಗತಾಃ ಸತ್ರಾಶಿನಃ ಸರ್ವದಾ
ವೇದೋಕ್ತಾಃ ಸಕಲಾಃ ಕ್ರಿಯಾಶ್ಚ ಭಗವನ್ಪೂರ್ವಂ ತ್ವಯಾ ಕಲ್ಪಿತಾಃ ।
ವೇದಾಸ್ತ್ವಯ್ಯಖಿಲಾ ವದಸ್ವ ವಿಧಯೇ ವೇದಾನ್ಮಖಾದಿಕ್ರಿಯಾಃ
ಸರ್ವಾ ವಿಪ್ರಗಣೇಷು ಚಾದ್ಯ ವಿತತಾ ಭೂಯಾತ್ಸತೋ ನೋ ಮುದೇ॥೪॥

ಇತಿ ಸುರವಚನಂ ನಿಶಮ್ಯ ಶಂಭು
ರ್ಮುದಿತಮನಾಃ ಸಮುವಾಚ ಹರ್ಷವರ್ಷಂ ।
ಪ್ರದದತ ವಿಧಿನಾ ಸಭಾಗತಾಸ್ಥ
ತ್ರಿದಿಶವರಾ ಶ್ರುತಿಜಾಲಮೇತದಸ್ಮೈ ॥೫॥

---

ಡುತ್ತಾ, ಬಾಯಾರಿದ ಚಾತಕಪಕ್ಷಿಯು ಮೇಘದಿಂದ ಬರುವ ನೀರಿನ ಕಣಗಳನ್ನೇ ಹೇಗೆ ನಿರೀಕ್ಷಿಸುವುದೋ ಆ ರೀತಿ ನಾವು ಬದುಕಿರುವೆವು. ಎಲೈ ಉಮಾರಮಣನಾದ ಸ್ವಾಮಿಯೇ! ಭಗವಂತನಾದ ನೀನು, ಮೇರುಪರ್ವತದಲ್ಲಿ ತೃಪ್ತಿಪಡೆದಂತೆ, ಸೋಮಯಾಗಗಳಲ್ಲಿಯೂ, ಇತರ ದೊಡ್ಡದೊಡ್ಡ ಯಜ್ಞಗಳಲ್ಲಿಯೂ, ದೇವತೆಗಳೊಡನೆ ಹವಿರ್ಭಾಗಗಳನ್ನು ಪಾನಮಾಡಿ ಸಂತೋಷಗೊಳ್ಳುತ್ತಿರುವೆ. ॥೩॥

ಭಗವಂತನೇ! ಈಗ ಸ್ವರ್ಗವಾಸಿಗಳಾದ ದೇವತೆಗಳೆಲ್ಲರೂ ಹಸಿವಿನಿಂದ ಬಳಲಿರುವರು. ದೇವತೆಗಳೆಲ್ಲರೂ ಯಾವಾಗಲೂ ಯಾಗ ಹವಿರ್ಭಾಗಗಳನ್ನು ಭಕ್ಷಿಸುವವರಲ್ಲವೆ. ಸ್ವಾಮಿ! ನೀನೇ ಹಿಂದೆ ಎಲ್ಲಾ ಕರ್ಮಗಳೂ ವೇದದಲ್ಲಿ ಹೇಳಿದ ವಿಧಿಯಂತೆಯೇ ನಡೆಯಬೇಕೆಂದು ನಿಯಮಿಸಿರುವೆ. ಆದುದರಿಂದ ಈಗ ನಿನ್ನಲ್ಲಿರುವ ವೇದಗಳನ್ನೆಲ್ಲಾ ಆ ಬ್ರಹ್ಮದೇವನಿಗೆ ಅನುಗ್ರಹಿಸು. ವೇದಗಳಿಂದಲೇ ಯಜ್ಞಯಾಗಾದಿಗಳೆಲ್ಲಾ ನಡೆಯಬೇಕಾಗಿದೆ. ನೀನು ಬ್ರಹ್ಮದೇವನಿಗೆ ವೇದಗಳನ್ನು ಕೊಟ್ಟರೆ ಅವನಿಂದ ಆ ವೇದಗಳು ಬ್ರಾಹ್ಮಣರ ಗುಂಪಿನಲ್ಲಿ ಹರಡಿ, ಅವರೆಲ್ಲರೂ ಅದನ್ನನುಸರಿಸಿ, ಕರ್ಮಗಳನ್ನಾಚರಿಸುವುದರಿಂದ ನಮಗೆ ಸಂತೋಷವುಂಟಾಗುವುದು. ॥೪॥

ಈ ರೀತಿಯಾಗಿ ತನ್ನನ್ನು ಪ್ರಾರ್ಥಿಸಿದ ದೇವತೆಗಳ ಮಾತನ್ನು ಕೇಳಿ ಶಂಭುವು ಸಂತೋಷ ಹೊಂದಿ, ಆನಂದವೃಷ್ಟಿಯನ್ನು ಬೀರುತ್ತಾ, ಓ ಯಜ್ಞಭಾಗಿಗಳಾದ ದೇವತೆಗಳಿರಾ! ಈ ವೇದಸಮೂಹವನ್ನು ಬ್ರಹ್ಮನಿಗೆ ವಿಧಿಪೂರ್ವಕವಾಗಿ ಕೊಡಬೇಕು. ॥೫॥

ಪ್ರದಿಶಾಮಿ ಶಮನಾಯ ಭೂಯಸೇ ವೋ
ತಮುಪಾಸ್ಯೈವ ಸದಾನುಗಚ್ಛತ ।
ಭಾಗಃ ಸ ವೋ ದಿಶತಿ ಮದ್ವಚನಾತ್ಸುರೇಂದ್ರಾ
ನ್ಸಮಾಗತಾನ್ನಿಖಿಲಸುರಾಸುರೇಂದ್ರವಂದ್ಯಃ ॥೬॥

ಶಂಕರಾಜ್ಞಾನುಸಾರೇಣ ಜಗ್ಮುಃ ಶಕ್ರಾದಯಸ್ತತಃ ।
ಸುರಾ ಬ್ರಹ್ಮಾಣಮಾಸಾದ್ಯ ಪ್ರಣಮ್ಯಾಭಿಪ್ರಸಾದ್ಯ ಚ ॥೭॥

ಖಿನ್ನಾಸ್ತ್ರಿವಿಷ್ಟಪಂ ಪ್ರಾಪ್ಯ ಭಾಗಹೀನಾಃ ಸುಧಾಂಧಸಃ ।
ತತಃ ಪ್ರಾಂಜಲಯಃ ಸರ್ವೇ ಶಕ್ರಾದ್ಯಾಃ ಪಂಕಜಾಸನಂ ॥೮॥

ಇದಮೂಚುಸ್ತದಾ ದೇವಾಃ ಕೃಶಾಂಗಾಃ ಸ್ನಾಯುಬಂಧನಾಃ ॥೯॥

॥ ದೇವಾ ಊಚುಃ ॥

ಹೃತವೇದಾಃ ಪುರಾ ದೈತ್ಯಾಃ ಶಿವಾಜ್ಞಾಕಾರಿಣಾ ಪುನಃ ।
ಹರಿಣಾ ಸಂಹೃತಾ ಬ್ರಹ್ಮನ್ಪುನರ್ಲೀನಾ ಮಹೇಶ್ವರೇ ॥೧೦॥

ದೇವತೆಗಳಿರಾ, ನಿಮ್ಮ ಕ್ಷೇಮಕ್ಕೋಸ್ಕರ, ನಾನು ಬ್ರಹ್ಮನಿಗೆ ಈ ವೇದಗಳನ್ನೆಲ್ಲಾ ಉಪದೇಶಮಾಡುತ್ತೇನೆ. ನೀವೆಲ್ಲರೂ ಅವನನ್ನು ಸೇವಿಸಿರಿ ನನ್ನ ಮಾತಿನಂತೆ ದೇವದಾನವರಿಂದ ನಮಸ್ಕಾರಾರ್ಹನಾದ ಆ ಬ್ರಹ್ಮನು, ನಿಮಗೆಲ್ಲರಿಗೂ ಆ ವೇದಭಾಗಗಳನ್ನು ಕೊಡುತ್ತಾನೆ. ಎಂದು ಮಹೇಶ್ವರನು ಹೇಳಿದನು. ॥೬

ಆ ಮಹೇಶ್ವರನ ಅಪ್ಪಣೆಯಂತೆ ಇಂದ್ರಾದಿದೇವತೆಗಳು, ಬ್ರಹ್ಮನ ಸಮೀಪಕ್ಕೆ ಹೋಗಿ ಅವನಿಗೆ ನಮಸ್ಕಾರಮಾಡಿ ಅವನ ಅನುಗ್ರಹವನ್ನು ಸಂಪಾದಿಸಲು ಯತ್ನಿಸಿದರು. ॥೭॥

ಯಜ್ಞಭಾಗವಿಲ್ಲದೇ ಇರುವ ದೇವತೆಗಳೂ ಖಿನ್ನರಾಗಿ ಇಂದ್ರನನ್ನು ಮೊದಲುಮಾಡಿಕೊಂಡು, ಕಮಲಾಸನನಾದ ಬ್ರಹ್ಮನ ಸಮೀಪಕ್ಕೆ ಹೋಗಿ ಮುಂದೆ ಕೈಜೋಡಿಸಿ ನಮಸ್ಕಾರಮಾಡಿದರು. ಕೃಶವಾದ ಶರೀರದಿಂದ ಕೂಡಿ, ಕೇವಲ ನರಗಳ ಬಂಧನದಿಂದ ಯುಕ್ತರಾಗಿರುವ ದೇವತೆಗಳು ಆ ಬ್ರಹ್ಮದೇವನನ್ನು ಕುರಿತು ಮೊದಲು ಹೀಗೆ ಸ್ತೋತ್ರಮಾಡಿದರು. ॥೮-೯॥

"ಬ್ರಹ್ಮದೇವನೇ, ಆ ಶಂಖದೈತ್ಯನಿಂದ ಅಪಹರಿಸಲ್ಪಟ್ಟಿದ್ದ ವೇದರಾಶಿಯನ್ನು ಶಿವನ ಆಜ್ಞೆಯನ್ನು ಪರಿಪಾಲಿಸುವ ವಿಷ್ಣುವು ಆ ರಾಕ್ಷಸನನ್ನು ಕೊಂದು,

ವೇದಹೀನೇಷು ವಿಪ್ರೇಷು ನ ಯಜ್ಞಾಃ ಸಂಪ್ರವರ್ತತೇ ।
ಯಜ್ಞೈರ್ವಿಹೀನೇ ಭೂಲೋಕೇ ನಾಸ್ಮಾಕಂ ದೃಶ್ಯತೇ ಹವಿಃ ॥೧೧॥

ಕ್ಷುಧಾವಿಷ್ಟಾ ವಯಂ ಸರ್ವೇ ತ್ರಿವಿಷ್ಟಪಗತಾ ಅಪಿ ।
ಕ್ಷುಧಾಪ್ರಶಮನೋಪಾಯಃ ಶೀಘ್ರಮತ್ರ ವಿಧೀಯತಾಂ ॥೧೨॥

ಇತಿ ಗೀರ್ವಾಣವೃಂದಾನಾಂ ಶ್ರುತ್ವಾ ವಾಕ್ಯಂ ಪಿತಾಮಹಃ ।
ಧ್ಯಾತ್ವಾ ಚಿರಂ ತದಾ ದೇವಾನಿದಮಾಹಾಬ್ಜಜಃ ಸುರಾನ್ ॥೧೩॥

॥ ಪಿತಾಮಹ ಉವಾಚ

ಪ್ರಸಾದ್ಯ ಪರಮೇಶಾನಮೋಂಕಾರೇಶ್ವರಮವ್ಯಯಂ ।
ತದಾ ಭಗವತೋ ವೇದಾನ್ಪ್ರಾಪ್ಸ್ಯಾಮೀತಿ ಮತಿರ್ಮಮ ॥೧೪॥

ವೇದಾದ್ಯಜ್ಞಾಃ ಪ್ರವರ್ತಂತೇ ಪಠಂತಿ ದ್ವಿಜಪುಂಗವಾಃ ।
ಭವಂತೋ ಭಾಗಭಾಜಃ ಸ್ವರ್ಗಚ್ಛಧ್ವಂ ತ್ರಿದಿವಂ ಪುನಃ ॥೧೫॥

---

ವೇದರಾಶಿಯನ್ನು ಶಿವನಿಗೆ ಸಮರ್ಪಿಸಿದನು. ಆದರೆ ಅವು ಈಗ ಪುನಃ ಆ ಮಹೇಶ್ವರನಲ್ಲಿಯೇ ಅಡಗಿಹೋಗಿರುವುವು. ॥೧೦॥

ಬ್ರಾಹ್ಮಣರೆಲ್ಲರೂ ವೇದಹೀನರಾಗಿರುವಾಗ ಯಜ್ಞಯಾಗಾದಿಗಳು ನಡೆಯಲಾರವು. ಹೀಗೆ ಭೂಲೋಕವೆಲ್ಲವೂ ಯಾಗವೇ ಇಲ್ಲದೇ ಕರ್ಮಹೀನವಾಗಿರುವಾಗ ನಮಗೆ ಹವಿರ್ಭಾಗವು ಹೇಗೆ ದೊರೆಯುವುದು ? ॥೧೧॥

ಸ್ವರ್ಗವಾಸಿಗಳಾದ ನಾವೆಲ್ಲರೂ ಹಸಿವಿನಿಂದ ಬಳಲಿದ್ದೇವೆ. ದೇವ ! ನಮ್ಮ ಈ ಹಸಿವು ಹೋಗುವ ಉಪಾಯವನ್ನು ಜಾಗ್ರತೆಯಾಗಿ ತಿಳಿಸುವನಾಗು. ॥೧೨॥

ಬ್ರಹ್ಮನು ದೇವತೆಗಳ ಪ್ರಾರ್ಥನೆಯನ್ನು ಕೇಳಿ, ಸ್ವಲ್ಪಕಾಲ ಯೋಚನೆ ಮಾಡಿ, ಅನಂತರ ಕಮಲೋದ್ಭವನಾದ ಆ ಪಿತಾಮಹನು ದೇವತೆಗಳಿಗೆ ಹೀಗೆ ಉತ್ತರಕೊಟ್ಟನು. ॥೧೩॥

“ ಓ ದೇವತೆಗಳಿರಾ, ಓಂಕಾರೇಶ್ವರನೂ ನಿತ್ಯನೂ ಆದ ಪರಮೇಶ್ವರನನ್ನು ಸ್ತೋತ್ರಮಾಡಿ, ಅವನ ಅನುಗ್ರಹವನ್ನು ಸಂಪಾದಿಸಿ, ಆ ಭಗವಂತನ ಸನ್ನಿಧಾನದಿಂದ ಪುನಃ ವೇದಗಳನ್ನು ಪಡೆಯುವೆನು. ॥೧೪॥

ಅನಂತರ ಬ್ರಾಹ್ಮಣೋತ್ತಮರು ಆ ವೇದಗಳನ್ನೋದುತ್ತಾರೆ. ಹಾಗೆಯೇ ಆ ವೇದೋಕ್ತಕರ್ಮಗಳಿಂದ ಯಾಗಗಳೂ ನಡೆಯುತ್ತವೆ. ನೀವೆಲ್ಲರೂ ಆಗ ಹವಿರ್ಭಾಗ

ಇತ್ಯುಕ್ತಾಸ್ತ್ರಿದಶಾಸ್ಸರ್ವೇ ತದಾ ತ್ರಿದಿವಮಾಗತಾಃ ।
ಕಾಲೇನ ಕಿಯತಾ ವೇಧಾಸ್ತಪ್ತ್ವಾಽಥ ಪರಮಂ ತಪಃ ॥೧೬॥

ವೇಧಾ ವಿಧಿಂ ಸಮಾಸ್ಥಾಯ ಓಂಕಾರಂ ಪ್ರಾಪ ತತ್ಕ್ಷಣಾತ್ ।
ಶರ್ಮದಾಂ ನರ್ಮದಾಂ ಪ್ರಾಪ್ಯ ಸ್ನಾತ್ವಾ ತತ್ರ ಜಿತೇಂದ್ರಿಯಃ ॥೧೭॥

ಭಸ್ಮೋದ್ಧೂಳಿತಪುಂಡ್ರಾಂಕೋ ರುದ್ರಾಕ್ಷಸ್ರಗ್ವಿಭೂಷಣಃ ।
ಜಪನ್ಪಂಚಾಕ್ಷರಂ ಮಂತ್ರಂ ಶಿವಮೋಂಕಾರಮೀಶ್ವರಂ ॥೧೮॥

ಸಮಭ್ಯರ್ಚ್ಯಾರ್ಘಬಿಲ್ವಾದ್ಯೈಃ ಸೋಪಚಾರೈರನೇಕಶಃ ।
ತದಗ್ರೇ ಸಂಸ್ಥಿತೋ ವಿಪ್ರಾಃ ಪಂಚಾಗ್ನಿಷು ಸ ಪದ್ಮಭೂಃ ॥೧೯॥

ಪ್ರಜಪಂಛತರುದ್ರೀಯಂ ಭಸ್ಮಚ್ಛನ್ನೋ ಜಿತಾಸನಃ ।
ವರ್ಷಮೇಕಂ ನಿರಾಹಾರೋ ವಾಯುಪೂರ್ಣಾಂಬುಭೋಜನಃ ॥೨೦॥

ಗಳನ್ನು ಪಡೆಯುವಿರಿ. ಆದ್ದರಿಂದ ಸಂದೇಹಪಡದೆ, ನೀವೆಲ್ಲರೂ ಸುಖವಾಗಿ ಸ್ವರ್ಗಲೋಕಕ್ಕೆ ತೆರಳಿರಿ" ಎಂದು ಬ್ರಹ್ಮದೇವನು ನುಡಿದನು. ||೧೫||

ಬ್ರಹ್ಮನಿಂದ ಹೀಗೆ ಹೇಳಲ್ಪಟ್ಟ ದೇವತೆಗಳು ತಮ್ಮ ಸ್ವರ್ಗಲೋಕಕ್ಕೆ ಹಿಂತಿರುಗಿದರು. ಹೀಗೆ ಕೆಲವು ಕಾಲ ಕಳೆಯಲು ಆ ಬ್ರಹ್ಮನು ಉತ್ತಮವಾದ ತಪಸ್ಸನ್ನಾಚರಿಸಿ, ಆ ಓಂಕಾರೇಶ್ವರನ ಸಮೀಪಕ್ಕೆ ಕೂಡಲೆ ಬಂದನು. ||೧೬||

ವಿಶೇಷ ಸುಖಪ್ರದವಾದ ಆ ನರ್ಮದಾನದಿಯ ಸಮೀಪಕ್ಕೆ ಬಂದು ಅಲ್ಲಿ ಜಿತೇಂದ್ರಿಯನಾಗಿ ಸ್ನಾನಮಾಡಿ, ಭಸ್ಮೋದ್ಧೂಳಿತವಿಗ್ರಹನಾಗಿ, ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿ, ರುದ್ರಾಕ್ಷಮಾಲಾಭರಣನಾಗಿ, ಓಂಕಾರರೂಪನಾದ ಪರಮೇಶ್ವರನ ಮುಂದೆ ಶಿವಪಂಚಾಕ್ಷರಮಹಾಮಂತ್ರವನ್ನು ಜಪಿಸುತ್ತಿದ್ದನು. ||೧೭-೧೮||

ಆ ಓಂಕಾರಲಿಂಗವನ್ನು ಬಿಲ್ವಪತ್ರೆಯೇ ಮೊದಲಾದ ಪೂಜಾಸಾಮಗ್ರಿಗಳಿಂದಲೂ, ಉಪಚಾರಗಳಿಂದಲೂ, ನಾನಾಪ್ರಕಾರವಾಗಿ ಪೂಜಿಸಿ, ಆ ಶಿವಲಿಂಗದ ಮುಂದೆ ಪಂಚಾಗ್ನಿಗಳ ಮಧ್ಯದಲ್ಲಿ ಕುಳಿತು ಆ ಬ್ರಹ್ಮನು ತಪಸ್ಸುಮಾಡಲಾರಂಭಿಸಿದನು. ||೧೯||

ಭಸ್ಮವನ್ನು ಮೈಗೆಲ್ಲಾ ಬಳಿದುಕೊಂಡು, ಜಿತೇಂದ್ರಿಯನಾಗಿ ಆ ಬ್ರಹ್ಮನು ಶತರುದ್ರೀಯಮಂತ್ರವನ್ನು ಜಪಮಾಡುತ್ತಾ ಒಂದು ವರ್ಷಕಾಲ ಆಹಾರವನ್ನು

ದಶವತ್ಸರಪರ್ಯಂತಮಹೋರಾತ್ರಂ ತಪಶ್ಚರನ್ ।
ಓಂಕಾರಲಿಂಗನಿಲಯಂ ಧ್ಯಾಯನ್ದೇವಂ ತ್ರಿಯಂಬಕಂ ॥೨೦॥

ಏವಂ ತಪಸ್ಯತಸ್ತಸ್ಯ ಪ್ರಾದುರ್ಭೂತೋಽಂಬಿಕಾಪತಿಃ ।
ಓಂಕಾರಲಿಂಗಮಧ್ಯಾತ್ಸ ಶಶಿಶೇಖರ ಈಶ್ವರಃ ॥೨೨॥

ನೀಲಕಂಠೋ ವಿರೂಪಾಕ್ಷಃ ಶೂಲೋದ್ಯತಮಹಾಕರಃ ।
ಗಂಗಾತುಂಗತರಂಗೌಘಶೀತೀಕೃತಕಪರ್ದಕಃ ॥೨೩॥

ಅಷ್ಟಮೀಚಂದ್ರಸಂಕಾಶಕಪಾಲವಿಲಸತ್ಕರಃ ।
ದೇವ್ಯಾಃಸ್ಕಂದೇನ ಹೇರಂಬನಂದ್ಯಾದಿಗಣಪೈರ್ವೃತಃ ॥೨೪॥

---

ತೆಗೆದುಕೊಳ್ಳದೇ, ಕೇವಲ ವಾಯು ಮತ್ತು ನೀರು ಇವುಗಳನ್ನೇ ಸೇವಿಸುತ್ತಾ ತಪಶ್ಚರ್ಯೆಯಲ್ಲಿದ್ದನು. ॥೨೦॥

ಹತ್ತು ವರ್ಷಗಳ ಕಾಲ ಹಗಲೂ ರಾತ್ರಿ ಎಡಬಿಡದೇ ತಪಸ್ಸುಮಾಡುತ್ತಾ ಓಂಕಾರಲಿಂಗದಲ್ಲಿ ನೆಲಸಿರುವ ಮುಕ್ಕಣ್ಣನಾದ ಆ ಮಹಾದೇವನನ್ನು ಧ್ಯಾನಮಾಡಿದನು. ॥೨೧॥

ಹೀಗೆ ಘೋರವಾಗಿ ತಪಸ್ಸುಮಾಡುತ್ತಿದ್ದ ಆ ಬ್ರಹ್ಮನಿಗೆ ಅಂಬಿಕಾರಮಣನಾದ ಮಹೇಶ್ವರನು, ಚಂದ್ರಶೇಖರನಾಗಿ ಆ ಓಂಕಾರಲಿಂಗಮಧ್ಯದಿಂದಲೇ ಪ್ರತ್ಯಕ್ಷನಾದನು. ॥೨೨॥

ಆಗ ಆ ಮಹೇಶ್ವರನು, ವಿಷಪಾನದಿಂದ ಕಪ್ಪಾದ ಕುತ್ತಿಗೆಯುಳ್ಳವನೂ, ವಿಕಾರವಾದ ಕಣ್ಣುಳ್ಳವನೂ, (ಎಲ್ಲರಿಗಿಂತಲೂ ವಿಶೇಷವಾದ ಮೂರನೆಯ ಹಣೆಗಣ್ಣಿನಿಂದ ಕೂಡಿದ್ದುದರಿಂದ) ತ್ರಿಶೂಲಾಯುಧವನ್ನು ಹಿಡಿದ ದೊಡ್ಡ ತೋಳುಳ್ಳವನೂ, ಗಂಗಾನದಿಯ ದೊಡ್ಡ ಅಲೆಗಳ ಸಮೂಹದಿಂದ ಶೀತಲವಾದ ಜಡೆಗಳುಳ್ಳವನೂ ಆಗಿದ್ದನು. ॥೨೩॥

ಅಷ್ಟಮೀ ತಿಥಿಯ ಚಂದ್ರನಂತೆ ಶೋಭಿಸುತ್ತಿರುವ ಕಪಾಲಯುಕ್ತವಾದ ಕೈಯುಳ್ಳವನೂ, ತೊಡೆಯಮೇಲೆ ಗಿರಿಜಾದೇವಿಯೂ, ಪಾರ್ಶ್ವದಲ್ಲಿ ನಂದಿಕೇಶ್ವರನೇ ಮೊದಲಾದ ರುದ್ರಗಣಗಳಿಂದ ಸುತ್ತುವರಿಯಲ್ಪಟ್ಟಿರುವವನೂ ಆಗಿದ್ದನು. ॥೨೪॥

ಸೂರ್ಯಕೋಟಿಪ್ರತೀಕಾಶಶ್ಚಂದ್ರಕೋಟಿಸುಶೀತಲಃ ।
ತಾದೃಶಂ ದೇವದೇವೇಶಂ ದೃಷ್ಟ್ವಾ ಹೃಷ್ಟೋಽಬ್ಜಜಃ ಶಿವಂ ॥೨೫॥

ಪ್ರಣಮ್ಯ ಪರಯಾ ಭಕ್ತ್ಯಾ ತುಷ್ಟಾವ ಜಗದೀಶ್ವರಂ ॥೨೬॥

॥ ಬ್ರಹ್ಮೋವಾಚ ॥

ಶಂಭೋ ಶಂಕರ ಶಾಂತ ಶಾಶ್ವತ ಶಿವ ಸ್ಥಾಣೋ ಭವೋಮಾಪತೇ
ಭೂತೇಶ ತ್ರಿಪುರಾಂತಕ ತ್ರಿನಯನ ಶ್ರೀಕಂಠಕಾಲಾಂತಕ ।
ಶರ್ವೋಗ್ರಾಭಯ ಭರ್ಗಭೀಮ ಜಗತಾಂ ನಾಥಾಕ್ಷಯ ಶ್ರೀನಿಧೇ
ರುದ್ರೇಶಾನ ಮಹೇಶ್ವರೇಶ್ವರ ಮಹಾದೇವೇಶ ತುಭ್ಯಂ ನಮಃ ॥೨೭॥

ತುಂಗನಿಲಯಾನಲ ಶಂಭೋ
ಬಿಲ್ವಹಾರಿಪರಿಶೋಭಿಗಲೇಶ ।
ಪಾಹಿ ಸೋನ್ಮಥಿತಮನ್ಮಥದಕ್ಷ
ಪಾಹಿಮಾಮಖಿಲದುಃಖಸಮೂಹಾತ್ ॥೨೮॥

ಕೋಟಿಸೂರ್ಯರಂತೆ ಪ್ರಕಾಶವುಳ್ಳವನೂ, ಕೋಟಿಚಂದ್ರರಂತೆ ಶೀತಲ ಸ್ವಭಾವವುಳ್ಳವನೂ, ಆಗಿರುವ ದೇವಾದಿದೇವನಾದ ಆ ಮಹೇಶ್ವರನನ್ನು ನೋಡಿ ಸಂತುಷ್ಟನಾದ ಬ್ರಹ್ಮನು ಭಕ್ತಿಯಿಂದ ಆ ಮಹೇಶನಿಗೆ ನಮಸ್ಕಾರಮಾಡಿ ಆ ಜಗದೊಡೆಯನನ್ನು ಹೀಗೆ ಸ್ತೋತ್ರಮಾಡಿದನು. (೨೫-೨೬)

ಶಂಭು, ಶಂಕರ, ಶಾಂತ, ಶಾಶ್ವತ, ಶಿವ, ಸ್ಥಾಣು, ಭವ, ಉಮಾರಮಣ, ಭೂತಾಧಿಪತಿ, ತ್ರಿಪುರಾಸುರಧ್ವಂಸಕ, ತ್ರಿನೇತ್ರ, ಶ್ರೀಕಂಠ, ಕಾಲಾಂತಕ (ಯಮನನ್ನು ನಿಗ್ರಹಿಸಿದವನು) ಈಶ್ವರ, ಉಗ್ರ, ಅಭಯ, ಭರ್ಗ, ಭೀಮ ಮೊದಲಾದ ಹೆಸರುಗಳಿಂದ ಶೋಭಿಸುವ ಜಗದೊಡೆಯನೇ, ನೀನು, ಎಂದಿಗೂ ನಾಶವಾಗದ ಲಕ್ಷ್ಮಿಗೆ ಆಶ್ರಯನಾಗಿರುವೆ. ರುದ್ರ, ಈಶ್ವರ, ಮಹೇಶ್ವರ, ಮಹಾದೇವ, ಈಶನೆಂದು ಪ್ರಸಿದ್ಧನಾಗಿರುವ ನಿನಗೆ ನಮಸ್ಕಾರ. (೨೭)

ಎತ್ತರವಾದ ಕೈಲಾಸಪರ್ವತವನ್ನೇ ತನ್ನ ಮನೆಯನ್ನಾಗಿ ಮಾಡಿಕೊಂಡಿರುವ ಪರಿಶುದ್ಧನಾದ ಶಂಭುವೇ, ಬಿಲ್ವಪತ್ರೆಯ ಹಾರದಿಂದ ಸುಂದರವಾಗಿ ಶೋಭಿಸುವ ಕೊರಳುಳ್ಳ ಈಶ್ವರನೇ, ಕೊಬ್ಬಿದ ಮನ್ಮಥ ಮತ್ತು ದಕ್ಷಬ್ರಹ್ಮ ಇವರನ್ನು ನಾಶ

ತ್ವಂ ಕಲ್ಮಷೀಕಿಃ ಶ್ರುತಿಜಾತಕೀರ್ತಿ
ರ್ವಿನಾಶಯಾಘೌಘಭರಂ ಮಮಾದ್ಯ ।
ಪತಿಃ ಪಶೂನಾಮಥ ಚೇತನಾನಾಂ
ನಿತ್ಯೋಽಸಿ ವಿಶ್ವಾಧಿಕ ವಿಶ್ವಮೂರ್ತೇ ॥೨೯॥

ಇತಿ ಸ್ತುವಂತಂ ಬ್ರಹ್ಮಾಣಂ ಪ್ರಾಹ ದೇವೋ ಮಹೇಶ್ವರಃ ।
ದೇವ್ಯಾ ದತ್ತಕರಃ ಶಂಭುರ್ಗಣಸಂಘೈಸ್ತದಾವೃತಃ ॥೩೦॥

॥ ಶಿವ ಉವಾಚ ॥

ಪಂಕಜಾಸನಂ ತ್ವದ್ಭಕ್ತ್ಯಾ ಸ್ತುತ್ಯಾ ತ್ವತ್ಕೃತಯಾಽನಯಾ ।
ತುಷ್ಟೋಽಹಮಿಷ್ಟಂ ತೇ ಭೂಯಾದ್ವರಂ ವರಯ ಸುವ್ರತ ॥೩೧॥

ಮಾಡಿದ ಶಂಕರನೇ, ಸಕಲ ದುಃಖಗಳನ್ನೂ ಹೋಗಲಾಡಿಸಿ ನನ್ನನ್ನು ಕಾಪಾಡು. ॥೨೮॥

ವೇದಗಳಲ್ಲಿ ಪ್ರಸಿದ್ಧಿ ಪಡೆದ ಕೀರ್ತಿಯುಳ್ಳ ನೀನು ಕಲ್ಮಷಗಳನ್ನೆಲ್ಲಾ ನಾಶಮಾಡುವವನು. ದೇವ, ನನ್ನ ಪಾಪಸಮೂಹಗಳ ಭಾರವನ್ನೆಲ್ಲಾ ಇಳುಹಿ ಕಾಪಾಡು. ಸ್ವಾಮಿ, ನೀನು ಅಜ್ಞಾನಿಗಳಿಗೂ ಮತ್ತು ಇತರ ಚೇತನವುಳ್ಳ ಪ್ರಾಣಿಗಳಿಗೂ ಒಡೆಯನು. ಅಲ್ಲದೆ ನಿತ್ಯನೂ, ಪ್ರಪಂಚದಲ್ಲೇ ಶ್ರೇಷ್ಠನೂ, ಜಗದ್ವ್ಯಾಪಿಯೂ ಆಗಿರುವೆ” ಎಂದು ಬ್ರಹ್ಮನು ಸ್ತೋತ್ರಮಾಡಿದನು. ॥೨೯॥

ಹೀಗೆ ತನ್ನನ್ನು ಭಕ್ತಿಯಿಂದ ಸ್ತೋತ್ರಮಾಡುತ್ತಿರುವ ಬ್ರಹ್ಮನನ್ನು ಕುರಿತು, ದೇವಿಯು ಕರಾವಲಂಬನವನ್ನು ಹೊಂದಿ, ತನ್ನ ಗಣಸಮೂಹದಿಂದ ಪರಿವೃತನಾಗಿ ಲೋಕಮಂಗಳಕರನೆನಿಸಿದ ಮಹೇಶ್ವರನು ಹೀಗೆ ಹೇಳಿದನು. ॥೩೦॥

ಕಮಲಾಸನನಾದ ಬ್ರಹ್ಮನೇ, ನಿನ್ನ ಭಕ್ತಿಪೂರ್ವಕವಾದ ಈ ಸ್ತುತಿಯಿಂದ ನಾನು ಸಂತುಷ್ಟನಾಗಿರುವೆನು. ಎಲೈ ಆಚಾರಶೀಲನೇ, ನಿನಗೆ ಬೇಕಾದ ವರವನ್ನು ಕೊಡುತ್ತೇನೆ ಪ್ರಾರ್ಥಿಸು, ಎಂದು ಶಿವನು ಬ್ರಹ್ಮನಿಗೆ ಅಭಯಪ್ರದಾನಮಾಡಿದನು. ॥೩೧॥

ಇತ್ಥಂ ಶಂಕರವಾಕ್ಯಾಂತೇ ಪ್ರಾಂಜಲಿಃ ಪ್ರಾಹ ಪದ್ಮಭೂಃ ॥೩೨॥

॥ ವೇಧಾ ಉವಾಚ ॥

ದೃಷ್ಟಮಿಷ್ಟಂ ಮಯಾ ಶಂಭೋ ಕಷ್ಟಹಾರಿಪದಂ ತವ ।
ಮತ್ತೋ ಧನ್ಯತರಃ ಕೋ ವಾ ಸುರೇಷು ಪರಮೇಶ್ವರ ॥೩೩॥

ಕಿಂ ಚಾದ್ಯ ಸುರಕಾರ್ಯಾರ್ಥಂ ವಿಜ್ಞಾಪ್ಯಂ ಶ್ರೂಯತಾಂ ಮಮ ।
ಯದಾ ಶಂಖಾಸುರಹೃತಾ ವೇದಾ ವೇದಶಿಖಾಮಣೇ ॥೩೪॥

ತ್ವಯಾಜ್ಞಪ್ತೋ ಹಿ ಮುರಭಿದ್ಧತ್ವಾ ತಮಸುರೋತ್ತಮಂ ।
ತಥಾನ್ಯಾನ್ದ್ವೃಪ್ತದೈತೇಯಾ ತದಾ ತತ್ಪ್ರಾಪ್ತವಾಂಛ್ರುತೀಃ ॥೩೫॥

ವೇದಹೀನಂ ಜಗತ್ಸರ್ವಂ ನಿಃಸ್ವಾಧ್ಯಾಯವಷಟ್ಕೃತಂ ।
ದ್ವಿಜಾಧ್ಯಯನಹೀನಾಶ್ಚ ಹೀನಯಜ್ಞಾ ಮಹೇಶ್ವರ ॥೩೬॥

ಶಂಕರನು ಹೀಗೆ ನುಡಿದ ಮೇಲೆ ಆ ಬ್ರಹ್ಮನು ಕೈಮುಗಿದು ಇಂತೆಂದನು. ॥೩೧॥

ಶುಭಕರನಾದ ಪರಮೇಶ್ವರನೇ, ಕಷ್ಟಗಳನ್ನು ಹೋಗಲಾಡಿಸುವ ನಿನ್ನ ಪ್ರೀತಿಪಾತ್ರವಾದ ಪಾದಗಳನ್ನು ನೋಡಿದ ನನಗಿಂತಲೂ ದೇವತೆಗಳಲ್ಲಿ ಹೆಚ್ಚು ಧನ್ಯರಾದವರು ಯಾರಿರುವರು? ॥೩೩॥

ಆದರೂ ದೇವನೇ! ದೇವತೆಗಳ ಕೆಲಸಕ್ಕೋಸ್ಕರ ನಾನು ಈಗ ವಿಜ್ಞಾಪನೆ ಮಾಡಿಕೊಳ್ಳುವೆನು. ದಯವಿಟ್ಟು ಲಾಲಿಸಬೇಕು. ಓ ವೇದಶಿಖಾಮಣಿಯೇ! ಹಿಂದೆ ಶಂಖಾಸುರನಿಂದ ವೇದಗಳು ಅಪಹರಿಸಲ್ಪಡಲು, ನಿನ್ನಿಂದ ಆಜ್ಞಪ್ತನಾದ ಮಹಾವಿಷ್ಣುವು, ಆ ಶಂಖದೈತ್ಯನನ್ನೂ, ಮಿಕ್ಕ ಕೊಬ್ಬಿದ ದೈತ್ಯರನ್ನೂ ಕೊಂದು ವೇದಗಳನ್ನು ತಂದು ನಿನಗೆ ಸಮರ್ಪಿಸಿದನು. ॥೩೪-೩೫॥

ಈಗ, ಜಗತ್ತೆಲ್ಲವೂ, ವೇದವಿಲ್ಲದೇ ಇರುವುದರಿಂದ, ವೇದಾಧ್ಯಯನ ಮತ್ತು ವಷಟ್ಕಾರ ಮುಂತಾದ ಆಜ್ಯಾಹುತಿಗಳಿಲ್ಲದೇ ಹೋಗಿವೆ. ಮಹೇಶ್ವರ! ಬ್ರಾಹ್ಮಣರು ಅಧ್ಯಯನ ಹೀನರಾಗಿರುವುದರಿಂದ ಯಾಗಗಳೇ ನಡೆಯುದಂತಾಗಿವೆ. ॥೩೬॥

ಯಜ್ಞಹೀನೇ ತಥಾ ಲೋಕೇ ವೃಷ್ಟಿಹೀನಾಭವನ್ಮಹೀ ।
ನಿರೌಷಧಿರಸಾ ಪೃಥ್ವೀ ಗಾವಶ್ಚೌಷಧಿವರ್ಜಿತಾಃ ॥೩೭॥

ದೇವಾ ಭಾಗವಿಹೀನಾಶ್ಚ ಕಷ್ಟಂ ವಿಷ್ಟಪಮಾಶ್ರಿತಾಃ ।
ವೇದಮೂಲಂ ಜಗಚ್ಛಂಭೋ ವೇದಾನ್ಮೇ ದಾತುಮರ್ಹಸಿ ॥೩೮॥

ವೇದವೇದ್ಯ ಮಹಾದೇವ ವೇದಾಂತೇಷು ಪ್ರತಿಷ್ಠಿತ ।
ಬ್ರಹ್ಮಾಣಂ ಪ್ರಾಂಜಲಿಂ ಶಂಭುರವೋಚದ್ಬ್ರಹ್ಮಣಸ್ಪತಿಃ ॥೩೯॥

॥ ಈಶ್ವರ ಉವಾಚ ॥

ಓಂಕಾರಕುಂಡೇ ಸಂಸ್ನಾಹಿ ತಪಸಃ ಶ್ರಮಕರ್ಶಿತಃ ।
ಕುಂಡಂ ಲಿಂಗಾಲಯಂ ತದ್ಧಿ ಪವಿತ್ರಂ ಪಾಪನಾಶನಂ ॥೪೦॥

ತಲ್ಲಿಂಗಶತಕಂ ನಿತ್ಯಂ ಮಾಸಮಾತ್ರಂ ಸಮರ್ಚಯ ।
ಬಿಲ್ವಪತ್ರೈಃ ಪಂಕಜೈಶ್ಚ ರೇವಾನೀರೈಃ ಸುಶೀತಲೈಃ ॥೪೧॥

---

ಲೋಕವೆಲ್ಲವೂ ಹೀಗೆ ಯಾಗವಿಲ್ಲದೇ ಹೋಗಲು, ಭೂಮಿಯಲ್ಲಿ ಮಳೆಯೇ ಇಲ್ಲದಂತಾಯಿತು. ಯಾವ ಔಷಧಿಲತೆಗಳೂ, ಮತ್ತು ರಸಗಳೂ ಈ ಭೂಮಿಯಲ್ಲಿಲ್ಲ. ಹಸುಗಳೆಲ್ಲಾ ತೃಣಾದ್ಯೌಷಧಿಗಳಿಲ್ಲದೇ ಕಂದಿರುವುವು. ॥೩೭॥

ಹೀಗೆ ದೇವತೆಗಳೆಲ್ಲರೂ ಯಜ್ಞಭಾಗಗಳಿಲ್ಲದೇ ಬಹಳ ಕಷ್ಟದಿಂದ ಸ್ವರ್ಗದಲ್ಲಿ ಜೀವಿಸುತ್ತಿರುವರು. ಶಂಭೋ ! ಈ ಪ್ರಪಂಚವೆಲ್ಲವೂ ವೇದಮೂಲಕವೇ ಆಗಿರುವುದು. ಎಲೈ, ವೇದವೇದ್ಯನಾದ ಮಹಾದೇವನೇ! ವೇದಾಂತಗಳಲ್ಲಿ ಪ್ರಸಿದ್ಧಿ ಪಡೆದ ಸ್ವಾಮಿಯೇ ! ಆದುದರಿಂದ ಆ ವೇದಗಳನ್ನು ನನಗೆ ಕೊಟ್ಟು ಅನುಗ್ರಹಿಸು, ಎಂದು ಬ್ರಹ್ಮನು ಶಿವನನ್ನು ಪ್ರಾರ್ಥಿಸಿದನು. ॥೩೮॥

ಹೀಗೆ ಕೈ ಮುಗಿದು ಪ್ರಾರ್ಥಿಸುತ್ತಿರುವ ಬ್ರಹ್ಮನನ್ನು ಕುರಿತು, ಆ ಬ್ರಹ್ಮನಿಗೂ ಒಡೆಯನಾದ ಶಂಭುವು ಹೀಗೆಂದನು. ॥೩೯॥

ಬ್ರಹ್ಮನೇ, ತಪಸ್ಸುಮಾಡಿ ಆಯಾಸಪಟ್ಟಿರುವ ನೀನು ಈ ಓಂಕಾರಕುಂಡದಲ್ಲಿ ಸ್ನಾನಮಾಡು. ಈ ಕುಂಡವು ಎಲ್ಲ ಶಿವಲಿಂಗಗಳಿಗೂ ಆಶ್ರಯವಾಗಿ, ಎಲ್ಲಾ ಪಾಪಗಳನ್ನೂ ಹೋಗಲಾಡಿಸುವುದು. ಅಲ್ಲದೇ ಇದು ಪರಮಪವಿತ್ರವಾದುದು.॥೪೦॥

ಒಂದು ತಿಂಗಳ ಕಾಲ ಆ ಕುಂಡದ ನೂರುಲಿಂಗಗಳನ್ನು ನಿತ್ಯವೂ, ಬಿಲ್ವ

ವೇದಶಾಖಾಮರತರುಸ್ತದಾ ಗ್ರಾಹ್ಯೋ ಭವಿಷ್ಯತಿ।
ಅತ್ರೇತಿಹಾಸಂ ತೇ ವಕ್ಷ್ಯೇ ಭವಿಷ್ಯಂ ಪಂಕಜಾಸನ ॥೪೨॥

ಬಲಿಪುತ್ರೋ ಬಾಣನಾಮಾ ಭವಿಷ್ಯತಿ ಮಹಾಸುರಃ।
ಸಹಸ್ರಭುಜದೋರ್ದಂಡಶ್ಚಂಡವಿಕ್ರಮಮಂಡಿತಃ ॥೪೩॥

ಆಖಂಡಲಾದಿವಿಬುಧಾನ್ಸಂಗ್ರಾಮೇ ಸ ಜಯಿಷ್ಯತಿ।
ನಿತ್ಯಂ ಮತ್ಪಾದಪೂಜಾಯಾಂ ನಿರತಃ ಸ ಭವಿಷ್ಯತಿ ॥೪೪॥

ಸಹಸ್ರಲಿಂಗಾನಿ ಸದಾ ಬಾಣಃ ಪೂಜಯಿತಾ ಧ್ರುವಂ।
ತತ್ಪೂಜಯಾಽಹಂ ಸಂತುಷ್ಟೋ ಗಾಣಾಪತ್ಯಂ ದಿಶಾಮಿ ಚ ॥೪೫॥

ಮತ್ಪೂಜಾಖರ್ವಗರ್ವೇಣ ಯದಾ ಲೋಕಾನ್ಪ್ರಬಾಧತೇ।
ತದಾ ತಮಸುರಶ್ರೇಷ್ಠಂ ಗರ್ವನಿರ್ವಾಪಣಾಯ ಹಿ ॥೪೬॥

---

ಪತ್ರೆಗಳಿಂದಲೂ, ಕಮಲ ಮತ್ತು ತಣ್ಣಗಿರುವ ರೇವಾನದಿಯ ನೀರು ಇವುಗಳಿಂದ ಭಕ್ತಿಪೂರ್ವಕವಾಗಿ ಪೂಜೆಮಾಡು. ॥೪೧॥

ಬ್ರಹ್ಮನೇ, ಹೀಗೆ ನೀನು ಮಾಡಿದ ನಂತರ ವೇದಶಾಖೆಗಳೆಂಬ ಕಲ್ಪವೃಕ್ಷವನ್ನು ಗ್ರಹಿಸಲು ಸಮರ್ಥನಾಗುವೆ. ಈ ವಿಷಯದಲ್ಲಿ ಒಂದು ಮುಂದೆ ಬರುವ ಇತಿಹಾಸವನ್ನು ಈಗಲೇ ಹೇಳುವೆನು ಕೇಳು. ॥೪೨॥

ಮುಂದೆ ಬಾಣನೆಂಬ ದೊಡ್ಡ ರಾಕ್ಷಸನೊಬ್ಬನು ಬಲಿಯ ಮಗನಾಗಿ ಹುಟ್ಟುವನು. ಅವನು ತನ್ನ ಸಾವಿರ ಭುಜದಂಡಗಳಿಂದ ಪ್ರಚಂಡವಾದ ಪರಾಕ್ರಮವುಳ್ಳವನಾಗುತ್ತಾನೆ. ॥೪೩॥

ಕ್ರಮವಾಗಿ ಇಂದ್ರನೇ ಮೊದಲಾದ ದೇವತೆಗಳನ್ನೆಲ್ಲಾ ಅವನು ಯುದ್ಧದಲ್ಲಿ ಜಯಿಸುತ್ತಾನೆ. ಆದರೂ ಅವನು ಪ್ರತಿನಿತ್ಯವೂ ನನ್ನ ಪಾದಪೂಜೆಯಲ್ಲಿಯೇ ನಿರತನಾಗುತ್ತಾನೆ. ॥೪೪॥

ಆ ಬಾಣಾಸುರನು, ಸಾವಿರ ಶಿವಲಿಂಗಗಳನ್ನು ತಪ್ಪದೇ ಪೂಜೆಮಾಡುತ್ತಾನೆ. ಅವನ ಆ ಪೂಜೆಯಿಂದ ಸಂತುಷ್ಟನಾಗಿ ನಾನು ಅವನಿಗೆ ಗಣಾಧಿಪತ್ಯವನ್ನು ಕೊಡುವೆನು. ॥೪೫॥

ನನ್ನ ಪೂಜೆಯ ಮಹಿಮೆಯಿಂದುಂಟಾದ ಅಪಾರ ಗರ್ವದಿಂದ ಯಾವಾಗ ಆ ಬಾಣಾಸುರನು ಲೋಕಗಳನ್ನೆಲ್ಲಾ ಬಾಧೆಪಡಿಸಲು ಪ್ರಯತ್ನಿಸುತ್ತಾನೆಯೋ

ಅನ್ಯೇಷಾಂ ದೈತ್ಯವರ್ಗಾಣಾಂ ವಿನಾಶಾಂಪ ಮದಾಜ್ಞಯಾ ।
ಜನಿಷ್ಯತಿ ತಥಾ ವಿಷ್ಣುರ್ನರನಾರಾಯಣಾತ್ಮಕಃ ॥೪೭॥

ಸ ವಿಷ್ಣುರ್ಮಾಂ ಸಮಭ್ಯರ್ಚ್ಯ ಸಂಹರಿಷ್ಯತಿ ತಾನಪಿ ।
ಮತ್ತೋ ಲಬ್ಧವರೋದ್ವೃತ್ತಸ್ತೇನ ಸಂಗ್ರಾಮಮೂರ್ಧನಿ ॥೪೮॥

ತದ್ಬಾಹುಜಾಲಭಿನ್ನಂ ಚ ಭವಿಷ್ಯತಿ ಚತುರ್ಮುಖ ।
ಕೃಷ್ಣೇನಾಜಿಮುಖೇ ಬ್ರಹ್ಮಂಸ್ತದ್ಭಕ್ತ್ಯಾಹಂ ವಶೀಕೃತಃ ॥೪೯॥

ಬಾಣಂ ಚ ಗಣಪಶ್ರೇಷ್ಠಂ ರಕ್ಷಿಷ್ಯಾಮಿ ಪ್ರಜಾಪತೇ ।
ಭಕ್ತಯೋರ್ಮಮ ಯುದ್ಧೇ ಚ ಅಹಂ ಭೂಯಾಂ ಪರಾಙ್ಮುಖಃ ॥೫೦॥

ಕೋ ವಾ ಮಾಂ ಜೇತುಮಿಚ್ಛೇದ್ಧಿ ಮಮ ಭಕ್ತಾನ್ವಿನಾಽಬ್ಜಜ ।
ಶ್ರುತಯೋ ಮಾಂ ವದಂತೀಶಂ ಜೇತಾರಮಪರಾಜಿತಂ ॥೫೧॥

---

ಆಗ ಆ ರಾಕ್ಷಸಶ್ರೇಷ್ಠನ ಗರ್ವವನ್ನು ಹೋಗಲಾಡಿಸುವುದಕ್ಕೋಸ್ಕರವೂ ಮತ್ತು ಇತರ ದೈತ್ಯರನ್ನು ಸಂಹರಿಸುವುದಕ್ಕಾಗಿಯೂ ನನ್ನ ಅಪ್ಪಣೆಯನ್ನು ಪಡೆದು ಮಹಾವಿಷ್ಣುವು ನರನಾರಾಯಣರೂಪವನ್ನು ತಾಳುತ್ತಾನೆ. ॥೪೭॥

ಆಗ ವಿಷ್ಣುವು ನನ್ನನ್ನು ಚೆನ್ನಾಗಿ ಪೂಜಿಸಿ, ಆ ದೈತ್ಯರನ್ನೆಲ್ಲಾ ಸಂಹಾರ ಮಾಡುತ್ತಾನೆ. ನನ್ನ ವರಬಲದಿಂದ ಕೊಬ್ಬಿದ್ದರೂ ಆ ಬಾಣಾಸುರನ ಭುಜ ಸಮೂಹಗಳೆಲ್ಲವೂ ಯುದ್ಧ ಮಧ್ಯದಲ್ಲಿ ಕೃಷ್ಣನಿಂದ ಕತ್ತರಿಸಲ್ಪಡುತ್ತವೆ. ನಾಲ್ಕು ಮುಖವುಳ್ಳ ಬ್ರಹ್ಮನೇ, ಆಗ ನಾನು ಆ ಬಾಣಾಸುರನ ಭಕ್ತಿಗೆ ಮೆಚ್ಚಿದವನಾಗಿ, ॥೪೯॥

ಪ್ರೀತಿಯಿಂದ ಗಣಶ್ರೇಷ್ಠನಾದ ಆ ಬಾಣಾಸುರನನ್ನು ಬದುಕಿಸುತ್ತೇನೆ. ಬ್ರಹ್ಮನೇ ! ನನ್ನ ಭಕ್ತರಿಬ್ಬರ ಪರಸ್ಪರ ಯುದ್ಧದಲ್ಲಿ ನನಗೇ ಸೋಲುಂಟಾಗುವುದು. ॥೫೦॥

ಎಲೈ ಕಮಲ ಸಂಭವನೇ ! ನನ್ನ ಭಕ್ತರನ್ನು ಬಿಟ್ಟು ಬೇರೆ ಯಾರುತಾನೇ ನನ್ನನ್ನು ಜಯಿಸಬಲ್ಲರು ! ಶ್ರುತಿಗಳೂ ಸಹ ನನ್ನನ್ನೂ ವಿಜಯಶೀಲನೆಂದೂ ಯಾರಿಗೂ ಯಾವಾಗಲೂ ಸೋಲುವವನಲ್ಲವೆಂದೂ ಹೇಳುತ್ತಿರುವುವು. ॥೫೧॥

ನರಃ ಪಾರ್ಥ ಇತಿ ಖ್ಯಾತಃ ಪಾಂಡುಪುತ್ರೋ ಭವಿಷ್ಯತಿ ।
ತೇನಾಪಿ ಭವಿತಾ ಯುದ್ಧಂ ಕೌತುಕಾನ್ಮೇ ಚತುರ್ಮುಖ ॥೫೨॥

ತದಸ್ತ್ರಜಾಲಂ ಖಡ್ಗಂ ಚ ವಿಶ್ವಗ್ರಾಸೋ ಗ್ರಸಾಮ್ಯಹಂ ।
ಮದುತ್ತಮಾಂಗೇ ತಸ್ಯೈವ ಪ್ರಹಾರಂ ಧಾರಯಾಮ್ಯಹಂ ॥೫೩॥

ತದ್ಭಕ್ತಿತೋಷಿತಶ್ಚಾಹಂ ತನ್ನಾಮಖ್ಯಾಪನಾಯ ಹಿ ।
ಓಂಕಾರಲಿಂಗೇಷು ಸದಾ ಬಾಣಃ ಸಂಪೂಜಯಿಷ್ಯತಿ ॥೫೪॥

ಬಾಣೇನ ಪೂಜಿತಂ ತಸ್ಮಾದ್ಬಾಣಲಿಂಗಂ ಪ್ರಚಕ್ಷತೇ ।
ಬಾಣಲಿಂಗಕಿಣಂ ಬ್ರಹ್ಮನ್ಪಾರ್ಥಪ್ರಹರಣಾಂಕಿತಂ ॥೫೫॥

ತಾದೃಶೇ ಮಮ ಭಕ್ತೇನ ಪತ್ರಂ ಪುಷ್ಪಂ ಫಲಂ ವಿಧೇ ।
ದತ್ತಂ ಗೃಹ್ಣಾಮಿ ತನ್ಮೂರ್ಧ್ನಾ ತತ್ತೃಪ್ತ್ಯೈ ಮೇ ಭವಿಷ್ಯತಿ ॥೫೬॥

ನಾರಾಯಣಾವತಾರದಲ್ಲಿ, ನರನೆಂಬುವನು ಅರ್ಜುನನೆಂದು ಪ್ರಸಿದ್ಧನಾಗಿ ಪಾಂಡುಮಹಾರಾಜನ ಮಗನಾಗಿ ಹುಟ್ಟುವನು. ಅಯ್ಯಾ ಚತುರ್ಮುಖ ಬ್ರಹ್ಮನೇ ! ಅವನೊಡನೆಯೂ, ನನಗೆ ಕುತೂಹಲದಿಂದ ಯುದ್ಧವೊದಗುವುದು. ॥೫೨॥

ಆಗ ಆ ಪಾರ್ಥನ, ಶಸ್ತ್ರಸಮೂಹವನ್ನೂ ಮತ್ತು ಕತ್ತಿಯನ್ನೂ ಈ ಪ್ರಪಂಚವನ್ನೇ ನುಂಗುವ ನಾನು ನುಂಗುವೆನು. ಆಗ ಅರ್ಜುನನು, ತನ್ನ ಮುಷ್ಟಿಯಿಂದ ಬಲವಾಗಿ ತನ್ನ ತಲೆಯ ಮೇಲೆ ಹೊಡೆಯುತ್ತಾನೆ. ಅದು ಭಕ್ತನ ಪ್ರಹಾರವಾದುದರಿಂದ ನಾನು ಕೋಪಿಸದೇ ಎಲ್ಲವನ್ನೂ ಸಹಿಸುವೆನು. ॥೫೩॥

ಅವನ ಭಕ್ತಿಯಿಂದ ಸಂತುಷ್ಟನಾದ ನಾನು, ಅವನ ಹೆಸರನ್ನು ಪ್ರಸಿದ್ಧಿಪಡಿಸುವುದಕ್ಕೋಸ್ಕರ, ಓಂಕಾರಲಿಂಗಗಳಲ್ಲಿ ಅಡಗುವೆನು. ಅದನ್ನು ಯಾವಾಗಲೂ ಬಾಣಾಸುರನು ಪೂಜೆಮಾಡುತ್ತಾನೆ. ॥೫೪॥

ಯಾವಾಗಲೂ ಆ ಬಾಣಾಸುರನಿಂದ ಪೂಜಿಸಲ್ಪಡುವುದರಿಂದ ಅವಕ್ಕೆ ಬಾಣಲಿಂಗವೆಂದು ಪ್ರಖ್ಯಾತಿ ಬರುವುದು. ಬಾಣಲಿಂಗದಲ್ಲಿರುವ ಈ ಗುರುತು (ಗಾಯರೂಪವಾದ ಗುರುತು) ಪಾರ್ಥನ ಏಟಿನಿಂದ ಉಂಟಾದುದು. ॥೫೫॥

ಬ್ರಹ್ಮನೇ, ಈ ರೀತಿಯಾಗಿರುವ ಲಿಂಗದಲ್ಲಿಯೇ ನನ್ನ ಭಕ್ತರು ಸಮರ್ಪಿಸುವ, ಪತ್ರೆ, ಹೂ, ಹಣ್ಣುಗಳನ್ನು ಈ ತಲೆಯಿಂದಲೇ ಸ್ವೀಕರಿಸುತ್ತೇನೆ. ಅದು ನನಗೆ ತೃಪ್ತಿಯನ್ನುಂಟುಮಾಡುತ್ತದೆ. ॥೫೬॥

ಓಂಕಾರಕುಂಡೋತ್ತಮಲಿಂಗಪೂಜಾಂ
ಕುರ್ವನ್ಸದಾ ಬಿಲ್ವದಲೈಶ್ಚ ನೀರೈಃ ।
ಸಹಸ್ರಮೃಲ್ಲಿಂಗಸಮರ್ಚನೋತ್ಥ
ಪುಣ್ಯಂ ಲಭೇನ್ಮುಕ್ತಿಮುಪೈತಿ ಶಾಶ್ವತೀಂ ॥೫೭॥

ತ್ರಿಪುಂಡ್ರರುದ್ರಾಕ್ಷವಿಭೂತಿಭಾಸುರೋ
ಯೋ ಬಾಣಲಿಂಗಂ ಮಮ ಬಿಲ್ವಮೂಲೇ ।
ರುದ್ರಂ ಜಪನ್ನೀರಸುಧಾರಯಾ ಶಿವಂ
ಸಿಂಚನ್ನರೋ ಬಿಲ್ವದಲಂ ಸಮರ್ಚ್ಯ ॥೫೮॥

ಮುಕ್ತೋ ಭವೇದೇವ ಸ ಪುಣ್ಯಭಾಕ್ಸದಾ
ಗುಹ್ಯಂ ವದಾಮ್ಯದ್ಯ ಶೃಣು ಪ್ರಜಾಪತೇ ।
ಪಾರ್ಥಪ್ರಹಾರೋತ್ತಮ ಬಾಣಲಿಂಗಂ
ಲಿಂಗಂ ವಿಜಾನೀಹಿ ತದುತ್ತಮಂ ಮೇ ॥೫೯॥

ಓಂಕಾರಕುಂಡದ ಉತ್ತಮವಾದ ಶಿವಲಿಂಗಪೂಜೆಯನ್ನು ಯಾವಾಗಲೂ, ಬಿಲ್ವಪತ್ರೆಗಳಿಂದಲೂ ಮತ್ತು ನೀರುಧಾರೆಗಳಿಂದಲೂ ಮಾಡುವವನು, ಸಾವಿರ ಮಣ್ಣಿನ ಲಿಂಗಗಳನ್ನು ಪೂಜೆಮಾಡುವುದರಿಂದ ಉಂಟಾಗುವ ಸುಕೃತವನ್ನು ಪಡೆದು, ಕೊನೆಗೆ ಶಾಶ್ವತವಾದ ಮೋಕ್ಷವನ್ನು ಹೊಂದುವನು. ॥೫೭॥

ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲೆ, ಇವುಗಳಿಂದಲಂಕೃತನಾಗಿ ಪ್ರಕಾಶಿಸುವ ಶಿವಭಕ್ತನು ನನ್ನ ಈ ಬಾಣಲಿಂಗವನ್ನು ಬಿಲ್ವವೃಕ್ಷದ ಬುಡದಲ್ಲಿಟ್ಟು ರುದ್ರಮಂತ್ರವನ್ನು ಜಪಿಸುತ್ತಾ, ನೀರಿನ ಧಾರೆಗಳಿಂದ ಪರಶಿವನೆನಿಸಿದ ನನಗೆ ಅಭಿಷೇಕ ಮಾಡುತ್ತಾ ಬಿಲ್ವದಳಗಳಿಂದ ಪೂಜಿಸುವುದಾದರೆ, ॥೫೮॥

ಅವನು ನಿಜವಾಗಿಯೂ ಮುಕ್ತನೇ ಆಗುವನು. ಅಲ್ಲದೇ ವಿಶೇಷವಾದ ಪುಣ್ಯಶಾಲಿಯೂ ಆಗುವನು. ಓ ಪ್ರಜಾಪತಿಯೇ, ಒಂದು ರಹಸ್ಯವನ್ನು ಹೇಳುವೆನು ಕೇಳು. ಪಾರ್ಥನ ಏಟಿನಿಂದ ಉತ್ತಮವೆನಿಸಿರುವ ಈ ಬಾಣಲಿಂಗವೇ ನನ್ನ ಲಿಂಗಗಳೆಲ್ಲಕ್ಕಿಂತಲೂ ಉತ್ತಮವಾದುದೆಂದು ತಿಳಿಯುವನಾಗು ಎಂದು ಶಂಕರನು ಹೇಳಿದನು. ॥೫೯॥

ಓಮಿತ್ಯುಕ್ತ್ವಾ ಮಹಾದೇವಂ ಬ್ರಹ್ಮಾ ಸುರಗಣಾಧಿಪಃ ।
ಸ್ನಾತ್ವಾ ತತ್ಕುಂಡಸುಜಲೈಃ ಕಾರ್ತಿಕೇಷು ವಿಶೇಷತಃ ॥೬೦॥

ಸಲ್ಲಿಂಗಶತಕಂ ನಿತ್ಯಂ ಪೂಜಯಾಮಾಸ ಭಕ್ತಿತಃ ।
ಭಸ್ಮರುದ್ರಾಕ್ಷಭೂಷಾಢ್ಯೋ ರುದ್ರಸೂಕ್ತಜಪಾದರಃ ॥೬೧॥

ಸಾದರಃ ಶಿವಪೂಜಾಯಾಂ ರುದ್ರವಿನ್ಯಸ್ತಮಾನಸಃ ।
ಭಕ್ತ್ಯಾನಂದಾಶ್ರುಪುಲಕಃ ಪಾಹಿ ಪಾಹೀತಿ ಸಂವದನ್ ।॥೬೨॥

ಮಾಸಾಂತೇ ಶಂಕರಂ ಬ್ರಹ್ಮಾ ಸದಾಶಿವಮುದೈಕ್ಷತ
ಪ್ರಣನಾಮ ಮಹಾದೇವಪಾದಪಂಕಜಮಾದರಾತ್ ॥೬೩॥

ಸಾಂಜಲಿರ್ದೇವ ದೇವೇಶಂ ತುಷ್ಟಾವ ಗಿರಿಜಾಸಖಂ ॥೬೪॥

ದೇವಗಣಗಳಿಗೆ ಸ್ವಾಮಿಯಾದ ಆ ಬ್ರಹ್ಮನು ಮಹಾದೇವನಿಗೆ ಹಾಗೆಯೇ ಆಗಲಿ ಎಂದು ಹೇಳಿ, ಆ ಕುಂಡದ ನೀರಿನಲ್ಲಿ ವಿಶೇಷವಾಗಿ ಕಾರ್ತಿಕಮಾಸಗಳಲ್ಲಿ ಸ್ನಾನಮಾಡುತ್ತಾ ನಿತ್ಯವೂ ಭಸ್ಮ ರುದ್ರಾಕ್ಷಭೂಷಣನಾಗಿ, ರುದ್ರಸೂಕ್ತವನ್ನು ಜಪಿಸುವುದರಲ್ಲಿ ಆದರವುಳ್ಳವನಾಗಿ ಭಕ್ತಿಯಿಂದ ಆ ನೂರುಲಿಂಗಗಳನ್ನು ಪೂಜೆ ಮಾಡುತ್ತಿದ್ದನು. ॥೬೦-೬೧॥

ಪರಶಿವನ ಪೂಜೆಯಲ್ಲಿಯೇ ಆದರಯುಕ್ತನಾಗಿ, ರುದ್ರಮಂತ್ರವನ್ನು ಹೇಳುವುದರಲ್ಲಿ ನೆಟ್ಟಮನಸ್ಸುಳ್ಳ ಆ ಬ್ರಹ್ಮನು, ಒಂದು ತಿಂಗಳಾದ ಮೇಲೆ ಮಂಗಳ ಸ್ವರೂಪನಾದ ಶಂಕರನನ್ನು ಮತ್ತೆ ದರ್ಶನಮಾಡಿದನು. ॥೬೨॥

ಭಕ್ತರ ಆನಂದವನ್ನು ಹೊರಸೂಸುವ ಕಣ್ಣೀರು ಮತ್ತು ರೋಮಾಂಚಗಳಿಂದ ಕೂಡಿ, ಆ ಬ್ರಹ್ಮನು ಕಾಪಾಡು ಕಾಪಾಡು ಎಂದು ಹೇಳುತ್ತಾ ಭಕ್ತವತ್ಸಲನಾದ ಮಹಾದೇವನ ಪಾದಕಮಲಗಳಿಗೆ ಆದರದಿಂದ ನಮಸ್ಕಾರಮಾಡಿದನು. ಆಮೇಲೆ ದೇವದೇವೋತ್ತಮನೂ, ಗಿರಿಜಾರಮಣನೂ, ಆದ ಮಹೇಶ್ವರನನ್ನು ಕೈಮುಗಿದು ಈ ರೀತಿ ಸ್ತೋತ್ರಮಾಡಿದನು. ॥೬೩-೬೪॥

|| ಬ್ರಹ್ಮೋವಾಚ ||

ಶ್ರೀಬಾಣಲಿಂಗನಿಲಯಾಮಲಭೂತಿಭೂಷ
ವಿಶ್ವೇಶ ವಿಶ್ವಮದನಾಂತಕ ವಿಶ್ವವಂದ್ಯ ।
ಶಂಭೋ ಸದಾಶಿವ ಸುಚಂದನಬಿಲ್ವಮೌಲೇ
ಪಾಹಿ ಪ್ರಸೀದ ಪರಮೇಶ್ವರ ಪಂಚವಕ್ತ್ರ ||೬೫||

ವಿಶ್ವಾಧಿಕ ಪ್ರಮಥನಾಥ ಸುರಾಸುರೇಡ್ಯ
ಸೋಮಾಗ್ನಿವಿಷ್ಣುಶರಕೃತ್ತ್ರಿಪುರಾದಿವರ್ಗ ।
ತ್ರಯ್ಯಂತವೇದ್ಯ ವಿಧಿವಿಷ್ಣುವಿಮೃಗ್ಯಮೌಳಿ
ಪಾದಾರವಿಂದ ಪರಮೇಶ್ವರ ಪಾಹಿ ದೀನಂ ||೬೬||

ಏವಂ ಸ್ತುವಂತಂ ಬ್ರಹ್ಮಾಣಂ ಪ್ರಣತಂ ಭುವಿ ದಂಡವತ್ ।
ಉತ್ಥಾಪ್ಯ ದೋರ್ಭ್ಯಾಂ ಚ ತದಾ ಶಶಿಶೇಖರ ಈಶ್ವರಃ ||೬೭||

ಪ್ರಾಹ ಪ್ರಗಲ್ಭವಚನೈಃ ಸುಧಾಧಿಕ್ಕಾರಿಭಿಃ ಶಿವಃ ||೬೮||

"ಶ್ರೀಬಾಣಲಿಂಗದಲ್ಲೇ ನೆಲಸಿರುವ ದೇವನೇ! ನಿರ್ಮಲವಾದ ಭಸ್ಮಾಭರಣವುಳ್ಳ ವಿಶ್ವೇಶ್ವರನೇ, ನೀನು ಈ ಪ್ರಪಂಚವನ್ನೆಲ್ಲಾ ಮದಗೊಳಿಸುತ್ತಿದ್ದ ಮನ್ಮಥನನ್ನು ನಾಶಮಾಡಿರುವೆ. ಜಗದ್ವಂದ್ಯನಾದ ಶಂಭುವೇ! ಸದಾಶಿವನೆನಿಸಿದ ನೀನು ಶ್ರೇಷ್ಠವಾದ ಚಂದನ ಮತ್ತು ಬಿಲ್ವ ಇವುಗಳಿಂದ ಶೋಭಿಸುವ ಶಿರಸ್ಸುಳ್ಳವನು. ಐಮೊಗವುಳ್ಳ ಪರಮೇಶ್ವರನೇ, ನನ್ನಲ್ಲನುಗ್ರಹಮಾಡಿ ಕಾಪಾಡು. ||೬೫||

ಜಗಚ್ಛ್ರೇಷ್ಠನೇ, ಪ್ರಮಥಗಣಾಧಿಪತಿಯೂ, ದೇವದಾನವಸ್ತುತ್ಯನೂ, ಚಂದ್ರ, ಅಗ್ನಿ ಮತ್ತು ವಿಷ್ಣು ಇವರುಗಳನ್ನೇ ಬಾಣಗಳನ್ನಾಗಿ ಮಾಡಿಕೊಂಡು, ತ್ರಿಪುರಾಸುರರ ಸಮೂಹವನ್ನು ನಾಶಮಾಡಿದ ಸ್ವಾಮಿಯೂ, ವೇದಾಂತಗಳಿಂದ ತಿಳಿಯಲ್ಪಡುವ ಸ್ವರೂಪವುಳ್ಳವನೂ, ಬ್ರಹ್ಮ, ವಿಷ್ಣು ಇವರೇ ಮೊದಲಾದವರಿಂದ ಪೂಜಿಸಲ್ಪಡುವ ಪಾದಕಮಲವುಳ್ಳವನೂ ಆದ ಪರಮೇಶ್ವರನೇ, ದೀನನಾದ ನನ್ನನ್ನು ಕಾಪಾಡು. ||೬೬||

ಹೀಗೆ ಭೂಮಿಯಲ್ಲಿ ದಂಡದಂತೆ ನಮಸ್ಕಾರಮಾಡಿ, ಸ್ತೋತ್ರಮಾಡುತ್ತಿರುವ ಬ್ರಹ್ಮನನ್ನು ಚಂದ್ರಮೌಳಿಯಾದ ಪರಮೇಶ್ವರನು, ತನ್ನ ತೋಳುಗಳಿಂದಲೇ

॥ ಈಶ್ವರ ಉವಾಚ ॥

ಉತ್ತಿಷ್ಠೋತ್ತಿಷ್ಠ ಮಾಭೈಷೀರ್ವೇದಾಸ್ತೇ ಪ್ರತಿಭಾಂತ್ವಮೀ ।
ಸರಹಸ್ಯೋಪನಿಷದಃ ಸಾಂಗೋಪಾಂಗಪುರಾಣಕಾಃ ॥೬೯॥

ಸಾಗಮಾಃ ಸೋಪವೇದಾಶ್ಚ ಯಾಶ್ಚ ವಿದ್ಯಾಃ ಸಹಸ್ರಶಃ ।
ಭಾಷ್ಯಾಣಿ ಸರ್ವಶಾಸ್ತ್ರಾಣಿ ಗಾಂಧರ್ವಾದೀನಿ ಸತ್ತಮ ॥೭೦॥

ಉಪಾಖ್ಯಾನಾನಿ ತೇ ಬ್ರಹ್ಮನ್ನೋಂಕಾರಃ ಶ್ರುತಿಶೇಖರಃ ।
ಉದ್ಗೀಥ ಗಾಥಾಸುಭಗೋ ಮಯಾ ದತ್ತಾಃ ಪ್ರಜಾಪತೇ ॥೭೧॥

ಸಮುತ್ತಸ್ಥುಸ್ತದಾ ವೇದಾಃ ಋಗ್ಯಜುಸ್ಸಾಮಾಥರ್ವಕಾಃ ।
ಪ್ರಣಮ್ಯ ದೇವಮೋಂಕಾರಂ ತುಷ್ಟುವುಃ ಪ್ರಮಥಾಧಿಪಂ ॥೭೨॥

॥ ವೇದಾ ಊಚುಃ ॥

ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಂ ನತಾಸ್ಮ ವೈ ॥೭೩॥

---

ಹಿಡಿದು ಮೇಲೆ ಎತ್ತಿ ಅಮೃತವನ್ನೂ ತಿರಸ್ಕರಿಸುವಂತಹ ಪ್ರೌಢವಚನಗಳಿಂದ ಹೀಗೆ ನುಡಿದನು. ॥೬೭-೬೮॥

ಬ್ರಹ್ಮನೇ, ಏಳು. ಏನೂ ಭಯಪಡಬೇಡ, ಸಕಲ ವೇದಗಳೂ ನಿನಗೆ ಹೊಳೆಯುತ್ತವೆ. ಅಲ್ಲದೇ ಈ ವೇದಗಳ ಜೊತೆಯಲ್ಲಿ ಅಂಗೋಪಾಂಗಯುಕ್ತವಾದ ಪುರಾಣಗಳೂ, ರಹಸ್ಯಗಳನ್ನೊಳಗೊಂಡ ಉಪನಿಷತ್ತುಗಳೂ, ಆಗಮಗಳೂ, ಉಪವೇದಗಳೂ (ಧನುರ್ವೇದ ಮುಂತಾದವುಗಳು) ಉಳಿದ ಸಾವಿರಾರು ಸಣ್ಣಸಣ್ಣ ವಿದ್ಯೆಗಳೂ, ಭಾಷ್ಯಗಳೂ, ಸಕಲ ಶಾಸ್ತ್ರಗಳೂ. ಗಾಂಧರ್ವವಿದ್ಯೆಗಳೂ, ಉಪಾಖ್ಯಾನಗಳೂ, ಶ್ರುತಿಶಿರೋಭೂಷಣವಾದ ಓಂಕಾರವೂ, ಉದ್ಗೀಥ, ಗಾಥಾ ಇವೇ ಮೊದಲಾದವುಗಳೆಲ್ಲವನ್ನೂ ಪ್ರಜಾಪತಿಯೆನಿಸಿದ ನಿನಗೆ ಕೊಡುತ್ತೇನೆ. ॥೬೯-೭೦-೭೧॥

ಶಿವನು ಹೀಗೆ ವರವಿತ್ತೊಡನೆ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದ ಇವುಗಳು ಮೇಲೆ ಎದ್ದು, ಓಂಕಾರಸ್ವರೂಪನಾದ ಪ್ರಮಥಗಣಗಳಿಗೆ ಸ್ವಾಮಿಯೆನಿಸಿದ ಆ ಮಹಾದೇವನಿಗೆ ನಮಸ್ಕರಿಸಿ, ಹೀಗೆ ಸ್ತೋತ್ರಮಾಡಿದವು. ॥೭೨॥

ಮಾನಸಿಕವಾದ ಮತ್ತು ವಾಚನಿಕವಾದ ಸತ್ಯಸ್ವರೂಪನೇ, ಉಮಾರೂಪ

ಋಚೋಽಕ್ಷರೇ ಪರಮೇ ತ್ವಾಮಹೇಶ
ಮಲಿಂಗಮಾಕಾಶಸಧರ್ಮಕಂ ವಿಭುಂ ।
ತ್ವಾಂ ಯೋ ನ ವೇದ ಕಿಮೃಚಂ ಕರಿಷ್ಯತಿ
ಸಾಮ್ನಾಽಥ ವಾ ಯಜುಷಾಥರ್ವಣೈರ್ವಾ ॥೭೪॥

ಶಿವೋ ವೇದಶ್ರುತಿಂ ಶ್ರುತ್ವಾ ವೇದಾಂಸ್ತಸ್ಮೈ ದದೌ ಮುದಾ ।
ಪ್ರಣತಂ ಚಾಬ್ರವೀದ್ದೇವೋ ಬ್ರಹ್ಮಾಣಂ ವಿನಯಾನ್ವಿತಂ ॥೭೫॥

॥ ಈಶ್ವರ ಉವಾಚ ॥

ವೇದಜಾಲಂ ವಿಸೃಷ್ಟಂ ತೇ ಮಯಾ ಪಂಕಜಸಂಭವ ।
ಸುರಾಣಾಂ ಯಜ್ಞಭಾಗಾರ್ಥಂ ಲೋಕಶಿಕ್ಷಾರ್ಥಮೇವ ಚ ॥೭೬॥

ದಿಂದ ಪಿಂಗಳವರ್ಣವುಳ್ಳವನಾಗಿಯೂ, ಪುರುಷರೂಪದಿಂದ ಕೃಷ್ಣವರ್ಣವುಳ್ಳವನಾಗಿಯೂ ಶೋಭಿಸುವವನು ನೀನು. ನಿನ್ನ ರೇತಸ್ಸು ಊರ್ಧ್ವರೂಪವಾಗಿ ಸಕಲ ಪ್ರಪಂಚಕ್ಕೂ ಹರಡುವುದು. ವಿರೂಪಾಕ್ಷನೂ, ವಿಶ್ವರೂಪಿಯೂ ಆದ ನಿನ್ನನ್ನು ನಾವು ಸದಾ ವಂದಿಸುವೆವು. ॥೭೩॥

ಮಹೇಶ್ವರ, ಶ್ರೇಷ್ಠವಾದ ಋಕ್ಕುಗಳ ಅಕ್ಷರಗಳಲ್ಲಿ ನಿನ್ನನ್ನು ಕಾರಣರಹಿತನೂ, ಆಕಾಶದಂತೆ ಸರ್ವವ್ಯಾಪಕನೆನಿಸಿ ವಿಭುವೆಂದು ಪ್ರಖ್ಯಾತಿಗೊಂಡಿರುವವನೂ ಆದ ನಿನ್ನನ್ನು ಕಾಣದವನು, ಋಕ್ಕು, ಸಾಮ, ಯಜಸ್ಸು ಮತ್ತು ಅಥರ್ವಣ ಈ ವೇದಗಳಿಂದ ಏನನ್ನು ತಾನೆ ಮಾಡಬಲ್ಲನು ? ಅಂದರೆ ವೇದಾಕ್ಷರಗಳೆಲ್ಲಾ ನಿನ್ನ ಸ್ವರೂಪವೆಂದೇ ಭಾವನೆಯಿರಬೇಕು. ॥೭೪॥

ವೇದಗಳ ಈ ಸ್ತುತಿವಾಕ್ಯವನ್ನು ಕೇಳಿ ಪರಶಿವನು ಸಂತೋಷದಿಂದ ಬ್ರಹ್ಮನಿಗೆ ವೇದಗಳನ್ನು ಅನುಗ್ರಹಿಸಿಕೊಟ್ಟನು. ಅನಂತರ ವಿನಯದಿಂದ ನಮಸ್ಕಾರಮಾಡಿರುವ ಬ್ರಹ್ಮದೇವನನ್ನು ಕುರಿತು, ದೇವನು ಹೀಗೆಂದನು. ॥೭೫॥

ಕಮಲಸಂಭವನಾದ ಬ್ರಹ್ಮನೇ, ದೇವತೆಗಳ ಯಜ್ಞಭಾಗಕ್ಕಾಗಿಯೂ ಮತ್ತು ಲೋಕವನ್ನು ಶಿಕ್ಷಿಸುವುದಕ್ಕಾಗಿಯೂ, ನಾನು ನಿನಗೆ ಈ ವೇದಸಮೂಹಗಳನ್ನೆಲ್ಲಾ ಕೊಟ್ಟಿರುವೆನು. ಇನ್ನು ನೀನು ದೇವತೆಗಳೊಡನೆ ನಿನ್ನ ಲೋಕಕ್ಕೆ ತೆರಳಿ, ಅಲ್ಲಿ ಸುಖವಾಗಿ ನನ್ನ ಭಕ್ತಿಭಾವನೆಯಿಂದಲೇ ಸದಾ ಯುಕ್ತನಾಗಿ ವಾಸಮಾಡುವನಾಗು. ॥೭೬॥

ಗಚ್ಛ ಲೋಕಂ ಸುರೈಃ ಸಾರ್ಧಂ ವಸ ಮದ್ಭಕ್ತಿಭಾವಿತಃ ।
ಇತ್ಥಂ ಶಂಭೋರ್ವಚಃ ಶ್ರುತ್ವಾ ವಿದ್ಯಾಧಿಪತಿಮೀಶ್ವರಂ ॥೨೭॥

ಸ್ತುತ್ವಾ ನಂ ಯಯೌ ಪ್ರಹೃಷ್ಟಾತ್ಮಾ ಪ್ರಣಮ್ಯ ಪರಮೇಶ್ವರಂ ।
ಉಪತಸ್ಥುಸ್ತದಾ ವೇದಾ ಋಗ್ಯಜುಃಸಾಮಾಥರ್ವಕಾಃ ॥೨೮॥

ಬ್ರಹ್ಮಾಣಮನುಜಗ್ಮುಸ್ತೇ ಗುರುಂ ಶಿಷ್ಯಾ ಇವಾಮಲಾಃ ।
ಮುನೀನಶ್ರಾವಯತ್ಸರ್ವಾಂಸ್ತಾನ್ಸರಸ್ವತಮುಖಾನಪಿ ॥೨೯॥

ತೇಷಾಂ ಶಿಷ್ಯಪ್ರಶಿಷ್ಯೈಶ್ಚ ಧೃತೋ ವೇದೋ ಮಹಾತ್ಮಭಿಃ ।
ಯಜ್ಞಭಾಗಾಃ ಪ್ರವರ್ತಂತೇ ಸಿದ್ಧಿಮಾಯುರ್ದಿವೌಕಸಾಂ ॥೩೦॥

॥ ಸೂತ ಉವಾಚ ॥

ಏತದ್ವೋ ಮಹದಾಖ್ಯಾನಂ ಶ್ರಾವಿತಂ ಭೂಸುರೋತ್ತಮಾಃ ।
ಮಾಹಾತ್ಮ್ಯಂ ದೇವ ದೇವಸ್ಯ ಓಂಕಾರಸ್ಯ ಮಹೇಶಿತುಃ ॥೩೧॥

ಹೀಗೆ ಶಂಭುವಿನ ವಚನಗಳನ್ನು ಕೇಳಿ ಬ್ರಹ್ಮನು ಸಂತೋಷದಿಂದ ವಿದ್ಯಾಧಿಪತಿಯೂ ಸರ್ವೈಶ್ವರ್ಯಕ್ಕೂ ಮೂಲಕಾರಣನೂ ಆದ ಪರಮೇಶ್ವರನನ್ನು ಸ್ತೋತ್ರಮಾಡಿ ತನ್ನ ಲೋಕಕ್ಕೆ ಹೊರಟನು. ಆಗ ಜೊತೆಯಲ್ಲಿ ಋಗ್ಯಜುಃಸಾಮಾಥರ್ವಣಗಳೆಂಬ ವೇದಗಳೂ ಹೊರಡಲು ಸಿದ್ಧವಾದವು. ॥೨೭-೨೮॥

ವೇದಗಳೆಲ್ಲವೂ ಗುರುವನ್ನು ಅನುಸರಿಸುವ ನಿರ್ಮಲರಾದ ಶಿಷ್ಯರಂತೆ ಆ ಬ್ರಹ್ಮನನ್ನನುಸರಿಸಿ ಹೊರಟವು. ಹೀಗೆ ಪರಮೇಶ್ವರನ ಅನುಗ್ರಹದಿಂದ ಪಡೆದ ವೇದಗಳನ್ನು ಬ್ರಹ್ಮನು ಮುನಿಗಳಿಗೂ ವಿದ್ವಾಂಸರಾದ ಸಕಲರಿಗೂ ಉಪದೇಶ ಮಾಡಿದನು. ॥೨೯॥

ಆ ಮುನಿಗಳ ಶಿಷ್ಯರು ಮತ್ತು ಅವರ ಶಿಷ್ಯರು ಇವರ ಪರಂಪರೆಯಿಂದ ಈ ವೇದಗಳು ಮಹಾತ್ಮರಿಂದ ಧರಿಸಲ್ಪಟ್ಟಿವೆ. ಇದರಿಂದ ಯಜ್ಞಭಾಗಗಳು ನಡೆಯುತ್ತಾ ಅದನ್ನು ಪಡೆದ ದೇವತೆಗಳು ಸಿದ್ಧಿಯನ್ನು ಹೊಂದಿರುವರು. ॥೩೦॥

ಎಲೈ ಬ್ರಾಹ್ಮಣೋತ್ತಮರೇ, ಈ ದೊಡ್ಡ ಆಖ್ಯಾನವನ್ನೂ ಹಾಗೆಯೇ ದೇವದೇವನೂ, ಮಹೇಶ್ವರನೂ ಆದ ಓಂಕಾರೇಶನ ಮಹಿಮೆಯನ್ನೂ ನೀವು ಕೇಳಿದಿರಿ. ॥೩೧॥

ಯೋ ವೇದಾದಿಃ ಸ್ವರಃ ಶಂಭುರ್ಭಗವಾನ್ಪರಮೇಶ್ವರಃ ।
ವೇದಾಂತಮಹಿಮಭ್ಯಶ್ಚ ಸ ದೇವಃ ಪಾತು ವಃ ಸದಾ ॥೮೨॥

ಯಃ ಪಂಕಜಾಸನಮತಂದ್ರಿತಮೇವ ಸೃಷ್ಟ್ವಾ
ಸಂಯೋಜ್ಯ ವೇದಮಖಿಲಂ ಪ್ರದದೌ ಮಹೇಶಃ ।
ತಂ ಸ್ವಾತ್ಮಬುದ್ಧಿಭವನಂ ಶರಣಂ ಮಹೇಶಂ
ಯಾಸ್ಯಾಮಿ ಘೋರಭವಸಾಗರಗೋ ಮುಮುಕ್ಷುಃ ॥೮೩॥

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗಸಂಜ್ಞಕವಾದ ಐದನೆಯ ಅಂಶದಲ್ಲಿ
ಓಂಕಾರೇಶ್ವರನ ಮಾಹಾತ್ಮ್ಯೆಯಲ್ಲಿ ಬ್ರಹ್ಮನಿಗೆ ಶಿವನು ವೇದ
ವನ್ನು ಕೊಡುವಿಕೆಯ ವರ್ಣನೆಯೆಂಬ ಒಂಬತ್ತನೆಯ
ಅಧ್ಯಾಯವು ಮುಗಿದುದು

ವೇದದ ಆದಿಸ್ವರವಾದ ಓಂಕಾರಸ್ವರೂಪನೂ, ಜಗನ್ಮಂಗಳಕರನೂ, ವೇದಾಂತಮಹಿಮೆಯಿಂದ ಕೂಡಿದವನೂ, ಷಡ್ಗುಣೈಶ್ವರ್ಯಭರಿತನೂ, ಆದ ಆ ಪರಮೇಶ್ವರನು ನಮ್ಮನ್ನು ಯಾವಾಗಲೂ ಕಾಪಾಡಲಿ. ॥೮೨॥

ಕಮಲಾಸನನಾದ ಬ್ರಹ್ಮನನ್ನು ಸೃಷ್ಟಿಕಾರ್ಯದಲ್ಲಿ ಆಲಸ್ಯರಹಿತನಾಗುವಂತೆ ಮಾಡಿ, ಸಕಲ ವೇದಗಳನ್ನೂ ಅವನಿಗೆ ಕೊಟ್ಟು, ನನ್ನ ಬುದ್ಧಿಗೆ ಆಶ್ರಯಸ್ಥಳ ವಾಗಿರುವ ಆ ಮಹೇಶ್ವರನನ್ನು ಘೋರವಾದ ಸಂಸಾರವೆಂಬ ಸಾಗರದಲ್ಲಿ ಬಿದ್ದು ನರಳುತ್ತಿರುವ ನಾನು ಮೋಕ್ಷವನ್ನು ಪಡೆಯುವುದಕ್ಕೋಸ್ಕರ ಮರೆಹೋಗುವೆನು. ಎಂದು ಸೂತಮಹರ್ಷಿಗಳು ಶಂಕರನನ್ನು ಧ್ಯಾನಿಸಿದರು. ॥೮೩॥

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗಸಂಜ್ಞಕವಾದ ಐದನೆಯ ಅಂಶದಲ್ಲಿ ಓಂಕಾರೇಶ್ವರನ
ಮಾಹಾತ್ಮ್ಯೆಯಲ್ಲಿ ಬ್ರಹ್ಮನಿಗೆ ಶಿವನು ವೇದವನ್ನು ಕೊಡುವಿಕೆಯ
ವರ್ಣನೆಯೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ದಶಮೋಽಧ್ಯಾಯಃ

॥ ದೇವ್ಯುವಾಚ ॥

ತ್ರಿಲೋಕೀತಿಲಕ ಸ್ವಾಮಿನ್ತಿಲಕಸ್ವಾಮಿಸುಪ್ರಿಯ ।
ಓಂಕಾರಕುಂಡಲಿಂಗಾನಾಂ ಬಾಣಲಿಂಗತ್ವತಾ ಕಥಂ ॥೧॥

ವಕ್ತುಮರ್ಹಸಿ ದೇವೇಶ ಲೋಕಾನಾಂ ಹಿತಕಾಮ್ಯಯಾ ।
ತದಾ ದೇವ್ಯಾ ವಚಃ ಶ್ರುತ್ವಾ ಸಂತುಷ್ಟಃ ಪ್ರಾಹ ಶಂಕರಃ ॥೨॥

## ಹತ್ತನೆಯ ಅಧ್ಯಾಯ

ದೇವಿಯು ಮತ್ತೆ ಪರಮೇಶ್ವರನನ್ನು ಈರೀತಿ ಪ್ರಾರ್ಥಿಸಿದಳು. ಮೂರು ಲೋಕಗಳಿಗೂ ತಿಲಕಸ್ಥಾನನಾಗಿ (ಅಂದರೆ ತಿಲಕದಂತೆ ಶ್ರೇಷ್ಠನಾಗಿರುವ) ಅವನ್ನು ಧರಿಸಿರುವ ಸ್ವಾಮಿಯೇ, ನೀನು ತಿಲಕಧಾರಿಯಾದ ಮಹಾವಿಷ್ಣುವಿಗೆ ಪ್ರೀತಿಪಾತ್ರನಾದವನು. ದೇವ, ಓಂಕಾರಕುಂಡದ ಲಿಂಗಗಳಿಗೆ ಬಾಣಲಿಂಗತ್ವವು ಉಂಟಾದುದು ಹೇಗೆ? ದೇವಾಧೀಶ್ವರನೇ, ಲೋಕದ ಜನಗಳಿಗೆ ಹಿತವಾಗುವುದಕ್ಕೋಸ್ಕರ ಈ ಕಥೆಯನ್ನು ನಿನ್ನಿಂದ ಕೇಳಲು ಆಸೆಪಡುವೆನು. ದೇವ, ಅದನ್ನು ನಿರೂಪಿಸು ಎಂದು ದೇವಿಯು ಪ್ರಾರ್ಥಿಸಲು, ತನ್ನ ಪ್ರೇಯಸಿಯ ಮಾತುಗಳನ್ನು ಕೇಳಿ ಸಂತುಷ್ಟನಾದ ಪರಮೇಶ್ವರನು ಹೀಗೆಂದನು. ಎಂದು ಸೂತರು ಶೌನಕಾದಿಗಳಿಗೆ ಮುಂದಿನ ವಿಷಯವನ್ನು ನಿರೂಪಿಸಿದರು. ॥೧-೨॥

|| ಸೂತ ಉವಾಚ ||

ಉತ್ಫುಲ್ಲನೀಲೋತ್ಪಲ ನೀಲಸುಂದರೀ
ಮುಮಾಂ ಸಮಾಲಿಂಗ್ಯ ತದಾ ಮುದಾ ಶಿವಃ ।
ಬಭಾಣ ಬಾಣೋತ್ತಮಸತ್ಕಥಾಂ ದ್ವಿಜಾಃ
ಸರ್ವಾರ್ಥದಾತ್ರೀಂ ಸಕಲಾಘಹಂತ್ರೀಂ ||೧||

ಶೃಣು ದೇವಿ ಮಹಾಭಾಗೇ ಕಥಾಮೇತಾಂ ಮನೋರಮಾಂ ।
ಗಂಗಾಯಾ ನರ್ಮದಾಯಾಶ್ಚ ವಿವಾದಃ ಸುಮಹಾನಭೂತ್ ||೨||

ತತ್ಸರ್ವಂ ವಿಸ್ತರೇಣೈವ ತ್ವಯಿ ಪೂರ್ವಂ ಪ್ರಕೀರ್ತಿತಂ ।
ಅವಿಮುಕ್ತೇ ವಸಾಮೀತಿ ನಿತ್ಯಂ ಸಾನ್ನಿಧ್ಯದೇ ಮಯಾ ||೩||

ಗಂಗಾಯೈ ಚ ವರೋ ದತ್ತೋ ನರ್ಮದಾಯೈ ಮಹೇಶ್ವರಿ ।
ಸಿಕತಾಯಾಃ ಶಿಲಾಸ್ಸರ್ವಾಸ್ತಾನಿ ಲಿಂಗಾನಿ ನಿಮ್ನಗೇ ||೬||

ವಿಪ್ರರೇ, ಅರಳಿದ ಕನ್ನೈದಿಲೆಯಂತೆ ನೀಲವರ್ಣದಿಂದ ಶೋಭಿಸುತ್ತಿರುವ ಸರ್ವಾಂಗಸುಂದರಿಯಾದ ಉಮೆಯನ್ನು ಪರಶಿವನು ಸಂತೋಷದಿಂದ ಒಮ್ಮೆ ಆಲಿಂಗನಮಾಡಿ, ಪ್ರೀತಿಯಿಂದ ಸಕಲ ಇಷ್ಟಾರ್ಥಗಳನ್ನೂ ಕೊಡುವ ಮತ್ತು ಸರ್ವಪಾಪಗಳನ್ನೂ ಹೋಗಲಾಡಿಸುವ ಬಾಣಲಿಂಗದ ಉತ್ತಮವಾದ ಕಥೆಯನ್ನು ಹೀಗೆ ಹೇಳಿದನು. ||೧||

ಮಹಾಭಾಗ್ಯಶಾಲಿನಿಯಾದ ದೇವಿಯೇ, ಕೇಳು, ಈ ಕಥೆಯು ಬಹಳ ಮನೋಹರವಾದುದು. ಈ ವಿಷಯದಲ್ಲಿ ಗಂಗಾ ಮತ್ತು ಯಮುನಾ ನದಿಗಳಿಗೆ ಪರಸ್ಪರವಾಗಿ ನಡೆದ ವಾದವನ್ನು ಹಿಂದೆ ನಾನು ನಿನಗೆ ವಿಸ್ತಾರವಾಗಿಯೇ ತಿಳಿಸಿರುವೆನು. ||೨||

ಆಗ ನಾನು ನಿತ್ಯವೂ ತಪ್ಪದೇ ನಿನ್ನಲ್ಲಿ ವಾಸಮಾಡುತ್ತಾ ನನ್ನ ಸಾನ್ನಿಧ್ಯವನ್ನು ನಿನ್ನಲ್ಲಿ ಇಡುವೆನು ಎಂದು ಗಂಗಾದೇವಿಗೆ ವರವನ್ನು ಕೊಟ್ಟೆನು. ಮಹೇಶ್ವರಿ, ಹಾಗೆಯೇ ನರ್ಮದಾನದಿಗೆ ನಿನ್ನ ಮರಳಿನಲ್ಲಿರುವ ಕಲ್ಲುಗಳೆಲ್ಲಾ ಲಿಂಗಸ್ವರೂಪವೇ ಆಗಲಿ ಎಂದು ಅನುಗ್ರಹಿಸಿದೆನು. ||೩-೬||

ತ್ವದಂತರ್ಗತಮೇವಾದ್ಯ ಕುಂಡಮೋಂಕಾರಸಂಜ್ಞಿತಂ ।
ಗಂಗಾಯಾಂ ವಿಶ್ವನಾಥಾಖ್ಯಲಿಂಗಾಕೃತಿರಹಂ ಸ್ಥಿತಃ ॥೭॥

ತ್ವತ್ತೀರೇ ನರ್ಮದಾಲಿಂಗಮೋಂಕಾರಂ ಪರಮೇಶ್ವರಂ ।
ತಲ್ಲಿಂಗರೂಪಃ ಸತತಂ ನಿವಸಾಮಿ ತಟೇ ತವ ॥೮॥

ದೃಷ್ಟ್ವಾ ನೄಣಾಂ ಸರ್ವಪಾಪಾನಿ ನಾಶಯಾಮಿ ನ ಸಂಶಯಃ ।
ಅಮರೈಃ ಪೂಜಿತಂ ಯಸ್ಮಾದಮರೇಶ್ವರಮುಚ್ಯತೇ ॥೯॥

ತ್ವಲ್ಲಿಂಗಂ ಸರ್ವಭಾವೇನ ಪೂಜಿತಂ ಸರ್ವಕಾಮದಂ ।
ಇತಿ ತಸ್ಮೈ ವರೋ ದತ್ತೋ ನರ್ಮದಾಯೈ ಮನೋರಮೇ ॥೧೦॥

ತಾನಿ ಲಿಂಗಾನಿ ಸರ್ವಾಣಿ ಬಾಣಸಂಪೂಜಿತಾನಿ ಹಿ ।
ದರ್ಶನಸ್ಪರ್ಶನಾದ್ಗೌರಿ ಪುಣ್ಯದಾನಿ ನ ಸಂಶಯಃ ॥೧೧॥

---

ಗಂಗೆಯೇ, ನಿನ್ನಲ್ಲಿ ಓಂಕಾರವೆಂಬ ಕುಂಡವೊಂದಿರುವುದು. ನಿನ್ನ ನದಿಯ ದಡದಲ್ಲಿ ವಿಶ್ವನಾಥನೆಂಬ ಹೆಸರಿನಿಂದ ಲಿಂಗಾಕೃತಿಯನ್ನು ಧರಿಸಿ ನಾನು ವಾಸ ಮಾಡುತ್ತಿರುವೆನು. ನರ್ಮದೆಯೆ, ನಿನ್ನ ದಡದಲ್ಲಿ ನರ್ಮದಾಲಿಂಗವಾದ ಓಂಕಾರ ವೆಂಬ ಪರಮೇಶ್ವರನ ಲಿಂಗವಿರುವುದು. ನಾನು ಆ ಲಿಂಗರೂಪವನ್ನು ಧರಿಸಿ, ಯಾವಾ ಗಲೂ ನಿನ್ನ ದಡದಲ್ಲಿಯೇ ವಾಸಮಾಡುತ್ತೇನೆ. ॥೭-೮॥

ಈ ಶಿವಲಿಂಗಗಳನ್ನು ದರ್ಶನಮಾಡುವವರ ಸಕಲ ಪಾಪಗಳನ್ನೂ ನಾಶ ಮಾಡುವೆನು. ಇದರಲ್ಲಿ ಸಂಶಯವಿಲ್ಲ. ದೇವತೆಗಳು (ಅಮರರು, ಅಂದರೆ ಮರಣ ಹೊಂದದವರು) ಈ ಲಿಂಗವನ್ನು ಪೂಜಿಸಿದುದರಿಂದ ಇದಕ್ಕೆ ಅಮರೇಶ್ವರಲಿಂಗ ವೆಂದು ಪ್ರಸಿದ್ಧಿ ಬರುವುದು. ॥೯॥

ಎಲೌ ಮನೋಹರಳೇ, ನಿನ್ನ ದಡದಲ್ಲಿರುವ ಶಿವಲಿಂಗವನ್ನು ವಿಶೇಷ ಭಕ್ತಿಯಿಂದ ಪೂಜಿಸಿದರೆ ಸಕಲ ಇಷ್ಟಾರ್ಥಗಳೂ ಉಂಟಾಗುತ್ತವೆ ಎಂದು ನರ್ಮದೆಗೆ ಪ್ರತ್ಯೇಕವಾಗಿ ವರವನ್ನು ಕೊಟ್ಟಿರುವೆನು. ॥೧೦॥

ಈ ಲಿಂಗಗಳೆಲ್ಲವನ್ನೂ ಬಾಣಾಸುರನು ಪೂಜೆಮಾಡಿದ್ದನು. ಎಲೌ ಗೌರಿ, ಅಂತಹ ಲಿಂಗಗಳನ್ನು ದರ್ಶನಮಾಡುವುದರಿಂದಲೂ, ಸ್ಪರ್ಶಿಸುವುದರಿಂದಲೂ ಸಕಲ ಪುಣ್ಯಗಳೂ ತಪ್ಪದೇ ಲಭಿಸುವುವು. ॥೧೧॥

ನಾರ್ಮದೇಯೇ ಮಹಾಲಿಂಗೇ ನೀರಂ ವಾ ಪತ್ರಮೇಕಕಂ ।
ದದ್ಯಾತ್ಸ ಮುಕ್ತೋ ಭವತಿ ತ್ರಿನೇತ್ರಪ್ರಿಯಕೃತ್ತಮಃ ॥೧೨॥

ನ ಸಂಪ್ರೋಕ್ಷಣಸಂಸ್ಕಾರೋ ನ ಪ್ರತಿಷ್ಠಾ ಹಿ ಪಾರ್ವತಿ ।
ನಾವಾಹನಂ ನ ಪೂಜಾದಿವಿಧಿಃ ಸ್ಯಾತ್ತತ್ರ ಶಂಕರಿ ॥೧೩॥

ಸ ಪೀಠಂ ಮುಕ್ತಪೀಠಂ ವಾ ನಾರ್ಮದಂ ಲಿಂಗಮರ್ಚಯೇತ್ ।
ಸ್ಪೃಷ್ಟಾಸ್ಪೃಷ್ಟಿರ್ನ ತಸ್ಯಾಸ್ತಿ ನಿತ್ಯಂ ಸಾನ್ನಿಧ್ಯದಂ ಮಮ ॥೧೪॥

ತಲ್ಲಿಂಗೇ ಮಮ ಭಕ್ತೈಶ್ಚ ಯದ್ದತ್ತಂ ಲೀಲಯಾ ಪಿ ಚ ।
ಬಿಲ್ವಪತ್ರಂ ತಥಾ ನೀರಂ ಫಲಂ ವಾ ಕಂದಮೇವ ವಾ ॥೧೫॥

ಗೃಹ್ಣಾಮಿ ಶಿರಸಾ ತಚ್ಚ ತಸ್ಮೈ ಮುಕ್ತಿಂ ದದಾಮ್ಯಹಂ ।
ವಿಮರ್ಶೋ ನೈವ ಕರ್ತವ್ಯೋ ನಾರ್ಮದೇ ಪರಮೇಶ್ವರಿ ॥೧೬॥

ಈ ನರ್ಮದಾನದಿಯ ತೀರದಲ್ಲಿರುವ ಲಿಂಗಕ್ಕೆ ನೀರನ್ನಾಗಲೀ, ಒಂದೇ ಒಂದು ಪತ್ರವನ್ನಾಗಲೀ ಸಮರ್ಪಿಸಿದವನು ಪರಶಿವನಿಗೆ ಪ್ರೀತಿಪಾತ್ರನಾಗಿ ಮೋಕ್ಷವನ್ನು ಹೊಂದುವನು. ||೧೨||

ಆ ನರ್ಮದಾಲಿಂಗಗಳನ್ನು ಶುದ್ಧಿಮಾಡುವ ಸಂಸ್ಕಾರವೂ, ಪ್ರತಿಷ್ಠೆ ಮಾಡುವ ವಿಧಿಯೂ, ಆವಾಹನ ಪೂಜಾದಿವಿಧಿಗಳೂ ಬೇಕಾಗಿಲ್ಲ. ಆ ಲಿಂಗದ ಪೂಜೆಕಾಲದಲ್ಲಿ ಪೀಠಯುಕ್ತವಾಗಿಯೋ ಅಥವಾ ಪೀಠವಿಲ್ಲದೆಯೋ ಹೇಗಾದರೂ ಆ ನರ್ಮದಾಲಿಂಗವನ್ನು ಪೂಜೆಮಾಡಬಹುದು. ||೧೩||

ಆ ಲಿಂಗಗಳಲ್ಲಿ ನನ್ನ ಸಾನ್ನಿಧ್ಯವು ಪ್ರತಿನಿತ್ಯವೂ ಇರುವುದರಿಂದ ಅವುಗಳಲ್ಲಿ ಸ್ಪರ್ಶಾಸ್ಪರ್ಶರೂಪವಾದ ದೋಷ ಇರುವುದಿಲ್ಲ. (ಇದನ್ನು ಇವರು ಮುಟ್ಟಬೇಕು, ಇಂತಹವರು ಮುಟ್ಟಬಾರದೆಂಬ ತಾರತಮ್ಯವೇನೂ ಇಲ್ಲ.) ||೧೪||

ಎಲೌ ಪರಮೇಶ್ವರಿಯೇ, ಆ ನರ್ಮದಾನದಿಯ ಲಿಂಗಗಳಲ್ಲಿ ನನ್ನ ಭಕ್ತರು ನನಗೆ ಲೀಲೆಯಿಂದಲಾದರೂ ಸಮರ್ಪಿಸುವ ಬಿಲ್ವಪತ್ರೆ, ನೀರು, ಹಣ್ಣು, ಗೆಡ್ಡೆಗೆಣಸುಗಳು ಇವುಗಳನ್ನು ತಲೆಯಲ್ಲಿ ಧರಿಸಿ ಅವುಗಳನ್ನು ಪ್ರೀತಿಯಿಂದ ಸ್ವೀಕರಿಸುತ್ತಾ ಅವರಿಗೆ ನಾನು ಮೋಕ್ಷವನ್ನು ಕರುಣಿಸುತ್ತೇನೆ. ಈ ನರ್ಮದಾನದಿಯಲಿಂಗದ ವಿಷಯದಲ್ಲಿ ಹೆಚ್ಚಿನ ವಿಮರ್ಶೆಯೇ ಅನಾವಶ್ಯಕವು. ||೧೫-೧೬||

ಅನ್ಯಾನಿ ಸರ್ವಲಿಂಗಾನಿ ಪ್ರತಿಷ್ಠಾ ಪ್ರೋಕ್ಷಣಾದಿಭಿಃ ।
ಸಂಸ್ಕೃತಾನಿ ವಿಶೇಷೇಣ ಪೂಜ್ಯಾನೀತಿ ಮತಿಃ ಶಿವೇ ॥೧೭॥

ಮಲ್ಲಿಂಗಾದ್ಧಾತುಲಿಂಗಾನಿ ರತ್ನಜಾನಿ ಮಹೇಶ್ವರಿ ।
ಸ್ಫಾಟಿಕಾದೀನಿ ಪುಣ್ಯಾನಿ ಚಂದ್ರಕಾಂತೋದ್ಭವಾನಿ ಚ ॥೧೮॥

ಸ್ಥಾವರಾಣಿ ಚ ಸರ್ವಾಣಿ ಜಂಗಮಾನಿ ವಿಶೇಷತಃ ।
ಮಹಾಪಾರದಕ್ಲೃಪ್ತಾನಿ ಲಿಂಗಾನ್ಯತ್ಯುತ್ತಮಾನಿ ಚ ॥೧೯॥

ತೇಭ್ಯೋ ವಿಶಿಷ್ಟಮೇತದ್ಧಿ ನಾರ್ಮದಂ ನಾರ್ಮದಂ ಮಮ ।
ನಾರ್ಮದಂ ಲಿಂಗಮಭ್ಯರ್ಚ್ಯ ಸ್ಥಾವರಾರ್ಚಾಫಲಂ ಲಭೇತ್ ॥೨೦॥

ಯಸ್ತು ಪಶ್ಯತಿ ಪುಣ್ಯಾತ್ಮಾ ಸ್ಥಾವರಂ ಲಿಂಗಮೈಶ್ವರಂ ।
ನಿತ್ಯಂ ಚ ನಿಯಮೋಪೇತಃ ಪಾಪೈಃ ಸರ್ವೈಃ ಪ್ರಮುಚ್ಯತೇ ॥೨೧॥

ಶಿವೆಯೇ, ಉಳಿದ ಲಿಂಗಗಳೆಲ್ಲವೂ ಪ್ರತಿಷ್ಠೆ, ಪ್ರೋಕ್ಷಣೆ ಮುಂತಾದ ಸಂಸ್ಕಾರಗಳಿಂದ ಕೂಡಿದರೆ ಮಾತ್ರ ವಿಶೇಷವಾಗಿ ಪೂಜೆಮಾಡುವುದಕ್ಕೆ ಯೋಗ್ಯವಾಗುತ್ತವೆಂದು ನನ್ನ ಅಭಿಪ್ರಾಯವಿರುವುದು. ॥೧೭॥

ಎಲೌ ಮಹೇಶ್ವರಿ, ಮಣ್ಣಿನಲಿಂಗಗಳಿಗಿಂತಲೂ, ಧಾತುಗಳಿಂದ (ಲೋಹ ಧಾತುಗಳಿಂದ) ಮಾಡಿದಲಿಂಗವೂ, ಅದಕ್ಕಿಂತಲೂ ರತ್ನಲಿಂಗಗಳೂ, ಅದಕ್ಕಿಂತ ಸ್ಫಟಿಕದಲಿಂಗಗಳೂ, ಅದಕ್ಕಿಂತಲೂ ಚಂದ್ರಕಾಂತಶಿಲೆಯಿಂದ ಮಾಡಿದ ಲಿಂಗಗಳೂ ಉತ್ತಮವೂ ಪುಣ್ಯಕರಗಳೂ ಆಗಿರುವುವು. ಸ್ಥಾವರ (ಚಲಿಸದೇ ಒಂದು ಕಡೆಯಲ್ಲಿಯೇ ನೆಲಸಿರುವ ಲಿಂಗಗಳು) ಲಿಂಗಗಳು ಮತ್ತು ವಿಶೇಷವಾಗಿ ಜಂಗಮ (ಬೇಕಾದ ಕಡೆಗೆ ತೆಗೆದುಕೊಂಡು ಹೋಗಿ ಪೂಜಿಸಲು ಯೋಗ್ಯವಾದ) ಲಿಂಗಗಳೂ ಶ್ರೇಷ್ಠವಾದವುಗಳು. ಪಾದರಸದಿಂದ ನಿರ್ಮಿತವಾದ ಲಿಂಗವು ಅತ್ಯುತ್ತಮವೆನಿಸುವುದು. ಆದರೆ ಹಿಂದೆ ಹೇಳಿದ ಈ ಎಲ್ಲಾ ಲಿಂಗಗಳಿಗಿಂತಲೂ ಸುಖಪ್ರದವಾದ ಈ ನರ್ಮದಾನದಿಯ ಲಿಂಗವನ್ನು ಪೂಜೆಮಾಡಿದರೆ ಸ್ಥಾವರಲಿಂಗಗಳನ್ನು ಪೂಜಿಸಿದ ಫಲವೇ ಉಂಟಾಗುವುದು. ॥೧೮-೧೯-೨೦॥

ಪುಣ್ಯಶಾಲಿಯಾದ ಮಾನವನು ಈ ಸ್ಥಾವರವಾದ ಈಶ್ವರಲಿಂಗವನ್ನು ನಿತ್ಯವೂ ನಿಯಮದಿಂದ ದರ್ಶನಮಾಡಿದರೆ ಅವನು ಪಾಪಗಳನ್ನು ಕಳೆದುಕೊಂಡು ಪಾವನನಾಗುವನು. ॥೨೧॥

ಸ ನಾರ್ಮದಂ ಮಹಾಲಿಂಗಂ ದೃಷ್ಟ್ವಾ ತತ್ಫಲಮಾಪ್ನುಯಾತ್ ।
ಪೂಜಿತೇ ನಾರ್ಮದೇ ಲಿಂಗೇ ಸರ್ವಲಿಂಗಾರ್ಚನಾತ್ಫಲಂ ॥೨೨॥

ಪ್ರಾಪ್ನುಯಾನ್ನಿಯತಂ ಗೌರಿ ಸತ್ಯಮೇತನ್ಮಯೋಚ್ಯತೇ ।
ಶಾವಾಶೌಚೇ ಸೂತಕೇಽಪಿ ಬಾಣಲಿಂಗಂ ಸಮರ್ಚಯೇತ್ ॥೨೩॥

ನಿತ್ಯಂ ಲಿಂಗಾರ್ಚನಫಲಂ ಯಸ್ಮಿನ್ಕ್ಲೃಪ್ತಂ ತದಾಪ್ನುಯಾತ್ ।
ನಾತಃ ಪರತರಂ ಲಿಂಗಂ ಪ್ರಶಸ್ತಂ ಪರಮೇಶ್ವರಿ ॥೨೪॥

ಅಸ್ಮಿನ್ಸಂಪೂಜಿತೇ ದೃಷ್ಟೇ ಮಹಾಪಾಪಕ್ಷಯೋ ಭವೇತ್ ।
ಯದ್ಗೃಹೇ ಬಾಣಲಿಂಗಂ ಸ್ಯಾಚ್ಛಿವಕ್ಷೇತ್ರಂ ಹಿ ತತ್ಸ್ಮೃತಂ ॥೨೫॥

ತತ್ರೈವ ಮರಣಾಜ್ಜಂತುರಪಿ ಕೀಟಪಿಪೀಲಿಕಂ ।
ಮಲ್ಲೋಕೇ ನಿವಸೇದ್ದೇವಿ ಪುನರಾವೃತ್ತಿದುರ್ಲಭೇ ॥೨೬॥

---

ಆ ನರ್ಮದಾನದಿಯ ದಡದಲ್ಲಿರುವ ಲಿಂಗವನ್ನು ದರ್ಶನಮಾಡಿದರೂ ಅದೇ ಫಲವುಂಟಾಗುವುದು. ಎಲೌ ಗೌರಿಯೇ, ಈ ನರ್ಮದಾನದಿಯ ಲಿಂಗವನ್ನು ಪೂಜೆಮಾಡಿದರೆ ಎಲ್ಲಾ ಲಿಂಗಗಳನ್ನೂ ಪೂಜೆಮಾಡಿದ ಫಲವು ನಿಜವಾಗಿಯೂ ಮಾನವನಿಗೆ ಉಂಟಾಗುವುದು. ಇದು ಸತ್ಯ. ದೇವಿ, ಈ ಬಾಣಲಿಂಗವನ್ನು ಮೃತಾಶೌಚ ಮತ್ತು ಜಾತಾಶೌಚಗಳಲ್ಲಿಯೂ ಸಹ ಪೂಜೆಮಾಡಬಹುದು. ॥೨೩॥

ನಿತ್ಯವೂ ಲಿಂಗಾರ್ಚನೆಯನ್ನು ಮಾಡಿದರೆ ಉಂಟಾಗುವ ಫಲವು ಎಷ್ಟೆಂದು ಕ್ಲೃಪ್ತವಾಗಿರುವುದೋ ಆ ಫಲವನ್ನೆಲ್ಲಾ ತಪ್ಪದೇ ಹೊಂದುತ್ತಾನೆ. ಪರಮೇಶ್ವರಿ, ಈ ನರ್ಮದಾ ಲಿಂಗಕ್ಕಿಂತಲೂ ಉತ್ಕೃಷ್ಟವಾದ ಬೇರೆ ಲಿಂಗವೇ ಇಲ್ಲ. ॥೨೪॥

ಈ ನರ್ಮದಾನದಿಯ ಲಿಂಗವನ್ನು ಪೂಜಿಸಿದರೆ ಅಥವಾ ದರ್ಶನಮಾಡಿದರೆ ಮಹಾಪಾತಕಗಳೂ ನಾಶವಾಗುವುವು. ಯಾರ ಮನೆಯಲ್ಲಿ ಬಾಣಲಿಂಗವಿರುವುದೋ ಅದು ಶಿವಕ್ಷೇತ್ರವೆಂದೇ ಹೇಳಲ್ಪಡುವುದು. ॥೨೫॥

ದೇವಿ, ಆ ಬಾಣಲಿಂಗವಿರುವ ಕ್ಷೇತ್ರದಲ್ಲಿ ಮರಣಹೊಂದುವ ಹುಳು, ಇರುವೆ ಮೊದಲಾದ ಪ್ರಾಣಿಗಳೂ ಸಹ, ಪುನರ್ಜನ್ಮವಿಲ್ಲದ ನನ್ನ ಲೋಕವನ್ನು ಹೊಂದಿ ಅಲ್ಲಿ ಸುಖವಾಗಿ ವಾಸಮಾಡುವುವು. ॥೨೬॥

ಬಾಣಲಿಂಗಂ ನ ಯಸ್ಯಾಸ್ತಿ ಗೃಹೇ ಬಿಲ್ವದಲಾರ್ಚಿತಂ ।
ನ ತದ್ಗೃಹೇ ಜಲಂ ಗ್ರಾಹ್ಯಮನ್ನಂ ವಾ ವೈದಿಕೋತ್ತಮೈಃ ॥೨೭॥

ಯದ್ಗೃಹೇ ಬಾಣಲಿಂಗಾರ್ಚಾ ಸ ಮುನಿಃ ಸ ಚ ಪಂಡಿತಃ ।
ತೇನೇಷ್ಟಾಃ ಸಕಲಾ ಯಜ್ಞಾಃ ವೇದಾಧೀತಾಶ್ಚ ತೇನ ವೈ ॥೨೮॥

ತೇನೋರ್ವೀಯಂ ಪ್ರದತ್ತಾ ಸ್ಯಾತ್ಸಶೈಲವನಕಾನನಾ ।
ಅತ್ರೇತಿಹಾಸಂ ತೇ ವಚ್ಮಿ ಶೃಣು ಕರ್ಣೈಕಭೂಷಣಂ ॥೨೯॥

ಬಲಿನಾಮಾ ಪುರಾ ದೇವಿ ದೈತ್ಯೇಂದ್ರೋ ಬಲಗರ್ವಿತಃ ।
ದೇವಾನ್ವಿದ್ರಾವಯಾಮಾಸ ಸೇಂದ್ರಾನ್ಸವರುಣಾರ್ಯಮಾನ್ ॥೩೦॥

ವಾರಂವಾರಂ ಸುರೈರ್ದೇವಿ ಯುದ್ಧಮುನ್ಮತ್ತಮಾತನೋತ್ ।
ಹೃತಾಮರವತೀ ತೇನ ಶಕ್ರಸ್ಥಾನಾಧಿಪೋಽಭವತ್ ॥೩೧॥

ಬಿಲ್ವದಳಗಳಿಂದ ಪೂಜಿಸಲ್ಪಟ್ಟ ಬಾಣಲಿಂಗವು ಇಲ್ಲದೇ ಇರುವವನ ಮನೆಯಲ್ಲಿ ವೈದಿಕಶ್ರೇಷ್ಠರಾದವರು ನೀರನ್ನೂ ಅಥವಾ ಅನ್ನವನ್ನೂ ಸ್ವೀಕರಿಸುವುದಿಲ್ಲ. ॥೨೭॥

ಯಾರ ಮನೆಯಲ್ಲಿ ಬಾಣಲಿಂಗದ ಪೂಜೆಯು ನಡೆಯುತ್ತದೆಯೋ ಅವನೇ ಮುನಿಯು ಮತ್ತು ಪಂಡಿತನು. ಅವನು ಸಕಲ ಯಜ್ಞಗಳನ್ನೂ ಮಾಡಿದಂತೆಯೇ ಆಗುವುದು. ಅಲ್ಲದೇ ಅವನಿಂದ ಎಲ್ಲಾ ವೇದಗಳೂ ಅಧ್ಯಯನಮಾಡಲ್ಪಟ್ಟಂತೆಯೇ ತಿಳಿಯಬೇಕು. ॥೨೮॥

ಅಂತಹ ಮಹಾನುಭಾವನು, ಪರ್ವತ ಮತ್ತು ಅರಣ್ಯಗಳಿಂದ ಯುಕ್ತವಾದ ಈ ಭೂಮಂಡಲವನ್ನೇ ದಾನಮಾಡಿದ ಫಲವನ್ನು ಹೊಂದುತ್ತಾನೆ. ದೇವಿ, ಈ ವಿಷಯದಲ್ಲಿ ಕರ್ಣಾಲಂಕಾರಪ್ರಾಯವಾದ (ಕರ್ಣಾನಂದವನ್ನುಂಟುಮಾಡುವ) ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳು ಎಂದು ಹೇಳತೊಡಗಿದನು. ॥೨೯॥

ದೇವಿ, ಹಿಂದೆ ಬಲಿಯೆಂಬ ದೈತ್ಯಶ್ರೇಷ್ಠನು ಬಲದಿಂದ ಕೊಬ್ಬಿದವನಾಗಿ ಇಂದ್ರ, ವರುಣ, ಸೂರ್ಯ ಮೊದಲಾದ ದೇವತೆಗಳನ್ನೆಲ್ಲಾ ಅವರವರ ಸ್ಥಾನದಿಂದ ಓಡಿಸಿ ತೊಂದರೆಪಡಿಸಿದನು. ॥೩೦॥

ಆ ಬಲಿದೈತ್ಯನು ಪದೇಪದೇ ದೇವತೆಗಳೊಡನೆ, ಹಾಗೆ ಘೋರವಾಗಿ ಯುದ್ಧಮಾಡಿದನು. ಇವನು ಇಂದ್ರನನ್ನು ಸೋಲಿಸಿ, ಅಮರಾವತೀಪಟ್ಟಣವನ್ನು

ದೃಷ್ಟ್ವಾ ತ್ವತ್ಪದಪಂಕಜಂ ಶಿವಮಹಾದೇವೇತಿ ಪೂರ್ವಸ್ಥಿತಂ
ಜ್ಞಾನಂ ಪ್ರಾಪ್ತಮಪಾರಭಕ್ತಿಜನಕಂ ತ್ವತ್ಪಾದಪೂಜಾವಿಧೌ ।
ವೈಕುಂಠೇ ನಿವಸಾಮಿ ಭೂತಿವಿಲಸತ್ಫಾಲಾದಿಭೂಷಾಂಗಕೋ
ಲಿಂಗೇ ಬಿಲ್ವದಲೈಶ್ಚ ಪುಣ್ಯನಿಕರೈಃ ಸಂಪೂಜ್ಯ ಮುಕ್ತಃ ಸುಖಂ॥೪೦॥

ಗತಮೋಹೋಽಸ್ಮ್ಯಹಂ ದೇವ ಶಿಕ್ಷಿತಶ್ಚ ತ್ವಯಾಽಧುನಾ ।
ಭೃಗುಣಾ ತವ ಭಕ್ತೇನ ಶಪ್ತೋಽಸ್ಮಿ ನಿತರಾಂ ಶಿವ ॥೪೧॥

ತಚ್ಛಾಪಮುಕ್ತೋಽಸ್ಮ್ಯಧುನಾ ತಿರ್ಯಗ್ಯೋನಿಷು ಸಂಸ್ಥಿತಃ ।
ಮತ್ಸ್ಯಕೂರ್ಮವರಾಹಾದಿನಾರಸಿಂಹಾದಿವಾಮನೈಃ ॥೪೨॥

ಮಾಡಿದೆನು. ದೇವ, ಆಗ ನೀನು ಆ ನರಸಿಂಹಾಕೃತಿಯ ನನ್ನ ಚರ್ಮವನ್ನು ಹೊದೆದು ಮತ್ತು ಶರಭವೆಂಬ ಪಕ್ಷಿರಾಜನ ರೂಪವನ್ನು ಧರಿಸಿ, ನನ್ನ ಅಹಂಕಾರ ವನ್ನು ಮುರಿದು ರಕ್ಷಿಸಿದೆ. ಸ್ವಾಮಿಯೇ, ಆದರಿಂದ ನಾನು ಪವಿತ್ರನಾಗಿ ಧನ್ಯನೆನಿ ಸಿರುವೆನು. ಎಲೈ ಶಂಕರನೇ, ಭಯಪೀಡಿತವಾದ ಹೃದಯವುಳ್ಳ ನಾನು ನಿನ್ನಿಂದ ಈಗ ಶಿಕ್ಷಿಸಲ್ಪಟ್ಟು ನನ್ನ ಅಜ್ಞಾನವನ್ನೆಲ್ಲಾ ಕಳೆದುಕೊಂಡಿರುವೆನು. ॥೩೯॥

ಈಗ ನಿನ್ನ ಪಾದಕಮಲವನ್ನು ದರ್ಶನಮಾಡಿ, ಶಿವ, ಮಹಾದೇವ! ಎಂಬ ನಿನ್ನ ದಿವ್ಯನಾಮಗಳನ್ನು ಜಪಿಸಿ, ಅಪಾರವಾದ ಭಕ್ತಿಯನ್ನುಂಟುಮಾಡುವ, ನಿನ್ನ ಪೂಜಾವಿಧಿಯ ಜ್ಞಾನವನ್ನು ಹೊಂದಿರುವೆನು. ದೇವ, ವೈಕುಂಠದಲ್ಲಿ ವಿಭೂತಿ ಧಾರಣೆಯಿಂದ ಶೋಭಿಸುವ ಹಣೆ ಮತ್ತು ಸರ್ವಾವಯವವುಳ್ಳವನಾಗಿ, ನಿನ್ನ ಲಿಂಗ ದಲ್ಲಿ ಪುಣ್ಯಸಮೂಹವನ್ನುಂಟುಮಾಡುವ ಬಿಲ್ವದಳಗಳನ್ನು ಸಮರ್ಪಣೆಮಾಡುತ್ತಾ ನಿನ್ನನ್ನು ಪೂಜೆಮಾಡಿಕೊಂಡು ಮುಕ್ತನಾಗಿ ವಾಸಿಸುವೆನು. ॥೪೦॥

ದೇವ, ಈಗ ನಿನ್ನಿಂದ ಶಿಕ್ಷಿಸಲ್ಪಟ್ಟು ನನ್ನ ಅಜ್ಞಾನವೆಲ್ಲಾ ಹೋಗಿದೆ. ಸ್ವಾಮಿ, ನಿನ್ನ ಭಕ್ತನಾದ ಭೃಗುಮುನಿಯು ನನ್ನನ್ನು ತಿರ್ಯಗ್ಯೋನಿಗಳಲ್ಲಿ ಅವತರಿ ಸುವಂತೆ ಶಪಿಸಿದ್ದನು. ಅದರಂತೆ ನಾನು ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ಮತ್ತು ವಾಮನಗಳೆಂಬ ಅವತಾರಮಾಡಿದೆನು. ಆ ಅವತಾರಗಳಲ್ಲಿ ಅಹಂಕಾರ ದಿಂದ ಅಜ್ಞಾನಭೂಯಿಷ್ಠನಾಗಿದ್ದ, ನನ್ನನ್ನು ಮಹೇಶ್ವರನಾದ ನೀನು, ಅನೇಕ ಶರಭವೇ ಮೊದಲಾದ ದೇಹಗಳಿಂದ ನಿಗ್ರಹಿಸಿ, ಪರಿಶುದ್ಧನನ್ನಾಗಿ ಮಾಡಿರುವೆ. ॥೪೧-೪೨॥

ತ್ವಯಾ ಧೃತೈರ್ದೇಹಜಾಲೈಃ ಪಾವಿತೋಽಹಂ ಮಹೇಶ್ವರ ।
ಅನುಗ್ರಾಹ್ಯೋಽಸ್ಮಿ ದೇವೇಶ ಪುನಃ ಪಂಚಸು ಜನ್ಮಸು ॥೪೩॥

ಪ್ರಣಮ್ಯ ಮಾಂ ಯಯೌ ವಿಷ್ಣುಸ್ತಥೇತಿ ಚ ಮಯೋದಿತಃ ।
ಬಲಿಶ್ಚಾಪಿ ಮುದಂ ಪ್ರಾಪ್ಯ ರಸಾತಲತಲಂ ಗತಃ ॥೪೪॥

ತಸ್ಯಾಸೀದೌರಸಃ ಪುತ್ರೋ ನಾಮ್ನಾ ಬಾಣ ಇತಿ ಶ್ರುತಃ ।
ಸ ರಾಜ್ಯಮಥ ದೈತ್ಯಾನಾಂ ಚಕಾರಾಗ್ನಿಸಮಪ್ರಭಃ ॥೪೫॥

ಶುಕ್ರಸ್ಯಾನುಮತೇ ದೇವಾಂಶ್ಚ್ಯಾವಯಾಮಾಸ ವಿಷ್ಟಪಾತ್ ।
ಶಿಪಿವಿಷ್ಟಪ್ರಸಾದೇನ ವಿಶಿಷ್ಟಃ ಸುರಸತ್ತಮೈಃ ॥೪೬॥

ಸಹಸ್ರಬಾಹುಶಾಖೋ ಯೋ ನಾಗಾಯುತಬಲೋ ಬಲೀ ।
ಸಂಚರನ್ಸ ಮಹೀಪೃಷ್ಠೇ ನರ್ಮದಾಂ ಶರ್ಮದಾಂ ಮಮ ॥೪೭॥

ದೇವೋತ್ತಮನೇ, ಮುಂದಿನ ನನ್ನ ಐದು ಅವತಾರಗಳಲ್ಲಿಯೂ ಹೀಗೆಯೇ ನನ್ನಮೇಲೆ ಅನುಗ್ರಹಮಾಡು ಸ್ವಾಮಿ, ಎಂದು ಹೇಳಿ, ನಮಸ್ಕಾರಮಾಡಿ, ನನ್ನಿಂದ ಹಾಗೆಯೇ ಆಗಲೆಂದು ಅಪ್ಪಣೆಪಡೆದು, ತನ್ನ ನಿಲಯವಾದ ವೈಕುಂಠಕ್ಕೆ ಹೋದನು. ಆಗ ಬಲಿಯೂ ಸಹ ಸಂತೋಷಗೊಂಡು ಪಾತಾಳಲೋಕಕ್ಕೆ ತೆರಳಿದನು. ||೪೩-೪೪||

ಆ ಬಲಿದೈತ್ಯನ ಹೊಟ್ಟೆಯಲ್ಲಿ ಹುಟ್ಟಿದ ಬಾಣನೆಂಬ ರಾಕ್ಷಸನೊಬ್ಬನು ಬಹಳ ಪ್ರಸಿದ್ಧನಾಗಿದ್ದನು. ಅಗ್ನಿಯಂತೆ ಜಾಜ್ವಲ್ಯಮಾನವಾದ ತೇಜಸ್ಸಿನಿಂದೊಪ್ಪುವ ಅವನು ತಂದೆಯನಂತರ ದೈತ್ಯರ ರಾಜ್ಯವನ್ನಾಳುತ್ತಿದ್ದನು. ||೪೫||

ಬಾಣಾಸುರನು, ಶುಕ್ರಾಚಾರ್ಯನ ಅನುಮತಿಯಿಂದ ದೇವತೆಗಳ ಮೇಲೆ ಯುದ್ಧಕ್ಕೆ ಹೊರಟು, ದೇವತೆಗಳನ್ನೆಲ್ಲಾ ಸ್ವರ್ಗದಿಂದ ಓಡಿಸಿ, ಆ ಶಿಪಿವಿಷ್ಟನೆನಿಸಿದ ಮಹಾದೇವನ ಅನುಗ್ರಹದಿಂದ ದೇವತೋತ್ತಮರಿಗಿಂತಲೂ ಶ್ರೇಷ್ಠನಾದನು. ||೪೬||

ಶಾಂಕರಿಯೇ, ಬಲಶಾಲಿಯಾದ ಆ ಬಾಣಾಸುರನು, ಸಾವಿರತೋಳುಗಳ ಸಮೂಹದಿಂದ ಶೋಭಿಸುತ್ತಾ, ಹತ್ತುಸಾವಿರ ಆನೆಗಳ ಪರಾಕ್ರಮವುಳ್ಳವನಾಗಿದ್ದನು. ಒಂದು ಸಲ ಇವನು ಭೂಮಿಯಮೇಲೆ ಸಂಚಾರಮಾಡುತ್ತಾ ಸುಖಕರವಾದ ನನ್ನ ನರ್ಮದಾನದಿಯಲ್ಲಿ ಸ್ನಾನಮಾಡಿ, ಭಸ್ಮವನ್ನು ಕೈ ಹಣೆ ಮುಂತಾದ

ಸ್ನಾತ್ವಾ ಭಸ್ಮಕೃತಾಭ್ಯಂಗೋ ರುದ್ರಾಕ್ಷವರಭೂಷಣಃ ।
ಬಿಲ್ವಪತ್ರಾಣಿ ಸಂಪಾದ್ಯ ಪುಷ್ಪಭಾರಾಣಿ ದೈತ್ಯಪಃ ॥೪೮॥

ಸಹಸ್ರಂ ನಾರ್ಮದಂ ಲಿಂಗಂ ಸಂಪೂಜಯತಿ ಶಂಕರಿ
ಧೂಪದೀಪೋಪಹಾರಾದ್ಯೈರ್ನೈವೇದ್ಯೈರ್ಭೂಷಣೈರಪಿ ॥೪೯॥

ನಿತ್ಯಂ ಸಂಸ್ತೌತಿ ಹೃಷ್ಟಾತ್ಮಾ ಬಲಸೂನುರನನ್ಯಧೀಃ ।
ಸಹಸ್ರಹಸ್ತಾಂಜಲಿಭಿಃ ಪ್ರಣಮನ್ಮಾಂ ಪುನಃ ಪುನಃ ॥೫೦॥

ನೃತ್ಯನ್ಪಾದತಲೈರ್ಭೂಮಿಂ ಕಂಪಯನ್ಬಲಿನಂದನಃ ।
ಗಿರೀಂದ್ರಚಲಿತೋಲ್ಲೋಲನಮ್ರಮಸ್ತಕದಿಗ್ಗಜಃ ॥೫೧॥

ಹಸ್ತತಾಲಮಹಾರಾವ ಬಧಿರೀಕೃತದಿಙ್ಮುಖಃ ।
ಅಸ್ತೌಷೀನ್ಮಾಂ ಮಹಾದೇವಿ ಬಾಣೋ ಭಕ್ತಿಪುರಃ ಸರಂ ॥೫೨॥

ಅವಯವಗಳಿಗೆಲ್ಲಾ ಹಚ್ಚಿಕೊಂಡು, ರುದ್ರಾಕ್ಷಮಾಲೆಯಿಂದ ಅಲಂಕೃತನಾಗಿ ಶ್ರೇಷ್ಠವಾದ ಬಿಲ್ವಪತ್ರೆಗಳನ್ನು ಸಂಪಾದಿಸಿ, ದೈತ್ಯರಾಜನಾದ ಇವನು ಸಾವಿರ ನರ್ಮದಾ ನದಿಯ ಲಿಂಗಗಳನ್ನು ಪೂಜೆಮಾಡಿದನು. ॥-೪೭೪೮॥

ಧೂಪ, ದೀಪ, ಉಪಹಾರ ಇವೇ ಮೊದಲಾದವುಗಳಿಂದಲೂ, ನಾನಾವಿಧವಾದ ನೈವೇದ್ಯ, ಆಭರಣ, ಇವುಗಳಿಂದಲೂ ಪ್ರತಿನಿತ್ಯವೂ ಸಂತೋಷದಿಂದ ಅನನ್ಯ ಮನಸ್ಕನಾಗಿ ಆ ಬಲಿದೈತ್ಯನ ಮಗನಾದ ಬಾಣಾಸುರನು ನನ್ನನ್ನು ಸ್ತೋತ್ರಮಾಡುತ್ತಿದ್ದನು. ಅಲ್ಲದೆ ತನ್ನ ಸಾವಿರ ಕೈಗಳನ್ನೂ ಜೋಡಿಸಿ ಪುನಃ ಪುನಃ ನನಗೆ ನಮಸ್ಕಾರಮಾಡುತ್ತಿದ್ದನು. ॥೪೯-೫೦॥

ಬಲಿಕುಮಾರನಾದ ಈ ಬಾಣಾಸುರನು ನನ್ನ ಮುಂದೆ ನರ್ತನಮಾಡುತ್ತಾ ತನ್ನ ಪಾದತಲದಿಂದ ಭೂಮಿಯನ್ನು ತುಳಿಯುತ್ತಿರಲು ಭೂಮಿಯು ನಡುಗುತ್ತಿದ್ದಿತು. ಏಳು ಕುಲಪರ್ವತಗಳೂ ಚಲಿಸಿದಂತಾಗಿ ಅಷ್ಟದಿಗ್ಗಜಗಳೆಲ್ಲವೂ ಕುಸಿದು ಬಗ್ಗಿದವು. ಇವನು ತಾಳಹಾಕುತ್ತಿರುವ ಮಹಾಧ್ವನಿಯಿಂದ ಎಲ್ಲಾ ದಿಗ್ಭಾಗಗಳೂ ಕಿವುಡಾದುವು. ಈ ರೀತಿಯಾಗಿ ಎಲೌ ಮಹಾದೇವಿಯೇ, ಬಾಣಾಸುರನು ನನ್ನನ್ನು ಭಕ್ತಿಪುರಸ್ಸರವಾಗಿ ವಿಧವಿಧವಾಗಿ ಸ್ತೋತ್ರಮಾಡಿದನು. ॥೫೧-೫೨॥

॥ ಬಾಣ ಉವಾಚ ॥

ಮಹಾದೇವ ಕರ್ಪೂರಗೌರಾಮರೇಂದ್ರ
ಮಹಾಮೇರುಕೋದಂಡಚಂಡಪ್ರಚಂಡ ।
ಮಹಾಚಂಡವೇತಂಡಶುಂಡೋರುದಂಡ
ಸಮೂಹೈರ್ಹೃತಾಪಾರಲೋಲಾಬ್ಜನೀಪತ್ರಪೂಜ್ಯ ॥೫೩॥

ಕುಂಡಲೀಕೃತಕುಂಡಲ ಶಂಭೋ
ಖಂಡಿತಾಖಿಲಸುರದ್ರುಮಖಂಡ ।
ಬ್ರಾಹ್ಮಮುಂಡಕಲಿತಾಮಲಮಾಲ
ಸ್ಥೂಲಲಿಂಗ ಗಣಮಂಡಲಸಂಸ್ಥ ॥೫೪॥

ನವಚಂದ್ರಾಭರಣೋತ್ತಮಾಂಗ
ಗಂಗಾಕಲಿತಾಲಕಭೂಧರೋರುಮಾಲ ।
ಧೃತಹಾಲಾಹಲಕಂಠ ಮೂಲಬಾಹು
ಸ್ಫುರದುತ್ತಮಶಿಲಾವಿಧೂತಶೂಲ ॥೫೫॥

---

ಕರ್ಪೂರದಂತೆ ಶುಭ್ರವಾದ ದೇಹಕಾಂತಿಯುಳ್ಳ ದೇವತೋತ್ತಮನಾದ ಮಹಾದೇವನೇ, ನೀನು ಮಹಾಮೇರುಪರ್ವತವನ್ನೇ ಬಿಲ್ಲನ್ನಾಗಿ ಮಾಡಿಕೊಂಡಿರುವೆ. ಚಂಡ, ಪ್ರಚಂಡ, ಮಹಾಚಂಡ, ಗಣಪತಿ ಇವರುಗಳ ಸಮೂಹದಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವನಾಗಿ ಅವರಲ್ಲಿಯೇ ಲೋಲನಾಗಿರುವೆ. ದೇವ, ಕಮಲಪತ್ರಗಳಿಂದ ನೀನು ಪೂಜಾರ್ಹನೆನಿಸಿರುವೆ. ॥೫೩॥

ಸರ್ಪರಾಜನಾದ ಆದಿಶೇಷನನ್ನೇ ಕುಂಡಲವನ್ನಾಗಿ ಮಾಡಿಕೊಂಡಿರುವ ಶಂಭುವೇ, ಸಕಲ ದೇವವೃಕ್ಷಗಳ ಸಮೂಹವೂ (ಕಲ್ಪವೃಕ್ಷಗಳ) ನಿನ್ನ ಔದಾರ್ಯದಿಂದ ಖಂಡಿಸಲ್ಪಟ್ಟಿದೆ. ಬ್ರಹ್ಮನ ತಲೆಯಿಂದ ಯುಕ್ತವಾದ ಪರಿಶುದ್ಧವಾದ ರುಂಡಮಾಲೆಯನ್ನು ಧರಿಸಿರುವೆ. ನೀನು ಸ್ಥೂಲವಾಗಿ ಲಿಂಗದ ಆಕಾರದಲ್ಲಿರುವೆ. ದೇವ, ಯಾವಾಗಲೂ ನಿನ್ನ ಗಣಗಳ ಸಮೂಹದಲ್ಲೇ ನೀನು ನೆಲಸಿರುವೆಯಲ್ಲವೆ! ॥೫೪॥

ಬಾಲಚಂದ್ರನನ್ನೇ ತಲೆಯಲ್ಲಿ ಆಭರಣವಾಗಿ ಧರಿಸಿರುವವನೇ, ನಿನ್ನ ಮುಂಗುರುಳಿನಲ್ಲಿ ಗಂಗೆಯು ಶೋಭಿಸುತ್ತಿರುವಳು. ಆದಿಶೇಷನೇ ನಿನಗೆ ದೊಡ್ಡ ಹಾರವಾಗಿರುವನು. ಹಾಲಾಹಲವಿಷವನ್ನೇ ನಿನ್ನ ಕುತ್ತಿಗೆಯಲ್ಲಿ ಧರಿಸಿರುವೆ. ಅಲ್ಲದೆ ನಿನ್ನ

ವಸುಧಾಧರಧಾರಕಂ ಮಹೇಶಂ
ವಿಬುಧಾಧೀಶ್ವರಸಂನುತಾಂಘ್ರಿಯುಗ್ಮಂ ।
ಗಿರಿಕಂದರಸಂಸ್ಥಿತಾಂತರಂಗಂ
ಭಜಾಮ್ಯಹಂ ಸಿಂಧುರಕೃತ್ತಿಚೈಲಂ ॥೫೬॥

ನೀಲಾಭ್ರಸನ್ನಿಭಮಹಾಮಹಿಷಾಧಿರೂಢಃ
ಚಂಡಾಂಶುಜಪ್ರಬಲಸರ್ಪಗಣಾದಿಪಾಶೈಃ ।
ಲಿಂಗಾಲಿಂಗನತತ್ಪರಂ ದ್ವಿಜಸುತಂ ಕರ್ಷಂತಂ ಮೃತ್ಯುನ್ಮುಖಂ
ಕಾಲಸ್ತ್ವತ್ಪದತಾಡಿತೋ ದ್ವಿಜಸುತಂ ದತ್ತಾಯುಷಂ ತ್ವಾಂ ನುಮಃ ॥೫೭॥

ಕ್ಯೆಯ ತುದಿಯಲ್ಲಿ, ಪ್ರಕಾಶಿಸುತ್ತಿರುವ ಉತ್ತಮವಾದ ಅಮೃತಶಿಲೆಯಂತೆ ಶುಭ್ರವಾದ ತ್ರಿಶೂಲಾಯುಧವು ಶೋಭಿಸುತ್ತಿರುವುದು. ||೫೫||

ಭೂಮಿಯನ್ನು ತನ್ನ ಹೆಡೆಯ ಮೇಲೆ ಹೊತ್ತಿರುವ ಆದಿಶೇಷನನ್ನು ಮಹೇಶ್ವರನು ತಾನು ಹಾರವಾಗಿ ಧರಿಸಿದನು. ದೇವತಾಸಾರ್ವಭೌಮರಾದ ಬ್ರಹ್ಮ, ವಿಷ್ಣು, ಇಂದ್ರ ಮುಂತಾದವರೂ ಈ ಮಹೇಶ್ವರನ ಪಾದಯುಗ್ಮಗಳಿಗೆ ಬಂದು ನಮಸ್ಕಾರ ಮಾಡುತ್ತಿರುವರು. ಯಾವಾಗಲೂ ಆ ಮಹೇಶನ ಮನಸ್ಸು ಕೈಲಾಸ ಪರ್ವತದ ಶಿಖರದಲ್ಲಿಯೇ ನೆಲಸಿರುತ್ತದೆ. ಅಲ್ಲದೆ ಈ ಮಹಾದೇವನು ಆನೆಯ ಚರ್ಮವನ್ನು ಹೊದೆಯುವನು. ಓ ದೇವ, ಇಂತಹ ನಿನ್ನನ್ನು ನಾನು ಸದಾ ಸೇವಿಸುತ್ತೇನೆ. ||೫೬||

ಅತಿಯಾಗಿ ಕಪ್ಪಾದ ಮೋಡದಂತಿರುವ ದೊಡ್ಡ ಕೋಣನ ಮೇಲೆ ಕುಳಿತು ಬಂದಿರುವ ಯಮನು, ತನ್ನ ಪ್ರಚಂಡವಾದ ಕಿರಣಕಾಂತಿಯಿಂದುಂಟಾದ ಪ್ರಬಲವಾದ ಸರ್ಪಸಮೂಹ ಮತ್ತು ಪಾಶ ಇವುಗಳಿಂದ, ಮರಣೋನ್ಮುಖನಾಗಿ ಶಿವಲಿಂಗವನ್ನು ಆಲಿಂಗನಮಾಡುವುದರಲ್ಲಿ ತತ್ಪರನಾಗಿರುವ ಮಾರ್ಕಂಡೇಯನೆಂಬ ಬ್ರಾಹ್ಮಣಕುಮಾರನನ್ನು ಎಳೆಯುತ್ತಿರುವಾಗ, ಆ ತನ್ನ ಭಕ್ತನನ್ನು ಅನುಗ್ರಹಿಸುವುದಕ್ಕೋಸ್ಕರ, ಆ ಯಮನನ್ನು ನೀನು ನಿನ್ನ ಕಾಲಿನಿಂದ ಒದೆದು ಬ್ರಾಹ್ಮಣಕುಮಾರನಾದ ಮಾರ್ಕಂಡೇಯನಿಗೆ ಪೂರ್ಣವಾದ ಆಯುಷ್ಯವನ್ನು ಕೊಟ್ಟಿರುವೆ. ದೇವ, ಇಂತಹ ಮಹಾನುಭಾವನಾದ ನಿನ್ನನ್ನು ಸ್ತೋತ್ರಮಾಡುವೆವು. ||೫೭||

ವಿಧಿಕಲಿತಕಪಾಲಮಾಲಿಜಾಲಂ
ಬಲಿತನಯಾರ್ಚಿತಬಾಣಲಿಂಗಲೋಲಂ ।
ಕರವಿಧೃತಕಪಾಲಂ ವ್ಯಾಲಮಾಲಂ ಸಶೂಲಂ
ಗರಧೃತಗಲನೀಲಂ ಕಾಲಕಾಲಂ ನಮಾಮಿ ॥೫೮॥

ಆಚ್ಛಾವಾಕ್ತ್ರಸ್ಯ ಶಂಭೋ ತವ ನಿಖಿಲಮಹೋಸುಷ್ಟುತಿಂ ವಿರಚಯಾಮಿ
ತ್ವಲ್ಲಿಂಗೇಕ್ಷಾಸುಚಕ್ಷೋ ಭವದಮಲಕಥಾಕರ್ಣನೈಃ ಸುಶ್ರವಾಹಂ ।
ತ್ವತ್ಪಾದಾರ್ಚಾಸು ಹಸ್ತಸ್ತ್ವತ್ಪದಕಮಲಧ್ಯಾನತಃ ಸನ್ಮನಾಹಂ
ಸರ್ವಂ ಚಾಂಗಂ ಸ್ಥಿರಂ ಚ ತ್ವಯಿ ಭವತಿ ವಿಭೋ ಶಂಕರಾದ್ಯ ಪ್ರಸೀದ ॥೫೯॥

ಮಾಕಂದಂ ಪಿಕಸುಂದರೀವ ಭಗವಾನ್ಕಾಂತಾ ಯಥಾ ಕಾಮುಕಂ
ಮತ್ತಾಲಿಃ ಸರಸೀರುಹಂ ದ್ವಿಜಗಣೋ ದಾತಾರಮಾಕಾಂಕ್ಷತೇ ।

ಬ್ರಹ್ಮನ ಕಪಾಲಗಳ ಸಮೂಹಗಳಿಂದ ಮಾಡಿದ ಮಾಲೆಯನ್ನು ಧರಿಸಿರುವವನೂ, ಬಲಿಚಕ್ರವರ್ತಿಯ ಮಗನಾದ ಬಾಣಾಸುರನಿಂದ ಪೂಜಿಸಲ್ಪಟ್ಟ ಬಾಣಲಿಂಗಗಳಲ್ಲಿ ವಿಶೇಷವಾಗಿ ಪ್ರೀತಿಯುಳ್ಳವನೂ, ಕೈಯಲ್ಲಿ ಕಪಾಲವನ್ನು ಹಿಡಿದು ಸರ್ಪವನ್ನೇ ಮಾಲೆಯಾಗಿ ಮಾಡಿಕೊಂಡು, ಶೂಲಾಯುಧಧಾರಿಯಾಗಿ ವಿಷವನ್ನು ತನ್ನ ಕಂಠದಲ್ಲಿ ಧರಿಸಿ ಆದರಿಂದ ಕಪ್ಪಾದಕೊರಳುಳ್ಳವನಾದವನೂ ಆಗಿ ಯಮನನ್ನೂ ನಿಗ್ರಹಿಸಿರುವ ದೇವನಿಗೆ ನಮಸ್ಕರಿಸುತ್ತೇನೆ. ॥೫೮॥

ಶಂಭೋ, ನಿನ್ನನ್ನು ಸ್ತೋತ್ರಮಾಡುವವನ ಮಾತುಗಳೇ ಸ್ವಚ್ಛವಾದವುಗಳು ಆದ್ದರಿಂದಲೇ ನಿನ್ನ ನಿಖಿಲ ಸ್ತೋತ್ರವನ್ನೂ ನಾನು ಮಾಡುವೆನು. ದೃಷ್ಟಿಯೆಲ್ಲವೂ ನಿನ್ನ ಲಿಂಗದರ್ಶನದಲ್ಲಿಯೇ ಐಕ್ಯವಾಗಿವೆ. ನಿನ್ನ ಪರಿಶುದ್ಧವಾದ ಕಥೆಗಳನ್ನು ಕೇಳುವುದರಿಂದಲೇ ನನ್ನ ಕಿವಿಗಳಿಗೆ ಸಾರ್ಥಕತೆಯುಂಟಾಗಿ, ನಾನು ಒಳ್ಳೆಯ ಕಿವಿಗಳುಳ್ಳವನಾಗಿರುವೆನು. ನನ್ನ ಕೈಗಳು ಯಾವಾಗಲೂ ನಿನ್ನ ಪೂಜೆಯಲ್ಲಿಯೇ ತೊಡಗಿ ಸಾರ್ಥಕವಾಗಿವೆ. ನಿನ್ನ ಪಾದಕಮಲಧ್ಯಾನದಿಂದ ನನ್ನ ಮನಸ್ಸು ಶ್ರೇಷ್ಠವೆನಿಸಿದೆ. ನನ್ನ ಸಕಲಾವಯುವಗಳೂ ಸ್ಥಿರವಾಗಿ ನಿನ್ನಲ್ಲಿ ನೆಲಸಿರುವುವು. ಎಲೈ ವ್ಯಾಪಕನೂ, ಆದಿಪುರುಷನೂ ಆದ ಶಂಕರನೇ ನನ್ನಲ್ಲಿ ಅನುಗ್ರಹಮಾಡು. ॥೫೯॥

ಭಗವಂತನೇ, ಹೆಣ್ಣುಕೋಗಿಲೆಯು ಸಿಹಿಮಾವಿನ ಮರವನ್ನು ಬಯಸುವಂತೆಯೂ, ಕಾಮಾಭಿಲಾಷೆಯುಳ್ಳ ನಾರಿಯು ಸರಿಯಾದ ಗಂಡನನ್ನಪೇಕ್ಷಿಸು

ತದ್ವತ್ತ್ವಾಂ ಪರಿಚಿಂತಯಾಮಿ ಸತತಂ ಪೂರ್ಣಂ ಕೃಪಾವೀಕ್ಷಣೈಃ
ಸಂಪೂರ್ಣಂ ಕುರು ಮಾಮಕಿಂಚನಮಹೋಭಾಗ್ಯೈರಭಾಗ್ಯಾಲಸೈಃ ॥೬೦॥

ಇತ್ಥಂ ಸ್ತುತ್ವಾ ತದಾ ಬಾಣೋ ಮಮಾನಂದಪರಿಪ್ಲುತಃ ।
ಸಾಷ್ಟಾಂಗಂ ಪ್ರಣನಾಮಾಥ ಬಾಣಪಾತಪ್ರಮಾಣಕಃ ॥೬೧॥

ತತಃ ಸಂದರ್ಶನಂ ದತ್ತಂ ತಸ್ಮೈ ಶೈಲೇಂದ್ರಕನ್ಯಕೇ ।
ಚತುರ್ಬಾಹುಮುದಾರಾಂಗಂ ನೀಲಕಂಠಂ ವೃಷಸ್ಥಿತಂ ॥೬೨॥

ಗಂಗಾಚಂದ್ರಕಲಾಮೌಲಿಂ ಖಂಡಕರ್ಪೂರಸನ್ನಿಭಂ ।
ವೃಂದಾರವೃಂದೈಃ ಸತತಂ ಸೇವ್ಯಮಾನಪದಾಂಬುಜಂ ॥೬೩॥

ಮಂದಾರಕುಂದಮಾಲಾಭಿಃ ಕಂಠಲೋಲಾಭಿರೀಶ್ವರಂ ।
ಗಣವೃಂದೈರ್ಮಹಾದೇವಿ ತಸ್ಮೈ ದತ್ತಂ ಚ ದರ್ಶನಂ ॥೬೪॥

ವಂತೆಯೂ, ಬ್ರಾಹ್ಮಣಸಮೂಹವು ದಾನಶೀಲನಾದ ಗೃಹಸ್ಥನನ್ನಾಶ್ರಯಿಸುವಂತೆಯೂ, ನಾನು ನಿನ್ನನ್ನು ಆಶ್ರಯಿಸಿರುವೆನು. ಆದುದರಿಂದ ದೇವ, ನೀನು ನನ್ನಲ್ಲಿ ದಯಾದೃಷ್ಟಿಯನ್ನು ಬೀರಿ, ಬಡವನಾದ ನನಗೆ ಶಾಶ್ವತವಾದ ಭಾಗ್ಯಗಳನ್ನು ಕೊಟ್ಟು, ಎಂತಹ ಭಾಗ್ಯಸಂಪತ್ತಿದ್ದರೂ ಸ್ವಲ್ಪವೂ ಬೇಜಾರಿಲ್ಲದೇ ನಿನ್ನನ್ನು ಪೂಜಿಸುವಂತಹ ಭಕ್ತಿಭಾಗ್ಯವನ್ನು ಸಂಪೂರ್ಣವಾಗಿ ಕೊಟ್ಟು ಕಾಪಾಡು ಎಂದು ಸ್ತೋತ್ರಮಾಡಿದನು. ॥೬೦॥

ಹೀಗೆ ಆ ಬಾಣಾಸುರನು ನನ್ನನ್ನು ಸ್ತೋತ್ರಮಾಡಿ, ಆನಂದದಿಂದ ಪರಿಪೂರ್ಣನಾಗಿ ಬಾಣದ ಬೀಳುವಿಕೆಯ ಪ್ರಮಾಣವುಳ್ಳವನಾಗಿ ಸಾಷ್ಟಾಂಗ ನಮಸ್ಕಾರಮಾಡಿದನು. ॥೬೧॥

ಎಲೌ ಪರ್ವತರಾಜಕುವರಿಯೇ, ಹೀಗೆ ಸ್ತೋತ್ರಮಾಡಿದ ಮೇಲೆ ನಾನು ಅವನಿಗೆ ದರ್ಶನಕೊಟ್ಟೆನು. ಆಗ ನಾಲ್ಕುಭುಜವುಳ್ಳವನೂ, ಉದಾರವಾದ ಅವಯವಗಳುಳ್ಳವನೂ, ಕಪ್ಪುಕೊರಳುಳ್ಳವನೂ, ವೃಷಭಾರೂಢನೂ, ಗಂಗೆ ಮತ್ತು ಚಂದ್ರನ ಕಲೆಗಳು ಇವುಗಳಿಂದ ಶೋಭಿಸುವ ಶಿರಸ್ಸುಳ್ಳವನೂ, ಗಟ್ಟಿ ಕರ್ಪೂರದಂತೆ ಬಿಳುಪಾದ ಬಣ್ಣವುಳ್ಳವನೂ, ದೇವತೆಗಳ ಸಮೂಹದಿಂದ ಸೇವಿಸಲ್ಪಡುತ್ತಿರುವ ಪಾದಕಮಲವುಳ್ಳವನೂ, ಪಾರಿಜಾತ ಮತ್ತು ಕುಂದ ಈ ಹೂಗಳ ಹಾರಗಳಿಂದ

ದೃಷ್ಟ್ವಾ ಮಾಂ ದೇವದೇವೇತಿ ಪ್ರಸೀದೇತಿ ವದನ್ಮುದಾ ।
ಪ್ರಣಾಮಮುಖರೋ ದೈತ್ಯೋ ವರೇಣ ಛಂದಿತೋ ಮಯಾ ॥೬೫॥

॥ ಈಶ್ವರ ಉವಾಚ ॥

ಉತ್ತಿಷ್ಠೋತ್ತಿಷ್ಠ ದೈತ್ಯೇಂದ್ರ ಮಹೇಂದ್ರಸಮವಿಕ್ರಮ ।
ಗಿರೀಂದ್ರಶಿಖರಾಕಾರ ಮೃಗೇಂದ್ರಾಮಲಲೋಚನ ॥೬೬॥

ವರಂ ವರಯ ಮತ್ತಸ್ತ್ವಂ ಯದಿಚ್ಛಸಿ ತದಸ್ತು ತೇ ।
ಇತ್ಥಂ ಮದ್ವದನಾಂಭೋಜವಾಣೀಂ ಶ್ರುತ್ವಾ ಸ ದೈತ್ಯಪಃ ॥೬೭॥

ಪ್ರಣಮ್ಯ ಮಾಂ ತದಾ ಪ್ರಾಹ ವಿನಯಾನತಕಂಧರಃ ॥೬೮॥

ಯುಕ್ತವಾದ ಕೊರಳಿನಿಂದ ಪ್ರಕಾಶಿಸುವನೂ, ಆಗಿ ನನ್ನ ಗಣಸಮೂಹಗಳೊಡನೆ ಅವನಿಗೆ ದರ್ಶನಕೊಟ್ಟೆನು. ॥೬೨-೬೩-೬೪॥

ಆಗ ನನ್ನನ್ನು ನೋಡಿ, ದೇವದೇವನೇ ಪ್ರಸನ್ನನಾಗು, ಎಂದು ಪ್ರೀತಿಯಿಂದ ಹೇಳುತ್ತಾ ನಮಸ್ಕಾರಮಾಡಲು ಉದ್ಯುಕ್ತನಾಗಿರುವ ಆ ಬಾಣದೈತ್ಯನನ್ನು ಕುರಿತು, ನಾನು ವರವನ್ನು ಕೊಡುವೆನು ಎಂದು ಹೇಳುವವನಾಗಿ, ಛಂದೋರೂಪವಾದ ಈ ಮಾತುಗಳನ್ನು ಹೇಳಿದೆನು. ॥೬೫॥

ದೈತ್ಯಶ್ರೇಷ್ಠನೂ, ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನೂ, ಹಿಮವತ್ಪರ್ವತದ ಶಿಖರದಂತೆ ದೊಡ್ಡ ಆಕಾರವುಳ್ಳವನೂ, ಸಿಂಹದಂತೆ ನಿರ್ಮಲವಾದ ಕಣ್ಣುಗಳುಳ್ಳವನೂ ಆದ ಬಾಣದೈತ್ಯನೇ, ಮೇಲಕ್ಕೆ ಏಳು. ನಿನಗೆ ಬೇಕಾದ ವರಗಳನ್ನು ಕೇಳು. ಅವೆಲ್ಲವನ್ನೂ ನಾನು ನಿನಗೆ ಕೊಡುವೆನು. ಎಂದು ಶಿವನು ನುಡಿದನು. ॥೬೬॥

ಹೀಗೆ ನನ್ನ ಮುಖಕಮಲದಿಂದ ಹೊರಟ ಮಾತನ್ನು ಕೇಳಿ ಆ ರಾಜನು, ವಿನಯದಿಂದ ತಲೆಬಾಗಿಸಿ ನಮಸ್ಕಾರಮಾಡಿ ನನ್ನನ್ನು ಕುರಿತು, ಹೀಗೆಂದು ಪ್ರಾರ್ಥಿಸಿದನು. ॥೬೮॥

|| ಬಾಣ ಉವಾಚ ||

ಭಕ್ತಿಂ ತ್ವದೀಯಜನಸಂಗಮಮೇವ ಶಂಭೋ
ಲಿಂಗಾರ್ಚನಂ ಚ ಸುಭಗಂ ತವ ಬಾಣಲಿಂಗೇ ।
ಸಂಪ್ರಾರ್ಥಯಾಮಿ ಭಗವಂಸ್ತವ ಭಕ್ತಭಾವಂ
ವಾಂಛಾ ನ ಮೇ ಭವತಿ ತುಚ್ಛಭವಾದಿಧರ್ಮೇ ॥೬೯॥

ಕಿಂ ಯಾಗೈರಿತಿ ತುಚ್ಛಭೋಗಫಲದೈಃ ಸ್ವರ್ಗಾದಿಪಾತಾಂತಕೈಃ
ಕಿಂ ಗೋಭಿರ್ಧನಧಾನ್ಯರತ್ನನಿಕರೈರ್ಹೇಮ್ನೈಶ್ಚ ಪಾತ್ರಾರ್ಪಣೈಃ ।
ಶಂಭೋರ್ನರ್ಮದಲಿಂಗಮಸ್ತಕಗಮಂ ಬಿಲ್ವೀದಲೈಃ ಕೋಮಲೈಃ
ಸಂಪೂಜ್ಯ ಪ್ರಮಥಾಧಿನಾಥಪದವೀಂ ಪ್ರಾಪ್ನೋತಿ ಭಾಗ್ಯೈರ್ಯುತಃ॥೭೦॥

ನೀರೈರ್ನರ್ಮದಜೈಃ ಸಶೋಧಿತಮಹಾಕರ್ಪೂರಖಂಡದ್ರವೈಃ
ಸಂಸೇವ್ಯಾಲೋಕಹೃಷ್ಟೋಭವದಭಯಪದಂ ಪ್ರಾಪ್ತುಮಿಚ್ಛಾಮಿ ಶಂಭೋ

---

ಶಂಭುವೇ, ನಿನ್ನಲ್ಲಿ ಭಕ್ತಿಯನ್ನೂ, ನಿನ್ನ ಭಕ್ತಜನಗಳ ಸಹವಾಸವನ್ನೂ, ಬಾಣಲಿಂಗದಲ್ಲಿ ಮನೋಹರವಾಗಿ ನಡೆಸುವ ಲಿಂಗಪೂಜೆಯನ್ನೂ ಕರುಣಿಸೆಂದು ಪ್ರಾರ್ಥಿಸುವೆನು. ಭಗವಂತನೇ, ನಿನ್ನ ಭಕ್ತನಿಗೆ ಬೇಕಾದ ಭಾವಗಳೇನುಬೇಕು ? ಅದಲ್ಲದೇ ತುಚ್ಛವಾದ ಈ ಸಾಂಸಾರಿಕಧರ್ಮಗಳಲ್ಲಿ ನನಗೆ ಯಾವ ಅಪೇಕ್ಷೆಯೂ ಇಲ್ಲ. ನಿನಗೆ ಭಕ್ತನಾಗುವುದೊಂದೇ ನನಗೆ ಸಾಕು. ||೬೯||

ಭೂಮಿಯಲ್ಲಿ ಯಾಗಗಳನ್ನು ಆಚರಿಸುವುದರಿಂದ, ಅತಿತುಚ್ಛವಾದ ಸುಖ ಭೋಗರೂಪವಾದ ಫಲಗಳನ್ನುಂಟುಮಾಡುವ ಸ್ವರ್ಗಫಲವುಂಟಾಗುತ್ತದೆ. ಗೋವುಗಳು, ಧನ, ಧಾನ್ಯ, ರತ್ನಸಮೂಹ, ಸುವರ್ಣ ಇವುಗಳನ್ನು ಸತ್ಪಾತ್ರರಿಗೆ ದಾನ ಮಾಡುವುದರಿಂದಲೂ ಅತಿಶ್ರೇಷ್ಠವಾದ ಫಲವುಂಟಾಗಲಾರದು. ಆ ಶಂಭುವಿನ ನರ್ಮದಾನದಿಯ ಲಿಂಗದ ಶಿರಸ್ಸಿನಮೇಲೆ ಕೋಮಲವಾದ ಬಿಲ್ವಪತ್ರೆಗಳನ್ನು ಪೂಜೆಮಾಡುವ ಮಾನವನು ಇವೆಲ್ಲಕ್ಕಿಂತಲೂ, ಅತಿಶಯವಾದ ಭಾಗ್ಯವನ್ನು ಪಡೆದು, ಕೊನೆಗೆ ಪ್ರಮಥಗಣಗಳಿಗೆ ಸ್ವಾಮಿಯಾಗುವ ಪದವಿಯನ್ನು ಹೊಂದುತ್ತಾನೆ. ||೭೦||

ನರ್ಮದಾನದಿಯ ನೀರಿಗೆ ಚೆನ್ನಾಗಿ ಶೋಧಿಸಿದ ಕರ್ಪೂರಖಂಡವನ್ನು ಸೇರಿಸಿ ದ್ರವಮಾಡಿ, ಅದರಿಂದ ನರ್ಮದಾಲಿಂಗಕ್ಕೆ ಅಭಿಷೇಕಮಾಡಿ, ಆ ದಿವ್ಯ

ಗಾಣಾಪತ್ಯಂ ಮಮಾಸ್ತು ಪ್ರಿಯಮಮರವರೈರ್ದುರ್ಲಭಂ ತ್ವತ್ಪದಾಬ್ಜೇ
ಭಕ್ತಿಂ ಭಕ್ತೈಃ ಸಹಾಸ್ತು ಪ್ರತಿದಿವಸಮಹೋ ಸಂಗಮೋಽಘೌಘಹಾರೀ
॥೨೦॥

ಸದ್ಯೋನಾರ್ಮದಲಿಂಗಮಂಡಲಮಿದಂ ಬಾಣಾಖ್ಯತಾಂ ಪ್ರಾಪ್ನುಯಾತ್ ।
ಏವಂ ದೇಯೋ ವರೋ ಮೇ ಪ್ರಥಯಿತುಮಖಿಲಂ ಲೋಕಮಧ್ಯ
ಪ್ರಸೀದ ॥೨೧॥

॥ ಈಶ್ವರ ಉವಾಚ ॥

ತಸ್ಯೋದಾರವಚೋ ನಿಶಮ್ಯ ಗಿರಿಜೇ ದತ್ತೋ ವರೋ ಮೇ ಕೃತೋ
ಗಾಣಾಪತ್ಯಪದೇ ಸ ದೈತ್ಯತನಯಃ ಶಕ್ರಾದಿಗರ್ವಾಪಹಃ ।
ಸರ್ವಂ ಭಕ್ತಜನಾರ್ಪಣಾಯ ಸತತಂ ಚಿತ್ತಂ ಮದೀಯಂ ಶಿವೇ
ಸದ್ಭಕ್ತೋ ಭುವಿ ದುರ್ಲಭಃ ಸುಖಕರಃ ಶ್ರೀಬಾಣಲಿಂಗಾರ್ಚಕಃ ॥೨೨॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಬಾಣಾಸುರಸ್ಯ
ಗಾಣಪತ್ಯವರ್ಣನಂ ನರ್ಮದಾಲಿಂಗ ಮಹಿಮಾವರ್ಣನಂ
ನಾಮ ದಶಮೋಽಧ್ಯಾಯಃ

ಲಿಂಗದ ದರ್ಶನದಿಂದ ಸಂತುಷ್ಟನಾದ ನಾನು ನಿನ್ನ ಅಭಯಪ್ರದವಾದ ಪಾದಗಳನ್ನು ಸೇವಿಸಲು ಅಪೇಕ್ಷಿಸುತ್ತೇನೆ. ದೇವ, ದೇವತೋತ್ತಮರಿಗೂ ದೊರೆಯಲಸಾಧ್ಯವಾದ ಪ್ರೀತಿಕರವಾದ ನಿನ್ನ ಗಣಾಧಿಪತಿಯ ಪದವಿಯು ನಿನ್ನ ಪಾದಕಮಲದಲ್ಲಿ ನನಗೆ ದೊರೆಯಲಿ. ಅಲ್ಲದೆ ನಿನ್ನ ಪಾದಾರವಿಂದದ ಭಕ್ತಿಯೂ, ಪ್ರತಿನಿತ್ಯವೂ ಪಾಪನಾಶಕವಾದ ನಿನ್ನ ಭಕ್ತರ ಸಹವಾಸವೂ ನನಗೆ ತಪ್ಪದೇ ಲಭಿಸಲಿ. ॥೨೦॥

ಅಲ್ಲದೆ ಮಹಾದೇವ, ಈ ನರ್ಮದಾನದಿಯ ದಡದಲ್ಲಿರುವ ಲಿಂಗಗಳ ಸಮೂಹವೆಲ್ಲವೂ ಬಾಣಲಿಂಗಗಳೆಂದು ಪ್ರಸಿದ್ಧಿಯನ್ನು ಪಡೆಯಲಿ. ದೇವ, ಈ ರೀತಿಯಾದ ವರವನ್ನು ಕರುಣಿಸು. ಪ್ರಪಂಚದಲ್ಲೆಲ್ಲಾ ನಿನ್ನ ಖ್ಯಾತಿಯು ಬೆಳಗುವಂತೆ ಮಾಡು, ಎಂದು ಪ್ರಾರ್ಥಿಸಿದನು. ॥೨೧॥

ಹೀಗೆ ತನ್ನನ್ನು ಪ್ರಾರ್ಥಿಸಿದ ಆ ಬಾಣಾಸುರನ ಉದಾರವಾದ ಮಾತುಗಳನ್ನು ಕೇಳಿ, ಅವನು ಕೇಳಿದ ವರಗಳನ್ನು ಕೊಟ್ಟು, ಇಂದ್ರಾದಿಗಳ ಗರ್ವವನ್ನೂ

ತನ್ನ ಪರಾಕ್ರಮ ಮತ್ತು ಶಿವಭಕ್ತಿ ಇವುಗಳಿಂದ ಹೋಗಲಾಡಿಸುವ ಸಾಮರ್ಥ್ಯವುಳ್ಳ ಆ ಬಲಿದೈತ್ಯಕುಮಾರನಾದ ಬಾಣಾಸುರನಿಗೆ ಗಣಾಧಿಪತಿಯ ಪದವಿಯನ್ನು ಕೊಟ್ಟಿರುವೆನು. ಎಲೌ ಗಿರಿಜೆಯೇ, ನಾನು ನನ್ನ ಭಕ್ತರಿಗೋಸ್ಕರ ಎಲ್ಲವನ್ನೂ ಕೊಡಲು ಸಿದ್ಧನಾಗಿರುವೆನು. ನನ್ನ ಮನಸ್ಸೆಲ್ಲವೂ ಆ ಭಕ್ತನಿಗೋಸ್ಕರವೇ ತೆರೆದಿರುವುದು. ಪ್ರೇಯಸಿ, ಆದರೆ ಅಂತಹ ಬಾಣಲಿಂಗವನ್ನು ಪೂಜೆಮಾಡುವ ಶ್ರೇಷ್ಠನಾದ ಭಕ್ತನು ಮಾತ್ರ ಈ ಭೂಮಿಯಲ್ಲಿ ದೊರೆಯುವುದು ದುರ್ಲಭವು. ಎಂದು ಶಂಕರನು ದೇವಿಗೆ ತನ್ನ ಮಹಿಮೆಯನ್ನು ವಿವರವಾಗಿ ತಿಳಿಯಪಡಿಸಿದನು. ||೭೩||

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗಸಂಜ್ಞಕವಾದ ಐದನೆಯ ಅಂಶದಲ್ಲಿ ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಏಕಾದಶೋಽಧ್ಯಾಯಃ

॥ ದೇವ್ಯುವಾಚ ॥

**ಶ್ರುತಂ ಬಾಣಾಸುರಾಖ್ಯಾನಂ ಭವತಃ ಪರಮೇಶ್ವರ ।**
**ಕೇದಾರಸ್ಥಾನಮಹಿಮಾಂ ವದಾಽದ್ಯ ಶಿವಶಂಕರ ॥೧॥**

॥ ಸೂತ ಉವಾಚ ॥

**ಮಹಾದೇವೋ ಮಹೇಶಾನ್ಯಾ ಪೃಷ್ಟೋ ದಕ್ಷಮಖಾಂತಕೃತ್ ।**
**ದೇವೀಂ ಪ್ರಾಹಾರವಿಂದಾಕ್ಷೀಂ ಕೇದಾರಸ್ಥಾನವೈಭವಂ ॥೨॥**

## ಹನ್ನೊಂದನೆಯ ಅಧ್ಯಾಯವು

ಪಾರ್ವತಿಯು ಪುನಃ ಪರಶಿವನನ್ನು ಕುರಿತು, " ಪರಮೇಶ್ವರ, ನಿನ್ನ ಅನುಗ್ರಹದಿಂದ ಬಾಣಾಸುರನ ಕಥೆಯನ್ನು ಕೇಳಿದೆನು. ಇನ್ನು ಈಗ ಮಂಗಳಕರನಾದ ನಿನಗೆ ಪ್ರಿಯವಾದ, ಕೇದಾರಕ್ಷೇತ್ರದ ಮಹಿಮೆಯನ್ನು ತಿಳಿಸುವನಾಗು." ಎಂದು ಗಿರಿಜಾದೇವಿಯು ಪರಮೇಶ್ವರನನ್ನು ಪ್ರಾರ್ಥಿಸಿದಳು. ॥೧॥

ಎಂದು ಸೂತಮುನಿಯು ಶೌನಕಾದಿಗಳಿಗೆ ಕಥೆಯನ್ನು ಮುಂದುವರಿಸಿ ನುಡಿದನು. –

ದಕ್ಷಯಜ್ಞವನ್ನು ನಾಶಮಾಡಿದ ಮಹಾದೇವನು ಮಹೇಶ್ವರಿಯಿಂದ ಹೀಗೆ ಪ್ರಾರ್ಥಿಸಲ್ಪಟ್ಟವನಾಗಿ, ಶಂಕರನು ತಾವರೆಯ ಎಸಳಿನಂತೆ ಕಣ್ಣುಗಳುಳ್ಳ ದೇವಿಗೆ ಆ ಕೇದಾರಕ್ಷೇತ್ರದ ವೈಭವವನ್ನು ಹೇಳಿದನು. ॥೨॥

॥ ಶ್ರೀ ಈಶ್ವರ ಉವಾಚ ॥

ಅಸ್ತಿ ಕ್ಷೇತ್ರವರಂ ದೇವಿ ಕೇದಾರಂ ಭುವಿ ವಿಶ್ರುತಂ ।
ತತ್ಕ್ಷೇತ್ರಮಹಿಮಾ ಸುಭ್ರು ದೇವೈರ್ನ ಜ್ಞಾಯತೇ ಶಿವೇ ॥೩॥

ತಸ್ಮಿನ್ಕ್ಷೇತ್ರವರೇ ದೇವಿ ಬ್ರಹ್ಮಾದ್ಯಾ ವಿಬುಧೋತ್ತಮಾಃ ।
ನಿವಸಂತಿ ಮಹಾಭಾಗೇ ಕೇದಾರೇಶ್ವರಪೂಜಕಾಃ ॥೪॥

ತಲ್ಲಿಂಗಸದೃಶಂ ಲಿಂಗಂ ನ ಭೂತಂ ನ ಭವಿಷ್ಯತಿ ।
ಹಿತ್ವಾ ಕೈಲಾಸಶಿಖರಂ ಗಿರೀಶೋ ವಸತೀಶ್ವರಃ ॥೫॥

ಸದಾ ತತ್ರ ಮಹಾಶೈವಾ ವಸಂತಿ ಶಿವತತ್ಪರಾಃ ।
ಭಸ್ಮರುದ್ರಾಕ್ಷವೀತಾಂಗಾಃ ತ್ರಿಪುಂಡ್ರಾವಳಿಭಾಸುರಾಃ ॥೬॥

ದೇವಿ, ಈ ಭೂಮಂಡಲದಲ್ಲಿ ಕೇದಾರವೆಂದು ಪ್ರಸಿದ್ಧವಾದ ಅತ್ಯುತ್ತಮ ಕ್ಷೇತ್ರವಿರುವುದು. ಸುಂದರವಾದ ಹುಬ್ಬುಳ್ಳ ದೇವಿಯೇ, ಆ ಕ್ಷೇತ್ರದ ಮಹಿಮೆಯನ್ನು ದೇವತೆಗಳೂ ಸರಿಯಾಗಿ ತಿಳಿಯಲಾರರು. ॥೩॥

ದೇವಿ, ಈ ಶ್ರೇಷ್ಠವಾದ ಕೇದಾರಕ್ಷೇತ್ರದಲ್ಲಿ ಬ್ರಹ್ಮನೇ ಮೊದಲಾದ ದೇವತೋತ್ತಮರೂ ಸಹ, ಆ ಕೇದಾರೇಶ್ವರನನ್ನು ಪೂಜೆಮಾಡುತ್ತಾ, ಅಲ್ಲಿಯೇ ವಾಸಮಾಡುತ್ತಿರುವರು. ॥೪॥

ಮಹಿಮೆಯಲ್ಲಿ ಕೇದಾರೇಶ್ವರಲಿಂಗಕ್ಕೆ ಸಮಾನವಾದ ಲಿಂಗವು ಹಿಂದೆ ಇರಲಿಲ್ಲ. ಮುಂದೆ ಇರುವುದೂ ಇಲ್ಲ. ಯಾವಾಗಲೂ ಕೈಲಾಸಪರ್ವತದಲ್ಲಿಯೇ ವಾಸಮಾಡುವ ಜಗದೀಶ್ವರನು, ತನ್ನ ಕೈಲಾಸವನ್ನು ಬಿಟ್ಟು ಇಲ್ಲಿ ಬಂದು ವಾಸಮಾಡುತ್ತಿರುವನು. ॥೫॥

ಯಾವಾಗಲೂ, ಈ ಕೇದಾರಕ್ಷೇತ್ರದಲ್ಲಿ, ಭಸ್ಮ, ರುದ್ರಾಕ್ಷ ಇವುಗಳನ್ನು ಧರಿಸಿ, ಪಾವನವಾದ ಅವಯವವುಳ್ಳವರಾಗಿ, ಭಸ್ಮತ್ರಿಪುಂಡ್ರದಿಂದ ಶೋಭಿಸುತ್ತಿರುವ ಮುಖವುಳ್ಳ, ಈಶಭಕ್ತರು ಎಡಬಿಡದೆ ವಾಸಮಾಡುತ್ತಿರುವರು. ॥೬॥

ಕೇದಾರೇಶಸ್ಯ ದೇವಸ್ಯ ನಿತ್ಯಮಾರಾಧನೇ ರತಾಃ ।
ಷಟ್ಸಹಸ್ರಂ ಫಲಾಹಾರಾಃ ವಾಯ್ವಾಹಾರಾಶ್ಚ ಪಂಚಕಂ ॥೭॥

ತ್ರಿಸಹಸ್ರಾಂಬುಪರ್ಣಾಶಾ ಭಾಸುರಾಶ್ಶಿವತತ್ಪರಾಃ ।
ಚ್ಯವನಾ ಭಾರ್ಗವಾಶ್ಚೈವ ಭಾರದ್ವಾಜಾಶ್ಚ ಕಾಶ್ಯಪಾಃ ॥೮॥

ಮೌದ್ಗಲ್ಯಾ ವೀತಹವ್ಯಾಶ್ಚ ವೈಶ್ವಾಮಿತ್ರಾತ್ರಿಸಂಭವಾಃ ।
ಮತ್ಪಾದಪೂಜಕಾಃ ಸರ್ವೇ ಕೇದಾರಕ್ಷೇತ್ರವಾಸಿನಃ ॥೯॥

ಬ್ರಾಹ್ಮಣಾ ಬ್ರಹ್ಮಸದೃಶಾಃ ಋಗ್ಯಜುಸ್ಸಾಮಪಾರಗಾಃ ।
ನಿವಸಂತಿ ಸದಾ ದೇವಿ ಮಮ ಲಿಂಗಾರ್ಚನೇ ರತಾಃ ॥೧೦॥

ಪಂಚಾಗ್ನಿನಿರತಾಃ ಕೇಚಿತ್ತ್ರೇತಾಗ್ನಿಶರಣಾಃ ಪರೇ ।
ನಾರದಾದ್ಯಾಶ್ಚ ಮುನಯೋ ವಸಂತಿ ಸತತಂ ಶಿವೇ ॥೧೧॥

ಗಂಧರ್ವಾಃ ಸಿದ್ಧನಾಗಾದ್ಯಾ ಯಕ್ಷಾಃ ಕಿಂಪುರುಷಾಸ್ಸದಾ ।
ಪಕ್ಷೀಭಿಶ್ಶೈಲಶಿಖರೇ ಕೇದಾರೇಶ್ವರಸೇವಿನಃ ॥೧೨॥

ಅಲ್ಲದೆ ಅಲ್ಲಿರುವವರೆಲ್ಲರೂ ಸದಾ ಕೇದಾರೇಶ್ವರಸ್ವಾಮಿಯನ್ನು ಪೂಜಿಸುವವರೇ ಆಗಿರುವರು. ಸುಮಾರು ಆರುಸಾವಿರ ಜನರು ಫಲಾಹಾರದಿಂದಲೂ, ವಾಯ್ವಾಹಾರದಿಂದ ಐದುಸಾವಿರ ಜನರೂ, ಜಲ, ಪರ್ಣ ಇವುಗಳ ಆಹಾರದಿಂದ ಮೂರುಸಾವಿರಮಂದಿಯೂ ವಾಸಿಸುತ್ತಿರುವರು. ಚ್ಯವನ, ಭಾರ್ಗವ, ಭಾರದ್ವಾಜ, ಕಶ್ಯಪ, ಮೌದ್ಗಲ್ಯ, ವೀತಹವ್ಯ, ವಿಶ್ವಾಮಿತ್ರ, ಅತ್ರಿ, ಮುಂತಾದ ಮಹರ್ಷಿಗಳೂ ತದ್ವಂಶೀಯರೂ ಸದಾ ಅಲ್ಲಿ ಶಿವಪೂಜಾತತ್ಪರರಾಗಿ ನೆಲಸಿರುವರು. ॥೭-೮॥

ಅಲ್ಲದೆ ಅನೇಕ ಜನ ಬ್ರಹ್ಮಮಾರ್ಗಪ್ರವರ್ತಕರೂ, ವೇದತ್ರಯಪಾರಂಗತರೂ ಬಹುಸಂಖ್ಯೆಯಲ್ಲಿ ಶಿವಲಿಂಗಾರ್ಚನೆಮಾಡುತ್ತಾ ಅದೇ ಕೇದಾರಕ್ಷೇತ್ರದಲ್ಲಿ ವಾಸಿಸುತ್ತಾ ಕಾಲಕಳೆಯುತ್ತಿರುವರು. ॥೯-೧೦॥

ನಾರದರೇ ಮೊದಲಾದ ಋಷಿಗಳಲ್ಲಿ ಕೆಲವರು ಪಂಚಾಗ್ನಿ ಮಧ್ಯೆ ನಿಂತು ತಪಸ್ಸುಮಾಡುವರು. ಹಲವರು ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಎಂಬ ಅಗ್ನಿತ್ರಯಗಳನ್ನು ಪೂಜಿಸುತ್ತಿರುವರು. ಹಾಗೆಯೇ ಗಂಧರ್ವರು, ಸಿದ್ಧರೂ,

ಮಾಮಾರಾಧ್ಯಂ ಸಮಾರಾಧ್ಯಂ ಬ್ರಹ್ಮವಿಷ್ಣ್ವಾದಯಸ್ಸುರಾಃ ।
ಸ್ವಂ ಸ್ವಂ ಸ್ಥಾನಮವಾಪುಸ್ತೇ ಕೇದಾರೇಶಸಮರ್ಚನಾತ್ ॥೧೩॥

ಅತ್ರ ಕೇದಾರನಾಥಂ ಯೋ ಶಿವರಾತ್ರೌ ಚತುರ್ದಶೀಂ ।
ಉಪೋಷ್ಯ ಪ್ರಯತೋ ಭಕ್ತ್ಯಾ ದೇವಿ ಯಾಮಚತುಷ್ಟಯಂ ॥೧೪॥

ಪೂಜಾಂ ಕುರ್ಯಾದ್ಬಿಲ್ವಪತ್ರೈಃ ಸ ಮೋಕ್ಷಮಧಿಗಚ್ಛತಿ ।
ಅನ್ಯತ್ರ ಕೋಟಿಲಿಂಗಾರ್ಚಾಫಲಂ ಯತ್ಸುರಸತ್ತಮೇ ॥೧೫॥

ಕೇದಾರೇಶ್ವರಮೌಲೌ ತು ಏಕಬಿಲ್ವಾರ್ಪಣಾದ್ಧಿ ತತ್
ಏಕಂ ವಾ ಭೋಜಯೇದ್ವಿಪ್ರಂ ಕೇದಾರೇ ಕೋಟಿತದ್ಭವೇತ್ ॥೧೬॥

ಭೋಜಯೇಚ್ಚೈವಮೇಕಂ ತು ತದನಂತಫಲಂ ಸ್ಮೃತಂ ।
ತಸ್ಯ ಕೇದಾರನಾಥಸ್ಯ ಕುಂಡಂ ಪರ್ವತಮೂರ್ಧನಿ ॥೧೭॥

ಖ್ಯಾತಂ ಕೇದಾರತೀರ್ಥಂ ತದುತ್ಫುಲ್ಲಕಮಲೋಜ್ಜ್ವಲಂ ।
ತತ್ಕುಂಡಪೂತ ಪಾನೀಯೈಃ ಸ್ನಾತ್ವಾ ಸಂತರ್ಪಯೇತ್ಪಿತೄನ್ ॥೧೮॥

ಸಾಧ್ಯರು, ನಾಗರು, ಯಕ್ಷರು, ಕಿಂಪುರುಷರು ಅಲ್ಲಿ ಪತ್ನೀಸಮೇತರಾಗಿ ನೆರೆದು ಸದಾ ಕೇದಾರೇಶ್ವರನನ್ನು ಸೇವಿಸುತ್ತಿರುವರು. ||೧೧-೧೨||

ಬ್ರಹ್ಮ, ವಿಷ್ಣು ಮೊದಲಾದ ದೇವಶ್ರೇಷ್ಠರೂ ಆಗಾಗ ಬಂದು ಕೇದಾರೇಶ್ವರನನ್ನು ಆರಾಧಿಸಿ ಹೋಗುವರು. ಯಾರು ಶಿವರಾತ್ರಿಯಲ್ಲಿ ಅಥವಾ ಕೃಷ್ಣಚತುರ್ದಶೀ ತಿಥಿಯಲ್ಲಿ ಹಗಲುಪವಾಸಮಾಡಿ ರಾತ್ರಿ ಶಿವಲಿಂಗಾರ್ಚನೆಯನ್ನು ಬಿಲ್ವಪತ್ರೆಗಳಿಂದ ನೆರವೇರಿಸುವರೋ ಅವರಿಗೆ ಕೋಟಿಲಿಂಗಾರ್ಚನೆಯ ಫಲವು ದೊರಕುವುದು. ||೧೩-೧೪-೧೫||

ಕೇದಾರಕ್ಷೇತ್ರದಲ್ಲಿರುವ ಶಿವಲಿಂಗದ ಮೇಲೆ ಒಂದು ಬಿಲ್ವದಳಾರ್ಚನೆಯನ್ನಾಗಲಿ, ಒಬ್ಬ ಈಶ್ವರ ಭಕ್ತನ ಭೋಜನವನ್ನಾಗಲಿ ನೆರವೇರಿಸಿದರೆ, ಕೋಟಿ ಸಂಖ್ಯೆಯಲ್ಲಿ ನಡೆಸಿದಷ್ಟು ಸುಕೃತವು ಲಭಿಸುವುದು. ಕೇದಾರಕ್ಷೇತ್ರದ ಮೇಲ್ಭಾಗದಲ್ಲಿ ಅರಳಿದ ಕಮಲಗಳಿಂದಲೂ ಶುದ್ಧವಾದ ಪಾನೀಯದಿಂದಲೂ ಮನೋಹರವಾಗಿರುವ ಕೇದಾರತೀರ್ಥವೆಂಬ ಕೊಳವೊಂದಿರುವುದು. ಅಲ್ಲಿ ಸ್ನಾನಮಾಡಿ ಪಿತೃತರ್ಪಣ ಮಾಡುವುದರಿಂದ ಅತಿಶಯವಾದ ಸುಕೃತವು ದೊರೆಯುವುದು. ||೧೬-೧೭-೧೮||

ಪಿತರಸ್ತೃಪ್ತಿಮಾಯಾಂತಿ ದ್ವಾದಶಾಬ್ದಂ ಸುರೇಶ್ವರಿ
ಪುರಾಂಧಕಾಸುರಂ ಹತ್ವಾ ತಚ್ಛೂಲಾಗ್ರೇಣ ಶಂಕರಿ ॥೧೯॥

ತ್ವತ್ಪಿತುಃ ಶಿಖರೇ ಪುಣ್ಯೇ ತ್ವಯಾ ತತ್ಖಾನಿತಂ ಸರಃ ।
ತಸ್ಮಿನ್ ಸರಸಿ ವಿಸ್ತೀರ್ಣೇ ತತ್ತಟೇ ತ್ವತ್ತಪೋವನಂ ॥೨೦॥

ಮತ್ಪ್ರೀತಯೇ ತ್ವಯಾ ದೇವಿ ಚೀರ್ಣಾ ತತ್ರ ತಪಃ ಕ್ರಿಯಾ ।
ತತ್ತೀರೇ ಸ್ಥಾಪಿತಂ ಲಿಂಗಂ ತ್ವಯಾ ಗೌರೀಶ್ವರಾಭಿದಂ ॥೨೧॥

ತಲ್ಲಿಂಗದರ್ಶನಾದೇವ ಮಮ ಲೋಕೇ ಮಹೀಯತೇ ।
ವಸಿಷ್ಠಾದಿಮೃಕಂಡ್ವಾದ್ಯಾ ಭರದ್ವಾಜಪರಾಶರಾಃ ॥೨೨॥

ದೂರ್ವಾಸಗೌತಮಾದ್ಯಾಶ್ಚ ಭೃಗುಕುಂಭೋದ್ಭವಾದಯಃ ।
ದಧೀಚ್ಯಂಗಿರಸೋಽಚಥ್ಯಾಃ ಜಾಮದಗ್ನ್ಯೋ ಮಹಾಬಲಃ ॥೨೩॥

ಕ್ಷತ್ರಮುತ್ಸಾದ್ಯ ವಿಪ್ರೇಂದ್ರೈಃ ಪ್ರಾರ್ಥಿತಃ ಶಮಮಾಗತಃ ।
ಹಿಮವನ್ಮೂರ್ಧ್ನಿ ಸರಸಸ್ತೀರೇ ತಪ್ಯಂತಿ ತಾಪಸಾಃ ॥೨೪॥

---

ಅಲ್ಲದೆ ಅವರ ಪಿತೃಗಳು ದ್ವಾದಶವರ್ಷಪರ್ಯಂತ ತೃಪ್ತಿಪಡೆಯುವರು. ಎಲೌ ಶಂಕರಿಯೇ, ಹಿಂದೆ ನಾನು ಅಂಧಕಾಸುರನನ್ನು ಶೂಲಾಗ್ರದಿಂದ ಅಲ್ಲಿಯೇ ತಿವಿದು ಕೊಂದೆನು. ಅದೇ ತ್ರಿಶೂಲದಿಂದ ನೀನು ಓಮಗಿಂದುಷ್ಟೆ ಒಂದು ಸರೋವರವನ್ನು ನಿರ್ಮಿಸಿದೆ. ಮತ್ತು ಅದರ ದಡದಲ್ಲಿಯೇ ಸುಂದರವಾದ ತಪೋವನವೂ ನಿನ್ನಿಂದ ನಿರ್ಮಿತವಾಯಿತು. ॥೧೯-೨೦॥

ಎಲೌ ದೇವಿಯೇ. ಹಿಂದೆ ನೀನು ನನ್ನನ್ನು ತೃಪ್ತಿಪಡಿಸಲೋಸುಗ ಘೋರವಾದ ತಪಸ್ಸನ್ನು ಚರಿಸಿದೆ. ಅದಕ್ಕಾಗಿ ಗೌರೀಶ್ವರನೆಂಬ ಹೆಸರಿನ ಶಿವಲಿಂಗವೊಂದನ್ನು ಅಲ್ಲಿ ಸ್ಥಾಪಿಸಿದೆನು. ಅದರ ದರ್ಶನದಿಂದಲೇ ಭಕ್ತನು ಸಕಲ ಇಷ್ಟಾರ್ಥಗಳನ್ನು ಪಡೆಯುವನು. ವಸಿಷ್ಠ, ಮೃಕಂಡು, ಭರದ್ವಾಜ, ಪರಾಶರ ಮೊದಲಾದವರೂ, ॥೨೧-೨೨॥

ದೂರ್ವಾಸ, ಗೌತಮ, ಭೃಗು, ಅಗಸ್ತ್ಯ, ದಧೀಚಿ, ಅಂಗಿರಸ, ಉಚಥ್ಯ ಮೊದಲಾದ ಮಹರ್ಷಿಗಳೂ ಈ ಲಿಂಗಸೇವೆಯಿಂದ ಧನ್ಯರಾಗಿರುವರು. ಧೀರನಾದ ಪರಶುರಾಮನೂ ಸಹ ಕ್ಷತ್ರಿಯರನ್ನು ಕೊಂದ ಕೋಪಪರಿಹಾರಕ್ಕಾಗಿ ಋಷಿಜನ

ಕೇದಾರನಾಥಂ ದೃಷ್ಟ್ವಾ ಮಾಂ ಪೂಜ್ಯಬಿಲ್ವೈಃ ಸುಕೋಮಲೈಃ ।
ಉಪಹಾರೈಶ್ಚ ವಿವಿಧೈರಪಾರೈಃ ಫಲಮಂಡಲೈಃ ॥೨೫॥

ಸದ್ಗೌರೀ ಸರಸಿ ಸ್ನಾತ್ವಾ ಪುಣ್ಯೇ ಪಾಪೌಘಹಾರಿಣಿ ।
ವೃತ್ರಂ ಹತ್ವಾಥ ಜಂಭಾರಿರ್ವಜ್ರೇಣಾಸುರಸತ್ತಮಂ ॥೨೬॥

ಛದ್ಮನಾ ಸ್ವಚ್ಛಸರಸಿ ಗೌರ್ಯಾಖ್ಯೇ ಪಾಪನುತ್ತಯೇ ।
ಸ್ನಾತ್ವಾ ಸುರಗಣೈಃ ಸಾರ್ಧಂ ವೃತ್ರಹಾ ಶುದ್ಧಿಮಾಗತಃ ॥೨೭॥

ಕೇದಾರನಾಥಂ ದೃಷ್ಟ್ವಾ ಮಾಂ ಶಕ್ರಃ ಸುರಗಣೈಃ ಸಹ ।
ತುಷ್ಟಾವ ಮಾಂ ತದಾ ಭಕ್ತ್ಯಾ ತತ್ಸ್ತುತಿಂ ಶೃಣು ಶಾಂಭವಿ ॥೨೮॥

॥ ಇಂದ್ರ ಉವಾಚ ॥

ಶಂಭೋ ವಿಶ್ವೇಶ ಭರ್ಗ ತ್ರಿನಯನ ಭಗವನ್ ಕಾಲಾಕಾಲಾಂಧಕಾರೇ
ಪುರಹರದುರಿತಾರೇ ಘೋರರೂಪಾಂತಕಾರೇ ।

ರಿಂದ ಪ್ರಾರ್ಥಿತನಾಗಿ ಇಲ್ಲಿ ಶಾಂತಿಯನ್ನೈದಿದನು. ಅದೇರೀತಿ ಅನೇಕ ಮಹರ್ಷಿಗಳೂ ಈ ಹಿಮಾಲಯದ ಸರೋವರದ ದಡದಲ್ಲಿ ತಪಸ್ಸುಮಾಡುತ್ತಿರುವರು. ॥೨೩-೨೪॥

ಕೇದಾರನಾಥನೆಂದು ಪ್ರಸಿದ್ಧಿಪಡೆದಿರುವ ನನ್ನನ್ನು ಇಂದ್ರನು, ಕೋಮಲವಾದ ಬಿಲ್ವದಳಗಳಿಂದಲೂ, ನಾನಾವಿಧವಾದ ಉಪಹಾರದ್ರವ್ಯಗಳಿಂದಲೂ ಪೂಜಿಸಿ, ಗೌರೀಸರೋವರದಲ್ಲಿ ಸ್ನಾನಮಾಡಿ ತನ್ನ ವಜ್ರಾಯುಧದಿಂದ ವೃತ್ರನೆಂಬ ರಾಕ್ಷಸನನ್ನು ಕೊಂದು ಯಶಸ್ಸನ್ನು ಪಡೆದನು. ॥೨೫-೨೬॥

ಹಾಗೆ ವೃತ್ರಾಸುರನನ್ನು ಕೊಂದ ಪಾಪಪರಿಹಾರಕ್ಕಾಗಿ ಗೌರೀಸರೋವರದಲ್ಲಿ ಸ್ನಾನಮಾಡಿ ಇಂದ್ರನು ಪರಿಶುದ್ಧನೆನಿಸಿದನು. ಆಗಲೇ ಇಂದ್ರನು ಕೇದಾರೇಶ್ವರನನ್ನು ನೋಡಿ ಸಂತೋಷಪಟ್ಟು ಭಕ್ತಿಪರವಶತೆಯಿಂದ ಈರೀತಿ ಸ್ತೋತ್ರಮಾಡಿದನು. ದೇವಿಯೇ, ಅದನ್ನು ಕೇಳು ನಿನಗೆ ವಿವರಿಸಿ ಹೇಳುವೆನು.॥೨೭-೨೮॥

"ಶಂಕರನೇ, ಲೋಕದೊಡೆಯನೇ, ತ್ರಿನಯನನೇ, ಕಾಲಕಾಲನೆನಸಿದವನೇ ನನ್ನನ್ನು ಕಾಪಾಡು. ಅಂಧಕಾಸುರ, ತ್ರಿಪುರಾಸುರ, ಯಮ ಮುಂತಾದವರ ಗರ್ವ

ಶಮಯ ಶಮಯ ದುಃಖಂ ದೈತ್ಯವರ್ಗಾರಿಯುದ್ಧ
ಜ್ವರಹರಭಯಹಾರಿನ್ ಪಾಹಿ ಕೇದಾರನಾಥ ॥೨೯॥

ಶಕ್ರಃ ಕೇದಾರನಾಥಂ ಮಾಮೇವಂ ಸ್ತುತ್ವಾ ಪ್ರಣಮ್ಯ ಚ ।
ವಿಹಾಯ ಪಾಪಂ ತದ್ದೇವಿ ತ್ರಿವಿಷ್ಟಪಮಗಾತ್ತದಾ ॥೩೦॥

ವರುಣೋಽಪಿ ಮಹಾದೇವಿ ವಿಪ್ರಭಾರ್ಯಾಂ ಪುರಾಹರತ್ ।
ಉಚಥ್ಯಸ್ಯ ಬಲಾತ್ಪಾಶೀ ಕಾಮಬಾಣಪ್ರಪೀಡಿತಃ ॥೩೦॥

ಜಲೋದರಮಹಾರೋಗಗ್ರಾಹಗ್ರಸ್ತೋಽಭವಚ್ಛಿವೇ ।
ಪ್ರಣಮ್ಯ ಮಾಂ ಮಹಾದೇವಿ ಕೇದಾರೇಶಂ ಪ್ರಪೂಜ್ಯ ಚ ॥೩೨॥

ವಿಮುಕ್ತಸ್ತೇನ ಪಾಪೇನ ಮಾಂ ಸ್ತುತ್ವೈವ ಸ ಭಕ್ತಿತಃ ॥೩೩॥

॥ ವರುಣ ಉವಾಚ ॥

ಮಾರಮಾರಕರ ವೀರಸುಮಾದ್ಯಸ್ರಗ್ಧರಾಮರವರಾದಿ ಸುಪೂಜ್ಯ ।
ಸಂಸ್ಥಿತಾಮರಗಣೇಂದ್ರಭೂಧರೇ ಪಾಹಿ ಮಾಮಖಿಲಪಾರದವೀರ್ಯ ॥೩೪॥

ವನ್ನು ಧ್ವಂಸಮಾಡಿದ ಸ್ವಾಮಿಯೇ, ಅನೇಕ ದೈತ್ಯರನ್ನು ನಾಶಮಾಡಿದ ನೀನು ಪಾಪಜ್ವರವನ್ನೆಲ್ಲಾ ಶಾಂತಿಗೊಳಿಸು. ಕೇದಾರೇಶ್ವರನೇ, ನನ್ನನ್ನು ರಕ್ಷಿಸು." ॥೨೯॥

ಎಂದು ಸ್ತುತಿಸಿ ಇಂದ್ರನು ಕೇದಾರೇಶ್ವರನನ್ನು ದರ್ಶನಮಾಡಿ ನಮಸ್ಕರಿಸಿ ಪಾಪಮುಕ್ತನಾಗಿ ಸ್ವರ್ಗವನ್ನು ಕುರಿತು ಪ್ರಯಾಣಮಾಡಿದನು. ॥೩೦॥

ಒಂದುಸಾರಿ ವರುಣನು ಕಾಮಪೀಡಿತನಾಗಿ ಉಚಥ್ಯನೆಂಬ ಬ್ರಾಹ್ಮಣಪತ್ನಿಯನ್ನು ಅಪಹರಿಸಿದುದರ ಫಲವಾಗಿ ಜಲೋದರರೋಗವನ್ನು ಹೊಂದಿದನು. ಆಗ ಆತನು ಈ ಕೇದಾರೇಶ್ವರನ ದರ್ಶನಮಾಡಿ ಮಹಾ ಪಾಪದಿಂದ ಮುಕ್ತನಾಗಿ ಈರೀತಿ ಸ್ತೋತ್ರಮಾಡಿದನು. ॥೩೧-೩೨-೩೩॥

"ಮನ್ಮಥನಾಶಕನಾದ ಮಹೇಶ್ವರನೇ, ನಿನ್ನನ್ನು ಸಕಲ ದೇವತೆಗಳೂ ದೇವಸುಮಗಳಿಂದ ಸರ್ವದಾ ಪೂಜಿಸುತ್ತಿರುವರು. ದೇವತೆಗಳಿಂದ ಆವೃತವಾಗಿರುವ ಕೈಲಾಸಪರ್ವತದಲ್ಲಿ ಸುಖವಾಗಿ ಮಂಡಿಸಿರುವ ಮಹಾದೇವನೇ, ನೀನು ಸಕಲರಿಗೂ ಅನುಗ್ರಹವನ್ನೀಯುತ್ತಾ ನನ್ನನ್ನು ಕಾಪಾಡು." ॥೩೪॥

ಸ್ತುತ್ವೈವಂ ಪಾಶಹಸ್ತೋ ಮಾಂ ನತ್ವಾ ಸಂಪೂಜ್ಯ ಮಾಂ ಶಿವೇ ।
ಯಯೌ ಸ್ಥಾನಂ ಸ ನೀರೋಗೋ ಮುಕ್ತೋ ಮೇಘ ಇವೋಡುರಾಟ್ ॥೩೫॥

ಮಾಂಡವ್ಯೇನಾಪಿ ಸುಭಗೋ ಶಪ್ತಶ್ಚಂಡಾಂಶುನಂದನಃ ।
ಶಾಪಮುಕ್ತ್ಯೈ ಸ ಕೇದಾರಂ ಮಾಂ ಪ್ರಣಮ್ಯಾಥ ಶೂಲಿನಃ ॥೩೬॥

ಬಿಲ್ವಪತ್ರೈಸ್ಸಮಭ್ಯರ್ಚ್ಯ ಸ್ನಾತ್ವಾ ಗೌರೀಸರಸ್ತಟೇ ।
ಪುಣ್ಯಾಗ್ನಿ ಸಪ್ತಕೈರ್ಮಂತ್ರೈಸ್ಸಮುದ್ಧೂಲ್ಯ ಸ್ವಕಾಂ ತನುಂ ॥೩೭॥

ತುಷ್ಟಾವ ಮಾಂ ವಿಶುದ್ಧಾತ್ಮಾ ಕೇದಾರೇಶಂ ಮಹೇಶ್ವರಂ ॥೩೮॥

॥ ಯಮ ಉವಾಚ ॥

ತ್ವಾಂ ತಸ್ಥುಷಸ್ಪತಿಮಹೋ ಭಗವಂತಂ
ಬಭ್ರುಶಂ ಚ ಹರಿಕೇಶಮುದಾರಂ ।
ಮೃಗಂ ನ ಭೀಮಮುಪಹರ್ತುಮುಗ್ರಂ
ಪ್ರಸಾದ್ಯ ಪಾಪೈರ್ನ ಬಿಭೇಮಿ ಶಂಭೋ ॥೩೯॥

---

ಎಂದು ವರುಣನು ನನ್ನನ್ನು ಪ್ರಾರ್ಥಿಸಿ, ಆದರಿಂದ ತನಗೆ ಒದಗಿದ್ದ ಪಾಪವನ್ನೆಲ್ಲಾ ಕಳೆದುಕೊಂಡು, ಮೇಘಾವರಣದಿಂದ ಮುಕ್ತನಾದ ಚಂದ್ರನಂತೆ ಹೊಳೆಯುತ್ತಾ ಸ್ವಸ್ಥಾನವನ್ನು ಕುರಿತು ತೆರಳಿದನು. ಅದೇ ರೀತಿ ಸೂರ್ಯಪುತ್ರನಾದ ಯಮನೂ ಮಾಂಡವ್ಯನಿಂದ ಶಾಪಹೊಂದಿ ತತ್ಪರಿಹಾರಾರ್ಥವಾಗಿ ಕೇದಾರೇಶ್ವರನೆನಿಸಿದ ನನ್ನನ್ನು ಪೂಜಿಸಿ ಪ್ರಾರ್ಥಿಸಿದನು. ॥೩೫-೩೬॥

ಅಲ್ಲದೆ ಗೌರೀಸರಸ್ಸಿನಲ್ಲಿ ಸ್ನಾನಮಾಡಿ, ಅಲ್ಲಿಯೇ ಇದ್ದ ಕೇದಾರೇಶಸ್ವಾಮಿಯೆನಿಸಿದ ನನ್ನನ್ನು ಬಿಲ್ವಪತ್ರಾದಿಗಳಿಂದ ಅರ್ಚಿಸಿ, ಅಗ್ನಿ ದೇವತಾಕಗಳಾದ ಮಂತ್ರಗಳಿಂದ ಭಸ್ಮಧಾರಣೆಮಾಡಿಕೊಂಡು, ವಿನಯದಿಂದ ಹೀಗೆ ಪ್ರಾರ್ಥಿಸಿಕೊಂಡನು. ॥೩೭-೩೮॥

"ಸ್ಥಿರವಾದ ವಸ್ತುಗಳಿಗೆಲ್ಲಾ ಒಡೆಯನೆನಿಸಿದ ಮಹಾದೇವನೇ, ನೀನು ಉಕ್ಷವಾಹನನು. ಹಸುರು ಬಣ್ಣದ ಎಲೆಗಳಿಂದ ತುಂಬಿದ ವೃಕ್ಷದಂತೆ ಕಾಣುವ ಶಿವಲಿಂಗರೂಪಿಯು ನೀನು. ಭಕ್ತರಿಗೆ ಔದಾರ್ಯ ತೋರಿಸುವವನು ನೀನು. ಭಯಂಕರವಾದ ಸಿಂಹವು ಉಗ್ರಪ್ರಾಣಿಗಳ ಮೇಲೆ ಬೀಳುವಂತೆ ನೀನು ಪ್ರಲಯಕಾಲದಲ್ಲಿ

ಏವಂ ಮಾಮಂಬಿಕೇ ಸ್ತುತ್ವಾ ಮುಕ್ತಪಾಪಸ್ಸ ಸೂರ್ಯಜಃ ।
ಜಗಾಮ ದಕ್ಷಿಣಾಮಾಶಾಂ ಪಿತೃಭಿಃ ಪರಿಪಾಲಿತಾಂ ॥೪೦॥

ಕುಬೇರೋ ಯಕ್ಷರಾಡ್ದೇವಿ ಪೌಲಸ್ತ್ಯೇನಾಥ ನಿರ್ಜಿತಃ ।
ಜಗಾಮ ಪರಮಾಮಾರ್ತಿಂ ಮಾಂ ಕೇದಾರಂ ಪ್ರಣಮ್ಯ ಚ ॥೪೧॥

ಸಂಸ್ನಾಪ್ಯ ಗೌರೀಸರಸಿ ಭಸ್ಮರುದ್ರಾಕ್ಷಭೂಷಣಃ ।
ತತ್ಕುಂಡಶೋಧಿತೈರ್ನೀರೈರ್ಬಿಲ್ವಪತ್ರೈಃ ಸಮರ್ಚ್ಯ ಚ ॥೪೨॥

ಯಕ್ಷರಾಣ್ಮಾಂ ವಿರೂಪಾಕ್ಷಮಸ್ತೌಷೀಜ್ಜಗದಂಬಿಕೇ ॥೪೩॥

॥ ಕುಬೇರ ಉವಾಚ ॥

ಮೀಢುಷ್ಟಮಃ ಶಿವತಮಸ್ತ್ವಮಸಿ ಪ್ರಸಿದ್ಧಃ
ಸಿದ್ಧಾಂತಸಾರಮಹಿಮನ್ ಮೃಡಯಾಶು ಶಂಭೋ ।

ಜಗತ್ತನ್ನು ಧ್ವಂಸಮಾಡುವೆ. ಆದರೆ ಭಕ್ತರ ವಿಷಯದಲ್ಲಿ ಮಾತ್ರ ನೀನು ಸದಾ ಪ್ರಸನ್ನನು. ನಿನ್ನ ಸೇವೆಮಾಡಿ ಈಗ ನಾನು ಯಾವ ಪಾಪಸಂಕೋಲೆಗೂ ಹೆದರುವನಲ್ಲ. ॥೩೯॥

ಹೀಗೆ ಯಮನು ನನ್ನನ್ನು ಪ್ರಾರ್ಥಿಸಿ, ಶಾಪಮುಕ್ತನಾಗಿ ಪಿತೃದೇವತೆಗಳಿಂದ ಸಮಾಶ್ರಿತವಾದ ದಕ್ಷಿಣ ದಿಕ್ಕನ್ನು ಕುರಿತು ಪ್ರಯಾಣಮಾಡಿದನು. ಹಾಗೆಯೇ ಕುಬೇರನೂ ಸಹ ರಾವಣನಿಂದ ಪರಾಜಿತನಾಗಿ, ಅತಿ ದುಃಖಗೊಂಡು ಇದೇ ಕೇದಾರೇಶಲಿಂಗದ ಸಮೀಪಕ್ಕೆ ಬಂದು ಭಯಭಕ್ತಿಯಿಂದ ನಮಸ್ಕರಿಸಿದನು. ॥೪೦-೪೧॥

ಮತ್ತು ಕುಬೇರನೂ ಸಹ ಗೌರೀಸರೋವರದಲ್ಲಿ ಸ್ನಾನಮಾಡಿ ಭಸ್ಮ ರುದ್ರಾಕ್ಷಿಗಳಿಂದ ಭೂಷಿತನಾಗಿ, ಅದೇ ಗೌರೀಕುಂಡದ ಜಲದಿಂದ ಅಭಿಷೇಕಮಾಡಿ ಬಿಲ್ವಪತ್ರಾದಿಗಳಿಂದ ಅರ್ಚಿಸಿ ವಿರೂಪಾಕ್ಷನೆನಿಸಿದ ನನ್ನನ್ನು ಈ ರೀತಿ ಸ್ತೋತ್ರ ಮಾಡಿದನು. ॥೪೨-೪೩॥

"ಮಹಾದೇವನೇ, ನೀನು ಕಿರಣಾಂತರ್ಗತನಾಗಿ ಸರ್ವವ್ಯಾಪಿಯೆನಿಸಿದವನು. ಮಂಗಳಪ್ರದನು. ಸರ್ವದರ್ಶನಗಳ ಸಿದ್ಧಾಂತವಾಕ್ಯದಿಂದಲೂ ನೀನು

ಸಂಸಾರಘೋರವಿಪಿನೋದ್ಭವದಾವದಗ್ಧಂ
ತ್ವನ್ಮೂರ್ಧಚಂದ್ರಕಿರಣೈಃ ಮಮ ಶೀತಯಾಂಗಂ ॥೪೪॥

ಇತ್ಥಂ ಸ ಯಕ್ಷರಾಡ್ದೇವಿ ಸ್ತುತ್ವಾ ಮಾಮುಗಜಾಪತಿಂ ।
ಧನಾಧಿಪತ್ಯಂ ಸಂಪ್ರಾಪ ಉತ್ತರಾಶಾಪತಿಸ್ಸದಾ ॥೪೫॥

ಏವಂ ದಿಶಾನಾಮಧಿಪಾ ವಿದಿಶಾಂ ಪತಯಸ್ತಥಾ ।
ಅಭೀಷ್ಟಂ ಪ್ರಾಪುರತ್ಯರ್ಥಂ ಮಾಮಾರಾಧ್ಯೈವ ಭಕ್ತಿತಃ ॥೪೬॥

ಅಗ್ನಿಶ್ಚ ನಿಋತಿರ್ವಾಯುರೀಶಾನೋ ಮದ್ಗಣೋತ್ತಮಃ ।
ಮತ್ಸಾರೂಪ್ಯಂ ಮುದಾ ಪ್ರಾಪ ಮಾಂ ಕೇದಾರಂ ಸಮರ್ಚಯನ್ ॥೪೭॥

ತುಷ್ಟುವುರ್ವಿದಿಶಾಂ ನಾಥಾಃ ವಿಪ್ರಶಾಪಪ್ರಪೀಡಿತಾಃ ।
ಅಗ್ನಿಶ್ಚ ಸರ್ವಭಕ್ಷತ್ವಂ ನಿಋತಿಃ ಪಾಪಕಾರಿತಾಂ ॥೪೮॥

ವಾಯುರಾಯಾಸರಾಹಿತ್ಯಮೀಶಾನೋ ಮತ್ಸ್ವರೂಪತಾಂ ॥೪೯॥

ಮಹಿಮೆಯನ್ನು ಪಡೆದವನು. ಸಂಸಾರವೆಂಬ ಘೋರದಾವಾಗ್ನಿಯಿಂದ ಬೆಂದಿರುವ ನನ್ನನ್ನು ನಿನ್ನ ಶಿರೋಭಾಗದಲ್ಲಿರುವ ಚಂದ್ರಕಿರಣಗಳಿಂದ ತಂಪುಗೊಳಿಸು." ॥೪೪॥

ಹೀಗೆ ಕುಬೇರನು ಪಾರ್ವತೀಪತಿಯಾದ ನನ್ನನ್ನು ಬಹುವಾಗಿ ಸ್ತುತಿಸಿ, ನನ್ನ ಅನುಗ್ರಹಬಲದಿಂದ ಮತ್ತೆ ಉತ್ತರದಿಕ್ಪಾಲಕತ್ವವನ್ನೂ ಧನಾಧಿಪತ್ಯವನ್ನೂ ಮತ್ತೆ ಸಂಪಾದಿಸಿಕೊಂಡನು. ಅದೇ ರೀತಿ ಇತರ ದಿಕ್ಪಾಲಕರೂ, ವಿದಿಕ್ಪಾಲಕರೂ ನನ್ನನ್ನು ಆರಾಧಿಸಿ ಅವರವರ ಇಷ್ಟಾರ್ಥಗಳನ್ನೆಲ್ಲಾ ಸಂಪೂರ್ಣವಾಗಿ ಪಡೆದರು. ॥೪೫-೪೬॥

ಅಗ್ನಿ, ನಿಋತಿ, ವಾಯು, ಈಶಾನ ಮುಂತಾದವರೆಲ್ಲ ಕೇದಾರನಾಥನಾದ ನನ್ನನ್ನು ಅರ್ಚಿಸಿ, ತಮಗೆ ಬಂದಿದ್ದ ವಿಪ್ರಶಾಪಗಳನ್ನೆಲ್ಲಾ ಕಳೆದುಕೊಂಡರು. ಅಲ್ಲದೆ ಅಗ್ನಿಯು ಸರ್ವಭಕ್ಷಕನಾದುದೂ, ನಿಋತಿಯು ದುಷ್ಟಶಿಕ್ಷಕನಾದುದೂ, ವಾಯುವು ಆಯಾಸದಿಂದ ವಿರಹಿತನಾದುದೂ, ಈಶಾನನು ನನ್ನ ಸಾರೂಪ್ಯವನ್ನು ಪಡೆದುದೂ ಈ ಕೇದಾರನಾಥನ ಅನುಗ್ರಹದಿಂದಲೇ. ॥೪೭-೪೮-೪೯॥

॥ ಅಗ್ನಿವಾಯುಸಿದ್ಧಕೃತಯ ಬಾಬುಃ ॥

ಮಹಾದೇವೋ ದೇವಃ ಸಕಲಜಗದಾರಾಧ್ಯಚರಣೋ
ಜಗದ್ರಕ್ಷಾಶಿಕ್ಷಾಸ್ಥಿತಿಜನನಚಾತುರ್ಯಕರಣಃ ।
ಹರಿರ್ಬ್ರಹ್ಮಾಸ್ಕಂದೋ ಗಣಪತಿರುಮಾಶಕ್ರದಿತಿಜಾ
ಸ್ತ್ವಥರ್ವಾಣೇಷು ತ್ವಂ ಪ್ರಥಿತಯಶಸೋ ವೈ ತವ ನಮಃ ॥೫೦॥

ಏವಂ ಸ್ತುತ್ವಾಥ ತೇ ಸರ್ವೇ ವಿದಿಶಾಂ ಪತಯಸ್ತಥಾ ।
ಲೇಭಿರೇ ಪರಮಾಂ ಸಿದ್ಧಿಂ ಕೇದಾರೇಶ್ವರಪೂಜನಾತ್ ॥೫೧॥

ಮುನಯಶ್ಚಾಪಿ ದೇವೇಶಿ ವಿಶ್ವಾಮಿತ್ರೋಽತ್ರಿರಂಗಿರಾಃ ।
ತೇಪುಸ್ತಪೋ ಮಹಾಘೋರಂ ಜ್ವಲತ್ಪಂಚಾಗ್ನಿಮಧ್ಯಗಾಃ ॥೫೨॥

ಬ್ರಾಹ್ಮಣ್ಯಪ್ರಾಪ್ತಯೇ ದೇವಿ ವಿಶ್ವಾಮಿತ್ರೇಣ ಸಂಸ್ತುತಃ ॥೫೩॥

ಗಾಯತ್ರ್ಯಾ ಪ್ರತಿಪಾದಿತೋಽಸಿ ಭಗವನ್ ಸಂಸಾರಸಂಭರ್ಜಕೋ
ಭರ್ಗಸ್ತ್ವಂ ಸವಿತುರ್ವರೇಣ್ಯಮಹಸಸ್ತ್ವಾಂ ಸರ್ವದಾ ಧೀಮಹಿ ।

---

ಮಹಾದೇವನೆನಿಸಿದ ಪರಶಿವನೇ, ನಿನ್ನ ಚರಣಕಮಲವನ್ನು ಸಕಲ ಜಗತ್ತೇ ಆರಾಧಿಸುತ್ತಿರುವುದು. ನಿನ್ನ ಚರಣವೇ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳನ್ನು ನಡೆಸುವ ಚಾತುರ್ಯವುಳ್ಳದ್ದು. ಹರಿ, ಬ್ರಹ್ಮ, ಸ್ಕಂದ, ಗಣಪತಿ, ಪಾರ್ವತಿ, ಇಂದ್ರ, ದೈತ್ಯರು ಇವರೇ ಮೊದಲಾದವರು ನಿನ್ನನ್ನು ಆರಾಧಿಸಿ ಸಂಪೂರ್ಣವಾಗಿ ಕೀರ್ತಿಯನ್ನು ಪಡೆದು ಸುಖಿಗಳಾಗಿರುವರು. (೫೦)

ಹೀಗೆ ಆ ದಿಕ್ಪತಿಗಳೆಲ್ಲರೂ ಕೇದಾರೇಶ್ವರನನ್ನು ಅರ್ಚಿಸಿ ಸ್ವಾಭೀಷ್ಟಗಳನ್ನೆಲ್ಲಾ ಪಡೆದರು. ಅದೇ ರೀತಿ ವಿಶ್ವಾಮಿತ್ರ, ಅತ್ರಿ, ಅಂಗಿರಸ್ಸು ಮುಂತಾದ ಮಹರ್ಷಿಗಳು ಪಂಚಾಗ್ನಿಮಧ್ಯದಲ್ಲಿ ನಿಂತು ನನ್ನನ್ನು ಕುರಿತು ಘೋರವಾಗಿ ತಪಸ್ಸನ್ನಾಚರಿಸಿದರು. (೫೧-೫೨)

ಅವರಲ್ಲಿ ವಿಶ್ವಾಮಿತ್ರನು ಬ್ರಾಹ್ಮಣ್ಯವನ್ನು ಸಂಪಾದಿಸಬೇಕೆಂದು ಕೇದಾರನಾಥನನ್ನು ಪೂಜಿಸಿ ಹೀಗೆ ಪ್ರಾರ್ಥನೆಮಾಡಿದನು. "ಪರಮೇಶ್ವರನೇ, ನೀನು ಗಾಯತ್ರೀಮಂತ್ರದ ಅಭಿಮಾನಿದೇವತೆಯು. ಸಂಸಾರದುಃಖವನ್ನು ನಾಶಮಾಡುವವನಾದ್ದರಿಂದಲೇ ನಿನಗೆ ಭರ್ಗನೆಂಬ ನಾಮಾಂತರವಿರುವುದು. ಸವಿತೃಮಂಡಲ

ತೇಜಃ ಸ್ವಾತ್ಮಗತಂ ದಿನೋದಯವಿಧೌ ವಿಪ್ರಾದಿಭಿರ್ಧಾರ್ಯತೇ
ಬುದ್ಧಿಂ ನಿಶ್ಚಯಕಾರಿಣೀಂ ಚ ಭಗವನ್ ಸಂಚೋದಯಸ್ಯಾಂತರಃ ॥೫೪॥

ಅತ್ರಿಃ ಪುತ್ರವಿಹೀನಶ್ಚ ರಿರಿಚಾನೋನ್ವತಪ್ಯತ
ಔರ್ವಾಯ ಪುತ್ರಾನ್ ದತ್ವಾ ಸ್ವಾನ್ ಪುತ್ರಾನಾಪ್ತುಂ ತದಾದ್ರಿಜೇ ।
ಇಷ್ಟವಾಂಶ್ಚತೂರಾತ್ರೇಣಾಸ್ಮಿನ್ ಭೂಧರಸತ್ತಮೇ
ಮಾಂ ಸ್ತುತ್ವಾ ಚಾಂಬಿಕೇ ಪುತ್ರಾಂಶ್ಚತುರಃ ಪ್ರಾಪ್ತವಾಂಸ್ತದಾ ॥೫೬॥

॥ ಅತ್ರಿರುವಾಚ ॥

ರಾಜಾನಂ ತ್ವಾಮಧ್ವರೇಶಂ ಚ ರುದ್ರಂ
ಹೋತಾರಂ ತ್ವಾ ಸತ್ಯಯಜಂ ಚ ರೋದಸ್ಯೋಃ ।
ವಿದ್ಯುತ್ಪಾತಸಮಾದ (ನ) ಚಿತ್ತಮುರಣಾತ್ಪೂರ್ವಂ
ಶಿವಂ ಶಾಶ್ವತಂ ॥೫೭॥

---

ಮಧ್ಯವರ್ತಿಯೆನಿಸಿ ತೇಜೋರೂಪದಿಂದ ನೀನು ಶೋಭಿಸುತ್ತಿರುವೆ. ಸೂರ್ಯರೂಪದಿಂದಿದ್ದು, ಪ್ರತಿದಿನವೂ ಪ್ರಾತಃಕಾಲದಲ್ಲಿ ವಿಪ್ರರೇ ಮೊದಲಾದವರಿಂದ ನಮಸ್ಕರಿಸಲ್ಪಡುತ್ತಿರುವೆ. ಅಲ್ಲದೆ ಸರ್ವರ ಹೃದಯಾಂತರ್ಗತನಾಗಿದ್ದು ಬುದ್ಧಿಪ್ರಚೋದಕನೆನಿಸಿ ದೇವದೇವನೆನಿಸಿರುವೆ. ಮಹಾದೇವನೇ ನನ್ನನ್ನು ಕಾಪಾಡು. ॥೫೩-೫೪॥

ಅತ್ರಿಋಷಿಯೆಂಬ ಬ್ರಹ್ಮಮಾನಸಪುತ್ರನೊಬ್ಬನು ಅನೇಕ ಕಾಲ ಮಕ್ಕಳಿಲ್ಲದೆ ತಪಸ್ಸಿನಿಂದ ಕೆಲವು ಮಕ್ಕಳನ್ನು ಪಡೆದು ಔರ್ವನೆಂಬವನಿಗೆ ಅವರನ್ನು ಸಮರ್ಪಿಸಿ ಮತ್ತೆ ಚತೂರಾತ್ರವೆಂಬ ಯಾಗವನ್ನು ಇದೇ ಸ್ಥಳದಲ್ಲಿ ನೆರವೇರಿಸಿ, ಮತ್ತೆ ಲೋಕಪ್ರಸಿದ್ಧರಾದ ನಾಲ್ವರು ಮಕ್ಕಳನ್ನು ಪಡೆದನು. (ಮಹಾಭಾರತದಲ್ಲಿ ಅತ್ರಿಋಷಿಗೆ ಅನಸೂಯೆಯಲ್ಲಿ ದತ್ತಾತ್ರೇಯ, ದುರ್ವಾಸಮುನಿ, ಚಂದ್ರ ಎಂಬ ಮೂವರೇ ಮಕ್ಕಳಿದ್ದರೆಂದು ಉಕ್ತವಾಗಿದೆ. ಇಲ್ಲಿ ನಾಲ್ವರೆಂದು ಹೇಳಲಾಗಿದೆ.) ॥೫೬॥

ಆಗ ಅತ್ರಿಮಹರ್ಷಿಯು ಈ ರೀತಿ ಪ್ರಾರ್ಥನೆಮಾಡಿದನು " ಮಹಾದೇವನೇ, ನೀನು ಸಮಸ್ತ ಲೋಕವನ್ನೂ ರಂಜಿಸುವವನು. ಸಕಲ ಯಾಗಾಭಿಮಾನಿ ದೇವತೆಯೂ, ಭಯಂಕರನೂ, ಹೋಮಕರ್ತನು, ಸತ್ಯಸ್ವರೂಪಿಯು, ಭೂಮ್ಯಂತರಿಕ್ಷಗಳಲ್ಲೆಲ್ಲಾ ವ್ಯಾಪಿಸಿ ನಿಂತಿರುವವನು, ಮಿಂಚಿನ ಹೊಳಪಿನಂತೆ ಚಂಚಲವಾದ ಮನಸ್ಸಿಗೆ ಶಾಶ್ವತವಾದ ಸ್ಥಾನವನ್ನು ಅನುಗ್ರಹಿಸುವನೂ ನೀನೇ ಆಗಿರುವೆ. ॥೫೭॥

ಪ್ರಾಪ್ತೋಽಸ್ಮಿ ತ್ವಹಮೇಕಮೇವ ಶರಣಂ
ಹಿರಣ್ಮರೂಪಮವಸಂ ಕೃಣುಧ್ವಂ ।
ಮಂತ್ರಾರ್ಥವಾದವಿಧಿಷು ಶ್ರುತಿಷು ಪ್ರವೃತ್ತಾ
ಸಾಸುಕ್ರಿಯಾಮುಖಶತೋತ್ಥಫಲೈರ್ವಿಚಿತ್ರೈಃ ॥೫೮॥

ಪೋಷಂ ರಯಿಃ ಸ್ವರ್ಗಮಥ ಪ್ರಜಾಂ
ಪಶೂನ್ ಪುಷ್ಟಿಂ ಪ್ರತಿಷ್ಠಾಂ ಚ ತಥೋಜಸಿ ತ್ವಂ ।
ತತ್ರ ಪ್ರರೋಚಕಪದೇಷು ನಿವಿಷ್ಟಚಿತ್ತಾಃ
ಕಿಂ ನಶ್ವರೈಃ ಫಲಗಣೈಃ ಪ್ರಮಥಾಧಿನಾಥ ॥೫೯॥

ತ್ವಾಮಧ್ವರೇಶ್ವರಮಹೋ ಫಲದಾನಶೀಲಂ ।
ನಾರಾಧಯಂತಿ ಸಹಸಾ ಜಡಬುದ್ಧಯಸ್ತೇ ॥೬೦॥

ಅಂಗಿರಾಶ್ಚ ಮಹಾದೇವಿ ಕೇದಾರೇಶಮಥಾಸ್ತುವೀತ್ ।
ಭ್ರಾತ್ರಾ ವಿನಿಷ್ಕೃತಃ ಪೂರ್ವಂ ದೌರಾತ್ಮ್ಯೋದ್ಧೃತ್ಯ ಗರ್ವಿಣಾ ॥೬೧॥

---

ಮಹಾದೇವನೇ, ನಾನು ನಿನ್ನನ್ನೇ ಮೊರೆಹೊಕ್ಕಿರುವೆನು. ಹಿರಣ್ಯದಂತೆ ಕಾಂತಿಯಿಂದ ಹೊಳೆಯುವ ನಿನ್ನ ರೂಪವನ್ನು ನೋಡಿ ಭಕ್ತರು ಸಕಲ ಇಷ್ಟಾರ್ಥವನ್ನೂ ಪಡೆಯುವರು. ಅನೇಕ ಯಜ್ಞಗಳ ಆಚರಣೆಯಿಂದ ಹೊಂದುವ ಸುಕೃತವೆಲ್ಲಾ ನಿನ್ನ ಸಾರೂಪ್ಯವನ್ನು ಹೊಂದಿಸುವುದರಲ್ಲಿಯೇ ಪರ್ಯವಸಾನವಾಗುವುದೆಂದು ಸಕಲ ಶ್ರುತಿಗಳೂ ಸಾರುತ್ತಲಿವೆ.

ಆಶ್ರಿತರನ್ನು ಪೋಷಿಸುವ ಶಕ್ತಿ, ಸ್ವರ್ಗ, ಪುತ್ರಸಂಪತ್ತು, ಪಶುಸಂಪತ್ತು, ಪ್ರತಿಷ್ಠಾಪರಾಕ್ರಮಾದಿಗಳು, ಓಜಸ್ಸು ಇವುಗಳಿಗೆ ನೀನು ಆಶ್ರಯವಿತ್ತಿರುವವನು. ಇದನ್ನರಿತು ಕೆಲವರು ಇವುಗಳ ಪ್ರಾಪ್ತಿಗಾಗಿ ನಿನ್ನನ್ನು ಬಹುವಾಗಿ ಸ್ತುತಿಸುವರು. ಆದರೆ ನಶ್ವರವಾದ ಇವುಗಳಿಗಾಗಿ ಅಪೇಕ್ಷಿಸುವುದು ಯುಕ್ತವಲ್ಲ. ॥೫೯॥

ಇಷ್ಟು ಸಕಲ ಯಾಗಗಳಿಗೂ ಫಲಪ್ರದಾನಮಾಡುವಂತಹ ಮಹಾತ್ಮನಾದ ನಿನ್ನನ್ನು ಮೂಢರಾದವರು ಭಕ್ತಿಪೂರ್ವಕವಾಗಿ ಆರಾಧಿಸುವುದಿಲ್ಲವಲ್ಲಾ'' ಎಂದು ಅತ್ರಿಮಹರ್ಷಿಯು ಪ್ರಾರ್ಥಿಸಿದನು. ॥೬೦॥

ಎಲೈ ದೇವಿಯೇ, ಅಂಗಿರಸ್ಸೆಂಬ ಋಷಿವರ್ಯನೊಬ್ಬನು ದುರಹಂಕಾರದಿಂದ ಮೆರೆಯುತ್ತಿದ್ದ ಸಹೋದರನೊಬ್ಬನಿಂದ ಪರಾಜಿತನಾಗಿ ಕೊನೆಗೆ ಇಲ್ಲಿಗೆ ಬಂದು

ತಥ್ಯಂ ತ್ವದೀಯಜನ ಇತ್ಯಪಿ ಸಾಮಿಚಂದ್ರ
ಚೂಡಪ್ರಭೋ ಮಯಿ ಮಹಾಘಸಮುಗ್ರಕಾಯೇ ।
ತ್ವಂ ವೇದಗೀತಮಥಿವಕ್ತೃತಯಾ ಪ್ರಸಿದ್ಧಃ
ಪಾಹೀಶ ಮಾಮಕಧಿಯಾ ಸಹಮಾನ ಶಂಭೋ ॥೬೨॥

ಏವಂ ಸ್ತುತ್ವಾಥ ಮುನಯಃ ಸ್ವಾಭೀಷ್ಟಂ ಪ್ರಾಪುರಂಬಿಕೇ ।
ಕೇದಾರೇಶಪ್ರಸಾದೇನ ಆನ್ಯೇ ಸರ್ವಮರುದ್ಗಣಾಃ ॥೬೩॥

॥ ಸೂತ ಉವಾಚ ॥

ಕೋ ವಾ ಕೇದಾರಲಿಂಗಂ ಜನಿಶತವಿತತಾ ಪಾರಪಾಪೈಕಭಂಗಂ
ಪ್ರಾಲೇಯಾಚಲಕನ್ಯಕಾ ಪರಿಲಸದ್ವಾಮಾಂಗಸಂಗಂ ಸದಾ ।
ದೃಷ್ಟ್ವಾನಂಗಭುಜಂಗಸಂಗಜನಿತಾಮಂದಾಂಗಕೋಪಸ್ಫುರತ್
ಫಾಲಾಪಾಂಗಕೃಪಾಂಗಸಂಗರಹಿತಂ ಶ್ರೀಶಂಗಮೀಶಂ ಭಜೇತ್ ॥೬೪॥

---

ಕೇದಾರೇಶನನ್ನು ಸ್ತುತಿಸಿ ಸ್ವಶಕ್ತಿಯನ್ನು ಸಂಪಾದಿಸಿದನು. ಆಗ ಅಂಗಿರಸ್ಸೇ ಮೊದಲಾದ ಅನೇಕ ಮಹರ್ಷಿಗಳು ಈ ರೀತಿ ನನ್ನನ್ನೂ ಪ್ರಾರ್ಥಿಸಿರುವರು. ॥೬೧॥

" ಚಂದ್ರಶೇಖರನೇ, ನಿಜವಾಗಿಯೂ ನಾನು ಪಾಪಭೂಯಿಷ್ಠವಾದ ಶರೀರವುಳ್ಳವನು. ಈಗ ನಿನ್ನನ್ನು ಮೊರೆ ಹೊಕ್ಕಿರುವೆನು. ನೀನಾದರೋ, ವೇದ ವೇದಾಂತ ವಾಕ್ಯಗಳಿಂದ ಸ್ತುತ್ಯನಾಗಿರುವೆ. ಇಂತಹ ನೀನು ನಮ್ಮನ್ನು ಆತ್ಮೀಯ ಭಾವನೆಯಿಂದ ರಕ್ಷಿಸು." ॥೬೩॥

ದೇವಿಯೇ, ಈ ರೀತಿ ಸಕಲ ದೇವತೆಗಳೂ, ಋಷಿಜನರೂ ಇಲ್ಲಿಗೆ ಬಂದು ಕೇದಾರೇಶ್ವರನನ್ನು ಬಹುವಾಗಿ ಸ್ತುತಿಸಿ, ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆದು ಸುಖಿಗಳಾಗಿರುವರು. ಇದರಲ್ಲಿ ಸಂಶಯವಿಲ್ಲ. ಎಂದು ಸಾಕ್ಷಾತ್ಪರಶಿವನೇ ಪಾರ್ವತಿಗೆ ಕೇದಾರೇಶನ ಮಹಿಮೆಯನ್ನು ವಿವರಿಸಿ ಹೇಳಿದನು. ॥೨೩॥

ಮಹರ್ಷಿಗಳೇ, ಈ ಕೇದಾರೇಶ್ವರ ಲಿಂಗವೆಂಬುದು, ಮಾನವ ಜನ್ಮದಲ್ಲಿ ಅಪಾರವಾಗಿ ಕಂಡು ಬರುವ ಪಾಪರಾಶಿಯನ್ನೆಲ್ಲಾ ನಿರ್ಮೂಲ ಮಾಡುವ ಸಾಮರ್ಥ್ಯವುಳ್ಳದು. ಹಿಮಗಿರಿತನಯೆಯಾದ ಪಾರ್ವತಿಯನ್ನೂ ವಾಮಭಾಗ

## ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಕೇದಾರಮಹಿಮಾಯಾಂ ಅಷ್ಟದಿಕ್ಪಾಲಕ ಋಷಿ ಮುನಿಕೃತ ತಪಃ ಪೂಜಾಸ್ತುತಿವರ್ಣನಂ ನಾಮೈಕಾದಶೋಧ್ಯಾಯಃ

ದಲ್ಲಿ ಧರಿಸಿ ಮಂಗಳ ಸ್ವರೂಪವಾಗಿ ತೋರಿಬರುತ್ತಿರುವುದು ಮತ್ತು ಸರ್ಪದಂತೆ ಕ್ರೂರವಾಗಿ ವರ್ತಿಸುವ ಮನ್ಮಥನ ವಿಚಿತ್ರ ವರ್ತನೆಯನ್ನೂ, ತನ್ನ ಫಾಲನೇತ್ರ ದಿಂದ ಧ್ವಂಸಮಾಡುವ ಸಾಮರ್ಥ್ಯವು ಪರಶಿವನಿಗಿರುವುದು. ಇಂತಹ ಮಹಾಮಹಿ ಮನೂ, ಭಕ್ತರಿಗೆ ಸುಖಪ್ರದನೂ, ಸಕಲ ಜಗತ್ಪತಿಯೂ ಆದ ಮಹಾದೇವನನ್ನು ಭಜಿಸಿರಿ. ಆದರಿಂದ ಸಕಲ ಇಷ್ಟಾರ್ಥಗಳೂ ನೆರವೇರುವುವು ಎಂಬುದರಲ್ಲಿ ಅನು ಮಾನವಿಲ್ಲ. ಎಂದು ಸೂತ ಮಹರ್ಷಿಗಳು ಅಲ್ಲಿ ನೆರೆದಿದ್ದ ವಾಜಶ್ರವಸರೇ ಮೊದ ಲಾದ ಋಷಿವರ್ಗಕ್ಕೆಲ್ಲಾ ಬೋಧಿಸಿದರು. ॥೬೪॥

ಇಲ್ಲಿಗೆ ಶ್ರೀಶಿವರಹಸ್ಯದ ಭರ್ಗನಾಮಕವಾದ ಪಂಚಮಾಂಶದಲ್ಲಿ ಕೇದಾರಮಹಿಮಾ ವರ್ಣನೆಯ ಪ್ರಸಂಗದಲ್ಲಿ ಅಷ್ಟದಿಕ್ಪಾಲಕರೂ ಇತರ ಋಷಿಜನರೂ ಮಾಡಿದ ಕೇದಾರೇಶಸ್ತುತಿಯನ್ನು ವಿವರಿಸುವ ಹನ್ನೊಂದನೆಯ ಅಧ್ಯಾಯವು ಸಂಪೂರ್ಣವಾದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ದ್ವಾದಶೋಽಧ್ಯಾಯಃ

॥ ಈಶ್ವರ ಉವಾಚ ॥

**ಅಥಾನ್ಯದಪಿ ವಕ್ಷ್ಯಾಮಿ ಪಿತುಸ್ತೇ ಚರಿತಂ ಶಿವೇ ।**
**ಸ್ವಮೌಲೌ ವಾಸಯನ್ಮಾಂ ಹಿ ತ್ವದ್ವಿಯೋಗಭಯಾದುಮೇ ॥೧॥**

॥ ಸೂತ ಉವಾಚ ॥

**ದೇವದೇವವಚಃ ಶ್ರುತ್ವಾ ಹೃಷ್ಟಾ ಪರ್ವತನಂದಿನೀ ।**
**ಪ್ರಾಹ ಪ್ರಣಮ್ಯ ವಿಶ್ವೇಶಂ ಸ್ವಪಿತುಶ್ಚರಿತಂ ದ್ವಿಜಾಃ ॥೨॥**

## ಹನ್ನೆರಡನೆಯ ಅಧ್ಯಾಯ

ಗಿರಿಜೆಯೇ, ಇನ್ನು ಮುಂದೆ ನಿನ್ನ ತಂದೆಯು ಆಶ್ಚರ್ಯಕರವಾದ ಮತ್ತೊಂದು ಚರಿತ್ರೆಯನ್ನು ಹೇಳುವೆನು. ನನಗೆ ನಿನ್ನ ದೆಸೆಯಿಂದ ವಿಯೋಗ ವೆಲ್ಲಿ ಸಂಭವಿಸುವುದೋ ಎಂಬ ಭಯದಿಂದ ನಿನ್ನ ತಂದೆಯು ನನ್ನನ್ನು ತನ್ನ ಶಿಖರದಲ್ಲಿ ಅಡಗಿಸಿಕೊಂಡಿದ್ದನು. ಆ ವಿಷಯವನ್ನು ವಿಸ್ತಾರವಾಗಿ ಹೇಳುವೆನು ಕೇಳು ಎಂದು ಶಂಕರನು ಪಾರ್ವತಿಯೊಡನೆ ಮಾತನಾಡಲಾರಂಭಿಸಿದನು. ॥೧॥

ದೇವೇಶನಾದ ಶಿವನ ಮಾತನ್ನು ಕೇಳಿ ಹಿಮವಂತನ ಪುತ್ರಿಯಾದ ಪಾರ್ವತಿಯು ಸಂತೋಷಭರಿತಳಾಗಿ ಶಿವನಿಗೆ ನಮಸ್ಕರಿಸಿ ತನ್ನ ತಂದೆಯ ಆ ಚರಿತ್ರೆಯನ್ನು ಹೇಳುವಂತೆ ಪ್ರಾರ್ಥಿಸಿದಳು. ॥೨॥

॥ ದೇವ್ಯುವಾಚ ॥

ಕಥಂ ಮಮ ಪಿತಾ ತ್ವಾಂ ತು ಮದ್ವಿಯೋಗಭಯಾಚ್ಛಿವ ।
ಸ್ವಕೀಯಶಿಖರೇ ಶಂಭೋ ವಾಸಯತ್ತಾಂ ಕಥಾಂ ವದ ॥೩॥

ಶೂಲೀ ಶೈಲೇಂದ್ರಜಾವಾಕ್ಯಂ ಶ್ರುತ್ವಾ ತುಷ್ಟೋಽಬ್ರವೀತ್ತದಾ ॥೪॥

ವಕ್ಷ್ಯಾಮ್ಯಗಸುತೇ ತೇಽದ್ಯ ಪಿತುಶ್ಚರಿತಮುತ್ತಮಂ ।
ಸಾವಧಾನಮನಾದೇವಿ ಶೃಣು ಸರ್ವಾಂಗಸುಂದರಿ ॥೫॥

ದಕ್ಷಃ ಪ್ರಚೇತಾ ದೇವೇಶಿ ಚಾಕ್ಷುಷಸ್ಯಾಂತರೇ ಮನೋಃ ।
ಆಯಜದ್ಧಯಮೇಧೇನ ಮಾಂ ಹಿತ್ವೈವ ಸುರೋತ್ತಮಂ ॥೬॥

ಬ್ರಹ್ಮಾ ಬ್ರಹ್ಮಾಭವತ್ತಸ್ಯ ಸದಸ್ಯೋ ವಿಷ್ಣುರೀಶ್ವರಿ ।
ಅಧ್ವರ್ಯುರತ್ರಿರಭವದ್ಧೋತಾ ಚಾಥ ಕಹೋಲಕಃ ॥೭॥

---

ಶಂಭುವೇ, ನನ್ನಿಂದ ನಿನಗೆ ವಿಯೋಗವೆಲ್ಲಿ ಸಂಭವಿಸುವುದೋ ಎಂಬ ಎಂಬ ಭೀತಿಯಿಂದ ನನ್ನ ತಂದೆಯು ನಿನ್ನನ್ನು ತನ್ನ ಶಿಖರದಲ್ಲಿಯೇ ವಾಸವಾಗಿರುವಂತೆ ಮಾಡಿದ ಆ ಕಥೆಯನ್ನು ನನಗೆ ಜಾಗ್ರತೆ ತಿಳಿಸು. ॥೩॥

ಗಿರಿಜೆಯ ಆ ಮಾತನ್ನು ಕೇಳಿ ಶೂಲಪಾಣಿಯಾದ ಶಿವನು ಸಂತೋಷಭರಿತನಾಗಿ ಅವಳನ್ನು ಕುರಿತು ಹೀಗೆಂದನು. ॥೪॥

ಎಲೌ ಸುಂದರಿಯೇ, ನಿನ್ನ ತಂದೆಯ ಮಹತ್ತರವಾದ ಕಥೆಯನ್ನು ನಿನಗೆ ಹೇಳುವೆನು. ಅದನ್ನು ಸಾವಧಾನದಿಂದ ಕೇಳು. ॥೫॥

ಹಿಂದೆ ಚಾಕ್ಷುಷವೆಂಬ ಮನ್ವಂತರದಲ್ಲಿ ದಕ್ಷಬ್ರಹ್ಮನು ವರುಣನನ್ನು ಸಂತೋಷಗೊಳಿಸುವುದಕ್ಕೋಸ್ಕರ ಅಶ್ವಮೇಧಯಾಗವನ್ನು ಆಚರಿಸಿದನು. ಆದರೆ ಅವನು ದೇವತೆಗಳಿಗೆ ಪ್ರಭುವಾದ ನನ್ನನ್ನು ಮಾತ್ರ ಯಾಗಕ್ಕೆ ಆಹ್ವಾನಿಸಲಿಲ್ಲ. ॥೬॥

ಆ ಯಾಗದಲ್ಲಿ ಚತುರ್ಮುಖಬ್ರಹ್ಮನೇ ಬ್ರಹ್ಮನಾಗಿಯೂ, ವಿಷ್ಣುವೇ ಆಚಾರ್ಯನಾಗಿಯೂ, ಅತ್ರಿಮುನಿಯು ಅಧ್ವರ್ಯುವಾಗಿಯೂ, ಕಪಿಲಋಷಿಯು ಹೋತೃವಾಗಿಯೂ ಆಹ್ವಾನಿಸಲ್ಪಟ್ಟಿದ್ದರು. ॥೭॥

ಉದ್ಗಾತಾ ಚಾಭವತ್ತಸ್ಯ ತಂಡುರ್ನಾಮ ದ್ವಿಜೋತ್ತಮಃ ।
ಅಥಾನ್ಯೇ ಋಷಯೋಽಭೂವನ್ಯಾಜಕಾ ಹಿ ಪ್ರಜಾಪತೇಃ ॥೮॥

ನಾಜುಹಾವ ತದಾ ದೇವಿ ತ್ವಾಂ ಹಿ ದಾಕ್ಷಾಯಣೀಂ ತದಾ ।
ಕೌತುಕಾವಿಷ್ಟಹೃದಯಾ ಪಿತೃಯಜ್ಞದಿದೃಕ್ಷಯಾ ॥೯॥

ಗಂತುಮೈಚ್ಛಃ ಸುರಾನ್ ದೃಷ್ಟ್ವಾ ವಿಮಾನಗತಿಗಾಂಸ್ತದಾ ।
ನಿವಾರಿತಾಸಿ ಸುಭಗೇ ಮಯಾ ಚಾಪಿ ಗಣೇಶ್ವರೈಃ ॥೧೦॥

ಗತವತ್ಯಸಿ ಕಲ್ಯಾಣಿ ಸ್ತ್ರೀಲೌಲ್ಯಾತ್ತಸ್ಯ ತತ್ಸದಃ ।
ನೈವಾಪಶ್ಯತ್ತದಾ ತ್ವಾಂ ತು ಕುತಃ ಪೂಜಾ ಕುತೋ ರತಿಃ ॥೧೧॥

ಸಂಕ್ರುದ್ಧಂ ಪಿತರಂ ದೃಷ್ಟ್ವಾ ಸಾಂತ್ವೇನ ತ್ವಮುಭಾಷಥಾಃ ॥೧೨॥

---

ತಂಡುವೆಂಬ ಹೆಸರುಳ್ಳ ಬ್ರಾಹ್ಮಣಶ್ರೇಷ್ಠನು ಉದ್ಗಾತೃವಾಗಿದ್ದನು. ಮತ್ತು ಇನ್ನಿತರ ಅನೇಕ ಋಷಿಗಳು ಆ ದಕ್ಷಪ್ರಜಾಪತಿಯ ಯಾಗದಲ್ಲಿ ಋತ್ವಿಜರಾಗಿ ಬಂದಿದ್ದರು. ॥೮॥

ದೇವಿಯೇ, ಆ ದಕ್ಷಬ್ರಹ್ಮನು ಮಗಳಾದ ನಿನ್ನನ್ನು ಯಾಗಕಾಲದಲ್ಲಿ ಆಹ್ವಾನಿಸಲಿಲ್ಲ. ಆಗ ನೀನು ತಂದೆಯು ಆಚರಿಸುವ ಯಾಗವನ್ನು ನೋಡಬೇಕೆಂಬ ಇಚ್ಛೆಯಿಂದ ಉತ್ಸಾಹಭರಿತಳಾಗಿದ್ದೆ. ॥೯॥

ಬಳಿಕ ದಕ್ಷಬ್ರಹ್ಮನ ಯಾಗವನ್ನು ನೋಡುವುದಕ್ಕೋಸ್ಕರ ವಿಮಾನದಲ್ಲಿ ಕುಳಿತುಕೊಂಡು ಅಂತರಿಕ್ಷದಲ್ಲಿ ತೆರಳುತ್ತಿದ್ದ ದೇವತೆಗಳನ್ನು ನೋಡಿ ನೀನು, ತಂದೆಯ ಮನೆಗೆ ಹೋಗಲು ಬಯಸಿದೆ. ನಾನು ಮತ್ತು ನನ್ನ ಪ್ರಮಥಗಣಗಳು ನಿನ್ನನ್ನು ಪರಿಪರಿಯಿಂದ ತಡೆದೆವು. ॥೧೦॥

ಆದರೂ ಸ್ತ್ರೀಚಾಪಲ್ಯಕ್ಕೆ ಅನುಗುಣವಾಗಿ ನೀನು ದಕ್ಷನ ಸಭೆಯನ್ನು ಕುರಿತು ತೆರಳಿದೆ. ಆಗ ದಕ್ಷನು ನಿನ್ನ ಕಡೆಗೆ ಒಂದುಬಾರಿಯಾದರೂ ನೋಡಲೇ ಇಲ್ಲ. ಹೀಗಿರುವಾಗ ಅವನು ನಿನ್ನನ್ನು ಸತ್ಕರಿಸುವುದೂ ಅಥವಾ ನಿನ್ನನ್ನು ಪ್ರೀತಿಸುವುದೂ ಎಲ್ಲಿಂದ ಬಂತು! ॥೧೧॥

ಹಾಗೆ ನಿನ್ನಲ್ಲಿ ಕೋಪಗೊಂಡಿರುವ ನಿನ್ನ ತಂದೆಯನ್ನು ನೋಡಿ ನೀನು ಶಾಂತಿಯಿಂದ ಹೀಗೆಂದು ಹೇಳಿದೆ. ॥೧೨॥

ಸರ್ವೇ ದೇವಗಣಾ ದಕ್ಷ ಸಮಾಹೂತಾಃ ಸದಸ್ಯಥ ।
ಕಥಂ ನಾಹೂತವಾಂಛಂಭುಂ ಮತ್ಪತಿಃ ಸದಸಸ್ಪತಿಃ ॥೧೩॥

ಪಿತಃ ಸದೋ ನ ತೇ ಶೋಭಾಂ ವಹತೇ ಪತಿಹೀನತಃ ।
ಕಿಮನ್ಯೈಃ ಪ್ರಾಕೃತೈರ್ದೇವೈಃ ಪೂಜಿತೈರಧ್ವರೇ ಫಲಂ ॥೧೪॥

॥ ಸೂತ ಉವಾಚ ॥

ರಾಜಾ ಸಮಧ್ವರಸ್ಯಾಸ್ಯ ಸಾಕ್ಷಾನ್ಮಖಪತಿಃ ಶಿವಃ ।
ಸ್ವಿಷ್ಟಕೃದ್ಭಾಗ ವಿನಾಯಂ ತತ್ರಥಾ ಕರ್ತುಮರ್ಹಸಿ ॥೧೫॥

ದಕ್ಷಸ್ತದಾ ಸತೀವಾಕ್ಯಂ ಶ್ರುತ್ವಾ ಕ್ರೋಧವಶಂ ಗತಃ ।
ಉವಾಚ ಭರ್ತ್ಸಯನ್ದೇವೀಂ ದೇವಾನಾಂ ಚೈವ ಪಶ್ಯತಾಂ ॥೧೬॥

॥ ದಕ್ಷ ಉವಾಚ ॥

ಕಿಂ ನೋ ರುದ್ರೇಣ ಕರ್ತವ್ಯಂ ಪತ್ಯಾ ತೇಽದ್ಯ ಸುಮಧ್ಯಮೇ ।
ಯಜ್ಞೋಽಯಂ ವಿಷ್ಣುರೀಡ್ಯೋಽಯಂ ಶ್ರುತ್ಯಾಚಾಪ್ಯದ್ಯ ಪೂಜ್ಯತೇ ॥೧೭

ಓ ದಕ್ಷನೇ, ನೀನು ಈ ಸಭೆಯಲ್ಲಿ ಸಕಲ ದೇವತೆಗಳನ್ನೂ ಆಹ್ವಾನಿಸಿರುವೆ. ಹೀಗಿರುವಲ್ಲಿ ದೇವತೆಗಳಿಗೆ ಒಡೆಯನಾದ ಶಿವನನ್ನು ಆಹ್ವಾನಿಸದಿರಲು ಕಾರಣವೇನು? ನನ್ನ ವಲ್ಲಭನು ಸಮಸ್ತ ಸಭಾಪತಿಯಾಗಿರುವನಲ್ಲವೇ! ॥೧೩॥

ತಂದೆಯೇ, ನಿನ್ನ ಈ ಸಭೆಯು ಸಭಾಪತಿಯಾದ ಶಿವನು ಇಲ್ಲದಿದ್ದರೆ ಶೋಭಿಸಲಾರದು. ಶಿವನಿಗಿಂತಲೂ ಕೀಳಾದ ಇತರ ದೇವತೆಗಳನ್ನು ಯಾಗಕಾಲದಲ್ಲಿ ಅರ್ಚಿಸುವುದರಿಂದ ಫಲವು ಲಭಿಸುವುದೇ? ॥೧೪॥

ಯಜ್ಞಕರ್ಮಗಳಿಗೆ ಪ್ರಭುವೆಂದೆನಿಸಿರುವ ಶಿವನೇ ಈ ಯಾಗಕ್ಕೂ ಸ್ವಾಮಿಯಾಗಿರುವನು. ಈ ಯಾಗವು ಸ್ವಿಷ್ಟಿಕೃದ್ದೇವತೆಯಾದ ಶಿವನ ಭಾಗಧೇಯವಾಗಿರುವುದರಿಂದ ನೀನು ಅವನನ್ನು ಈ ಯಾಗಕ್ಕೆ ಆಹ್ವಾನಿಸುವುದು ಉಚಿತವಲ್ಲವೆ! ಎಂದು ಸತೀದೇವಿಯು ತಂದೆಯನ್ನು ಆಕ್ಷೇಪಿಸಲು. ॥೧೫॥

ಆಗ ದಕ್ಷನು ಸತಿಯ ಮಾತನ್ನು ಕೇಳಿ ಕೋಪಗೊಂಡು ದೇವತೆಗಳ ಎದುರಿನಲ್ಲಿ ದೇವಿಯನ್ನು ಹೆದರಿಸುತ್ತಾ ಹೀಗೆಂದನು. ॥೧೬॥

"ದೇವಿ, ಈ ಯಾಗಕಾಲದಲ್ಲಿ ನಿನ್ನ ಪತಿಯಾದ ರುದ್ರನಿಂದ ನನಗೆ ಉಂಟಾಗುವ ಪ್ರಯೋಜನವೇನು? ಆದುದರಿಂದ ಈಗ ನನಗೆ ಅವನ ಅಪೇಕ್ಷೆ ಇರುವುದಿಲ್ಲ.

ಇತ್ಥಂ ತದಾಽಖರ್ವಗರ್ವಸಂಬಂಧೀಕೃತಮಾನಸಂ ।
ಉವಾಚ ಕ್ರೋಧತಾಮ್ರಾಕ್ಷೀ ಸತೀ ಸ್ವಪಿತರಂ ಕ್ರುಧಾ ॥೧೮॥

॥ ಸತ್ಯುವಾಚ ॥

ನಾಯಂ ಯಜ್ಞೋಽದ್ಯ ಭವಿತಾ ಯಜ್ಞೇಶೋ ನ ವಿನಾಶಿತಃ ।
ಭವಿಷ್ಯತ್ಯಚಿರಾದೇವ ಶೃಣು ಮದ್ವಚನಂ ಪಿತಃ ॥೧೯॥

ಇತ್ಯುಕ್ತ್ವಾ ಯೋಗಮಾಸ್ಥಾಯ ದದಾಹಾತ್ಮತನುಂ ಸತೀ ।
ದಗ್ಧಾಂ ಸತೀಂ ತದಾ ದೃಷ್ಟ್ವಾ ಹಾ ಹಾ ಹೇತಿ ವದನ್ಸುರಾಃ ॥೨೦॥

ದಧೀಚಿಃ ಕ್ರೋಧತಾಮ್ರಾಕ್ಷೋ ದಕ್ಷಂ ತಂ ಪ್ರತ್ಯಭಾಷತ ॥೨೧॥

---

ಈ ಯಜ್ಞಕರ್ಮವು ಮಹಾವಿಷ್ಣುವಿನ ಸ್ವರೂಪವೇ ಆಗಿದೆ. ಈಗ "ಯಜ್ಞೋ ವೈ ವಿಷ್ಣುಃ" ಎಂಬ ವೇದವಾಕ್ಯದಿಂದ ನಾನು ಅವನನ್ನೇ ಪೂಜಿಸುವೆನು." ॥೧೭॥

ದಕ್ಷನು ಹೀಗೆನ್ನಲು ಅಹಂಕಾರದಿಂದ ಮೆರೆಯುತ್ತಿರುವ ತನ್ನ ತಂದೆಯನ್ನು ಕುರಿತು ಸತಿಯು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವಳಾಗಿ ಹೀಗೆಂದಳು. ॥೧೮॥

ತಂದೆಯೇ ಕೇಳು, ಈಗ ಈ ಯಜ್ಞವು ಎಂದಿಗೂ ಸಂಪೂರ್ಣವಾಗಿ ನೆರವೇರಲಾರದೆಂಬುದನ್ನು ತಿಳಿ! ಯಜ್ಞಕರ್ಮವು ನಷ್ಟವಾದರೂ ಸಹ ಯಜ್ಞಫಲಕ್ಕೆ ಸ್ವಾಮಿಯಾದ ಶಿವನಿಗೆ ಯಾವ ತೊಂದರೆಯೂ ಸಂಭವಿಸಲಾರದು. ಜಾಗ್ರತೆಯಾಗಿಯೇ ಹೀಗೆ ಆಗುವುದೆಂದೂ ತಿಳಿ. ॥೧೯॥

ಹೀಗೆಂದು ಹೇಳಿ ಸತೀದೇವಿಯು ತನ್ನ ಯೋಗಮಹಿಮೆಯಿಂದ ಯೋಗಾಗ್ನಿಯನ್ನು ಕಲ್ಪಿಸಿಕೊಂಡು ಅದರಿಂದ ತನ್ನ ಶರೀರವನ್ನು ದಹಿಸಿಕೊಂಡಳು. ಈ ಪ್ರಕಾರವಾಗಿ ಸತಿಯು ಯೋಗಾಗ್ನಿಯಿಂದ ದಹಿಸಿಹೋಗಲು ಅದನ್ನು ನೋಡಿ ದೇವತೆಗಳು ಹಾಹಾಕಾರಮಾಡಿದರು. ॥೨೦॥

ಬಳಿಕ ದಧೀಚಿಯು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ದಕ್ಷನನ್ನು ಕುರಿತು ಹೀಗೆಂದನು. ॥೨೧॥

॥ ದಧೀಚಿರುವಾಚ ॥

ದೀಕ್ಷಿತೋಽಸ್ಯಶ್ವಮೇಧಾಯ ಕಥಂ ದೀಕ್ಷಾಪತಿಂ ಶಿವಂ ।
ವಿನಿಂದಸ್ಯದ್ಯ ಮೌರ್ಖ್ಯೇಣ ಧಿಕ್ತೇ ಯಜ್ಞಃ ಸಭಾಸದಃ ॥೨೨॥

ಪುರುಷೋ ವೈ ಮಹಾನ್ರುದ್ರ ಇತ್ಯಾಹ ಶ್ರುತಿರಾದರಾತ್ ।
ಯಾಗಃ ಸ್ವಿಷ್ಟಕೃದಂಶೋ ಹಿ ಸ ಕಥಂ ನೈವ ಪೂಜ್ಯತೇ ॥೨೩॥

ಸರ್ವಂ ನಿವೇದ್ಯ ವೈ ಶಂಭೌ ಸುಖೀ ಭವ ಸಬಾಂಧವಃ ॥೨೪॥

॥ ಸೂತ ಉವಾಚ ॥

ದಧೀಚಿವಾಕ್ಯಾತ್ಸಂಕ್ರುದ್ಧೋ ದಕ್ಷೋ ವಿಪ್ರಮಥಾಬ್ರವೀತ್ ॥೨೫॥

॥ ದಕ್ಷ ಉವಾಚ ॥

ನೈವೇದ್ಯಂ ಯಚ್ಛಿವೇ ದತ್ತಂ ನ ಗ್ರಾಹ್ಯಮಪವಿತ್ರಕಂ ।
ವಿಷ್ಣುರೇವಾತ್ರ ಯಜ್ಞೇಶಃ ಕಿಂ ಪ್ರಲಾಪೇನ ಭೂಸುರ ॥೨೬॥

ಎಲೈ ದಕ್ಷನೇ, ನೀನು ಅಶ್ವಮೇಧಯಾಗವನ್ನು ನೆರವೇರಿಸುವುದಕ್ಕೋಸ್ಕರ ದೀಕ್ಷೆಯನ್ನು ಕೈಗೊಂಡಿರುವೆ. ಹೀಗಿರುವಾಗ ದೀಕ್ಷಾಪತಿಯಾದ ಶಿವನನ್ನು ನಿಂದಿಸುತ್ತಿರುವೆ. ಇದು ನಿನ್ನ ಮೂರ್ಖತನವಲ್ಲವೇ? ನಿನ್ನ ಈ ಯಜ್ಞಕ್ಕೆ ಧಿಕ್ಕಾರವಿರಲಿ. ಈ ಸಭೆಗೆ ಮೊದಲು ಧಿಕ್ಕಾರವು. ॥೨೨॥

ರುದ್ರನು ಯಜ್ಞಪುರುಷನಾಗಿರುವನೆಂದು ವೇದವು ಹೇಳುವುದು. ಯಜ್ಞಕರ್ಮದ ಅಂತ್ಯದಲ್ಲಿ ಸ್ವಿಷ್ಟಕೃದ್ದೇವತೆಯನ್ನು ಪೂಜಿಸಬೇಕಲ್ಲವೇ! ಹಾಗಿಲ್ಲವಿದ್ದರೆ ಯಜ್ಞಕರ್ಮವು ಸಾಂಗವಾಗಿ ನೆರವೇರುವಂತಾಗುವುದೇ? ಹೀಗಿರುವಾಗ ನೀನು ಯಜ್ಞಪುರುಷನಾದ ಶಿವನನ್ನು ಪೂಜಿಸದಿರುವ ಕಾರಣವೇನು? ॥೨೩॥

ಆದುದರಿಂದ ಇನ್ನಾದರೂ, ಸಕಲ ಯಾಗಾದಿ ಕರ್ಮವನ್ನು ಈಶ್ವರನಲ್ಲಿ ಅರ್ಪಿಸಿ, ನಿನ್ನ ಬಂಧುಬಳಗದೊಂದಿಗೆ ಸುಖದಿಂದಿರು. ॥೨೪॥

ಎಂದು ಹೇಳಿದ ದಧೀಚಿಯ ಆ ಮಾತನ್ನು ಕೇಳಿ, ದಕ್ಷನು ಕೋಪಗೊಂಡವನಾಗಿ, ಆ ಬ್ರಾಹ್ಮಣನನ್ನು ಕುರಿತು ಹೀಗೆಂದನು. ॥೨೫॥

ಎಲೈ ಬ್ರಾಹ್ಮಣನೇ, ಒಂದುಬಾರಿ ಶಿವನಿಗೆ ನಿವೇದಿಸಿದ ಪದಾರ್ಥವು ಪುನಃ ಸ್ವೀಕಾರಕ್ಕೆ ಅಯೋಗ್ಯವಾಗುವುದು. ಅದು ಶಿವನಿಗೆ ಅರ್ಪಿಸುವುದರಿಂದ ಅಪವಿತ್ರ

ಗಚ್ಛ ಗಚ್ಛ ಸದೋ ಹಿತ್ವಾ ತುಚ್ಛವದ್ಭಾಷಸೇ ಕಥಂ ।
ಮುನಿರ್ದಕ್ಷವಚಃ ಶ್ರುತ್ವಾ ಕ್ರೋಧಾತ್ಸರ್ವಾನುದೈಕ್ಷತ ॥೨೭॥

ಪ್ರೋವಾಚ ದೀಕ್ಷಿತಂ ದಕ್ಷಂ ವಿಷ್ಣುಪಕ್ಷಾವಲಂಬಿನಂ ॥೨೮॥

॥ ದಧೀಚಿರುವಾಚ ॥

ಗಂಗಾನಂಗರಿಪೋರ್ಜಟಾವಿಗಲಿತಾ ತನ್ಮೌಲಿಪುಷ್ಪಂ ಶಶೀ
ಕೇಶಾಸ್ತಸ್ಯ ವಿಯತ್ತತೋ ವಿಗಲಿತಾ ವೃಷ್ಟಿರ್ಜಗಜ್ಜೀವಿನೀ ।
ರುದ್ರೋಽಗ್ನಿಃ ಶ್ರುತ ಏವ ಸರ್ವಮಶನಂ ತಜ್ಜಿಹ್ವಯಾ ಪಚ್ಯತೇ
ತನ್ನಿರ್ಮಾಲ್ಯಜಿಹಾಸುಭಿಸ್ತ್ರಿಭುವನೇ ತೈಃ ಕೇನ ವಾ ಜೀವ್ಯತೇ ॥೨೯॥

ವಾಗುವುದು. ಆದುದರಿಂದ ಈ ಯಜ್ಞಕರ್ಮದಲ್ಲಿ ವಿಷ್ಣುವೇ ಯಜ್ಞಪುರುಷನಾಗಿ ರುವನಲ್ಲದೇ ಮತ್ತಾರೂ ಆಗಲಾರರು. ಆದುದರಿಂದ ವ್ಯರ್ಥವಾಗಿ ಏಕೆ ಮಾತನಾಡುವೆ? ॥೨೬॥

ಈಗಲೇ ಈ ಸಭೆಯನ್ನು ಬಿಟ್ಟು ತೆರಳು. ಹೀನವಾದ ಮನುಜನಂತೇಕೆ ಮಾತನಾಡುವೆ!'' ದಕ್ಷನು ಹೀಗೆನ್ನಲು, ಅವನ ಆ ಮಾತುಗಳನ್ನು ಕೇಳಿ ದಧೀಚಿಮುನಿಯು ಕೋಪದಿಂದ ಅಲ್ಲಿದ್ದ ಸಭಿಕರನ್ನೊಮ್ಮೆ ದುರುದುರನೆ ನೋಡಿದನು. ॥೨೭॥

ಬಳಿಕ ವಿಷ್ಣುವನ್ನು ಪುರಸ್ಕರಿಸುತ್ತಾ ಯಜ್ಞದೀಕ್ಷೆಯನ್ನು ಕೈಗೊಂಡ ದಕ್ಷನನ್ನು ಕುರಿತು ಹೀಗೆಂದನು. ॥೨೮॥

ದಕ್ಷನೇ ಕೇಳು, ಪರಮಪಾವನಳಾದ ದೇವಗಂಗೆಯು, ಮನ್ಮಥಶತ್ರುವಾದ ಶಿವನ ಜಟಾಜೂಟದಿಂದ ಪ್ರವಹಿಸುತ್ತಿರುವಳು. ಚಂದ್ರನೇ ಶಿವನ ಶಿರೋಭೂಷಣವು. ಅಂತರಿಕ್ಷವೇ ಅವನ ಕೇಶಗಳು. ಅದರಿಂದಲೇ ಜನಜೀವನಕ್ಕೆ ಸಾಧನವಾದ ವೃಷ್ಟಿಯು ಬೀಳುತ್ತಿರುವುದು. ಆ ರುದ್ರನು ಪ್ರಾಣಿಗಳ ಜಠರಾಗ್ನಿಯೆಂದೆನಿಸಿಕೊಂಡು ಅವುಗಳ ಶರೀರದಲ್ಲಿ ವಾಸವಾಗಿರುವನು. ಆ ಅಗ್ನಿಯ ಜ್ವಾಲೆಯಿಂದಲೇ ಪ್ರಾಣಿಗಳು ಭಕ್ಷಿಸಿದ ಅನ್ನವು ಜೀರ್ಣವಾಗುವುದು. ಆದುದರಿಂದ ಶಿವನೈವೇದ್ಯವನ್ನು ತಿರಸ್ಕರಿಸುವವರು ಈ ಲೋಕದಲ್ಲಿ ಬದುಕಿರುವ ಬಗೆ ಹೇಗೆ? ॥೨೯॥

ಶಂಭುಂ ಶಂಕರ ಇತ್ಯಪಿ ಶ್ರುತಿಶಿರೋಘಂಟಾವಿಘೋಷೋ ಮಹಾನ್
ತಂ ತ್ಯಕ್ತ್ವಾ ಸುರಗರ್ದಭಂ ಜನಿಜರಾಕಾಮಾದಿದೋಷಾಸ್ಪದಂ ।
ವಿಷ್ಣುಂ ಜಿಹ್ಮಧಿಯಂ ಭಜಂತಿ ನೃಖರಾ ಮೋಹಾಂಧಚಿತ್ತಾಃ ಸದಾ
ಸಂಸಾರಾರ್ಣವಮಜ್ಜನೈರನುದಿನಂ ದುಃಖಾಪ್ತಯೇ ಕೇವಲಂ ॥೧೦॥

ಶ್ರೀಮೃತ್ಯುಂಜಯಪೂಜನೇ ಮತಿರುದೇತ್ಯಸ್ಮಾಕಮಿಷ್ಟಪ್ರದಾ
ಸಾ ದೃಷ್ಟಿಃ ಸುಖಮೋಕ್ಷದೋಹನಪರಾ ಲಿಂಗಾರ್ಚಕೈಃ ಪಾಲಿತಾ ।
ತಸ್ಯಾ ವತ್ಸಮಹೇಶಭಾವಭಟಿಕಂ ಬದ್ಧ್ವಾ ಮನೋಗೋಷ್ಠಕೇ
ಪೀತ್ವಾ ಭಕ್ತಿಪಯಃ ಸುತುಂದಿಲಮಹಾಗಾತ್ರಾ ವಸಾಮೋ ವಯಂ ॥೧೧॥

ಇತ್ಯುಕ್ತ್ವಾ ನಿರ್ಗತೋ ಗೌರಿ ದಧೀಚಿಃ ಸ್ವಾಶ್ರಮಂ ತದಾ ।
ದಾಕ್ಷಾಯಣೀ ಪುರಾ ಸಾ ತ್ವಂ ಮೇನಕಾ ಗರ್ಭಮಾಶ್ರಿತಾ ॥೧೨॥

---

ಶಿವನೇ ಸುಖಶಾಂತಿಗಳನ್ನು ನೀಡುವನೆಂಬುದಾಗಿ ಉಪನಿಷತ್ತುಗಳೆಂಬ ಗಂಟೆಗಳು ತಡೆಯಿಲ್ಲದೇ ಘೋಷಿಸುತ್ತಿರುವವು. ಹೀಗಿರುತ್ತಿರಲು, ಕತ್ತೆಯಂತೆ ಬುದ್ಧಿಹೀನರಾದ ಮನುಷ್ಯರು ಅಜ್ಞಾನದಿಂದ ಆವೃತರಾಗಿ ಕೇವಲ ದುಃಖವನ್ನು ಅನುಭವಿಸುವುದಕ್ಕೋಸ್ಕರವೇ ಪರಮೇಶ್ವರನನ್ನು ಅಲ್ಲಗಳೆದು ಜನ್ಮಜರಾಮರಣಗಳಿಗೂ ಮತ್ತು ಕಾಮಕ್ರೋಧಾದಿ ಅರಿಷಡ್ವರ್ಗಗಳಿಗೂ ಆಶ್ರಯನಾದ ಕುಟಿಲಬುದ್ಧಿಯುಳ್ಳ ವಿಷ್ಣುವೆಂಬ ಸುರಗರ್ದಭವನ್ನು ಭಜಿಸುವರು. ಬಳಿಕ ಸಂಸಾರಸಮುದ್ರದಲ್ಲಿ ಮುಳುಗಿ ಪಾರವನ್ನು ಕಾಣದೆ ದುಃಖವನ್ನು ಅನುಭವಿಸುವರು. ॥೧೦॥

ನಮಗೆ ಅಂತಕಾರಿಯಾದ ಪರಮೇಶ್ವರನನ್ನು ಆರಾಧಿಸಬೇಕೆಂಬ ಭಾವನೆಯೇ ಉಂಟಾಗುತ್ತಿರುವುದು. ಅದು ಸಕಲ ಇಷ್ಟಾರ್ಥಗಳನ್ನೂ ದಯಪಾಲಿಸುವುದಾಗಿರುತ್ತದೆ. ಮೋಕ್ಷವೆಂಬ ಸವಿಯಾದ ಹಾಲನ್ನು ಕರೆಯುವ ಈಶ್ವರಭಕ್ತಿಯೆಂಬ ಧೇನುವನ್ನು ಈಶ್ವರಾರಾಧಕರಾದ ಭಕ್ತರು ಜಾಗರೂಕತೆಯಿಂದ ಪೋಷಿಸುತ್ತಿರುವರು. ನಾವು ಈಶ್ವರಭಕ್ತಿಯೆಂಬ ಧೇನುವಿನ ಕರುವಾದ ಚಿತ್ತೈಕಾಗ್ರತೆಯನ್ನು ಮನಸ್ಸೆಂಬ ಕೊಟ್ಟಿಗೆಯಲ್ಲಿ ಬಂಧಿಸಿ ಭಕ್ತಿಯೆಂಬ ಹಾಲನ್ನು ಸೇವಿಸಿ, ತೃಪ್ತರಾಗಿ ವಾಸಿಸುವೆವು. ॥೧೧॥

ಎಲೌ ಗಿರಿಜೆಯೇ! ಹೀಗೆಂದು ಹೇಳಿ ದಧೀಚಿಯು, ತನ್ನ ಆಶ್ರಮಕ್ಕೆ ತೆರಳಿದನು. ಈರೀತಿಯಲ್ಲಿ ಪೂರ್ವಜನ್ಮದಲ್ಲಿ ದಕ್ಷಬ್ರಹ್ಮನ ಮಗಳಾಗಿ ಜನಿಸಿ ದಾಕ್ಷ

ತದುದಂತಂ ತದಾ ಶ್ರುತ್ವಾ ನಾರದಾದಹಮಂಬಿಕೇ ।
ವೀರಭದ್ರಂ ಚ ಕಾಲೀಂ ಚ ಸೃಷ್ಟ್ವಾ ತನ್ಮಖಘರ್ಷಣಂ ॥೩೩॥

ಕೃತವಾನಸ್ಮಿ ದೇವೇಶಿ ತ್ವದ್ವಿಯೋಗಾಗ್ನಿದೀಪಿತಃ ॥೩೪॥

ದೇವಾನ್ವಿಪ್ರಾಂಶ್ಚ ದಂಡೈಃ ಪಟುತರಗದಯಾ ಭಿನ್ನಮಸ್ತಿಷ್ಕಶೀರ್ಷಾಂ
ಶ್ಚಕ್ರುಶ್ಚಕ್ರಾರಕೃತ್ತಾಂಶ್ಶರವರನಿಕರೈಃ ಕಾರ್ಮುಕಜ್ಯಾವಿಸೃಷ್ಟೈಃ ।
ದಕ್ಷಂ ದೀಕ್ಷಾನ್ವಿತಂ ಚ ಪ್ರಕಟಿತರತಲ್ಪೈಃ ಪುಷ್ಪದಂತಾಗ್ರಸಂಧೌ
ದೃಷ್ಟ್ವಾರ್ಧ್ವಾಂಕ್ಷಾದಿತುಷ್ಟ್ಯೈ ಭಗನಯನವರೇಃಪಾತಯಂಸ್ತೇ ಗಣೇಂದ್ರಾಃ ॥೩೫॥

ಸ್ರವದ್ರುಧಿರಗಂಧಿನೋ ಹರಿವಿಧೀಂದ್ರಮುಖ್ಯಾಮರಾಃ
ವಿದದ್ರುವುರಥಾಪರೇ ಪ್ರಬಲವೀರಭದ್ರಾಹತಾಃ ।

ಯಣೀ ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದ ನೀನು ಯಜ್ಞಕಾಲದಲ್ಲಿ ಯೋಗಾಗ್ನಿಯಿಂದ ದೇಹವನ್ನು ದಹಿಸಿ ಬಳಿಕ ಮೇನಕೆಯ ಗರ್ಭವನ್ನು ಹೊಂದಿದೆ. ॥೩೨॥

ದೇವಿ! ನೀನು ಯಾಗಕಾಲದಲ್ಲಿ ನಿನ್ನ ದೇಹವನ್ನು ಯೋಗಾಗ್ನಿಯಲ್ಲಿ ಸಮರ್ಪಿಸಿದ ವಿಷಯವನ್ನೂ ಮತ್ತು ಅದರ ಕಾರಣವನ್ನೂ ಕೇಳಿ ನಾನು ನಿನ್ನಿಂದುಂಟಾದ ವಿರಹಾಗ್ನಿಯ ತಾಪವನ್ನು ಸಹಿಸಲಾರದವನಾಗಿ, ವೀರಭದ್ರನನ್ನೂ, ಮತ್ತು ಕಾಳಿಯನ್ನೂ ಸೃಷ್ಟಿಸಿ, ಅವರಿಬ್ಬರ ಮೂಲಕ ದಕ್ಷಬ್ರಹ್ಮನ ಆ ಯಜ್ಞವನ್ನು ನಾಶಗೊಳಿಸಿದೆನು. ॥೩೩-೩೪॥

ದಕ್ಷನ ಯಾಗಶಾಲೆಗೆ ಹೋದ ನನ್ನ ಪ್ರಮಥಗಣಗಳು, ದೊಡ್ಡ ದೊಡ್ಡ ದಂಡಗಳಿಂದಲೂ, ಭಾರವಾದ ಗದೆಗಳಿಂದಲೂ, ದೇವತೆಗಳನ್ನೂ ಮತ್ತು ಬ್ರಾಹ್ಮಣರನ್ನೂ, ಬಡಿದು, ಧನುಸ್ಸಿನ ಮೌರ್ವಿಯಿಂದ ವೇಗವಾಗಿ ಬಾಣಗಳನ್ನು ಬಿಟ್ಟು ಅವರ ತಲೆಗಳನ್ನು ಕತ್ತರಿಸಿ ಕೆಳಕ್ಕೆ ಬೀಳಿಸಿದರು. ಯಜ್ಞದೀಕ್ಷೆಯನ್ನು ಕೈಗೊಂಡ ದಕ್ಷನನ್ನು, ತಮ್ಮ ಕೋರೆಯ ದಾಡೆಗಳಿಂದ ಕಚ್ಚಿ, ತುಂಡರಿಸಿ, ಗೃಧ್ರಗಳಿಗೆ ಸಂತೋಷವನ್ನುಂಟುಮಾಡಿದರು. ಭಗದೇವತೆಯ ಕಣ್ಣುಗಳನ್ನು ಕಿತ್ತರು. ಅವನ ಶಿರಸ್ಸನ್ನು ಯಜ್ಞವೇದಿಕೆಯಲ್ಲಿ ಬೀಳಿಸಿದರು. ॥೩೫॥

ಅಮಿತವಾದ ಪರಾಕ್ರಮವುಳ್ಳ ವೀರಭದ್ರನ ಆಯುಧಗಳ ಪ್ರಹಾರಗಳನ್ನು ತಡೆಯಲಾರದೆ, ವಿಷ್ಣು, ಬ್ರಹ್ಮ, ಇಂದ್ರ ಮುಂತಾದ ದೇವತೆಗಳು ರಕ್ತಪ್ರವಾಹ

ಕರಾಲಕರವಾಲಕೈರ್ವಿಕೃತಕಾಲದಂಷ್ಟ್ರಾದಿಭಿ-
ರ್ವಿದಾರಿತಕರಾಂಗಣಾಃ ಶರಣಮಾಯಯುರೀಶಂ ಸುರಾಃ ॥೩೬॥

ಅಖರ್ವಗರ್ವೋದ್ಧತ ದಕ್ಷಶಿಕ್ಷಾ-
ಕರೋಗ್ರರುದ್ರೋದ್ಭವವೀರಭದ್ರ
ಪ್ರಭಗ್ನದೇವದ್ವಿಜಕಂಧರಾಪಹ ।
ಸುಧಾಕರಾಪಾರಸುಧಾಪ್ತಯೇ ಸುರೈಃ
ವಿಮಥ್ಯಮಾನಾಬ್ಧಿಸಮುತ್ಥಿತೋರಗೇಣ
ನೀಲೀಕೃತಕಂಠ ಪಾಹಿ ನಃ ಪ್ರಭೋ ॥೩೭॥

ಉಮಾಮುಖಸಮುಲ್ಲಸತ್ಸ್ಫುರದಪಾಂಗಗಂಗಾಧರ
ಪ್ರಸೀದ ಪರಮೇಶ್ವರ ಪ್ರಥಿತದಕ್ಷಮನ್ಯೂತ್ಥಿತ-
ಪ್ರಚಂಡತರಮನ್ಯವೇ ಪ್ರಮಥನಾಥ ನಃ ಪಾಲಯ
ಕ್ರತೂದ್ಭವಫಲಾಧಿಕಂ ಭವತು ವಾಂಛಿತಂ ತ್ವತ್ಪದ-
ಪ್ರಸನ್ನಜನತಾಮರಪ್ರವರದೀಕ್ಷಿತೋಽಯಂ ಪ್ರಭೋ ॥೩೮॥

---

ವನ್ನು ಸುರಿಸುತ್ತಾ, ಅಲ್ಲಿಂದ ವೇಗವಾಗಿ ಓಡಿಹೋದರು. ಹರಿತವಾದ ಆಯುಧಗಳಿಂದ ಉಗ್ರರೂಪವನ್ನು ತಾಳಿದ ಕಾಳಿಕಾದೇವಿಯ ಕೋರೆದಾಡೆಯಿಂದಲೂ, ಚೂರುಚೂರಾಗಿ ಮಾಡಲ್ಪಟ್ಟ, ಕರಚರಣಾವಯವಗಳುಳ್ಳ ಆ ದೇವತೆಗಳು ಕೊನೆಗೆ ಈಶ್ವರನನ್ನು (ನನ್ನನ್ನೇ) ಮೊರೆ ಹೊಕ್ಕರು ॥೩೬॥

ಶಿವನನ್ನು ಅರಸಿಬಂದ ಆ ದೇವತೆಗಳು ಹೀಗೆಂದು ಪ್ರಾರ್ಥಿಸಿದರು. "ಅಮಿತವಾದ ಗರ್ವದಿಂದ ಮೆರೆಯುತ್ತಿದ್ದ ದಕ್ಷನನ್ನು ಶಿಕ್ಷಿಸುವ ಸಾಮರ್ಥ್ಯವುಳ್ಳ ಶಿವನೇ! ನೀನು ನಿನ್ನ ರೌದ್ರಾವತಾರದಿಂದ ವೀರಭದ್ರನನ್ನು ಸೃಷ್ಟಿಸಿ, ಅವನ ಮೂಲಕ, ಸಕಲ ದೇವತೆಗಳನ್ನೂ ಮತ್ತು ದ್ವಿಜರನ್ನೂ ಶಿಕ್ಷಿಸಿದೆ. ಮತ್ತು ಹಿಂದೆ ಸಮುದ್ರಮಥನ ಕಾಲದಲ್ಲಿ ಉಂಟಾದ ವಿಷವನ್ನು ಕಂಠದಲ್ಲಿ ಧರಿಸಿ ದೇವತೆಗಳನ್ನು ಕಾಪಾಡಿರುವೆ. ಆದುದರಿಂದ ಈ ಆಪತ್ಕಾಲದಲ್ಲಿ ನಮ್ಮನ್ನು ರಕ್ಷಿಸು. ॥೩೭॥

ಗಿರಿಜೆಯ ಮುಖವನ್ನೇ ನೋಡುವುದರಲ್ಲಿ ಆಸಕ್ತವಾದ ಕಟಾಕ್ಷದಿಂದ ಯುಕ್ತನಾದ ಗಂಗಾಧರನೇ, ನಮಗೆ ಪ್ರಸನ್ನನಾಗು. ಪರಮೇಶ್ವರನೇ, ದಕ್ಷಬ್ರಹ್ಮನ ಅಹಂಕಾರವನ್ನು ಸಹಿಸಲಾರದೇ ಅವನನ್ನು ನಿರ್ಮೂಲಗೊಳಿಸುವ ಸಲುವಾಗಿ

ಇತ್ಥಂ ಸುರವಚೋ ದೇವಿ ಶ್ರುತ್ವಾ ಯಜ್ಞಫಲೇನ ತಂ ।
ಪೂರಯಿತ್ವಾ ಮಹಾದೇವಿ ತಂ ದಕ್ಷಂ ಧ್ವಸ್ತಕಂಧರಂ ॥೩೯॥

ಅನುಗೃಹ್ಯಾಮರೇಂದ್ರಾಂಶ್ಚ ವೀರಭದ್ರಂ ನಿವಾರ್ಯ ವೈ ।
ತವಾಂಗಸಂಗವಿರಹಾದಸಂಗೋ ವಿಚರಾಮ್ಯಹಂ ॥೪೦॥

ನದ್ಯಃ ಸರಾಂಸಿ ವಿಪಿನೇ ಪತ್ತನೇ ನಗರೇ ತಥಾ ।
ಶೈಲೇಂದ್ರಶಿಖರೇ ದೇವಿ ಶರ್ಮ ನ ಕ್ವಚಿದೇವ ಮೇ ॥೪೧॥

ಭೂಧರೋ ಹಿಮವಾನೇಷ ತ್ವತ್ಪಿತಾ ಚಾರುಕಂಧರಃ ।
ಅಸ್ಮಿನ್ನೇವ ವಸಾಮೀತಿ ಮನೋ ಮೇಽಭವದುನ್ಮುಖಂ ॥೪೨॥

ಉಗ್ರವಾದ ಕೋಪಮುದ್ರೆಯನ್ನು ನೀನು ಧರಿಸಿರುವೆಯಲ್ಲವೆ? ಪ್ರಮಥಗಣಗಳ ಪ್ರಭುವೇ, ನಮ್ಮನ್ನು ರಕ್ಷಿಸು. ನಿನ್ನ ಪಾದಗಳನ್ನೇ ಸೇವಿಸಲು ಬಂದಿರುವ ನಮ್ಮ ಇಷ್ಟಾರ್ಥವನ್ನು ನೆರವೇರಿಸು." ||೩೮||

ಎಲೌ ದೇವಿಯೇ, ದೇವತೆಗಳ ಮೃದುವಾದ ಆ ಮಾತುಗಳನ್ನು ಕೇಳಿ ಅವರಲ್ಲಿ ದಯೆದೋರಿದ ನಾನು, ದಕ್ಷನು ನೆರವೇರಿಸಿದ ಯಜ್ಞಕರ್ಮದಿಂದುಂಟಾದ ಫಲದ ಮಹಿಮೆಯಿಂದ ಮಸ್ತಕಹೀನವಾದ ಅವನ ಮುಂಡದೊಂದಿಗೆ ರುಂಡವನ್ನು ಜೋಡಿಸಿ ಅವನಿಗೆ ಜೀವಕಳೆಯನ್ನು ಕೊಟ್ಟು ವೀರಭದ್ರನನ್ನು ಹಿಂದಕ್ಕೆ ಕರೆಯಿಸಿಕೊಂಡು ಆ ದೇವತೆಗಳನ್ನು ಅನುಗ್ರಹಿಸಿದೆನು. ಬಳಿಕ ನಾನು ನಿನ್ನ ವಿರಹದಿಂದುಂಟಾದ ಶೋಕವನ್ನು ಸಹಿಸಿಕೊಂಡು ಈ ಸ್ಥಳದಲ್ಲಿ ಸಂಚರಿಸುತ್ತಿದ್ದೇನು. ||೩೯-೪೦||

ದೇವಿ, ಈರೀತಿಯಲ್ಲಿ ನಿನ್ನ ವಿರಹದಿಂದ ಸಂತಾಪಗೊಂಡ ನಾನು ನದಿಯ ತೀರಗಳಲ್ಲಿಯೂ, ಸರೋವರದ ಬಳಿಯಲ್ಲಿಯೂ, ರಮ್ಯವಾದ ಉದ್ಯಾನವನದಲ್ಲಿಯೂ ಪಟ್ಟಣದಲ್ಲಿಯೂ, ನಗರದಲ್ಲಿಯೂ, ಮತ್ತು ಹಿಮವತ್ಪರ್ವತದ ಶಿಖರಗಳಲ್ಲಿಯೂ ಸಂಚರಿಸಿದೆನು. ಆದರೂ ನನಗೆ ಅಲ್ಲೆಲ್ಲಿಯೂ ಮನಶ್ಶಾಂತಿ ದೊರಕಲಿಲ್ಲ. ||೪೧||

ಬಳಿಕ ನಾನು ಮನೋಹರವಾದ ಶಿಖರಗಳಿಂದ ಶೋಭಿಸುತ್ತಿರುವ ನಿನ್ನ ತಂದೆಯಾದ ಹಿಮವಂತನ ಸನ್ನಿಧಾನದಲ್ಲಿಯೇ ವಾಸವಾಗಿದ್ದು ಕಾಲವನ್ನು ಕಳೆಯಬೇಕೆಂದು ಸಂಕಲ್ಪಿಸಿದೆನು. ||೪೨||

ತಪಸ್ತಪ್ತಂ ಮಹಾದೇವಿ ವರ್ಷಾಣಾಮಯುತಂ ತದಾ ।
ಏತಸ್ಮಿನ್ನಂತರೇ ದೇವಾಸ್ತಾರಕಾಸುರಪೀಡಿತಾಃ ॥೪೩॥

ಮದಂಗಸಂಗಸಂಭೂತಂ ತನಯಂ ತಜ್ಜಯೇ ಧೃತಂ ।
ಪ್ರಾಪ್ತುಂ ದೇವಗಣಾಃ ಸರ್ವೇ ಮನ್ಮಥಾದ್ಯೈಶ್ಚ ಸಂಸ್ತುತಾಃ ॥೪೪॥

ಪಿತುರ್ನಿಯೋಗಾನ್ಮಾತುಸ್ತೇ ಶುಶ್ರೂಷಂತ್ಯಾ ತ್ವಯಾ ತದಾ ।
ಮಾಂ ತೇ ದೇವಗಣಾ ದೇವಿ ಊರ್ಧ್ವರೇತಸಮಾಶ್ರಿತಂ ॥೪೫॥

ಪ್ರಧರ್ಷಯಂತಿ ಮಾರೇಣ ದಗ್ಧೋ ಮಾರಃ ಕ್ಷಣಾನ್ಮಯಾ ।
ತದಾ ಮಾಂ ತ್ವಂ ಭಯಾತ್ತ್ಯಕ್ತ್ವಾ ತಪ ಉಗ್ರಂ ಸಮಾಸ್ಥಿತಂ ॥೪೬॥

ಪಿತರಂ ಪ್ರಾಪನತ್ಯೇನ ಪುನಸ್ತ್ವಂ ತಪಸಿ ಸ್ಥಿತಾ ।
ನಾರದೋದಿತವಾಕ್ಯೇನ ಬ್ರಹ್ಮಣಾ ಚ ಮಹೀಧರಃ ॥೪೭॥

ತರುಣಿಯೇ: ಈ ಹಿಮವತ್ಪರ್ವತದಲ್ಲಿ ಹತ್ತು ಸಹಸ್ರ ವರ್ಷಗಳವರೆಗೆ ಉಗ್ರವಾದ ತಪಸ್ಸನ್ನು ಮಾಡಿದೆನು. ಅಷ್ಟರೊಳಗೆ, ದೇವತೆಗಳು ತಾರಕಾಸುರನೆಂಬ ರಾಕ್ಷಸನಿಂದ ಪೀಡಿತರಾಗಿದ್ದರು. ॥೪೩॥

ಆ ತಾರಕಾಸುರನನ್ನು ಜಯಿಸಲು ನನ್ನ ಶರೀರಸಂಬಂಧದಿಂದ ಜನಿಸಿದ ಪುತ್ರನೇ ಸಮರ್ಥನೆಂದು ತಿಳಿದು, ಅವನನ್ನು ತಮ್ಮ ಸಹಾಯಕನನ್ನಾಗಿ ಪಡೆಯಬೇಕೆಂಬ ಇಚ್ಛೆಯಿಂದ, ಮನ್ಮಥನೇ ಮುಂತಾದವರಿಂದ ಕೂಡಿ ಆ ದೇವತೆಗಳು, ನನ್ನ ಬಳಿಗೆ ಬಂದರು. ॥೪೪॥

ನೀನು ನಿನ್ನ ಮಾತಾಪಿತೃಗಳ ಅನುಮತಿಯನ್ನು ಪಡೆದು, ತಪಸ್ಸಿನಲ್ಲಿ ನಿರತನಾದ ನನ್ನನ್ನು ಸೇವಿಸುತ್ತಿರಲು, ದೇವತೆಗಳು ಮನ್ಮಥನ ಸಹಾಯದಿಂದ ನನ್ನ ತಪಸ್ಸನ್ನು ಭಂಗಪಡಿಸಲು ಪ್ರಯತ್ನಿಸಿದರು. ಆಗ ನಾನು, ನನ್ನ ನೇತ್ರಾಗ್ನಿಯಿಂದ ಕ್ಷಣಕಾಲದಲ್ಲಿ ಆ ಮನ್ಮಥನನ್ನು ದಹಿಸಿದೆನು. ಆಗ ನೀನು, ಭಯಗೊಂಡವಳಾಗಿ, ಕಠಿಣವಾದ ತಪಸ್ಸನ್ನು ಕೈಗೊಂಡಿದ್ದ ನನ್ನನ್ನು ಬಿಟ್ಟು ನಿನ್ನ ತಂದೆಯ ಬಳಿಗೆ ತೆರಳಿದೆ. ॥೪೫-೪೬॥

ಬಳಿಕ ನೀನು ತಪಸ್ಸಿನಲ್ಲಿ ಆಸಕ್ತಳಾದೆ. ನಾರದ ಮತ್ತು ಬ್ರಹ್ಮ ಇವರಿಬ್ಬರು ನುಡಿದ ವಚನವನ್ನು ಅನುಸರಿಸಿ ನಿನ್ನ ತಂದೆಯು ನನ್ನೊಂದಿಗೆ ನಿನ್ನ

ಸುರಸಂ ಪ್ರಾರ್ಥಿತಶ್ಚಾಹಂ ಮಹ್ಯಂ ತ್ವಾಮುದದಾದುಮೇ ।
ತ್ವಯಾ ಸಹಾಯಂ ಕಲ್ಯಾಣಿ ನಿವಸಾಮಿ ನಗೋತ್ತಮೇ ॥೪೮॥

ತದಾ ಕಾಲೇನ ಸಂಜಾತಃ ಕುಮಾರೋ ಮೇಽಮಿತಪ್ರಭಃ ।
ಷಣ್ಮುಖಃ ಕೃತ್ತಿಕಾಸೂನುರಗ್ನೇರಿಯೋಗ್ನಿಸಮಾನಭಾಃ ॥೪೯॥

ದೇವಾಶ್ಚ ವವೃಷುಸ್ತಸ್ಯ ಮೂರ್ಧ್ನಿ ಪುಷ್ಪೋತ್ಕರಂ ಶಿವೇ ।
ನನೃತುಶ್ಚಾಪ್ಸರಃಸಂಘಃ ಪ್ರವಾದ್ಯದ್ದೇವತೂರ್ಯಕಂ ॥೫೦॥

ಸೇನಾಪತ್ಯೇಽಭಿಷಿಕ್ತಶ್ಚ ದೇವೈಃ ಸೇಂದ್ರಪಿತಾಮಹೈಃ ।
ವಿಜಿಗ್ಯೇ ತಾರಕಂ ಶೂರಂ ದೇವೈಸ್ತದನುಯಾಯಿಭಿಃ ॥೫೧॥

ತಾರಕಾರಿರಿತಿ ಖ್ಯಾತಃ ಪುತ್ರಸ್ತೇ ಗಿರಿಜೇಽಮಲಃ ।
ಏವಂ ಸ್ಥಿತೇ ತದಾ ಸ್ವೈಃ ಸ್ವೈಃ ಗಣೇಂದ್ರೈ ರಜತಾಚಲಂ ॥೫೨॥

---

ಪಾಣಿಗ್ರಹಣವನ್ನು ನೆರವೇರಿಸಿದನು. ಅಂದಿನಿಂದ ನಾನು ನಿನ್ನೊಂದಿಗೆ ಸುಖದಿಂದ ವಾಸವಾಗಿರುವನು. ॥೪೭-೪೮॥

ಈರೀತಿಯಲ್ಲಿ ಕೆಲವು ಕಾಲವು ಅತಿಕ್ರಮಿಸಲು, ಅಗ್ನಿಯಂತೆ ಪ್ರಜ್ವಲಿಸುತ್ತಿರುವ ನನ್ನ ರೇತಸ್ಸಿನಿಂದ ಜನಿಸಿ, ಕೃತ್ತಿಕೆಯರ ಪುತ್ರನೆಂದೆನಿಸಿಕೊಂಡ ಆರು ಮುಖಗಳಿಂದ ಕೂಡಿದ ಮತ್ತು ಅಮಿತವಾದ ಪರಾಕ್ರಮದಿಂದ ಶೋಭಿಸುವ ಕುಮಾರಸ್ವಾಮಿಯು ಮಗನಾಗಿ ಜನಿಸಿದನು. ॥೪೯॥

ಅವನ ಜನನಕಾಲದಲ್ಲಿ ದೇವತೆಗಳು, ಕುಮಾರನ ಶಿರಸ್ಸಿನಮೇಲೆ ಹೂವುಗಳನ್ನು ಮಳೆಗರೆದರು. ಅಪ್ಸರಸ್ತ್ರೀಯರು ಸ್ವೇಚ್ಛೆಯಿಂದ ನರ್ತಿಸಿದರು. ದೇವದುಂದುಭಿಗಳು ಮೊಳಗಿದುವು. ॥೫೦॥

ಕ್ರಮೇಣ ದೇವೇಂದ್ರ, ಬ್ರಹ್ಮ, ಮುಂತಾದ ದೇವತೆಗಳು, ಕುಮಾರನಿಗೆ ಸೇನಾಪತಿಯ ಸ್ಥಾನದಲ್ಲಿ ಪಟ್ಟಗಟ್ಟಿದರು. ಬಳಿಕ, ಕುಮಾರಸ್ವಾಮಿಯು ಸಹಾಯದಿಂದದೇವತೆಗಳು ಪರಾಕ್ರಮಿಯಾದ ತಾರಕಾಸುರನನ್ನು ಯುದ್ಧದಲ್ಲಿ ಜಯಿಸಿದರು. ॥೫೧॥

ಎಲೌ ಗಿರಿಜೆಯೇ, ನಿನ್ನ ಭಾಗ್ಯಶಾಲಿಯಾದ ಕುಮಾರನು ತಾರಕಾಸುರನನ್ನು ಸಂಹರಿಸಿದ ಬಳಿಕ "ತಾರಕಾರಾತಿ" ಎಂಬ ಅನ್ವರ್ಥನಾಮಧೇಯವನ್ನು ಪಡೆವನು. ಹೀಗಿರುವಾಗ ನಾನು ನನ್ನ ಪ್ರಮಥಗಣಗಳಿಂದ ಸಮೇತನಾಗಿ

ಮಂದರಂ ಸುಂದರಂ ಚಾರು ಕಂದರೌಘೈರ್ವಿರಾಜಿತಂ ।
ತಸ್ಮಿನ್ಮಂದಾರವೃಂದಾಢ್ಯೇ ಮಕರಂದಸುಮಸುಂದರೇ ॥೫೩॥

ವಿಹರ್ತುಮಿಚ್ಛಾ ಮೇ ಜಾತಾ ತ್ವಯಾ ಸಾಕಂ ವರಾನನೇ ।
ಗತಂ ಗಣಗಣೈಃ ಸಾರ್ಧಂ ತ್ವಯಾ ಭೂಧರಕನ್ಯಕೇ ॥೫೪॥

ತ್ವದ್ವಿಯೋಗಭಯಾದ್ದೇವಿ ದುಃಖೇನ ಚ ಪರಿಪ್ಲುತಃ ।
ಸ ಮಾಂ ತುಷ್ಟಾವ ಹೃಷ್ಟಾತ್ಮಾ ಹಿಮವಾಂಶ್ಚಾರುಕಂಧರಃ ॥೫೫॥

॥ ಹಿಮವಾನುವಾಚ ॥

ಶಂಭೋ ವಿಶ್ವೇಶ ಭರ್ಗ ತ್ರಿನಯನ ಪುರಹನ್ಪಾಹಿ ಮಾಮೀಶ ದೃಷ್ಟ್ಯಾ ।
ಖ್ಯಾತೋ ವೇದೇ ಗಿರೀಶೋ ಗಿರಿಶ ಇತಿ ಭವಾಂಸ್ತತ್ಕುರುಷ್ವಾದ್ಯ ತಥ್ಯಂ ।
ಶಂಭೋ ದೇವ್ಯಾನಯಾ ತೇ ಸುರತಜನಿತಸಸ್ನೇಹಪಾರ್ಶ್ವೈರ್ವಿಯೋಗಂ
ನೋ ಸಹ್ಯಂ ಮೇ ಮಹೇಶ ಮಮ ಶಿಖರವರೇ ಸಂವಸಾತ್ರೈವ ಶಂಭೋ
॥೫೬॥

ಆಹ್ಲಾದಕರವಾಗಿಯೂ ಮನೋಹರವಾಗಿಯೂ ಸುಂದರವಾದ ತಪ್ಪಲುಪ್ರದೇಶಗಳಿಂದ ಕೂಡಿರುವ ರಜತಾಚಲದಲ್ಲಿ ವಾಸವಾಗಿರುತ್ತಿದ್ದೆನು. ಹೀಗಿರಲು ಒಂದಾನೊಂದುದಿನ ನನಗೆ ಮಂದಾರಪುಷ್ಪಗಳಿಂದ ಶೋಭಿಸುತ್ತಿರುವ "ಮಂದಾರ" ಎಂಬ ಹೆಸರುಳ್ಳ ಒಂದಾನೊಂದು ಉದ್ಯಾನವನದಲ್ಲಿ ನಿನ್ನೊಂದಿಗೆ ವಿಹರಿಸುವ ಇಚ್ಛೆಯು ಉಂಟಾಯಿತು. ॥೫೨-೫೩॥

ಒಡನೆ ನಾನು ನನ್ನ ಪ್ರಮಥಗಣಗಳೊಡಗೂಡಿ ನನ್ನೊಂದಿಗೆ ಅಲ್ಲಿಗೆ ತೆರಳಿದೆನು. ॥೫೪॥

ಇನ್ನುಮುಂದೆ ನಿನ್ನ ವಿಯೋಗವೆಲ್ಲಿ ಸಂಭವಿಸುವುದೋ ಎಂಬ ಶಂಕೆಯಿಂದ ದುಃಖಕ್ಕೆ ಗುರಿಯಾಗಿ ದುಃಖದಿಂದ ಪರಿತಪಿಸುತ್ತಿದ್ದ ನನ್ನನ್ನು ನಿನ್ನ ತಂದೆಯಾದ ಹಿಮವಂತನು ಪರಿಪರಿಯಿಂದ ಸ್ತುತಿಸಿದನು. ॥೫೫॥

ಓ ಶಂಭುವೇ, ವಿಶ್ವೇಶ್ವರನೇ, ಮುಕ್ಕಣ್ಣನೇ, ತ್ರಿಪುರಾಂತಕನೇ, ಒಮ್ಮೆ ನನ್ನ ಕಡೆ ನಿನ್ನ ಕಟಾಕ್ಷವೀಕ್ಷಣಗಳನ್ನು ಗುರಿಬೀರಿ ನನ್ನನ್ನು ರಕ್ಷಿಸು. ನೀನು ಪರ್ವತರಾಜನೆಂಬ ಹೆಸರಿನಿಂದ ವೇದಗಳಲ್ಲಿ ಪ್ರಸಿದ್ಧನಾಗಿರುವೆ. ಆದುದರಿಂದ ನಿನ್ನ

ಮದೀಯಾಪರಾಧಾನಪೋಘಾನನಂತಾ
ನ್ನ ಕೇನಾಪಿ ಶಕ್ಯಾ ವಿನಿರ್ವರ್ತಿತುಂ ತಾನ್ ।
ಮಹಾದೇವ ತೇ ಪಾದಪದ್ಮಂ ಪ್ರಕೃಷ್ಟಂ
ಪ್ರಪನ್ನಃ ಪ್ರಪನ್ನಃ ಪ್ರಪನ್ನಃ ಪ್ರಪನ್ನಃ ॥೫೭॥

ಶ್ರೀಮದ್ಬಿಲ್ವಮಹೀಧರೌಘಚಲನ್ನೈರ್ವಾತಾದಿಭಿಃ ಪಾವಿತಂ
ಗಾತ್ರಂ ಮೇಽದ್ಯ ಪವಿತ್ರತಾಮುಪಗತಂ ಪಾಹಿ ತ್ರಿನೇತ್ರಾಧುನಾ ।
ತನ್ಮೂಲನೀರಪ್ಲುತಪೂತಮಸ್ತಕಂ ನೇತ್ರೇ ಚ ತದ್ದರ್ಶನೇ
ಘ್ರಾಣಂ ತತ್ಸುಮಗಂಧಬಂಧಮಧುರಂ ಮಯ್ಯೇವ ಶಂಭೋ ವಸ ॥೫೮॥

ಏವಂ ಸ್ತುತೋ ಮಹಾದೇವಿ ತ್ವತ್ಪಿತ್ರಾಹಂ ಮಹಾತ್ಮನಾ ।
ತತ್ತುಂಗಪೂತಶಿಖರೇ ನಿವಾಸಂ ಸಮರೋಚಯಂ ॥೫೯॥

---

ಆ ನಾಮಧೇಯವನ್ನು ಈಗ ಅನ್ವರ್ಥಗೊಳಿಸು. ಓ ಶಂಭುವೇ, ದೇವಿಯಾದ ಈ ಗಿರಿಜೆಯೊಂದಿಗೆ ನಿನಗಿರುವ ಸುರತಪಾಶಗಳನ್ನು ಶಿಥಿಲಗೊಳಿಸಬೇಡ. ನಿಮ್ಮಾರ್ವರ ವಿಯೋಗವನ್ನು ನಾನು ಸಹಿಸಲಾರೆ. ಆದುದರಿಂದ ನನ್ನ ಶಿಖರದಲ್ಲಿ ನೀನು ಸದಾ ವಾಸವಾಗಿರು. ॥೫೬॥

ನಾನು ಮಾಡಿರುವ ಅಪಾರ ಅಪರಾಧಗಳನ್ನು ಕ್ಷಮಿಸಲು ನೀನಲ್ಲದೇ ಮತ್ತಾರೂ ಸಮರ್ಥರಾಗರು. ಆದುದರಿಂದ ನಿನ್ನ ಉತ್ಕೃಷ್ಟವಾದ ಅಡಿದಾವರೆಗಳನ್ನು ಮರೆಹೊಗುವೆನು. ॥೫೭॥

ತ್ರಿನೇತ್ರನೇ ! ನನ್ನ ಈ ಶರೀರವು ಬಿಲ್ವವೃಕ್ಷಗಳಿಂದ ಕೂಡಿರುವ ಪರ್ವತಗಳ ಮೂಲಕ ಬೀಸಿಬರುವ ವಾಯುವನ್ನು ಸೇವಿಸಿ ಪವಿತ್ರವಾಗಿರುವುದು. ಆದುದರಿಂದ ಇದೀಗ ನನ್ನನ್ನು ರಕ್ಷಿಸು. ನನ್ನ ಮಸ್ತಕವು ಬಿಲ್ವವೃಕ್ಷಗಳ ಮೂಲಭಾಗದಲ್ಲಿರುವ ನೀರಿನಿಂದ ಪವಿತ್ರವಾಗಿರುವುದು. ಈ ನೇತ್ರಗಳು, ಬಿಲ್ವವೃಕ್ಷದ ದರ್ಶನದಿಂದ ಶುದ್ಧವಾಗಿರುವುವು. ಘ್ರಾಣೇಂದ್ರಿಯವು ಬಿಲ್ವಪುಷ್ಪಗಳ, ಸುಗಂಧವನ್ನು ಆಘ್ರಾಣಿಸಿ ಪರಿಶುದ್ಧವಾಗಿರುವುದು. ಓ, ಶಂಭೋ ! ನೀನು ನನ್ನಲ್ಲಿಯೇ ವಾಸವಾಗಿರು. ॥೫೮॥

ಎಲೌ ದೇವಿಯೇ, ನಿನ್ನ ತಂದೆಯಾದ ಪೂಜ್ಯ ಹಿಮವಂತನು ನನ್ನನ್ನು ಈ ರೀತಿಯಲ್ಲಿ ಸ್ತುತಿಸಲು ನಾನು ಅವನ ಉನ್ನತವಾದ ಶಿಖರದಲ್ಲಿ ವಾಸವಾಗಿರಲು ಬಯಸಿದೆನು. ॥೫೯॥

ಬ್ರಹ್ಮವಿಷ್ಣ್ವಾದಿಭಿರ್ದೇವೈಃ ಸ್ಕಂದೇನ ಗಣಪೇನ ಚ ।
ಅನ್ಯೈರ್ಗಣವರೈರ್ದೇವಿ ತ್ವಯಾ ಶೈಲೇಂದ್ರಕನ್ಯಯಾ ॥೬೦॥

ಸಮರ್ಚಿತೋ ವಸಾಮ್ಯತ್ರ ಕೇದಾರೇಶ್ವರಲಿಂಗಗಃ ।
ಅಲಿಂಗೋಽಪಿ ಮಹೇಶಾನಿ ಸರ್ವದಾ ಲಿಂಗರೂಪಧೃಕ್ ॥೬೧॥

ಕೇದಾರೇಶ್ವರನಾಮ್ನಾಹಂ ಖ್ಯಾತೋ ಭೂಧರಗೌರವಾತ್ ।
ವಸಾಮ್ಯತ್ರ ಮಹಾದೇವಿ ಲಿಂಗೇಽಸ್ಮಿನ್ಪಾವನೇ ಶುಭೇ ॥೬೨॥

ಧನ್ಯೈಃ ಸಮರ್ಚಿತೋ ನಿತ್ಯಂ ಬಿಲ್ವಪತ್ರೈಃ ಫಲೈರಪಿ ।
ತ್ವಯಾ ಸಹಾಂಬಿಕೇ ನಿತ್ಯಂ ಸರ್ವದಾ ಸರ್ವಕಾಮದಃ ॥೬೩॥

ಉದಯಮಲಯಪಾರಿಯಾತ್ರವಿಂಧ್ಯೈಃ
ಗಿರಿವರ ಏಷ ಮತೋಽಭಿಮಾನವಸ್ತೇ ।
ಸುರವರಕಿನ್ನರದೇವಸಂಘನಂದಿ
ಪ್ರಮುಖಗಣೈಃ ಸತತಂ ನಿಷೇವಿತಃ ॥೬೪॥

ಅಂದಿನಿಂದ ಮೊದಲುಗೊಂಡು, ನಾನು ಲಿಂಗರೂಪಿಯಾಗಿರದಿದ್ದರೂ, ಸ್ವೇಚ್ಛೆಯಿಂದ ಶಿವಲಿಂಗರೂಪವನ್ನು ಧರಿಸಿ, ಈ ಕೇದಾರೇಶ್ವರಲಿಂಗದಲ್ಲಿ ನೆಲಸಿ, ಬ್ರಹ್ಮ, ವಿಷ್ಣು, ಮುಂತಾದ ದೇವತೆಗಳಿಂದಲೂ, ಕುಮಾರಸ್ವಾಮಿ, ಗಣಪತಿ, ಇವರಿಂದಲೂ, ಮತ್ತು ಇನ್ನಿತರ ಪ್ರಮಥಗಣಗಳಿಂದಲೂ, ಪೂಜಿಸಲ್ಪಟ್ಟವನಾಗಿ ಈ ಪ್ರದೇಶದಲ್ಲಿ ವಾಸವಾಗಿರುವೆನು. (೬೦-೬೧)

ದೇವಿ! ನಾನು ಕೇದಾರೇಶ್ವರನೆಂಬ ಹೆಸರಿನಿಂದ ಪ್ರಸಿದ್ಧನಾಗಿ ನಿನ್ನ ತಂದೆಯಾದ ಹಿಮವಂತನ ಮನ್ನಣೆಗೆ ಪಾತ್ರನಾಗಿ ಈ ಪವಿತ್ರವಾದ ಶಿವಲಿಂಗದಲ್ಲಿ ವಾಸವಾಗಿರುವೆನು. (೬೨)

ಎಲೌ ಗಿರಿಜೆಯೇ! ದೇವಿಯೆನಿಸಿದ ನಿನ್ನಿಂದ ಸಮೇತನಾದ ನನ್ನನ್ನು ಯಾರು ಪ್ರತಿದಿನವೂ, ಬಿಲ್ವಪತ್ರೆಗಳಿಂದ ಪೂಜಿಸಿ ಫಲಗಳನ್ನು ನಿವೇದಿಸುವರೋ, ಅವರಿಗೆ ನಾನು ಸಕಲ ಇಷ್ಟಾರ್ಥಗಳನ್ನೂ ದಯಪಾಲಿಸುವೆನು. (೬೩)

ನಿನ್ನ ತಂದೆಯಾದ ಈ ಹಿಮವಂತನು, ನನ್ನ ಅನುಗ್ರಹದ ಬಲದಿಂದ ಉದಯಾಚಲ, ಮಲಯ ಪರ್ವತ, ಪಾರಿಯಾತ್ರ ಪರ್ವತ, ವಿಂಧ್ಯಪರ್ವತ, ಇವೇ

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ದಕ್ಷಾಧ್ವರವರ್ಣನ
ಪೂರ್ವಕ ಹಿಮಾಚಲ ಶಿವನಿವಾಸವರ್ಣನಂ ನಾಮ
ದ್ವಾದಶೋಽಧ್ಯಾಯಃ

ಮೊದಲಾದ ಪರ್ವತಗಳಿಗಿಂತಲೂ, ಶ್ರೇಷ್ಠನಾಗಿರುವನಲ್ಲದೇ ದೇವತೆಗಳು, ಕಿನ್ನರರು ನಂದಿ ಮತ್ತು ಪ್ರಮಥಗಣಗಳು, ಇವರಿಂದ ಅನವರತವೂ ಸೇವಿಸಲ್ಪಡುತ್ತಿರುವನು. ಎಂದು ಶಂಕರನು ದೇವಿಗೆ ತನ್ನ ಹಿಂದಿನ ವೃತ್ತಾಂತವನ್ನರುಹಿದನು. ||೬೪||

ಇಲ್ಲಿಗೆ ಭರ್ಗಸಂಜ್ಞೆಯುಳ್ಳ ಶಿವರಹಸ್ಯದ, ಐದನೆಯ ಅಂಶದಲ್ಲಿ ದಕ್ಷಯಜ್ಞದ
ವರ್ಣನೆ ಮತ್ತು ಹಿಮಾಚಲದಲ್ಲಿ ಶಿವನಿವಾಸ ವರ್ಣನೆಯೆಂಬ
ಹನ್ನೆರಡನೆಯ ಅಧ್ಯಾಯವು ಕೊನೆಗಂಡಿತು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ತ್ರಯೋದಶೋಽಧ್ಯಾಯಃ

॥ ಈಶ್ವರ ಉವಾಚ ॥

**ಹಿಮವಚ್ಛಿಖರೇ ದೇವಿ ಲಿಂಗಾನ್ಯನ್ಯಾನಿ ಸಂತಿ ವೈ ।**
**ಕೇದಾರೇಶ್ವರರೂಪಾಣಿ ಶೃಣು ತಾನ್ಯಪಿ ಪಾರ್ವತಿ ॥೧॥**

**ಕೇದಾರೇಶ್ವರಮಾಸಾದ್ಯ ಮುಕ್ತ ಏವ ನ ಸಂಶಯಃ ।**
**ಕೇದಾರೇತಿ ಸದಾ ಜಪ್ತ್ವಾ ಪಾಪಸಂಘಕ್ಷಯೋ ಭವೇತ್ ॥೨॥**

**ಹಿಮವಾಂಸ್ತತ್ಪಿತಾ ಗೌರಿ ಮೇನಯಾ ಸಹ ಭಾರ್ಯಯಾ ।**
**ಕೇದಾರೇಶಂ ಸಮಭ್ಯರ್ಚ್ಯ ಬಿಲ್ವಪತ್ರೈರನೇಕಶಃ ॥೩॥**

## ಹದಿಮೂರನೆಯ ಅಧ್ಯಾಯವು

ಬಳಿಕ ಶಿವನು ಗಿರಿಜೆಯನ್ನು ಕುರಿತು ಮತ್ತೆ ಹೇಗೆಂದನು. ಎಲೌ ಪಾರ್ವತಿಯೇ, ಈ ಹಿಮವತ್ಪರ್ವತದ ಶಿಖರದಲ್ಲಿ ಕೇದಾರೇಶ್ವರಲಿಂಗದಂತೆ ಪವಿತ್ರವಾದ ಇನ್ನೂ ಅನೇಕ ಶಿವಲಿಂಗಗಳಿರುವುವು. ಅವು ಯಾವುವೆಂಬುದನ್ನು ಹೇಳುವೆನು ಕೇಳು ॥೧॥

ಮನುಷ್ಯನು ಕೇದಾರೇಶ್ವರನ ಸಾನ್ನಿಧ್ಯವನ್ನು ಪಡೆದು ಮುಕ್ತಿಯನ್ನು ಹೊಂದುವನು. ಪಾಪಿಷ್ಠನೂ ಸಹ ಕೇದಾರೇಶ್ವರನಾಮವನ್ನು ಜಪಿಸಿ ಸಕಲ ಪಾಪಗಳಿಂದಲೂ ನಿರ್ಮುಕ್ತನಾಗುವನು. ॥೨॥

ಎಲೌ ಗೌರಿಯೇ, ನಿನ್ನ ತಂದೆಯಾದ ಹಿಮವಂತನು ತನ್ನ ಪತ್ನಿಯಾದ ಮೇನಕೆಯೊಡಗೂಡಿ ಬಿಲ್ವಪತ್ರೆಗಳಿಂದ ಅನೇಕ ಬಾರಿ ಪೂಜಿಸಿ ಸಂತುಷ್ಟನಾಗಿ

ಹೃಷ್ಟೋ ಭವತಿ ಮಲ್ಲಿಂಗನಿರೀಕ್ಷಣಸಮುತ್ಸುಕಃ ।
ಸಂಸ್ತೌತಿ ಸತತಂ ಭಕ್ತ್ಯಾ ಹಿಮವಾನೇಷ ಭೂಧರಃ ॥೪॥

॥ ಹಿಮವಾನುವಾಚ ॥

ಏಕಂ ಬ್ರಹ್ಮ ಜಗದ್ವಿತೀಯಮಪಿ ವೈ ಲೋಕತ್ರಯಂ ದೀಪ್ತಿಮತ್
ಚತ್ವಾರಃ ಪ್ರದಿಶೋ ಮಹೇಶ್ವರ ಮಹಾಭೂತಾನಿ ಪಂಚೈವ ಹಿ ।
ಷಟ್ಕಂ ಕ್ರತ್ವಧಿದೈವತಂ ಪವನಕಾಃ ಸಪ್ತೈವ ವಸ್ವಷ್ಟಕಂ
ದುರ್ಗಾಣಾಂ ನವಕಂ ದಶೇಂದ್ರಿಯಗಣಂ ತ್ವತ್ತೋ ಜಗಜ್ಜಾಯತೇ ॥೫॥

ಬ್ರಹ್ಮವಿಷ್ಣ್ವಾದಯೋ ದೇವಾಃ ಕೇದಾರೇಶ್ವರಮೀಶ್ವರಂ ।
ತತ್ರ ಚಾಪಗತೇ ಭಾನೌ ದೇವಿ ಪೂಜ್ಯಾರುಣೋದಯೇ ॥೬॥

ಇಲ್ಲಿ ಶಿವಲಿಂಗವನ್ನು ನೋಡುವುದರಲ್ಲಿ ಉತ್ಸಾಹಭರಿತನಾಗುವನು. ಅವನು ಭಕ್ತಿಪೂರ್ವಕವಾಗಿ ಅನವರತವೂ ನನ್ನನ್ನು ನಾನಾರೀತಿ ಸ್ತುತಿಸುವನು. ॥೩-೪॥

ಒಂದಾನೊಂದುಸಲ ಹಿಮವಂತನು ನನ್ನನ್ನು ಸ್ತುತಿಸುತ್ತಾ ಹೀಗೆಂದನು. "ಓ ಮಹೇಶ್ವರನೇ, ಸಜಾತೀಯ, ವಿಜಾತೀಯ, ಸ್ವಗತಭೇದರಹಿತನಾದ, ಸಚ್ಚಿದಾನಂದಸ್ವರೂಪನಾದ ಪರಬ್ರಹ್ಮವಸ್ತುವು ನೀನೇ ಆಗಿರುವೆ. ನಿನ್ನಿಂದಲೇ ಪ್ರಪಂಚವು ದ್ವಿತೀಯವೆನಿಸಿರುವುದು. ನಿನ್ನಿಂದಲೇ ಪ್ರಕಾಶಮಾನವಾದ ಲೋಕ ತ್ರಯಗಳೂ, ನಾಲ್ಕು ದಿಕ್ಕುಗಳೂ, ಪೃಥಿವೀ, ಅಪ್ಪು, ತೇಜಸ್ಸು, ವಾಯು, ಆಕಾಶ ಎಂಬ ಪಂಚಮಹಾಭೂತಗಳೂ, ಯಜಮಾನ, ಪತ್ನಿ, ಅಧ್ವರ್ಯು, ಹೋತೃ, ಉದ್ಗಾತೃ, ಬ್ರಹ್ಮ ಎಂಬ ಯಜ್ಞಕ್ಕೆ ಅಂಗವಾದ ಆರು ಋತ್ವಿಜರೂ, ಸಪ್ತಮರುತ್ತು ಗಳೂ, ಅಷ್ಟವಸುಗಳೂ, ಅಪರ್ಣಾ ಪಾರ್ವತೀ ಎಂಬಿವೇ ಮುಂತಾದ ಹೆಸರು ಗಳನ್ನು ಧರಿಸಿರುವ ನವದುರ್ಗಿಯರೂ, ಮತ್ತು ಚಕ್ಷುಸ್ಸು, ಶ್ರೋತ್ರ, ತ್ವಕ್, ಜಿಹ್ವಾ, ಘ್ರಾಣ ಎಂಬ ಪಂಚ ಜ್ಞಾನೇಂದ್ರಿಯಗಳೂ, ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಪಂಚಕರ್ಮೇಂದ್ರಿಯಗಳೂ ಈರೀತಿಯಲ್ಲಿ ಹತ್ತು ಇಂದ್ರಿಯಗಳೂ ನಿನ್ನಿಂದಲೇ ಜನಿಸಿರುವುವು" ॥೫॥

ದೇವಿ, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳು ಪ್ರತಿದಿನವೂ ಪ್ರದೋಷ ಕಾಲದಲ್ಲಿಯೂ, ಧನುರ್ಮಾಸದ ಅರುಣೋದಯಕಾಲದಲ್ಲಿಯೂ, ಬಿಲ್ವಪತ್ರೆಗಳಿಂದ

ಬಿಲ್ವಪತ್ರೈಃ ಸಮಭ್ಯರ್ಚ್ಯ ಮುದ್ಗಾನ್ನಂ ವಿನಿವೇದ್ಯ ಚ ।
ವಸಂತಿ ತತ್ರ ನಿಯತಾ ಹಿಮವಚ್ಛಿಖರೇ ಶಿವೇ ॥೭॥

ಸ್ತುವಂತಿ ವಾಗ್ಭಿರ್ಹೃಷ್ಟಾಭಿರ್ಬ್ರಹ್ಮವಿಷ್ಣ್ವಾದಿಭಿಃ ಸುರಾಃ ॥೮॥

ಹಂಸಃ ಪುಷ್ಕರಮಂಬುದಂ ಭುಜಗಭುಙ್ಮೇಘಂ ಪಯಶ್ಚಾತಕೋ
ಯದ್ವತ್ತದ್ವದುಮಾಸಹಾಯ ಭಗವನ್ ದೃಷ್ಟ್ವಾ ಪದಾಬ್ಜಂ ತವ ।
ಆನಂದಃ ಸಮುಪೈತಿ ಮೇ ಮುಹುರಹೋ ತ್ವದ್ಧ್ಯಾನತೃಪ್ತಂ ಮನಃ
ಶ್ರುತ್ವಾ ಶಂಕರನಾಮಬೋಧಿತಕಥಾಂ ಪ್ರೀತೋ ಯಥಾ ಶಾಂಭವಃ ॥೯॥

ಗ್ರಸ್ತಂ ಪಾಪೈರನೇಕೈರಹಿಮಿವ ವಿನತಾಪುತ್ರವಕ್ತ್ರಾಂತರೇಣ
ನ್ಯಸ್ತಂ ಭೂಮ್ಯಾಂ ಜಲೇಭ್ಯೋ ಝಷಮಿವ ನಿತರಾಂ ಕಂಠಸಂಚಾರಿಜೀವಂ
ಶಸ್ತಂ ಯೋಗೀಯಹಿಂಸಾನತಮಿವ ಸತತಂ ಮೃತ್ಯುಪಾಶಾವಲೀಢಂ
ತ್ರಸ್ತಂ ಮಾಂ ಕಾಲಮೃತ್ಯೋರವ ಶಿವ ಕೃಪಯಾ ದೇವ ಕೇದಾರನಾಥ
॥೧೦॥

ಕೇದಾರೇಶ್ವರನನ್ನು ಪೂಜಿಸಿ ಮುದ್ಗಾನ್ನವನ್ನು (ಹುಗ್ಗಿ) ನಿವೇದಿಸಿ ನಿಯಮದಿಂದ ಹಿಮವತ್ಪರ್ವತದ ಶಿಖರದಲ್ಲಿ ವಾಸವಾಗಿರುವರು. ॥೬-೭॥

ದೇವತೆಗಳೆಲ್ಲರೂ, ಬ್ರಹ್ಮ, ವಿಷ್ಣು, ಮುಂತಾದವರಿಂದೊಡಗೂಡಿ, ಮಧುರವಾದ ಮಾತುಗಳಿಂದ, ಕೇದಾರೇಶ್ವರನನ್ನು ಹೀಗೆ ಸ್ತುತಿಸುವರು. ॥೮॥

ಅವರಲ್ಲಿ ವಿಷ್ಣುವು ಹೀಗೆ ಸ್ತುತಿಸಿದನು – "ಓ, ಭಗವಂತನೇ, ಹಂಸವು ಸರೋವರವನ್ನೂ, ನವಿಲು ಮೇಘವನ್ನೂ, ಚಾತಕಪಕ್ಷಿಯು ವರ್ಷಾಕಾಲದ ಶುದ್ಧವಾದ ನೀರನ್ನೂ ನೋಡಿ, ಆನಂದ ಪಡುವಂತೆ ಈ ನನ್ನ ಮನಸ್ಸೆಲ್ಲ ನಿನ್ನ ಅಡಿದಾವರೆಗಳನ್ನು ನೋಡಿ, ಆತ್ಮಾನಂದವನ್ನು ಹೊಂದುವುದು. ನನ್ನ ಚಿತ್ತವು ನಿನ್ನ ಧ್ಯಾನದಿಂದ, ಶಂಕರಕಥಾಮೃತವನ್ನು ಪಾನಮಾಡಿ, ತೃಪ್ತನಾಗಿರುವ ಈಶ್ವರಭಕ್ತನೋಪಾದಿಯಲ್ಲಿ ಸದಾ ಆನಂದಾಂಬುಧಿಯಲ್ಲಿ ಮುಳುಗಿರುವುದು." ॥೯॥

ಬ್ರಹ್ಮನು ಹೀಗೆ ಹೊಗಳಿದನು "ಓ, ಕೇದಾರೇಶ್ವರನೇ! ವೈನತೇಯನಾದ ಗರುಡನಿಂದ ನುಂಗಲ್ಪಟ್ಟ ಸರ್ಪದೋಪಾದಿಯಲ್ಲಿ, ಘೋರವಾದ ಪಾಪಗಳಿಂದ ಆಕ್ರಮಿಸಲ್ಪಟ್ಟ ನನ್ನನ್ನು ರಕ್ಷಿಸು! ಇದೀಗ ನಾನು ನೀರಿನಿಂದ ಮೇಲಕ್ಕೆ ಬಂದ

ನಂದೀಶ್ವರಾಭಿಧಂ ಲಿಂಗಂ ಕೇದಾರೋಪರಿತಃ ಸ್ಥಿತಂ ।
ನಂದಿನಾ ಪೂಜಿತಂ ಲಿಂಗಂ ದೃಷ್ಟ್ವಾನಂದಮವಾಪ್ನುಯಾತ್ ॥೧೧॥

ನಂದೀ ತುಷ್ಟಾವ ಹೃಷ್ಟಾತ್ಮಾ ಲಿಂಗಂ ನಂದೀಶ್ವರಾಭಿಧಂ ॥೧೨॥

ಧ್ಯಾಯಂ ಧ್ಯಾಯಮಘಾಪಹಾರಿಚರಣಂ ದುಃಖಾಪನುತ್ಯೈ ಸದಾ
ಪಾಯಂ ಪಾಯಮಪಾಯದಾನಸಹಿತಂ ಕರ್ಣೈಸ್ತ್ವದೀಯಾಂ ಕಥಾಂ ।
ಘ್ರಾಯಂ ಘ್ರಾಯಮಥೋ ಭವತ್ಪದಲಸದ್ಬಿಲ್ವೀದಲಂ ಕೋಮಲಂ
ಜಾತಂ ಜಾತಮುಮೇಶ ಜನ್ಮ ಸಫಲಂ ಪ್ರಾಹುಸ್ತ್ವದೀಯಾ ಜನಾಃ ॥೧೩॥

ಸ್ಕಂದೇಶ್ವರಮಿತಿ ಖ್ಯಾತಂ ಸ್ಕಂದೇನಾಪಿ ಸುಪೂಜಿತಂ ।
ಸಂಪೂಜಯಿತ್ವಾ ತಲ್ಲಿಂಗಂ ಕೇದಾರೇ ದೈತ್ಯನಾಶಿನೀಂ ॥೧೪॥

---

ಮೀನಿನಂತೆ ಮರಣೋನ್ಮುಖನಾಗಿರುವೆನು. ಓ ದೇವನೇ, ಯಾಗ ಹಿಂಸೆಗೆ ಗುರಿಯಾಗಿ, ಯಮನ ಪಾಶಗಳಿಂದ ಬಿಗಿಯಲ್ಪಟ್ಟ, ಆ ಯಜ್ಞಪಶುವಿನೋಪಾದಿಯಲ್ಲಿ (ಆಡಿನೋಪಾದಿಯಲ್ಲಿ) ಮೃತ್ಯುಭಯಕ್ಕೆ ಗುರಿಯಾಗಿರುವ ನನ್ನಲ್ಲಿ ದಯೆದೋರಿ ನನ್ನನ್ನು ರಕ್ಷಿಸು." ॥೧೦॥

ಈ ಕೇದಾರೇಶ್ವರಲಿಂಗದ, ಮೇಲು ಭಾಗದಲ್ಲಿ ನಂದೀಶ್ವರವೆಂಬ ಹೆಸರುಳ್ಳ ಒಂದಾನೊಂದು ಶಿವಲಿಂಗವಿರುವುದು. ಅದು ನಂದಿಕೇಶ್ವರನಿಂದಲೂ ಪೂಜಿಸಲ್ಪಟ್ಟಿರುವುದು. ಅದನ್ನು ನೋಡಿದಮಾತ್ರದಿಂದಲೇ, ನರನು ಆತ್ಮಾನಂದವನ್ನು ಪಡೆಯುವನು. ॥೧೧॥

ನಂದೀಶ್ವರನೆಂಬ ಹೆಸರುಳ್ಳ ಆ ಶಿವಲಿಂಗವನ್ನು ನೋಡಿ ನಂದಿಕೇಶ್ವರನು ಅತ್ಯಂತ ಸಂತೋಷಗೊಂಡವನಾಗಿ ಹೀಗೆಂದು ಸ್ತುತಿಸಿದನು. ॥೧೨॥

ಓ ಉಮಾರಮಣನೇ, ಈ ಸಂಸಾರದುಃಖವನ್ನು ಹೋಗಲಾಡಿಸಿಕೊಳ್ಳುವುದಕ್ಕೋಸ್ಕರ ಪಾಪನಾಶಕವಾದ ನಿನ್ನ ಚರಣವನ್ನು ಬಾರಿಬಾರಿಗೂ ಧ್ಯಾನಿಸಿ, ಕಿವಿಗಳಿಂದ ನಿನ್ನ ಸತ್ಕಥೆಯನ್ನು ಪುನಃ ಪುನಃ ಕೇಳಿ, ನಿನ್ನ ಪಾದತಲದಲ್ಲಿರುವ ಮೃದುವಾದ ಬಿಲ್ವಪತ್ರೆಯನ್ನು ಮತ್ತೆ ಮತ್ತೆ ಆಘ್ರಾಣಿಸಿ, ಈ ಜನ್ಮವು ಸಫಲವಾಯಿತೆಂದು ನಿನ್ನ ಭಕ್ತರು ಹೇಳುವರು. ॥೧೩॥

ದೇವಿಯೇ, ಸ್ಕಂದೇಶ್ವರನೆಂಬ ಹೆಸರುಳ್ಳ ಇನ್ನೊಂದು ಶಿವಲಿಂಗವು ಈ ಕೇದಾರೇಶ್ವರ ಪ್ರದೇಶದಲ್ಲಿರುವುದು. ಅದು ಷಣ್ಮುಖನಿಂದ ಪೂಜಿಸಲ್ಪಟ್ಟಿರುವುದು.

ಮತ್ತಃ ಶಕ್ತಿಂ ಮುದಾ ಪ್ರಾಪ ಸ್ತುತ್ವಾ ಚ ಪರಮೇಶ್ವರಂ ॥೧೫॥

॥ ಸ್ಕಂದ ಉವಾಚ ॥

ಕಾಲಕಾಲ ಮುನಿಬಾಲಪಾಲ
ನೀಲಲೋಹಿತಕರೇ ಧೃತಕಪಾಲ ।
ವ್ಯಾಲಮಾಲಗಲ ಕಾಲಮಹೇಶ
ಫಾಲಲೋಚನ ಹರಾವ ಮಾಂ ಸದಾ ॥೧೬॥

ಗಣೇಶೇಶ್ವರಸಂಜ್ಞಂ ಚ ಗಜಾನನಸುಪೂಜಿತಂ ।
ಲಿಂಗಮಸ್ತ್ಯೇಕಮಿಶಾನಿ ಕೇದಾರೇಶ್ವರಪಶ್ಚಿಮೇ ॥೧೭॥

ಸ್ವಪುಷ್ಕರೋದ್ಧೃತೈರ್ನೀರೈಃ ಸ್ವಶುಂಡಾವಲಯಾಪ್ಲುತೈಃ ।
ಬಿಲ್ವಪತ್ರೈಃ ಪಂಕಜೈಶ್ಚ ಪೂಜಯತ್ಯೇವ ವಿಘ್ನರಾಟ್ ॥೧೮॥

ಕುಮಾರಸ್ವಾಮಿಯು ಅದನ್ನು ಪೂಜಿಸಿ ಭಕ್ತಿಯಿಂದ ಸ್ತುತಿಸಿ ನನ್ನ ಅನುಗ್ರಹದಿಂದ ತಾರಕಾಸುರನನ್ನು ಸಂಹರಿಸುವ ಅದ್ಭುತವಾದ ಶಕ್ತಿಯನ್ನು ಪಡೆದನು. ॥೧೪-೧೫॥

ಕುಮಾರನು ಸ್ಕಂದೇಶ್ವರನನ್ನು ಸ್ತುತಿಸುತ್ತಾ ಹೀಗೆಂದನು—ಹೇ ಮೃತ್ಯುಂಜಯನೇ, ನನ್ನನ್ನು ಅನವರತವೂ ರಕ್ಷಿಸು. ನೀನು ಈ ಹಿಂದೆ ಮೃಕಂಡು ಮುನಿಯ ಮಗನಾದ ಮಾರ್ಕಂಡೇಯನನ್ನು ಮೃತ್ಯುವಿನಿಂದ ರಕ್ಷಿಸಿರುವೆ. ನೀಲವಾಗಿಯೂ ಮತ್ತು ಕೆಂಪಾಗಿಯೂ ಇರುವ ಕೈಯಲ್ಲಿ ಕಪಾಲವನ್ನು ಧರಿಸಿರುವೆ. ಹೇ ಸರ್ಪಮಾಲಾಭರಣನೇ, ಮಹೇಶನೇ, ಮುಕ್ಕಣ್ಣನೇ, ನನ್ನನ್ನು ಕಾಪಾಡು. ॥೧೬॥

ದೇವಿ, ಕೇದಾರೇಶ್ವರದ ಪಶ್ಚಿಮದಿಕ್ಕಿನಲ್ಲಿ ಗಣೇಶೇಶ್ವರನೆಂಬ ಹೆಸರುಳ್ಳ ಮತ್ತೊಂದು ಶಿವಲಿಂಗವಿರುವುದು. ಅದನ್ನು ಗಣಪತಿಯು ಭಕ್ತಿಯಿಂದ ಪೂಜಿಸಿರುವನು. ॥೧೭॥

ವಿಘ್ನೇಶ್ವರನಾದ ಗಣೇಶನು ತನ್ನ ಸೊಂಡಿಲಿನ ಅಗ್ರಭಾಗದಿಂದ ನೀರನ್ನು ಮೇಲಕ್ಕೆ ಸೆಳೆದುಕೊಂಡು, ವಲಯಾಕಾರವಾಗಿರುವ ತನ್ನ ಸೊಂಡಲಿನಿಂದ ಶಿವಲಿಂಗದ ಮೇಲೆ ನೀರನ್ನು ಎರಚಿ ಬಿಲ್ವಪತ್ರೆಗಳಿಂದಲೂ ಮತ್ತು ಕಮಲಗಳಿಂದಲೂ ಲಿಂಗವನ್ನು ನಿತ್ಯವೂ ಪೂಜಿಸುವನು. ॥೧೮॥

ಮೃದಂಗಸದೃಶಾರಾವಬೃಂಹಿತೇನ ಸ ಮಾಂ ಸ್ತುವನ್ ॥೧೯॥

॥ ಗಣೇಶ ಉವಾಚ ॥

ತ್ರಿಯಂಬಕಂ ತ್ವಾಂ ಸುಭಗಂ ಮಹೇಶಂ
ಸುಗಂಧಿಂ ಪುಷ್ಟಿದಾಯಕಂ
ಮಾಂ ಮೃತ್ಯುತೋ ಮೋಚಯಾಶು
ಉರ್ವಾರುಕಮಿವ ಬಂಧನಾತ್ ॥೨೦॥

ತ್ವಯಾ ಸಂಪೂಜಿತಂ ಲಿಂಗಂ ದೇವಿ ಗೌರೀಶ್ವರಾಭಿಧಂ ।
ತಲ್ಲಿಂಗಸಂಗವಾತೋಽಪಿ ಮುಕ್ತ್ಯೈ ದೇವಿ ಭವಿಷ್ಯತಿ ॥೨೧॥

ಕುಂಡಂ ಚಾಪಿ ಕೃತಂ ದೇವಿ ಗೌರೀಕುಂಡಂ ಚ ಪಪ್ರಥೇ ।
ಕೇದಾರೇಶಂ ಚ ಮಾಂ ದೃಷ್ಟ್ವಾ ಪೀತ್ವಾ ತತ್ಕುಂಡಜಂ ಪಯಃ ॥೨೨॥

---

ಅವನು ಮೃದಂಗಧ್ವನಿಯಂತೆ ಗಂಭೀರವಾದ ಧ್ವನಿಯುಳ್ಳ ತನ್ನ ಘೀಂಕಾರದಿಂದ ನನ್ನನ್ನು ಹೀಗೆ ಸ್ತುತಿಸುವನು. ॥೧೯॥

" ಓ ಮಹೇಶನೇ, ಬ್ರಹ್ಮ ವಿಷ್ಣು ಮಹೇಶ್ವರರಿಗೆ ಸ್ವಾಮಿಯೂ, ಮಂಗಳ ಮೂರ್ತಿಯೂ, ಕೀರ್ತಿಶಾಲಿಯೂ, ಉಪಾಸಕರಿಗೆ ಅಣಿಮಾದ್ಯಷ್ಟೈಶ್ವರ್ಯಗಳನ್ನು ದಯಪಾಲಿಸುವವನೂ ಆದ ನಿನ್ನನ್ನು ವಂದಿಸುವೆನು. ಉರ್ವಾರುಕಫಲವು (ಸೌತೆಯ ಕಾಯಿಯು) ತೊಟ್ಟಿನಿಂದ ಕಳಚಿ ಬೀಳುವಂತೆ ನನ್ನನ್ನು ಸಂಸಾರವೆಂಬ ಮೃತ್ಯುವಿನಿಂದ ವಿನಿರ್ಮುಕ್ತನನ್ನಾಗಿ ಮಾಡಿ ಮೋಕ್ಷವನ್ನು ದಯಪಾಲಿಸು."॥೨೦॥

ದೇವಿ, ಕೇದಾರೇಶ್ವರನ ಸಮೀಪದಲ್ಲಿ ಗೌರೀಶ್ವರವೆಂಬ ಹೆಸರುಳ್ಳ ಮತ್ತೊಂದು ಶಿವಲಿಂಗವಿರುವುದು. ಅದನ್ನು ನೀನು ಪೂಜಿಸಿರುವೆ. ಆ ಲಿಂಗದಮೇಲೆ ಬೀಸಿ ಬಂದ ವಾಯುವೂ ಸಹ ಭಕ್ತರಿಗೆ ಮುಕ್ತಿಯನ್ನು ದಯಪಾಲಿಸುವುದು. ॥೨೧॥

ಎಲೌ ಗಿರಿಜೆಯೇ, ನೀನು ಒಂದಾನೊಂದು ಕುಂಡವನ್ನು ಸಹ ಗೌರೀಶಂಕರ ಲಿಂಗದ ಸನ್ನಿಧಿಯಲ್ಲಿ ನಿರ್ಮಿಸಿದೆ. ಈಗ ಆ ಕುಂಡವು ಗೌರೀಕುಂಡವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವುದು. ಕುಮಾರಸ್ವಾಮಿಯು ಕೇದಾರೇಶ್ವರನಾದ ನನ್ನನ್ನು ನೋಡಿ ಸಂತುಷ್ಟನಾಗಿ ಆ ಕುಂಡದಲ್ಲಿರುವ ಕ್ಷೀರವನ್ನು ಪಾನಮಾಡಿ ಅದರಿಂದಲೇ ತೃಪ್ತನಾಗಿರುವನು. ಅದರ ರುಚಿಗೆ ಮೋಹಿತನಾಗಿ ಕುಮಾರನು ನಿನ್ನ ಸ್ತನ್ಯವನ್ನೂ ಸಹ ಪಾನಮಾಡುತ್ತಿರಲಿಲ್ಲ. ॥೨೨॥

ಸ ಪುನಃ ಸ್ತನ್ಯಪಯಸಾ ಸ್ನೋದರಂ ನಾಭಿಷಿಂಚತಿ ।
ತ್ವಯಾತ್ರ ಸಖಿಭಿಃ ಸಾರ್ಧಂ ತ್ವತ್ಪಿತುಃ ಶಿಖರೇ ಶಿವೇ ॥೨೩॥

ತಪಸ್ತಪ್ತಂ ಮಹಾದೇವಿ ದುಷ್ಕರಂ ಪರಮರ್ಷಿಭಿಃ ।
ಮತ್ಪ್ರಾಪ್ತಯೇಽತ್ರ ಕೇದಾರೇ ಸ್ಥಾಪ್ಯ ಗೌರೀಶ್ವರಂ ಹರಂ ॥೨೪॥

ಸ್ನಾನಾಸನಾಭ್ಯಾಂ ನಿಯತಾ ಯಮೇನ ನಿಯಮೇನ ಚ ।
ಭಸ್ಮರುದ್ರಾಕ್ಷಯುಕ್ತಾಂಗೀ ತ್ರಿಪುಂಡ್ರಾವಲಿಭಾಸುರಾ ॥೨೫॥

ಪರಿತ್ಯಜ್ಯಾಂಗಭೂಷಾದಿ ವಲ್ಕಲಾಜಿನಧಾರಿಣೀ ।
ಪುಷ್ಪಾಣ್ಯಾಹೃತ್ಯ ಪುಣ್ಯಾನಿ ಬಿಲ್ವಪತ್ರಾಣಿ ಶೋಭನೇ ॥೨೬॥

ಸುರಭೀಣಿ ಮನೋಜ್ಞಾನಿ ಸಂಪೂಜ್ಯಾಹರ್ನಿಶಂ ಹಿ ಮಾಂ ।
ಕೇದಾರೇ ಪಾವನೇ ಲಿಂಗೇ ಗೌರೀಲಿಂಗೇ ತದಾಂಬಿಕೇ ॥೨೭॥

ಎಲೌ ಭವಾನಿಯೇ, ಈ ಹಿಂದೆ ನೀನು ತಂದೆಯಾದ ಹಿಮವಂತನ ಈ ಶಿಖರಪ್ರದೇಶದಲ್ಲಿಯೇ ನಿನ್ನ ಸಖಿಯರಿಂದೊಡಗೂಡಿ ನನ್ನನ್ನು ಪಡೆಯುವ ಸಲುವಾಗಿ ಈ ಗೌರೀಶಂಕರವೆಂಬ ಲಿಂಗವನ್ನು ಇಲ್ಲಿ ಸ್ಥಾಪಿಸಿ ಋಷಿಶ್ರೇಷ್ಠರಿಗೂ ಸಹ ಅಸಾಧ್ಯವಾದ ಮತ್ತು ಭಯಂಕರವಾದ ತಪಸ್ಸನ್ನು ಆಚರಿಸಿದೆ. ॥೨೩-೨೪॥

ಆಗ ನೀನು ಸ್ನಾನದಿಂದ ಪರಿಶುದ್ಧಳಾಗಿ, ಆಸನವನ್ನು ಕಲ್ಪಿಸಿಕೊಂಡು ಯಮನಿಯಮಗಳಿಂದ ಯುಕ್ತಳಾಗಿ, ರುದ್ರಾಕ್ಷ ಮತ್ತು ಭಸ್ಮ ತ್ರಿಪುಂಡ್ರಗಳನ್ನು ಧರಿಸಿ ನನ್ನನ್ನು ಪೂಜಿಸಿದೆ. ॥೨೫॥

ಎಲೌ ಶೋಭನಾಂಗಿಯೇ, ನೀನು ಆ ಕಾಲದಲ್ಲಿ ವೇಷಭೂಷಣಾದಿಗಳನ್ನು ತ್ಯಜಿಸಿ ನಾರುಬಟ್ಟೆಯನ್ನೂ ಮತ್ತು ಕೃಷ್ಣಾಜಿನವನ್ನೂ ಧರಿಸಿ, ಬಿಲ್ವಪತ್ರೆಗಳಿಂದಲೂ ಸುಗಂಧಪೂರಿತವಾಗಿಯೂ ಮತ್ತು ಸುಂದರವಾಗಿಯೂ ಇರುವ ಹೂವುಗಳಿಂದಲೂ, ಹಗಲಿರುಳು ಕೇದಾರೇಶ್ವರಲಿಂಗದಲ್ಲಿಯೂ ಮತ್ತು ಗೌರೀಶಂಕರಲಿಂಗದಲ್ಲಿಯೂ ನನ್ನನ್ನು ಪೂಜಿಸಿ ಮುಂದೆ ಹೇಳುವ ರೀತಿಯಲ್ಲಿ ಸ್ತುತಿಸಿದೆ. ॥೨೬-೨೭॥

॥ ಪಾರ್ವತ್ಯುವಾಚ ॥

ಸಮರ್ಚಿತಸ್ತ್ವಯಾ ದೇವಿ ಸ್ತುತೋಽಹಂ ಪರಮೇಶ್ವರಿ ॥೨೮॥

ಶಾಂಗಂ ಮಂಗಲದಂ ಶುಭಾಂಗದಲಸದ್ಭೂಭಾರಸಂಗಾಸ್ಪದಂ
ದಗ್ಧಾನಂಗಕೃತಾಂಗಸಂಗತಮಹೋತ್ತುಂಗೋತ್ತಮಾಂಗಂ ಹರಂ ।
ಅಷ್ಟಾಂಗತ್ಯಕ್ತಸಂಗಂ ದಹರಭವನಗಂ ಗಂಧಮಾಲ್ಯಾರ್ಚಿತಾಂಗಂ
ಲಿಂಗಸ್ಥಂ ತ್ಯಕ್ತಲಿಂಗಂ ವಿಮಲಮುನಿಮನಃಸ್ವಾಂತರಂಗಂ ಭಜೇಽಹಂ॥೨೯॥

ಗೌರೀಲಿಂಗಮಘೌಘರಾಗವಿಭಂಗಂ
ದುಃಖಭಂಗಗಲಿತಾಂತರಸಂಗಂ ।
ತುಂಗಪುಷ್ಪಫಲದಂ ಗತಸಂಗಂ
ವೃಷ್ಟಮದ್ಯ ವೃಷಭೋಗಶುಭಾಂಗಂ ॥೩೦॥

ವಿವಿಧೈರಮಿತೈಶ್ಚ ಸಾಧನೈ-
ರ್ಮಖಜಾಲೈರ್ಗಜವಾಜಿಗೋಪ್ರದಾನೈಃ ।

---

"ಮಹೇಶ್ವರನೇ, ನೀನು ಸರ್ವರಿಗೂ ಸುಖಪ್ರದನು. ಮಂಗಳವನ್ನು ದಯ ಪಾಲಿಸುವವನು. ಭೂಮಿಯನ್ನು ಹೊರುವ ಆದಿಶೇಷನೇ ನಿನಗೆ ತೋಳು ಬಳೆಯಾಗಿರುವನು. ಮನ್ಮಥನನ್ನು ಧ್ವಂಸಮಾಡಿದ ಉರಿನೇತ್ರದಿಂದ ಪ್ರಕಾಶಿಸುವ ಶಿರಸ್ಸುಳ್ಳವನು. ಮಹಾದೇವನೇ, ನಿನ್ನಲ್ಲಿ ಪೃಥಿವ್ಯಾದಿ ಅಷ್ಟವಸ್ತುಗಳೂ ಮೂರ್ತಿ ಮತ್ತಾಗಿದ್ದರೂ, ನೀನು ಮಾತ್ರ ಅವುಗಳಲ್ಲಿ ನೆಲಸಿರುವುದಿಲ್ಲ. ಕೇವಲ ತೇಜೋ ರೂಪಿಯಾಗಿದ್ದು, ಗಂಧಮಾಲ್ಯಾದಿಗಳಿಂದ ಅರ್ಚಿತನಾಗಿ ಶಿವಲಿಂಗರೂಪವನ್ನು ಆಶ್ರಯಿಸಿ ಸರ್ವರಿಗೂ ಗೋಚರಿಸುವ, ಅಂತರಂಗೈಕವೇದ್ಯನಾಗಿರುವೆ. ಇಂತಹ ನಿನ್ನನ್ನು ನಾನು ಸದಾ ಸೇವಿಸುವೆನು. ॥೨೮-೨೯॥

ಪಾಪಕೃತ್ಯಗಳಲ್ಲಿ ಆಸಕ್ತಿಯನ್ನು ಹೋಗಲಾಡಿಸುವ, ಸಂಸಾರದುಃಖದ ನಾಶದಿಂದ ವಿಶುದ್ಧವಾದ ಅಂತಃಕರಣವುಳ್ಳ, ಜ್ಞಾನಿಗಳ ಚಿತ್ತದಲ್ಲಿ ನೆಲಸಿರುವ ಶ್ರೇಷ್ಠವಾದ ಮೋಕ್ಷಫಲವನ್ನು ದಯಪಾಲಿಸುವ, ಅಸಂಗನಾದ, ಮತ್ತು ವೃಷಭಾ ರೂಢನಾದ ಗೌರೀಲಿಂಗೇಶ್ವರನನ್ನು ಈಗ ದರ್ಶನಮಾಡಿರುವೆನು. ॥೩೦॥

ನಾನಾ ಬಗೆಯ ಸಾಧನಗಳಿಂದಲೂ, ಯಜ್ಞಯಾಗಾದಿಗಳಿಂದಲೂ, ಗಜ, ಗೋವು, ಅಶ್ವ ಮುಂತಾದುವುಗಳ ದಾನದಿಂದಲೂ, ಶಿವನನ್ನು ಸಾಕ್ಷಾತ್ಕರಿಸುವುದ

ಸ ನ ಲಭ್ಯೇತ ಮಹೇಶಪಾದಭಕ್ತಿ
ರ್ಯದಿ ನ ಸ್ಯಾಚ್ಛಿವಭಕ್ತಸಂಗಿಸಂಗಃ ॥೩೧॥

ತ್ವತ್ಸ್ತೋತ್ರಾದಹಂ ಪರಂ ಪ್ರೀತೋ ಭಕ್ತ್ಯಾ ತ್ವತ್ಕೃತಯಾ ಶಿವೇ ।
ಲಿಂಗಸಂಪೂಜನೇನಾಪಿ ತುಷ್ಟಃ ಕಷ್ಟನಿವಾರಕಃ ॥೩೨॥

ತವೇಷ್ಟದಾನನಿಪುಣಃ ಕೃಪಾಪೂರ್ಣೇನ ಚಕ್ಷುಷಾ ।
ಸಮಾಗತೋಽಹಂ ಕಲ್ಯಾಣಿ ಶೈವವಿಪ್ರಸ್ವರೂಪತಃ ॥೩೩॥

ಲಿಂಗಾಮಲಜಟಾಮೌಲಿಸ್ತ್ರಿಪುಂಡ್ರಾವಲಿಭಾಸ್ವರಃ ।
ರುದ್ರಾಕ್ಷಮಾಲಾಭರಣಃ ಕೃಶೋ ಧಮನಿಸಂಮಿತಃ ॥೩೪॥

ದೃಷ್ಟ್ವಾ ತ್ವಂ ತಾಪಸಂ ವಿಪ್ರಂ ಸಮುತ್ಥಾಯಾರ್ಘ್ಯಪೂಜನೈಃ ।
ಪೂಜಯಿತ್ವಾ ಸುಖಪ್ರಶ್ನೈಃ ಫಲಕಂದನಿವೇದನೈಃ ॥೩೫॥

ಸಾಧ್ಯ. ಈಶ್ವರಭಕ್ತರ ಸಹವಾಸವೊಂದಿಲ್ಲದಿದ್ದರೆ ಶಿವನ ಪಾದಗಳಲ್ಲಿ ಎಂದಿಗೂ ಭಕ್ತಿಯುದಯಿಸಲಾರದು." ॥೩೧॥

ದೇವಿ; ಬಳಿಕ ನಿನ್ನ ಭಕ್ತಿಗೆ ಮೆಚ್ಚಿ ನಾನು ಪ್ರತ್ಯಕ್ಷನಾಗಿ ನಿನ್ನನ್ನು ಕುರಿತು ಹೀಗೆಂದೆನು. ಎಲೌ ಭವಾನಿಯೇ! ನಿನ್ನ ಸ್ತೋತ್ರಗಳಿಗೂ ಮತ್ತು ಗಾಢವಾದ ಭಕ್ತಿಗೂ ಶಿವಲಿಂಗಾರ್ಚನೆಗೂ ನಾನು ಸುಪ್ರೀತನಾಗಿರುವೆನು. ಆಪದ್ಬಾಂಧವನಾದ ನಾನು, ಈ ನಿನ್ನ ಲಿಂಗಪೂಜೆಯಿಂದಲೇ ಸಂತುಷ್ಟನಾಗುವೆನು. ॥೩೨॥

ಹೀಗೆಂದು ದೇವಿ ಪೂರ್ಣವಾದ ಕರುಣಾದೃಷ್ಟಿಯಿಂದ ಕೂಡಿದ ನಾನು, ನಿನ್ನ ಇಷ್ಟಾರ್ಥವನ್ನು ನೆರವೇರಿಸುವುದಕ್ಕೋಸ್ಕರ, ಈಶ್ವರಭಕ್ತನಾದ ಒಬ್ಬಾನೊಬ್ಬ ದ್ವಿಜೋತ್ತಮನ ವೇಷವನ್ನು ಧರಿಸಿ ನಿನ್ನ ಬಳಿಗೆ ಬಂದೆನು. ॥೩೩॥

ಆಗ ನಾನು, ಶಿವಲಿಂಗದಂತೆ ಶುಭ್ರವಾಗಿರುವ ಜಟೆಯನ್ನು ಧರಿಸಿದವನಾಗಿಯೂ, ತ್ರಿಪುಂಡ್ರಗಳಿಂದ ಶೋಭಿಸುವವನಾಗಿ ರುದ್ರಾಕ್ಷಮಾಲೆಗಳನ್ನು ಧರಿಸಿದವನಾಗಿಯೂ, ಆಕಾರದಲ್ಲಿ ಅತ್ಯಂತ ಕೃಶನಾಗಿಯೂ ಕಾಣಿಸುತ್ತಿದ್ದೆನು. ನನ್ನ ಶರೀರದಲ್ಲಿದ್ದ ನಾಡಿಗಳು ಸ್ಪಷ್ಟವಾಗಿ ಹೊರಕ್ಕೆ ಕಾಣಿಸಿಕೊಳ್ಳುತ್ತಿದ್ದುವು. ॥೩೪॥

ತಪಸ್ವಿಯಾದ ಆ ಬ್ರಾಹ್ಮಣನನ್ನು ನೋಡಿ ನೀನು ಪ್ರತ್ಯುತ್ಥಾನಮಾಡಿ, ಕುಶಲಪ್ರಶ್ನೆಗಳನ್ನು ಮಾಡಿದೆ. ಬಳಿಕ, ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಹಣ್ಣು

ಅಪರ್ಣೇಽಪರ್ಣಸಂಕ್ಲಿಪ್ತಿಸ್ತ್ವಾರ್ಣಚ್ಛದಿ ವರಾನನೇ ।
ಸ್ವಚ್ಛೇ ನಿಶ್ರಮನಿಸ್ತಂದ್ರೇ ತುಷ್ಟಸ್ತ್ವತ್ಕೃತಪೂಜಯಾ ॥೩೬॥

ಕುಶಬ್ರುಸ್ಯಾಂ ಸಂನಿವಿಷ್ಟಸ್ತ್ವಸ್ಮುಖಾಲೋಕನಾದರಃ ।
ಕಲ್ಯಾಣೀಂ ಚ ಸುಖೋದಾರಾಂ ತಂ ವಾಣೀಮುಕ್ತವತ್ಯಸಿ ॥೩೭॥

॥ ಪಾರ್ವತ್ಯುವಾಚ ॥

ಕುತಃ ಸಮಾಗತಂ ವಿಪ್ರ ದೇಶಃ ಸುಖಯಿತಾ ಚ ಕಃ ।
ನಾನಾದ್ರುಮಲತಾಕೀರ್ಣೇ ಕಂಟಕಾವೃತದುಷ್ಪಥಿ ॥೩೮॥

ಕಥಂ ಸಮಾಗತಂ ಬ್ರಹ್ಮನ್ನಾಮಗೋತ್ರಂ ಚ ತೇಽದ್ಯ ಕಿಂ ।
ತವ ಸಂದರ್ಶನಾದ್ವಿಪ್ರ ತಪಶ್ಚೀರ್ಣಂ ಮಮಾಧುನಾ ॥೩೯॥

---

ಹಂಪಲುಗಳನ್ನೂ, ಕಂದಮೂಲಗಳನ್ನೂ ನಿವೇದಿಸಿ ಬ್ರಾಹ್ಮಣನನ್ನು ಸಂತೋಷ ಪಡಿಸಿದೆ. ॥೩೫॥

ತಪಶ್ಚರಣೆಯ ಕಾಲದಲ್ಲಿ ಪರ್ಣ (ಎಲೆ)ಗಳನ್ನೂ ಸಹ ತ್ಯಾಗಮಾಡಿ, ಪ್ರಪಂಚವನ್ನೇ ಆಕ್ರಮಿಸಿಕೊಂಡಿರುವ ಪರಬ್ರಹ್ಮವಸ್ತುವಿನಲ್ಲಿ ಸ್ಥಿರಮನಸ್ಸಿಟ್ಟು, ನೀನು ಆಚರಿಸಿದ ತಪಸ್ಸಿನಿಂದಲೂ, ನಿನ್ನಿಂದ ವಿಹಿತವಾದ ಅರ್ಘ್ಯಪಾದ್ಯಾದಿ ಸತ್ಕಾರರೂಪವಾದ ಪೂಜೆಯಿಂದಲೂ ಅವನು ಸಂತೃಪ್ತನಾದನು. ॥೩೬॥

ದರ್ಭಾಸನದಲ್ಲಿ ಕುಳಿತು, ನಿನ್ನ ವದನವನ್ನೇ ದಿಟ್ಟಿಸಿ ನೋಡುವುದರಲ್ಲಿ ಮಗ್ನನಾದ ಆ ಬ್ರಾಹ್ಮಣ ತಪಸ್ವಿಯನ್ನು ಕುರಿತು, ನೀನು ಮುಂದೆ ಹೇಳುವ ರೀತಿಯಲ್ಲಿ ಮಂಗಳಕರವೂ ಸುಖದಾಯಕವೂ ಉದಾರವೂ ಆದ ಗಂಭೀರವಾಣಿಯಿಂದ ಹೀಗೆ ನುಡಿದೆ. ॥೩೭॥

ಎಲೈ ವಿಪ್ರೋತ್ತಮನೇ, ನೀನು ಎಲ್ಲಿಂದ ಬಂದೆ? ನಿನ್ನ ದೇಶವಾವುದು? ಮಲಿನವಾದ ಮತ್ತು ಕಂಟಕಗಳಿಂದ ದುರ್ಗಮವಾದ ಈ ಮಾರ್ಗದ ಮೂಲಕ ನೀನು ಇಲ್ಲಿಗೆ ಬಂದ ಬಗೆ ಹೇಗೆ? ನಿನ್ನ ನಾಮಧೇಯವೇನು? ಗೋತ್ರವಾದರೂ ಯಾವುದು? ದ್ವಿಜಶ್ರೇಷ್ಠನೇ, ಇದೀಗ ನಿನ್ನ ಸಂದರ್ಶನದಿಂದ ನನ್ನ ತಪಸ್ಸು ವೃದ್ಧಿಯನ್ನು ಹೊಂದುತ್ತಿರುವುದಲ್ಲಾ! ॥೩೮-೩೯॥

ದಯಯಾ ಮಾಂ ನಿರೀಕ್ಷಸ್ವ ಬ್ರೂಹಿ ಕಿಂ ಕರವಾಣ್ಯಹಂ ॥೪೦॥

ಭಸ್ಮಾಭ್ಯಕ್ತತನುಃ ಸದಾಶಿವಕಥಾಪೀಯೂಷಪಾನಾದರೋ ।
ರುದ್ರಾಕ್ಷಾಭರಣಃ ಶಿವೈಕಶರಣಃ ಪಂಚಾಕ್ಷರಾವರ್ತಕಃ
ಪುಣ್ಯೇ ಯಸ್ಯ ಗೃಹೇ ಫಲಾದಿಭಿರಹೋ ಪ್ರಾಜ್ಯಾಜ್ಯಸಚ್ಛರ್ಕರಾ-
ಕ್ಷೀರಾಪೂಪಾದಿಸೂಪೈರ್ಮಧುರಫಲರಸೈಃ ಪೂಜಿತಃ ಶೈವವರ್ಯಃ ॥೪೧॥

ತಸ್ಯಾಸ್ಯಾ ಭಾಗಪರಿಕಲ್ಪಿತ ಸಾಧುಜಿಹ್ವಾ
ಸ್ವಾದಾಸ್ಪದೀಕೃತ ಸದನ್ನಗಣಾನಿ ಭುಂಕ್ತೇ ।
ತಸ್ಯಾಖಿಲೇಷ್ಟಮಪಿ ವಿಷ್ಟಪಭೋಗಮಿಚ್ಛ-
ನ್ತುಷ್ಟಃ ಪ್ರದಾಸ್ಯತಿ ವಿಭುರ್ಹರತೀಹ ಕಷ್ಟಂ ॥೪೨॥

ಇತ್ಥಮೂಚುರ್ಮಹಾಶೈವಫಲಂ ವೈ ಪೂರ್ವಸೂರಯಃ ।
ತವ ಸಂಪೂಜನಾತ್ತುಷ್ಟಃ ಶಿಪಿವಿಷ್ಟೋ ನ ಸಂಶಯಃ ॥೪೩॥

ನನ್ನಲ್ಲಿ ದಯೆದೋರು. ನನ್ನಿಂದ ನಿನಗೆ ಆಗಬೇಕಾದುದೇನು ? ಅದನ್ನು ಹೇಳು. ॥೪೦॥

ಯಾವ ಗೃಹಸ್ಥನ ಮನೆಗೆ ಭಸ್ಮಭೂಷಿತನಾಗಿಯೂ, ಶಿವಕಥಾಮೃತವನ್ನು ಪಾನಮಾಡುವುದರಲ್ಲಿ ಆಸಕ್ತನಾಗಿಯೂ, ರುದ್ರಾಕ್ಷಧಾರಿಯಾಗಿಯೂ, ಪಂಚಾಕ್ಷರ ಮಂತ್ರವನ್ನು ಜಪಿಸುವವನೂ ಆದ ಪರಶಿವಭಕ್ತನು, ಅಭ್ಯಾಗತನಾಗಿ ಬಂದು, ರುಚಿಕರನಾದ ಹಣ್ಣುಹಂಪಲುಗಳಿಂದಲೂ ಉತ್ಕೃಷ್ಟವಾದ ಘೃತ, ಸಕ್ಕರೆ, ಹಾಲು, ಹೋಳಿಗೆ, ತೊವ್ವೆ ಮುಂತಾದವುಗಳಿಂದಲೂ ಸತ್ಕರಿಸಲ್ಪಡುವನೋ ಆ ಗೃಹಸ್ಥನೇ ಧನ್ಯನಲ್ಲವೆ! ॥೪೧॥

ಅಂತಹವನು ಸಿದ್ಧಪಡಿಸಿದ ರುಚಿಕರವಾದ ಪಕ್ವಾನ್ನವನ್ನು ಈಶ್ವರ ಭಕ್ತನು ಪ್ರೀತಿಯಿಂದ ಭುಂಜಿಸುವನು. ಆ ಸದ್ಗೃಹಸ್ಥನ ಭಕ್ತಿಪೂರ್ವಕವಾದ ಸತ್ಕಾರದಿಂದ ಶಿವನು ಸಂತುಷ್ಟನಾಗಿ ಅವನಿಗೆ ಸ್ವರ್ಗಸೌಖ್ಯವನ್ನು ದಯಪಾಲಿಸುವನಲ್ಲದೇ ಅವನ ಸಕಲ ಕಷ್ಟಗಳನ್ನೂ ಹೋಗಲಾಡಿಸುವನು. ॥೪೨॥

ಎಲೈ ವಿಪ್ರನೇ, ಈಶ್ವರ ಭಕ್ತನನ್ನು ಪೂಜಿಸುವುದರಿಂದುಂಟಾಗುವ ಫಲವು ಇಷ್ಟೊಂದು ಮಹತ್ತರವಾಗಿರುವುದೆಂದು ಜ್ಞಾನಿಗಳು ಹೇಳಿರುವರು. ನಾನೀಗ

ಇತ್ಥಂ ತ್ವದ್ವಚನಂ ಶ್ರುತ್ವಾ ವಿಪ್ರರೂಪೋಽಹಮಂಬಿಕೇ ।
ತ್ವಾಮುಪ್ರೋಚಂ ರೋಷಯಿತುಂ ಸ್ತುತಿನಿಂದಾಕರಂ ವಚಃ ॥೪೪॥

॥ ವಿಪ್ರ ಉವಾಚ ॥

ಬಾಲಾ ತ್ವಂ ಪರ್ವತಸ್ಯಾಸ್ಯ ತ್ವಯಾದ್ಯ ಕುಲಮುದ್ಧೃತಂ ।
ಶಿರೀಷಪುಷ್ಪಮೃದುಲಾ ಕೇಽದ್ಯ ಕ್ವ ತನುಃ ಕ್ವ ತಪಃ ಶುಭೇ ॥೪೫॥

ಭೂಷಣಾದಿಪ್ರಭಾಜಾಲೈಃ ಸುಂದರಾಂಗಂ ತವಾಮಲೇ ।
ಭಸ್ಮರುದ್ರಾಕ್ಷಮಾಲಾಭಿಃ ಕಿಂ ಶೋಭಾಂ ವಹತೇಽದ್ಯ ಹಿ ॥೪೬॥

ಮಹಾರ್ಹವಾಸಸಾ ವೀತಾ ವಲ್ಕಲಾನಿ ನ ಸಂವೃತಾ ।
ತ್ವಯಾ ಲೀಲಾವಿಲಾಸೇನ ಖೇಲನೀಯಂ ಸಖೀಗಣೈಃ ॥೪೭॥

ನಿನ್ನನ್ನು ಪೂಜಿಸಿದುದರಿಂದ ಶಿವನು ಸಂತುಷ್ಟನಾಗಿರುವನು. ಇದರಲ್ಲಿ ಸಂಶಯು ವಿಲ್ಲ. ॥೪೩॥

ಎಲೌ ದೇವಿಯೇ! ಈ ರೀತಿಯಾದ ನಿನ್ನ ಮಾತನ್ನು ಕೇಳಿ, ಬ್ರಾಹ್ಮಣ ವೇಷಧಾರಿಯಾದ ನಾನು ನಿನಗೆ ನನ್ನಲ್ಲಿ ರೋಷವನ್ನುಂಟುಮಾಡುವುದಕ್ಕೋಸ್ಕರ, ನಿನ್ನನ್ನು ಕುರಿತು ಮುಂದೆ ಹೇಳುವಂತೆ, ನಿಂದಾಸ್ತುತಿಯನ್ನು ವ್ಯಕ್ತಪಡಿಸುವ ವಚನಗಳನ್ನು ನುಡಿದೆನು. ॥೪೪॥

ಭದ್ರೆ! ನೀನು ಇನ್ನೂ ಚಿಕ್ಕವಳಾಗಿರುವೆ. ಆದರೂ ಈಗ ನಿನ್ನಿಂದ ನಿನ್ನ ತಂದೆಯಾದ ಪರ್ವತರಾಜನ ವಂಶವು ಉದ್ಧರಿಸಲ್ಪಟ್ಟಿತು. ಶಿರೀಷಪುಷ್ಪದಂತೆ (ಬಾಗೆಯ ಹೂವಿನಂತೆ) ಸುಕುಮಾರವಾದ ನಿನ್ನ ಈ ಶರೀರವೆಲ್ಲಿ? ನೀನು ಕೈಗೊಂಡಿರುವ ಕಠಿಣವಾದ ತಪಸ್ಸೆಲ್ಲಿ? ॥೪೫॥

ಎಲೌ ಸುಶೀಲೆಯೇ! ಅಮೂಲ್ಯವಾದ ಒಡವೆಗಳ ಕಾಂತಿರಾಶಿಯಿಂದ ಮನೋಹರವಾಗಿ ಕಾಣಿಸಲು ಯೋಗ್ಯವಾದ ಈ ನಿನ್ನ ಶರೀರವು, ರುದ್ರಾಕ್ಷಗಳ ಮಾಲೆಗಳನ್ನು ಧರಿಸುವುದರಿಂದ ಶೋಭೆಯನ್ನು ಹೊಂದುವುದೇ? ॥೪೬॥

ನೀನು ಈ ನಾರುಬಟ್ಟೆಗಳನ್ನು ಧರಿಸದೇ, ಬೆಲೆಬಾಳುವ ವಸ್ತ್ರಗಳನ್ನು ಧರಿಸಿ, ನಿನ್ನ ಸಖಿಯರೊಂದಿಗೆ ಬಾಲ್ಯೋಚಿತವಾದ ಕ್ರೀಡೆಗಳಲ್ಲಿ ಆಸಕ್ತಳಾಗುವುದು ಉಚಿತವು. ॥೪೭॥

॥ ಪಾರ್ವತ್ಯುವಾಚ

ಕಿಂ ತೇ ವ್ಯವಸಿತಂ ಬ್ರಹ್ಮನ್ತ್ವತ್ತಪೋಽಪ್ಯತ್ರ ಸಾಧನೇ ।
ನಾಽಹಂ ತಪ್ಸ್ಯೇ ಯಥಾಕಾಮಂ ಗಚ್ಛ ವಾ ತಿಷ್ಠ ವಾ ದ್ವಿಜಂ

ಸಂಪೂಜ್ಯ ಪಶುಭರ್ತಾರಂ ತಸ್ಮಾದಿಷ್ಟಂ ವೃಣೋಮ್ಯಹಂ ।
ವಿಪ್ರಸ್ತ್ವಾಮಾಹ ಸುಪ್ರೀತೋ ತದಾ ವೈ ಭೀಷಯಂಛಿವೇ ॥೫೮॥

॥ ವಿಪ್ರ ಉವಾಚ

ಯದುಕ್ತಂ ತತ್ತಥಾ ಬಾಲೇ ಪಶುಭರ್ತಾ ಮಹೇಶ್ವರಃ ।
ತವೇಷ್ಟದಾನನಿಪುಣಃ ಸ ಕಥಂ ಪರ್ವತಾತ್ಮಜೇ ॥೫೫॥

ಬ್ರಾಹ್ಮಣನೇ! ನೀನೇಕೆ ಹೀಗೆ ಯೋಚಿಸುವೆ? ನನ್ನ ಇಷ್ಟಾರ್ಥವನ್ನು ನೆರವೇರಿಸುವುದರಲ್ಲಿ, ನಿನ್ನ ತಪಸ್ಸು ಸಹಕಾರಿಯಾಗುವುದೇ! ಎಂದಿಗೂ ಇಲ್ಲ? ನೀನು ಇಲ್ಲಿರುವವರೆಗೂ, ನಾನು ತಪಸ್ಸನ್ನು ದೃಢಬುದ್ಧಿಯಿಂದ ಆಚರಿಸಲಾರೆ. ನೀನು ಇಲ್ಲಿಂದ ತೆರಳು ಅಥವಾ ಇಲ್ಲಿಯೇ ಸುಮ್ಮನಿರು. ॥೫೩॥

ನಾನಾದರೋ, ಪಶುಪತಿಯಾದ ಶಿವನನ್ನು ಪೂಜಿಸಿ, ಅವನಿಂದಲೇ ನನ್ನ ಇಷ್ಟಾರ್ಥವನ್ನು ಹೊಂದುವೆನು.

ದೇವಿ! ಬ್ರಾಹ್ಮಣನು, ನಿನ್ನ ಮಾತನ್ನು ಕೇಳಿ, ಮನಸ್ಸಿನಲ್ಲಿ ಸಂತೋಷ ಗೊಂಡು, ನಿನ್ನನ್ನು ಗದರಿಸುವವನಂತೆ ಹೀಗೆಂದನು. ॥೫೪॥

ಎಲೌ, ಬಾಲಿಕೆಯೇ! ನಿನ್ನ ವಚನವು ಯಥಾರ್ಥವಾಗಿರುವುದು. ಆದರೆ ಪಶುಪತಿಯೆಂದೆನಿಸಿಕೊಂಡಿರುವ ಆ ಶಿವನು ನಿನ್ನ ಇಷ್ಟಾರ್ಥಗಳನ್ನು ದಯಪಾಲಿಸು ವುದರಲ್ಲಿ, ಸಮರ್ಥನಾಗುವನೇ? ಹೇಳು! ॥೫೫॥

ಪಶುಪತಿಯಾದ ಆ ಶಿವನು, ಹುಚ್ಚನೂ, ಕುರೂಪಿಯೂ, ಬೋಳಾದ ತಲೆಯುಳ್ಳವನೂ, ಕೈಯ್ಯಲ್ಲಿ ನರಕಪಾಲವನ್ನು ಧರಿಸಿದವನೂ, ಶರೀರದ ಆದ್ಯಂತವೂ ಭಸ್ಮವನ್ನು ಲೇಪಿಸಿರುವವನೂ ಆಗಿರುವನಲ್ಲವೇ? ॥೫೬॥

ಉನ್ಮತ್ತೋ ವಿಕೃತೋ ಮುಂಡಃ ಕಪಾಲೀ ಭಸ್ಮಭೂಷಿತಃ ।
ಇತ್ಥಂ ಮನ್ನಿಂದನಂ ಶ್ರುತ್ವಾ ಸರೋಷಾ ತ್ವಂ ಮಹೇಶ್ವರಿ ॥೫೬॥

ಗಚ್ಛ ಗಚ್ಛೇತಿ ತಂ ವಿಪ್ರಂ ನಿರಾಕೃತ್ಯೋಟಜಂ ಗತಾ ।
ಕೋಽಯಂ ವಿಪ್ರೋ ದೈತ್ಯರೂಪಃ ಶಿವನಿಂದಾಪರಾಯಣಃ ॥೫೭॥

॥ ಪಾರ್ವತ್ಯುವಾಚ ॥

ಹಾ ಕಷ್ಟಂ ಸಖಿ ಯನ್ಮೇಽದ್ಯ ಶ್ರೋತ್ರೇ ನಿಂದಾಶ್ರವಂ ಗತೇ ॥೫೮॥

ಕಿಂ ಪತಾಮ್ಯದ್ಯ ಶಿಖರಾದಸ್ಮಾನ್ನಮ ಪಿತುಃ ಸಖಿ ।
ಶಿವನಿಂದಾ ಶ್ರುತೌ ಪ್ರೋಕ್ತಾ ನಿಷ್ಕೃತಿರ್ಮರಣಂ ಖಲು ॥೫೯॥

ಏವಂ ದಕ್ಷಾಸುತಾಹಂ ತು ಶ್ರುತ್ವಾ ನಿಂದಾಂ ಮಹೇಶಿತುಃ ।
ದಕ್ಷಾದದಕ್ಷತಃ ಸಾಕ್ಷಾಚ್ಛಿಕ್ಷಿತಾ ಸಾ ತನುರ್ಮಯಾ ॥೬೦॥

---

ಈ ರೀತಿಯಲ್ಲಿ ನುಡಿದ ಬ್ರಾಹ್ಮಣನು ಪರಶಿವನಾದ ನನ್ನನ್ನು ನಿಂದಿಸಿದುದನ್ನು ಕೇಳಿ ನೀನು ರೋಷದಿಂದ ಅವನನ್ನು ನೋಡಿ, ಇಲ್ಲಿಂದ ತೆರಳು! ತೆರಳು! ಎಂದು ಹೇಳುತ್ತಾ ಅವನನ್ನು ತಿರಸ್ಕರಿಸಿ ಪರ್ಣಶಾಲೆಯ ಒಳಕ್ಕೆ ಹೊರಟುಹೋದೆ. ॥೫೭॥

ಬಳಿಕ ನಿನ್ನ ಸಖಿಯನ್ನು ಕುರಿತು ಹೀಗೆಂದು ನೀನು ನುಡಿದೆ. ಸಖಿ! ಶಿವನಿಂದೆಯಲ್ಲಿ, ಆಸಕ್ತನಾದ ಈ ಬ್ರಾಹ್ಮಣನಾರು? ಇವನೊಬ್ಬ ದೈತ್ಯನಾಗಿರಬಹುದೇ? ಅಯ್ಯೋ! ಕಷ್ಟ! ವಿಜನವಾದ ಈ ಪ್ರದೇಶದಲ್ಲಿ ನೆಲಸಿದ್ದರೂ, ಈ ದಿನ ನನ್ನ ಕಿವಿಗಳಿಗೆ ಶಿವನಿಂದೆಯನ್ನು ಕೇಳುವ ಸಂದರ್ಭವು ಒದಗಿತು. ॥೫೮॥

ಸಖಿ! ನಾನೀಗ ಈ ಪರ್ವತ ಶಿಖರದಿಂದ ಕೆಳಕ್ಕೆ ಧುಮುಕಲೇ! ಶಿವನಿಂದೆಗೆ ಮರಣವೇ ಪ್ರಾಯಶ್ಚಿತ್ತವೆಂದು ವೇದದಲ್ಲಿ ಹೇಳಿರುವುದು. ॥೫೯॥

ಇದೇ ರೀತಿಯಲ್ಲಿ, ಪೂರ್ವಜನ್ಮದಲ್ಲಿ ನಾನು, ದಕ್ಷಬ್ರಹ್ಮನ ಪುತ್ರಿಯಾಗಿ ಜನಿಸಿ, ದಾಕ್ಷಾಯಿಣಿಯೆಂಬ ನಾಮದಿಂದ ಪ್ರಸಿದ್ಧಳಾಗಿದ್ದೆನು. ಆಗ ದಕ್ಷನ ಯಾಗ ಸಮಯದಲ್ಲಿ ಶಿವನಿಂದೆಯು ನನ್ನ ಕಿವಿಗಳಿಗೆ ಕೇಳಿಸಲು, ಅದಕ್ಕೆ ಪ್ರಾಯಶ್ಚಿತ್ತ ರೂಪವಾಗಿ ಯೋಗಾಗ್ನಿಯಿಂದ ನನ್ನ ದೇಹವನ್ನು ದಹಿಸಿ ಒಮ್ಮೆ ದಂಡಿಸಿರುವೆನು. ಎಂದು ಆ ನೀನು ನಿರ್ಣಯಿಸಿ ದೇಹವನ್ನು ತ್ಯಜಿಸಲಿಚ್ಛಿಸಿದೆ. ॥೬೦॥

ಇತಿ ಸಾ ನಿಶ್ಚಯಂ ಕೃತ್ವಾ ತ್ಯಕ್ತ್ವಾನ್ಯೈಶ್ಚತ್ತ್ವನುಂ ತದಾ ।
ಏತಸ್ಮಿನ್ನಂತರೇ ಗೌರಿ ತ್ಯಕ್ತ್ವಂ ವಿಪ್ರಸ್ಯ ತದ್ವಪುಃ ॥೬೧॥

ತ್ರಿಲೋಚನಮುದಾರಾಂಗಂ ನೀಲಗ್ರೀವಂ ತ್ರಿಶೂಲಿನಂ ।
ಗೌರೀಲಿಂಗಾತ್ಸಮುದ್ಭೂತಂ ಮಾಂ ದೃಷ್ಟ್ವಾ ಹರ್ಷಮಾಗತಾ ॥೬೨॥

ಪ್ರಣಮ್ಯ ಮಾಂ ಭಕ್ತಿಯುಕ್ತಾ ಸಖೀಭಿಃ ಕಮಲಾನನೇ ।
ಅಸ್ತೌಷೀಸ್ತ್ವಂ ತದಾ ದೇವಿ ಭಕ್ತಿಯುಕ್ತೇನ ಚೇತಸಾ ॥೬೩॥

॥ ಗೌರ್ಯುವಾಚ ॥

ದೇವಸ್ತ್ವಂ ಸಹಮಾನ ಏವ ಭಗವನ್ ಭಕ್ತೇಷು ಪಾಪೇಷ್ವಪಿ ।
ಪಾಪಾನಾಂ ಗಣನಾಪಿ ನೋ ಮಮ ವಿಭೋ ತಸ್ಮಾತ್ಸಹಸ್ವಾಧುನಾ ।
ನಾಭ್ಯರ್ಚ್ಯಂ ಭಗವತ್ಪದಾಂಬುಜಮಹೋ ದೃಷ್ಟಂ ನ ಲಿಂಗಂ ಮಯಂ
ಸುಜ್ಞಾನಾಸ್ತವ ಯೇ ಮಹೇಶ್ವರ ಪದಾ ತೈಃ ಸಂಗತಿರ್ನೋ ಕೃತಾ ॥೬೪॥

ಇಷ್ಟರೊಳಗೆ ನಾನು ಆ ಬ್ರಾಹ್ಮಣವೇಷವನ್ನು ತ್ಯಜಿಸಿ, ನಿಜಸ್ವರೂಪವನ್ನು ಧರಿಸಿ ನಿಂತೆನು. ।೬೧॥

ಆಗ ತ್ರಿಲೋಚನನೂ, ಸುಂದರವಾದ ದೇಹವುಳ್ಳವನೂ, ನೀಲಕಂಠನೂ, ಶೂಲಪಾಣಿಯೂ ಗೌರೀಶಂಕರಲಿಂಗದಿಂದ ಆವಿರ್ಭವಿಸಿದವನೂ ಆದ ನನ್ನನ್ನು ನೋಡಿ ನೀನು ಸಂತುಷ್ಟಳಾದೆ. ॥೬೨॥

ಎಲೌ ಪದ್ಮಮುಖಿಯೇ, ಅನಂತರ ಅತ್ಯಂತ ಭಕ್ತಿಯಿಂದ ಕೂಡಿದವಳಾಗಿ ನೀನು ಸಖಿಯರೊಂದಿಗೆ ನನ್ನನ್ನು ಹೀಗೆ ಸ್ತುತಿಸಿದೆ. ॥೬೩॥

" ದೇವನೇ, ಭಕ್ತರು ಅಪಾರವಾದ ಪಾಪಗಳನ್ನೆಸಗಿದರೂ ನೀನು ಅವರ ಆ ಅಪರಾಧವನ್ನು ಸಹಿಸುವೆ. ಸ್ವಾಮಿಯೇ, ನಾನೆಸಗಿರುವ ಪಾಪಗಳನ್ನು ಲೆಕ್ಕಿಸಲು ಸಾಧ್ಯವಿಲ್ಲ. ಆದುದರಿಂದ ಇದೀಗ ನನ್ನ ಆ ಅಪರಾಧಗಳನ್ನು ಕ್ಷಮಿಸು. ಅಯ್ಯೋ, ಇದುವರೆಗೆ ಒಂದು ಬಾರಿಯಾದರೂ ನಾನು ಪರಶಿವನ ಅಡಿದಾವರೆಗಳನ್ನು ಆರಾಧಿಸಲಿಲ್ಲವಲ್ಲಾ! ಶಿವಲಿಂಗವನ್ನು ಸಂದರ್ಶಿಸಲಿಲ್ಲ. ಜ್ಞಾನಿಗಳಾದ ನಿನ್ನ ಭಕ್ತರ ಸಂಗವನ್ನು ನಾನು ಬೆಳೆಸಲಿಲ್ಲ. ॥೬೪॥

ಯಸ್ತ್ವಾಂ ಜಿಹ್ಮಧಿಯಾ ಮಹೇಶಮನುಮಾರಾಧ್ಯಂ ನ ಚಾಭ್ಯರ್ಚಯೇ
ತ್ತತ್ವಂ ವಂಚಯಸೇ ಮಹಾಭವಶತೈಃ ಪಾಪೌಘಕಾಷ್ಠೈರಪಿ ।
ತಸ್ಮಾತ್ತ್ವಂ ಪರಿವಂಚಕೋಽಸಿ ಭಗವನ್ಯೋ ಬಿಲ್ವಪತ್ರೈರ್ಮುದಾ
ತ್ವಲ್ಲಿಂಗಂ ಸಕೃದರ್ಚಯನ್ನಿಹ ಸ ಭವೇನ್ಮುಕ್ತ್ಯಂಗನಾಯಾಃ ಪತಿಃ ॥೬೭॥

ಇತಿ ಮಾಂ ತ್ವಂ ತದಾ ಸ್ತೌಷೀರ್ಭಕ್ತ್ಯಾ ಚ ವಿನಯೇನ ಚ ।
ತವ ಪಾಣಿಗ್ರಹಂ ಕೃತ್ವಾ ತುಷ್ಟೋಽಸ್ಮಿ ಗಿರಿಕನ್ಯಕೇ ೬೮॥

ತ್ವಯಾ ಸಂಪೂಜಿತೇ ಲಿಂಗೇ ಗೌರೀಶೇ ಸಂವಸಾಮ್ಯಹಂ ।
ಗೌರೀಲಿಂಗೇ ಸಕೃದ್ದೃಷ್ಟೇ ತಜ್ಜನ್ಮ ಸಫಲಂ ಭವೇತ್ ॥೬೯॥

ಕೇದಾರೇಶಸ್ಯ ದಿಗ್ಭಾಗೇ ದಕ್ಷಿಣೇ ಸರಸಸ್ತಟೇ ।
ದೃಷ್ಟ್ವಾ ಗೌರೀಶ್ವರಂ ಲಿಂಗಂ ಗೌರೀಲೋಕೇ ವಸೇಚ್ಚಿರಂ ॥೭೦॥

ಓ ಪ್ರಭುವೇ, ಯಾವ ಮನುಜನು ಕುಟಿಲನೀತಿಯನ್ನನುಸರಿಸಿ, ದೇವತೆಗಳಿಗೆ ಪೂಜ್ಯನೂ, ಜಗತ್ಪ್ರಭುವೂ ಆದ ನಿನ್ನನ್ನು ಆರಾಧಿಸುವುದಿಲ್ಲವೋ, ಆ ಮನುಜನನ್ನು ನೀನು ಪಾಪರಾಶಿಗಳಿಗೆ ಆಶ್ರಯವಾದ ಅಪಾರವಾದ ಸಂಸಾರದಲ್ಲಿ ಕೆಡವಿ ಮೋಸಗೊಳಿಸುವೆ. ಆದುದರಿಂದಲೇ ನೀನು "ಪರಿವಂಚಕ"ನೆಂಬ ಹೆಸರಿನಿಂದ ವೇದದಲ್ಲಿ ಪ್ರಸಿದ್ಧನಾಗಿರುವೆ. ಓ ಭಗವಂತನೇ, ಯಾವ ನರನು ಒಂದೇ ಒಂದು ಬಾರಿಯಾದರೂ ನಿನ್ನ ಲಿಂಗವನ್ನು ಅರ್ಚಿಸುವನೋ ಅವನು ನಿಜವಾಗಿಯೂ ಮೋಕ್ಷಾಂಗನೆಯನ್ನು ವರಿಸುವನು." ॥೬೭॥

ಗಿರಿಜೆಯೇ, ನೀನು ಹೀಗೆ ಭಕ್ತಿಯಿಂದಲೂ ಮತ್ತು ವಿನಯದಿಂದಲೂ ನನ್ನನ್ನು ಸ್ತುತಿಸಿದೆ. ಬಳಿಕ ನಾನು ಆಗಲೇ ನಿನ್ನ ಪಾಣಿಗ್ರಹಣ ಮಾಡಿ ಈಗ ಸಂತುಷ್ಟನಾಗಿರುವೆನು. ॥೬೮॥

ನಿನ್ನ ತಪೋಽನುಷ್ಠಾನಕಾಲದಲ್ಲಿ ನೀನು ಪೂಜಿಸಿದ ಈ ಗೌರೀಶಂಕರಲಿಂಗದಲ್ಲಿ ನಾನು ಸದಾ ವಾಸವಾಗಿರುವೆನು. ಈ ಗೌರೀಶಂಕರಲಿಂಗವನ್ನು ಒಂದಾವೃತ್ತಿ ನೋಡಿದರೂ ಅವನ ಜನ್ಮವು ಸಫಲವಾಗುವುದು. ॥೬೯॥

ಕೇದಾರೇಶ್ವರನ ದಕ್ಷಿಣ ದಿಕ್ಕಿನಲ್ಲಿ ಒಂದಾನೊಂದು ಸರೋವರದ ತೀರದಲ್ಲಿ ಗೌರೀಶ್ವರನೆಂಬ ಶಿವಲಿಂಗವಿರುವುದು. ಅದನ್ನು ಸಂದರ್ಶಿಸುವವನು ಗೌರೀಲೋಕವನ್ನು ಪಡೆದು ಬಹುಕಾಲದ ವರೆಗೆ ಅಲ್ಲಿ ಸುಖದಿಂದ ವಾಸಿಸುವನು. ಅದರಂ

ನಂದೀಶ್ವರಸ್ತಥಾ ಪ್ರಾಚ್ಯಾಮಾಸ್ತೇಽಭೀಷ್ಟಫಲಪ್ರದಃ ।
ತತ್ರ ತಪ್ತ್ವಾ ತಪೋ ನಂದೀ ಗಾಣಪತ್ಯಮವಾಪ್ತವಾನ್ ॥೬೯॥

ಪಶ್ಚಿಮೇ ಗಣನಾಥೇಶೋ ಗಣವೃಂದೈಶ್ಚ ಪೂಜಿತಃ ।
ಗೌರೀಶ್ವರೋ ದಕ್ಷಿಣತಸ್ತ್ವಯಾ ದೇವಿ ಸಮರ್ಚಿತಃ ॥೭೦॥

ಸ್ಕಂದೇಶ್ವರಸ್ತಥೋದೀಚ್ಯಾಂ ಸ್ಕಂದೇನೈವ ಸುಪೂಜಿತಃ ।
ಮಧ್ಯೇ ಕೇದಾರನಾಥಸ್ಯ ಲಿಂಗಂ ಶ್ರೇಷ್ಠಂ ತು ಮೇ ಸದಾ ॥೭೧॥

ಹಿಮವಚ್ಛಿಖರೇ ದೇವಿ ದೃಷ್ಟ್ವಾ ನತ್ವಾ ಚ ಭಕ್ತಿತಃ ।
ಗೌರೀಸರಸಿ ಮಜ್ಜನ್ ಸ ಸರ್ವತೀರ್ಥಜಲಾಪ್ಲುತಃ ॥೭೨॥

ಕೇದಾರೇಶ್ವರಮಾರಾಧ್ಯ ಕೋ ನ ಮುಚ್ಯೇತ ಬಂಧನಾತ್ ।
ಕೇದಾರಲಿಂಗಸದೃಶಂ ನ ಭೂತಂ ನ ಭವಿಷ್ಯತಿ ॥೭೩॥

---

ತೆಯೇ ಆ ಲಿಂಗದ ಪೂರ್ವದಿಕ್ಕಿನಲ್ಲಿ ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವ ನಂದಿಕೇಶ್ವರಲಿಂಗವಿರುವುದು. ಹಿಂದೆ ಅದೇ ಸ್ಥಳದಲ್ಲಿ ನಂದಿಕೇಶ್ವರನು ತಪಸ್ಸನ್ನಾಚರಿಸಿ ಪ್ರಮಥಗಣಗಳ ಅಧ್ಯಕ್ಷಪದವಿಯನ್ನು ಹೊಂದಿದನು. ॥೬೮-೬೯॥

ದೇವಿ, ಇದರ ಪಶ್ಚಿಮ ದಿಕ್ಕಿನಲ್ಲಿ ಪ್ರಮಥಗಣಗಳಿಂದ ಪೂಜಿಸಲ್ಪಟ್ಟ ಗಣನಾಥೇಶ್ವರವೆಂಬ ಲಿಂಗವೂ ದಕ್ಷಿಣದಿಕ್ಕಿನಲ್ಲಿ ನಿನ್ನಿಂದ ಅರ್ಚಿಸಲ್ಪಟ್ಟ ಗೌರೀಶಂಕರವೆಂಬ ಲಿಂಗವೂ ಇರುವುದು. ॥೭೦॥

ಅದರಂತೆ ಉತ್ತರ ದಿಕ್ಕಿನಲ್ಲಿ ಷಣ್ಮುಖನಿಂದ ಪೂಜಿಸಲ್ಪಟ್ಟ ಸ್ಕಂದೇಶ್ವರ ಲಿಂಗವೂ ಇರುವುದು. ಇವುಗಳ ಮಧ್ಯದಲ್ಲಿ ಕೇದಾರೇಶ್ವರವೆಂಬ ನನ್ನ ಶ್ರೇಷ್ಠವಾದ ಶಿವಲಿಂಗವಿರುವುದು. ॥೭೧॥

ಎಲೌ ದೇವಿಯೇ, ಹಿಮವತ್ಪರ್ವತದ ಶಿಖರದಲ್ಲಿರುವ ಈ ಲಿಂಗವನ್ನು ದರ್ಶನಮಾಡಿ, ಭಕ್ತಿಯಿಂದ ನಮಸ್ಕರಿಸಿ, ಗೌರೀಸರೋವರದಲ್ಲಿ ಸ್ನಾನವನ್ನು ಮಾಡಿದವನು, ಸಕಲ ಪುಣ್ಯತೀರ್ಥಗಳಲ್ಲಿಯೂ ಸ್ನಾನಮಾಡಿದಂತಾಗುವನೆಂದೇ ಭಾವಿಸು. ॥೭೨॥

ಕೇದಾರೇಶ್ವರನನ್ನು ಆರಾಧಿಸಿ ಸಂಸಾರಪಾಶದಿಂದ ಬಿಡುಗಡೆಯನ್ನು ಹೊಂದದವರಾರು? ಕೇದಾರ ಲಿಂಗಕ್ಕೆ ಸದೃಶವಾದ ಮತ್ತೊಂದು ಲಿಂಗವು ಹಿಂದೆಂದೂ ಇರಲಿಲ್ಲ. ಮುಂದೆಂದೂ ಉದ್ಭವಿಸಲಾರದು. ॥೭೩॥

ಸಕೃತ್ಸಂಪೂಜ್ಯ ಲಭತೇ ಮುಕ್ತಿಮಂತೇ ಗಿರೀಂದ್ರಜೇ ।
ಹಿಮವಚ್ಛಿಖರೇ ದೇವಿ ಪಶ್ಯನ್ಕೇದಾರಮೀಶ್ವರಂ ॥೭೪॥

ಅಶ್ವಮೇಧಶತೇಭ್ಯೋಽಪಿ ಫಲಂ ಲಬ್ಧ್ವಾ ವಿಮುಚ್ಯತೇ ॥೭೫॥

॥ ಈಶ್ವರ ಉವಾಚ ॥

ಯೋ ಮಾಮನನ್ಯಗತಯಾ ಶಿವಭಾವಭಕ್ತ್ಯಾ
ಕೇದಾರಮೀಶ್ವರಮಹಾಘಸಮುದ್ರಸೇತುಂ ।
ಸಂಸ್ತಭ್ಯ ಚಿತ್ತಮುಮಯಾ ಸಮುಪೇತಮೀಶ-
ಮಾಶಾಸ್ಯ ಮಾರಜನಕಾದಿಸುಪೂಜಿತಾಂಘ್ರಿಂ ॥೭೬॥

ಬಿಲ್ವೀದಲೈಶ್ಚ ಕಮಲೈಶ್ಚ ಸುಚಂದನೈಶ್ಚ
ನೀಲೋತ್ಪಲೈಶ್ಚ ಕುಮುದೈರ್ಗಿರಿಜೇ ಸ ಮುಕ್ತಃ ।
ಸಂಪೂಜಯೇದಘಯುತೋಽಪಿ ಮಹಾಘಮುಕ್ತೋ
ಭೂತ್ವಾ ಭವೇನ್ಮಮ ಕೃಪಾವಶತೋಽತಿಧನ್ಯಃ ॥೭೭॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಕೇದಾರಸ್ಥಾನ
ಲಿಂಗಾವಲಿಮಹಿಮಾನುವರ್ಣನಂ ನಾಮ
ತ್ರಯೋದಶೋಽಧ್ಯಾಯಃ

---

ಕೇದಾರೇಶ್ವರನನ್ನು ಒಂದೇ ಒಂದು ಬಾರಿ ಭಕ್ತಿಯಿಂದ ಪೂಜಿಸಿದರೂ ಅದರಿಂದಲೇ ನರನು ಅಂತ್ಯದಲ್ಲಿ ಮುಕ್ತಿಯನ್ನು ಪಡೆಯುವನು. ॥೭೪॥

ಹಿಮವತ್ಪರ್ವತದ ಶಿಖರದಲ್ಲಿ ನೆಲಸಿರುವ ಕೇದಾರೇಶ್ವರನನ್ನು ಆರಾಧಿಸುವವನು ನೂರಾರು ಅಶ್ವಮೇಧಗಳನ್ನು ಆಚರಿಸಿದುದರಿಂದುಂಟಾಗುವ ಫಲಕ್ಕಿಂತಲೂ ಹೆಚ್ಚಾದ ಫಲವನ್ನು ಹೊಂದಿ ಅಂತ್ಯದಲ್ಲಿ ಮುಕ್ತಿಯನ್ನು ಪಡೆಯುವನು. ॥೭೫॥

ಎಂದು ಹೇಳಿ ಈಶ್ವರನು ತನ್ನ ಪ್ರೇಯಸಿಯನ್ನು ಕುರಿತು "ಎಲೌ ಪ್ರೇಯಸಿಯೇ, ಯಾವ ಮನುಜನು ದೃಢವಾದ ಭಕ್ತಿಯಿಂದ ಕೂಡಿದವನಾಗಿ ಚಿತ್ತೈಕಾಗ್ರತೆಯಿಂದ ಅಪಾರವಾದ ಪಾಪವೆಂಬ ಸಮುದ್ರಕ್ಕೆ ಸೇತುವೆಯಂತೆ, ಗಿರಿಜೆಯಿಂದ ಯುಕ್ತನಾಗಿ, ವಿಷ್ಣುವಿನಿಂದಲೂ ಪೂಜಿಸಲ್ಪಟ್ಟ ಕೇದಾರೇಶ್ವರ

ರೂಪದಿಂದನೆಲಸಿರುವ ನನ್ನನ್ನು ಧ್ಯಾನಿಸಿ, ಬಿಲ್ವಪತ್ರೆಗಳಿಂದಲೂ, ಘಮಘಮಿಸುವ ಚಂದನಗಳಿಂದಲೂ, ಮೊನೆಯ ಮಲ್ಲಿಗೆ ಹೂವುಗಳಿಂದಲೂ, ಕುಮುದ ಪುಷ್ಪಗಳಿಂದಲೂ ಪೂಜಿಸುವನೋ ಆವನು ಎಂತಹ ಪಾಪಿಷ್ಠನಾಗಿದ್ದರೂ ನನ್ನ ಅನುಗ್ರಹದಿಂದ ಪಾಪವಿನಿರ್ಮುಕ್ತನಾಗಿ ಅಂತ್ಯದಲ್ಲಿ ಮುಕ್ತಿಯನ್ನು ಹೊಂದುವನು. ಅವನೇ ಅತ್ಯಂತ ಧನ್ಯನಾದವನು." ಎಂದು ಹೇಳಿದನು. ||೭೬-೭೭||

ಇಲ್ಲಿಗೆ ಶ್ರೀ ಶಿವರಹಸ್ಯದ ಐದನೆಯ ಅಂಶದಲ್ಲಿ ಕೇದಾರಪ್ರದೇಶದಲ್ಲಿರುವ ಶಿವಲಿಂಗಗಳ ಮಹಿಮೆಯ ವರ್ಣನೆಯೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀ ಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಚತುರ್ದಶೋಽಧ್ಯಾಯಃ

|| ಈಶ್ವರ ಉವಾಚ ||

**ಪುನರನ್ಯಾಂ ಕಥಾಂ ದೇವಿ ಶೃಣು ಶ್ರವಣಭೂಷಣಾಂ ।**
**ಸೌರಾಷ್ಟ್ರಕ್ಷೇತ್ರಮಸ್ತ್ಯೇಕಂ ಸೋಮನಾಥಾಹ್ವಯಂ ಶುಭಂ ॥೧॥**

**ತತ್ರಾಸೀನ್ಮಹಿತೋ ರಾಜಾ ಶೀತಾಂಶುಕುಲಭೂಷಣಃ ।**
**ಅನಪತ್ಯಃ ಸ ವೈ ದೇವಿ ಸೌರಾಷ್ಟ್ರೇಶೋ ಬೃಹದ್ಬಲಃ ॥೨॥**

**ಪಯೋಷ್ಣೀತೀರಮಾಸಾದ್ಯ ಸಿಂಧುರಾಶ್ವಸಮನ್ವಿತಃ ।**
**ಮಹತ್ಯಾ ಸೇನಯಾ ಸಾರ್ಧಂ ಮಹಿಷ್ಯಾ ಚ ಸಮನ್ವಿತಃ ॥೩॥**

---

## ಹದಿನಾಲ್ಕನೆಯ ಅಧ್ಯಾಯ

ತರುವಾಯ ಈಶ್ವರನು ಶಿವರಹಸ್ಯವನ್ನು ಮುಂದುವರಿಸುತ್ತಾ ವಲ್ಲಭೆಯನ್ನು ಕುರಿತು ಹೀಗೆಂದನು—ದೇವಿ, ಶ್ರುತಿಮಧುರವಾದ ಮತ್ತೊಂದು ಕಥೆಯನ್ನು ಹೇಳುವೆನು ಕೇಳು. ಸೌರಾಷ್ಟ್ರದೇಶದಲ್ಲಿ "ಸೋಮನಾಥ" ಎಂಬ ಹೆಸರಿನಿಂದ ಪ್ರಸಿದ್ಧವಾದ ಒಂದಾನೊಂದು ಕ್ಷೇತ್ರವಿರುವುದು. ॥೧॥

ಅಲ್ಲಿ ಚಂದ್ರವಂಶೋತ್ಪನ್ನನಾದ ಬೃಹದ್ಬಲನೆಂಬ ಹೆಸರಿನ ಪ್ರಸಿದ್ಧನಾದ ಒಬ್ಬಾನೊಬ್ಬ ರಾಜನಿದ್ದನು ಅವನು ಅಮಿತಪರಾಕ್ರಮವುಳ್ಳವನೂ ಅತ್ಯಂತ ಪ್ರಖ್ಯಾತನೂ ಆಗಿದ್ದನು. ಅವನಿಗೆ ಮಕ್ಕಳಿರಲಿಲ್ಲ. ॥೨॥

ರಾಜನು ಒಂದಾನೊಂದು ದಿನ ಸಿಂಧೂದೇಶದ ಕುದುರೆಯನ್ನೇರಿ ಚತುರಂಗ ಬಲದಿಂದ ಕೂಡಿರುವ ಪ್ರಬಲವಾದ ಸೇನಾಸಮೇತನಾಗಿ ಪತ್ನಿಯೊಂದಿಗೆ ಪಯೋಷ್ಣೀ

ಮುದ್ಗಲಸ್ಯಾಶ್ರಮಂ ಪ್ರಾಪ ಶ್ರಾಂತಃ ಸೂರಕರೈರ್ನೃಪಃ ।
ಪ್ರಣಮ್ಯ ಮುದ್ಗಲಂ ರಾಜಾ ಪೂಜಿತಸ್ತೇನ ವಿಷ್ಟರೇ ॥೪॥

ನಿಷಸಾದ ಮಹೀಪಾಲಃ ಪಪ್ರಚ್ಛ ಕುಶಲಂ ಮುನಿಂ ।
ಆಶ್ರಮೇಷು ಚ ಪುಣ್ಯೇಷು ತಥಾಗ್ನಿಶರಣೇಷು ಚ ॥೫॥

ಕ್ವಚಿನ್ನಿರ್ವಿಘ್ನತೋ ಬ್ರಹ್ಮನ್ತಪಸ್ತೇಗ್ನಿಮುಖಾಃ ಕ್ರಿಯಾಃ ।
ಭವಚ್ಛಿಷ್ಯಗಣಾಃ ಸರ್ವೇ ವಿನೀತಾಸ್ತ್ವಯಿ ಸತ್ತಮೇ ॥೬॥

ಮೃಗಪಕ್ಷಿಗಣಾಃ ಸರ್ವೇ ಗಾವಶ್ಚ ಸುಖಿನೋ ಮುದೇ ।
ಹಸ್ತಿಹಸ್ತಪರಾಮೃಷ್ಟಂ ಭವತಂತುಂ ಮಹಾಮುನೇ ॥೭॥

ಬೃಹದ್ಬಲಸ್ಯ ತದ್ವಾಕ್ಯಂ ಶ್ರುತ್ವಾ ಸ ಮುನಿಸತ್ತಮಃ ।
ಸ ಉವಾಚಾಥ ರಾಜಾನಂ ಪ್ರಸನ್ನವಚಸಾ ಮುನಿಃ ॥೮॥

---

ನದಿಯ ತೀರವನ್ನು ಪಡೆದು ಅಲ್ಲಿ ಪ್ರಬಲವಾದ ಸೂರ್ಯಕಿರಣಗಳ ತಾಪವನ್ನು ಸಹಿಸಲಾರದೇ ಬಳಲಿದವನಾಗಿ, ಸಮೀಪದಲ್ಲಿದ್ದ ಮುದ್ಗಲಮುನಿಯ ಆಶ್ರಮಕ್ಕೆ ಹೋದನು. ಅಲ್ಲಿ ಮುನಿಗೆ ನಮಸ್ಕರಿಸಿ ಅವನಿಂದ ಪೂಜಿಸಲ್ಪಟ್ಟು ಒಂದು ಆಸನದಲ್ಲಿ ಕುಳಿತುಕೊಂಡನು. ॥೩-೪॥

ಬಳಿಕ ಮುನಿಯನ್ನು ಕುರಿತು, ಆಶ್ರಮಗಳ ವಿಷಯವನ್ನೂ ಮತ್ತು ಅಗ್ನಿಹೋತ್ರಾದಿ ನಿತ್ಯಕರ್ಮಗಳ ವಿಷಯವನ್ನೂ ಅಧಿಕರಿಸಿ ಕುಶಲ ಪ್ರಶ್ನೆಮಾಡುತ್ತಾ ಹೀಗೆಂದನು. ॥೫॥

ಪೂಜ್ಯನಾದ ಮುನಿಯೇ! ನಿನ್ನ ತಪೋನುಷ್ಠಾನವು ನಿರ್ವಿಘ್ನವಾಗಿ ನೆರವೇರುತ್ತಿರುವುದೇ? ಅಗ್ನಿಹೋತ್ರಾದಿ ನಿತ್ಯಕರ್ಮಗಳು ಅಡ್ಡಿಯಿಲ್ಲದೆ ಸಾಗುವುವೇ? ನಿನ್ನ ಶಿಷ್ಯರು ನಿನ್ನಲ್ಲಿ ವಿಧೇಯರಾಗಿರುವರೇ? ॥೬॥

ಆಶ್ರಮದಲ್ಲಿರುವ ಜಿಂಕೆಗಳೂ ಪಕ್ಷಿಗಳೂ, ಮತ್ತು ಗೋವುಗಳೂ ಸುಖದಿಂದಿರುವುವೆ? ಸಂಸಾರವೆಂಬ ಪಾಶವು ಆನೆಯ ಸೊಂಡಲಿಗೆ ಸಿಕ್ಕಿದ ಹಗ್ಗದಂತೆ ಛಿನ್ನವಾಗಿ ಹೋಗಿರುವುದೆ? (ಅಂದರೆ ಭವಬಂಧನದಿಂದ ನೀನು ದೂರವಾಗಿರುವೆಯಾ) ॥೭॥

ಬೃಹದ್ಬಲನ ಆ ಮಾತನ್ನು ಕೇಳಿ ಮುನಿಶ್ರೇಷ್ಠನಾದ ಮುದ್ಗಲನು ರಾಜನನ್ನು ಕುರಿತು ಗಂಭೀರವಾದ ವಾಣಿಯಿಂದ ಹೀಗೆಂದನು. ॥೮॥

ತ್ವಯಿ ಶಾಸತಿ ಭೂಲೋಕಂ ಸರ್ವಂ ಚ ನಿರುಪದ್ರವಂ ।
ತ್ವಯಾದ್ಯ ಪಾಲಿತಾಃ ಸರ್ವೇ ನಿವಸಾಮಸ್ತಪಸ್ವಿನಃ ॥೯॥

ತಪಸಾ ಪರಮೇಶಾನಂ ಸಮಭ್ಯರ್ಚ್ಯ ಯಥಾವಿಧಿ ।
ಭವಾನಪಿ ಸದಾ ರಾಜಾ ಸುಖೀ ಸೈನ್ಯಸಮಾವೃತಃ ॥೧೦॥

ಕೋಶಾಗಾರೇ ತಥಾ ರಾಷ್ಟ್ರೇ ಅಮಾತ್ಯೇ ದುರ್ಗರಕ್ಷಣೇ ।
ದಾರಾಪೌರಾದಿಕಾರ್ಯೇಷು ವಿನೀತೋಽಸಿ ನೃಪಾತ್ಮಜ ॥೧೧॥

ಇತ್ಥಂ ಮುನಿವಚಃ ಶ್ರುತ್ವಾ ಸ ರಾಜಾ ಮುದ್ಗಲಂ ತದಾ ।
ಪ್ರಾಂಜಲಿರ್ವಿನಯೋಪೇತೋ ಮುದ್ಗಲಂ ವಾಕ್ಯಮಬ್ರವೀತ್ ॥೧೨॥

ರಾಜೇಂದ್ರನೇ! ನೀನು ರಾಜ್ಯವನ್ನು ಆಳುತ್ತಿರಲು ಭೂಲೋಕದಲ್ಲಿ ವಾಸಿಸುತ್ತಿರುವ ಸಕಲ ಪ್ರಾಣಿವರ್ಗವೂ ಯಾವ ಬಗೆ ತೊಂದರೆಗೂ ಗುರಿಯಾಗದೆ ಸುಖದಿಂದ ಜೀವಿಸುತ್ತಿರುವುದು. ತಪಸ್ವಿಗಳಾದ ನಾವು ನಿನ್ನಿಂದಲೇ ರಕ್ಷಿಸಲ್ಪಟ್ಟವರಾಗಿ, ಸುಖದಿಂದ ವಾಸವಾಗಿರುವೆವು. ॥೯॥

ನಿನ್ನ ಅನುಗ್ರಹದಿಂದಲೇ, ನಾವೆಲ್ಲರೂ, ತಪಸ್ಸನ್ನು ಆಚರಿಸುತ್ತಾ, ವಿಧಿವತ್ತಾಗಿ ಪರಮೇಶ್ವರನನ್ನು ಪೂಜಿಸಿ ಕಾಲವನ್ನು ಕಳೆಯುತ್ತಿರುವೆವು. ರಾಜನಾದ ನೀನು ಕ್ಷೇಮದಿಂದಿರುವೆಯಾ! ನಿನ್ನ ಸೇನಾಗಣವು ಕುಶಲದಿಂದಿರುವುದೇ? ॥೧೦॥

ನಿನ್ನ ಕೋಶಾಗಾರವು ಸಂಪದ್ಭರಿತವಾಗಿರುವುದೇ? ರಾಷ್ಟ್ರವು ಸುಭಿಕ್ಷವಾಗಿರುವುದೇ? ಕೋಟೆಯು ಜಾಗರೂಕತೆಯಿಂದ ರಕ್ಷಿಸಲ್ಪಡುತ್ತಿರುವುದೇ? ಮಂತ್ರಿಗಳ ಮತ್ತು ಪಟ್ಟಣಿಗರ ವಿಶ್ವಾಸವನ್ನು ನೀನು ಗಳಿಸಿರುವೆಯಾ? ಪತ್ನಿಯು, ಹಿತೈಷಿಣಿಯಾಗಿರುವಳೇ? ॥೧೧॥

ಮುನಿಯು ನುಡಿದ ಕುಶಲಪ್ರಶ್ನೆಗಳನ್ನು ಕೇಳಿ, ರಾಜನು, ಅವನ ಸಮೀಪವನ್ನು ಪಡೆದು ಅಂಜಲಿಬದ್ಧನಾಗಿ, ವಿನಯದಿಂದ ಕೂಡಿ, ಮುನಿಯನ್ನು ಕುರಿತು ಹೀಗೆಂದನು. ॥೧೨॥

ಧನ್ಯೋಽಹಮಧುನಾ ವಿಪ್ರ ಯನ್ಮಾಂ ತ್ವಮನುಕಂಪಸೇ ।
ಶಾಂಭವಸ್ಯಾದ್ಯ ತೇ ದೃಷ್ಟ್ಯಾ ಸರ್ವಂ ಕುಶಲಮೇವ ಮೇ ॥೧೩॥

ತಥಾಪಿ ತದ್ಗತೋ ಭಾವಃ ಸ ತ್ವಯಾಪ್ರಾಪ್ಯ ಏವ ಹಿ ।
ಶಾಂಭವಾ ಏವ ಲೋಕೇಷು ಶಾಂಭವೋ ಮುನಿಸತ್ತಮಃ ॥೧೪॥

ತ್ವದ್ದಯಾಪಾಂಗಸಂಗೇನ ಸುಖಸಂಗೋ ಮಮಾಭವತ್ ।
ವಿಶ್ವಸ್ತಸ್ತ್ವಯಿ ಚಾತ್ಯಂತಂ ಪಿತರೀವ ಮಹಾಮುನೇ ॥೧೫॥

ಕಾರಣಂ ತತ್ರ ವಕ್ಷ್ಯಾಮಿ ತದಿಹೈಕಮನಾಃ ಶೃಣು ।
ಅಸಂಖ್ಯಂ ಗಣನಾಹೀನಂ ವಿತ್ತಮಸ್ತ್ಯೇವ ಮದ್ಗೃಹೇ ॥೧೬॥

ಮಾತಂಗಾಶ್ಚ ತುರಂಗಾಶ್ಚ ಉತ್ತಮಾಃ ಸಂತಿ ಕೋಟಿಶಃ ।
ಗೋಖರೋಷ್ಟ್ರಾಜಾವಿಕಾಶ್ಚ ಬಲೀವರ್ದಾಶ್ಚ ಕೋಟಿಶಃ ॥೧೭॥

ರಥಾಶ್ಚ ಶಿಬಿಕಾಃ ಸಂತಿ ದಂತಿದಂತೋತ್ತಮೈಃ ಕೃತಾಃ ।
ಹಿರಣ್ಯರಜತಾನಾಂ ಚ ರತ್ನಾನಾಂ ಚೈವ ರಾಶಯಃ ॥೧೮॥

ಓ ಮುನಿಪುಂಗವನೇ, ನೀನು ನನ್ನಲ್ಲಿ ದಯೆದೋರಿದುದರಿಂದ ಈ ದಿನ ನಾನು ಧನ್ಯನಾದೆನು. ಈಶ್ವರಭಕ್ತಾಗ್ರೇಸರನಾದ ನಿನ್ನ ಕೃಪಾದೃಷ್ಟಿಯಿಂದ ಸರ್ವರೂ ಕುಶಲದಿಂದಿರುವರು. ॥೧೩॥

ಆದರೂ ಸರ್ವಜ್ಞನಾದ ನೀನು ನಮ್ಮ ಮನೋಗತವನ್ನು ತಿಳಿದೇ ಇರುವೆ. ಮುನಿಶ್ರೇಷ್ಠನೇ, ಈ ಲೋಕದಲ್ಲಿ ಈಶ್ವರಭಕ್ತರೆಂದೆನಿಸಿಕೊಂಡವರು ಸಾಕ್ಷಾದೀಶ್ವರನ ಸ್ವರೂಪರೇ ಅಲ್ಲವೆ! ॥೧೪॥

ನಿನ್ನ ಕೃಪಾಕಟಾಕ್ಷದಿಂದ ನಾನು ಸುಖಿಯಾದೆನು. ನನಗೆ ನನ್ನ ತಂದೆಯಲ್ಲಿರುವಂತೆ ನಿನ್ನಲ್ಲಿಯೂ ಅಚಲವಾದ ಭಕ್ತಿಭಾವನೆಯಿರುವುದು. ॥೧೫॥

ಆದರ ಕಾರಣವನ್ನು ನಿನಗೆ ಹೇಳುವೆನು. ಸಾವಧಾನದಿಂದ ಕೇಳು. ನನ್ನ ಗೃಹವಲ್ಲಿ ಅಗಣಿತವಾದ ಐಶ್ವರ್ಯವು ತುಂಬಿರುವುದು. ॥೧೬॥

ಶ್ರೇಷ್ಠವಾದ ಅನೇಕ ಆನೆ, ಕುದುರೆ ಮುಂತಾದ ವಾಹನಗಳೂ, ಗೋವುಗಳೂ, ಆಡು, ಕುರಿ, ಎತ್ತು ಮುಂತಾದ ಪ್ರಾಣಿಗಳೂ ಇರುವುವು. ಇದಲ್ಲದೇ ಆನೆಯ ದಂತಗಳಿಂದ ರಚಿಸಲ್ಪಟ್ಟ ಅನೇಕ ರಥಗಳೂ ಮತ್ತು ಪಲ್ಲಕ್ಕಿಗಳೂ

ಗಿರೀಂದ್ರಶಿಖರಾಕಾರಾಃ ಸಂತಿ ವಿಪ್ರಸಹಸ್ರಶಃ ।
ಮದ್ಗೃಹೇ ನಿಯತಂ ವಿಪ್ರ ಧಾನ್ಯಾನಾಂ ಗಣನೈವ ನ ॥೧೯॥

ಅಮಾತ್ಯಾ ಬಾಂಧವಾಃ ಪೌರಾಃ ಭೃತ್ಯಾಶ್ಚೈವ ಭೃತಾಮಯಾ ।
ಹೃಷ್ಟಪುಷ್ಟಜನಂ ಸರ್ವಂ ಶಿಪಿವಿಷ್ಟಾರ್ಚನೇ ರತಂ ॥೨೦॥

ಬ್ರಾಹ್ಮಣಾವಸಥಾಶ್ಚೈವ ಸೋರ್ವರಾಃ ಶರ್ವತುಷ್ಟಯೇ ।
ಪಾನೀಯಶಾಲಾರುಚಿರಾಃ ಸರಸ್ತೀರಾಣಿ ಕೋಟಿಶಃ ॥೨೧॥

ಅಶ್ವಮೇಧಾದಯೋ ಗಾವಃ ಸ್ವಾದ್ವನ್ನಾ ಬಹುದಕ್ಷಿಣಾಃ ।
ಕೃತಾಃ ಸಹಸ್ರಶೋ ವಿಪ್ರ ಸಾಕ್ಷಾಚ್ಛಂಕರತುಷ್ಟಯೇ ॥೨೨॥

ಚಿನ್ನ, ಬೆಳ್ಳಿ, ರತ್ನ ಇವುಗಳ ರಾಶಿಗಳೇ ಇರುವುವು. ಅವು ಪರ್ವತದ ಶಿಖರಗಳಂತೆ ಉನ್ನತವಾಗಿರುವುವು. ॥೧೭-೧೮॥

ನನ್ನ ಗೃಹದಲ್ಲಿ ಸಾವಿರಾರು ಬ್ರಾಹ್ಮಣೋತ್ತಮರು ನಿರಂತರವೂ ಇರುವರು. ಧಾನ್ಯಗಳು ಅಗಣಿತವಾಗಿರುವುವು. ॥೧೯॥

ಇದಲ್ಲದೇ, ನನ್ನ ಆಶ್ರಯದಲ್ಲಿ, ಮಂತ್ರಿಗಳೂ, ಭೃತ್ಯರೂ ಅನೇಕರಿರುವರು. ನನ್ನ ಬಂಧುಬಳಗವನ್ನೂ ಪಟ್ಟಣಿಗರಾದ ಜನರನ್ನೂ ಅನ್ನವಸ್ತ್ರಗಳಿಂದ ಸಲಹುತ್ತಿರುವೆನು. ಸರ್ವರೂ ಅನವರತವೂ ಸಂತೋಷಚಿತ್ತರಾಗಿ, ಈಶ್ವರಾರಾಧನೆಯಲ್ಲಿ ಆಸಕ್ತರಾಗಿರುವರು. ॥೨೦॥

ಓ, ಮುನಿಯೇ ! ನನ್ನ ರಾಜ್ಯದಲ್ಲಿ, ಬ್ರಾಹ್ಮಣರಿಂದ ಶೋಭಿಸುತ್ತಿರುವ ಅನೇಕ ಅಗ್ರಹಾರಗಳಿರುವುವು. ಅವೆಲ್ಲವೂ, ಸಸ್ಯಭರಿತವಾದ ಕ್ಷೇತ್ರಗಳಿಂದ ಕೂಡಿರುವುವು. ಅಲ್ಲದೇ ಈಶ್ವರಪ್ರೀತ್ಯರ್ಥವಾಗಿ, ಅಲ್ಲಲ್ಲಿ ಪಾನಶಾಲೆಗಳನ್ನೂ, ಸರೋವರಗಳನ್ನೂ, ಪ್ರಯಾಣಿಕರಿಗೂ ಮತ್ತು ಬಡಬಗ್ಗರಿಗೂ ತಂಗಲು ಅನುಕೂಲವಾದ ವಾಸಸ್ಥಳಗಳನ್ನೂ, ಅನ್ನಸತ್ರಗಳನ್ನೂ ನಿರ್ಮಿಸಿರುವೆನು. ॥೨೧॥

ಇದಲ್ಲದೇ ಈಶ್ವರನನ್ನು ತೃಪ್ತಿಗೊಳಿಸುವುದಕ್ಕೋಸ್ಕರ ಅಶ್ವಮೇಧವೇ ಮೊದಲಾದ ಅನೇಕ ಯಾಗಗಳನ್ನು ಆಚರಿಸಿ, ಹೇರಳವಾದ ಧನವನ್ನು ಬ್ರಾಹ್ಮಣರಿಗೆ ದಾನಮಾಡಿ ರುಚಿಕರವಾದ ಭೋಜನದಿಂದ ಅವರನ್ನು ತೃಪ್ತಿಗೊಳಿಸಿರುವೆನು. ॥೨೨॥

ನ ತಸ್ಕರಃ ಸ್ವೈರಿಣೀ ವಾ ಅನಗ್ನಿರ್ನೈವ ಮೇ ಪುರೇ ॥೨೩॥

ಗ್ರಾಮೇ ರಾಷ್ಟ್ರೇ ಜನಪದೇ ದರಿದ್ರೋ ನಾಸಹಸ್ರದಃ ।
ದಾರಾ ಮನೋಹರಾಃ ಸಂತಿ ರಂಭಾಧಿಕ್ಕಾರಿಣೋ ಮಮ ॥೨೪॥

ಶತಸಂಖ್ಯಾ ಮುನಿಶ್ರೇಷ್ಠ ಶರದಿಂದುಸಮಾನನಾಃ ।
ಅನಾಹತಂ ಶಾಸನಂ ಮೇ ಸರ್ವದೇಶೇಷು ಸತ್ತಮ ॥೨೫॥

ದಾಸ್ಯೋ ಮನೋಹರಾಃ ಸಂತಿ ಪೀನಶ್ರೋಣಿಪಯೋಧರಾಃ ।
ಯೌವ್ವನೋನ್ಮಾದಸಂವೀತಾಃ ನಿಷ್ಕಕಂಠ್ಯೋ ವರಾಂಗನಾಃ ॥೨೬॥

ದಾಸಾಶ್ಚ ಮೇದ್ಯ ನೇದಿಷ್ಟಾಃ ಯುವಾನೋ ಮೃಷ್ಟಕುಂಡಲಾಃ ।
ಭಟಾಶ್ಚ ಸಮರೋತ್ಸಾಹಾಃ ಸರ್ವಶಸ್ತ್ರಧರಾಃ ಸದಾ ॥೨೭॥

ನನ್ನ ಪಟ್ಟಣದಲ್ಲಿ ಕಳ್ಳಕಾಕರರಾಗಲಿ, ಜಾರಿಣಿಯರಾದ ಸ್ತ್ರೀಯರಾಗಲಿ ಅಥವಾ ಅಗ್ನ್ಯಾಧಾನವನ್ನು ಮಾಡದಿರುವ ದ್ವಿಜರೇ ಆಗಲಿ ಇರುವುದಿಲ್ಲ. ॥೨೩॥

ಗ್ರಾಮದಲ್ಲಾಗಲಿ, ರಾಜ್ಯದಲ್ಲಾಗಲಿ ಇತರ ಸ್ಥಳದಲ್ಲಾಗಲಿ ದರಿದ್ರರ ಸುಳಿವೇ ಕಾಣುವುದಿಲ್ಲ. ನನಗೆ ಸುಂದರಿಯರಾದ ನೂರಾರುಮಂದಿ ಪತ್ನಿಯರಿರುವರು. ಅವರು ತಮ್ಮ ಸೌಂದರ್ಯಾತಿಶಯದಿಂದ ಅಪ್ಸರಸ್ತ್ರೀಯಾದ ರಂಭೆಯನ್ನೂ ಸಹ ತಿರಸ್ಕರಿಸುವಂತಿರುವರು. ॥೨೪॥

ಅಲ್ಲದೆ ಅವರು ಶರತ್ಕಾಲದ ಚಂದ್ರನಂತೆ ನನಗೆ ಸದಾ ಆಹ್ಲಾದವನ್ನುಂಟು ಮಾಡುತ್ತಿರುವರು. ಓ ಮುನಿಪುಂಗವನೇ, ಸಕಲ ದೇಶಗಳಲ್ಲಿಯೂ ನನ್ನ ಶಾಸನವು ಅವ್ಯಾಹತವಾಗಿ ನಡೆಯುತ್ತಿರುವುದು. ॥೨೫॥

ನನಗೆ, ಸುಂದರಿಯರೂ, ಯೌವ್ವನಭರಿತರೂ, ಸರ್ವಾಭರಣಭೂಷಿತರೂ ಪುಷ್ಟವಾದ ಕಟಿಭಾಗ ಮತ್ತು ಸ್ತನಗಳಿಂದ ಕೂಡಿದವರೂ ಆದ ನೂರಾರು ಮಂದಿ ದಾಸಿಯರಿರುವರು. ॥೨೬॥

ಇನ್ನೂ, ಯೌವನಾವಸ್ಥೆಯಲ್ಲಿರುವ, ಅನೇಕ ಸೇವಕರೂ ಮತ್ತು ಸಮರ ಪಟುಗಳಾದ ಲಕ್ಷಾಂತರ ಯೋಧರೂ ನಿರಂತರವೂ ನನ್ನ ಪಾರ್ಶ್ವದಲ್ಲಿಯೇ ನೆಲಸಿರುವರು. ॥೨೭॥

ಜೇತಾರೋ ರಿಪುಸೈನ್ಯಾನಾಂ ನ ಕೆದಾಚಿತ್ಪರಾಜಿತಾಃ ।
ಸರ್ವಮೇತನ್ಮುನಿಶ್ರೇಷ್ಠ ನೈವಾನಂದಕರಂ ಮಮ ॥೨೮॥

ನಂದನಾನಂದಹೀನಸ್ಯ ನಾನಂದಃ ಕ್ವಾಪಿ ದೃಶ್ಯತೇ ।
ಇತ್ಯುಕ್ತ್ವಾ ಸೋಽಶ್ರುಪೂರ್ಣಾಕ್ಷೋ ರಾಜೋಚ್ಛ್ವಾಸಸಮನ್ವಿತಃ ॥೨೯॥

ದುಃಖಿತಃ ಪ್ರಾಂಜಲಿರ್ಭೂತ್ವಾ ಪ್ರಣನಾಮ ಪುನಃ ಪುನಃ ।
ಸ ಮುನಿಃ ಸಾಂತ್ವಯನ್ವಾಕ್ಯೈರ್ಮೈರ್ವಂ ರಾಜನ್ನಿತಿ ಬ್ರುವನ್ ॥೩೦॥

ಸ್ವಪಾಣಿಕಮಲೇನೈವ ತನ್ಮುಖಂ ಪರಿಮಾರ್ಜಯತ್ ।
ತಮಾಹ ನೃಪತಿಂ ವಿಪ್ರೋ ಧ್ಯಾಯನ್ನೀಶಾನಮವ್ಯಯಂ ॥೩೧॥

॥ ಮುದ್ಗಲ ಉವಾಚ ॥

ತ್ವಂ ರಾಜಾ ಸರ್ವಲೋಕಾನಾಂ ಸತ್ಯಧರ್ಮಪರಾಯಣಃ ।
ತ್ವಯಾ ನ ಸದೃಶೋ ಲೋಕೇ ಧನೈರ್ಧನಪತೇಃ ಸಮಃ ॥೩೨॥

ನನ್ನ ಯೋಧರೂ, ಶತ್ರುಸೈನ್ಯವನ್ನು ಜಯಿಸುವವರೇ ಆಗಿರುವರಲ್ಲದೇ ಎಂದಿಗೂ ಶತ್ರುಗಳಿಂದ ಪರಾಜಿತರಾಗುವವರಲ್ಲ. ಓ, ಮುನಿಪುಂಗವನೇ, ಹೀಗಿದ್ದರೂ ನನಗೆ ಇವೆಲ್ಲವೂ, ಆನಂದವನ್ನುಂಟುಮಾಡುವಂತಿಲ್ಲ. ॥೨೮॥

ಏಕೆಂದರೆ ಪುತ್ರನಿಂದುಂಟಾಗುವ ಆನಂದವನ್ನು ಅನುಭವಿಸದಿದ್ದವನಿಗೆ, ಇತರ ಯಾವ ಭೋಗ್ಯವಸ್ತುಗಳಿದ್ದರೂ ಅವುಗಳಿಂದ ಸುಖವು ಲಭಿಸುವುದೇ? ಹೀಗೆಂದು ಹೇಳಿ ಆ ರಾಜನು ಕಣ್ಣೀರನ್ನು ಸುರಿಸುತ್ತಾ ನಿಟ್ಟುಸಿರನ್ನು ಬಿಟ್ಟನು. ॥೨೯॥

ಅವನು ಈ ರೀತಿಯಲ್ಲಿ ದುಃಖಗೊಂಡು, ಅಂಜಲಿಬದ್ಧನಾಗಿ ಮುನಿಗೆ ಬಾರಿಬಾರಿಗೂ, ನಮಸ್ಕರಿಸಿದನು. ಮುನಿಯು ರಾಜನನ್ನು ಸಮಾಧಾನಗೊಳಿಸುತ್ತಾ, ತನ್ನ ಕೈಗಳಿಂದಲೇ ರಾಜನ ಕಣ್ಣೀರನ್ನೂ ಒರಸಿದನು. ಬಳಿಕ, ಮುನಿಯು, ಈಶ್ವರನನ್ನು ಧ್ಯಾನಿಸುತ್ತಾ, ರಾಜನನ್ನು ಕುರಿತು ಹೀಗೆಂದನು. ॥೩೦-೩೧॥

"ಎಲೈ ಭೂಪಾಲಕನೇ, ನೀನು ಸತ್ಯಸಂಧನೂ, ಧರ್ಮಪರಾಯಣನೂ, ಸಕಲಲೋಕಗಳ ಸ್ವಾಮಿಯೂ ಆಗಿರುವೆ. ಈ ಲೋಕದಲ್ಲಿ ನಿನಗೆ ಸದೃಶನಾದವನು ಮತ್ತೊಬ್ಬನಿಲ್ಲ. ನೀನು ಐಶ್ವರ್ಯದಿಂದ ಕುಬೇರನಿಗೆ ಸದೃಶನಾಗಿರುವೆ. ॥೩೨॥

ತ್ವಯಾಶ್ವಮೇಧೈಃ ಸತತಂ ತೃಪ್ತೋ ಮಖಪತಿರ್ಯತಃ ।
ಸ ತೇ ಕಾಮಂ ಪೂರಯತಿ ಕಾಮಾರಿರ್ನಾತ್ರ ಸಂಶಯಃ ॥೩೩॥

ಪಯೋಷ್ಣ್ಯಾಂ ಸ್ನಾಹಿ ರಾಜೇಂದ್ರ ನದ್ಯಾಮಸ್ಯಾಂ ಸುಖಾಪ್ತಯೇ ।
ಇತ್ಯುಕ್ತಃ ಸೋಽಪಿ ನೃಪತಿಃ ಸ್ನಾತ್ವಾ ನದ್ಯಾಂ ಮುಹಾಮುನಿಂ॥೩೪॥

ಶರಣಂ ಸ ಜಗೌ ಮೇಽವ ಭಕ್ತಂ ಮಮ ಶುಚಿಸ್ಮಿತೇ ।
ಸಮುದ್ಧೂಲ್ಯ ತದಂಗಾನಿ ಭಸ್ಮನಾ ಸ್ವಕರಾಂಬುಜೈಃ ॥೩೫॥

ಅಗ್ನಿರಿತ್ಯಾದಿಭಿರ್ಮಂತ್ರೈಸ್ತ್ರಿಯಾಯುಷೈಸ್ತ್ರಿಪುಂಡ್ರಕಂ ।
ಈಶಾನೇತಿ ಚ ಮಂತ್ರೇಣ ದದೌ ರುದ್ರಾಕ್ಷಮಾಲಿಕಾಃ ॥೩೬॥

---

ನೀನು ಆಚರಿಸಿದ ಅಶ್ವಮೇಧಯಾಗಗಳಿಂದ ಯಜ್ಞಪತಿಯಾದ ಪರಶಿವನು ಸುಪ್ರೀತನಾಗಿರುವನು. ಆದುದರಿಂದ ಮನ್ಮಥಶತ್ರುವಾದ ಆ ಪರಮೇಶ್ವರನೇ ನಿನ್ನ ಇಷ್ಟಾರ್ಥವನ್ನು ನೆರವೇರಿಸುವವನು. ಇದರಲ್ಲಿ ಸಂಶಯಪಡಬೇಡ.॥೩೩॥

ನಿನ್ನ ತಾಪವನ್ನು ಹೋಗಲಾಡಿಸುವುದಕ್ಕೋಸ್ಕರ ಈ ಪಯೋಷ್ಣೀನದಿಯಲ್ಲಿ ಸ್ನಾನವನ್ನಾಚರಿಸು.” ಎಲೌ, ಹಸನ್ಮುಖಿಯಾದ ದೇವಿಯೇ: ಮುನಿಯು ಹೀಗೆನ್ನಲು, ರಾಜನು ನದಿಯಲ್ಲಿ ಸ್ನಾನವನ್ನಾಚರಿಸಿ, ನನ್ನ ಅತ್ಯಂತ ಭಕ್ತನಾದ ಆ ಮುನಿಯ ಸಮೀಪಕ್ಕೆ ಬಂದನು. ॥೩೪॥

ಮುನಿಯು, ತನ್ನ ಕರಕಮಲಗಳಿಂದ, ರಾಜನ ಅಂಗಗಳಿಗೆ ಭಸ್ಮವನ್ನು ಲೇಪಿಸಿ, ಹಣೆಯಲ್ಲಿ, “ಅಗ್ನಿರಿತಿಭಸ್ಮ ವಾಯುರಿತಿಭಸ್ಮ” ಎಂಬಿವೇ ಮುಂತಾದ ತ್ರ್ಯಾಯುಷ ಮಂತ್ರಗಳಿಂದ ತ್ರಿಪುಂಡ್ರವನ್ನಿಡಿಸಿ, “ಈಶಾನಃ ಸರ್ವವಿದ್ಯಾನಾಂ” ಎಂಬೀ ಮಂತ್ರದಿಂದ ರಾಜನ ಹಸ್ತದಲ್ಲಿ ರುದ್ರಾಕ್ಷಿಯ ಮಾಲಿಕೆಯನ್ನಿತ್ತನು. ॥೩೫-೩೬॥

ಬಳಿಕ ಶಾಂಭವೀ ವಿದ್ಯೆಯಾದ ಶಿವಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿದನು. ದೇವಿ! ಆಗ ಶಿವಪಂಚಾಕ್ಷರೀ ವಿದ್ಯೆಯಿಂದ ಯುಕ್ತನಾದ ಆ ರಾಜನು, ನಿರ್ಮಲವಾದ ಅಂತರಿಕ್ಷದಲ್ಲಿ, ನಕ್ಷತ್ರಮಾಲಿಕೆಗಳಿಂದ ಸುತ್ತುವರಿಯಲ್ಪಟ್ಟು, ಸಂಪೂರ್ಣವಾದ ಕಲೆಗಳಿಂದ ಕೂಡಿರುವ ಚಂದ್ರನೋಪಾದಿಯಲ್ಲಿ ಶೋಭಿಸಿದನು. ॥೩೭॥

ಪ್ರದದೌ ಶಾಂಭವೀಂ ವಿದ್ಯಾಂ ಶ್ರೀಮತ್ಪಂಚಾಕ್ಷರೀಂ ಶುಭಾಂ ।
ಸ ತಯಾ ವಿದ್ಯಯಾ ರೇಜೇ ರಾಜಾ ಚಂದ್ರ ಇವೋದ್ಗತಃ ॥೩೭॥

ನಭಸೀವಾಮಲೇ ದೇವಿ ತಾರಾಗಣಪರೀವೃತಃ ।
ಸಾಮಾತ್ಯಂ ಭೋಜಯಾಮಾಸ ಮುನಿರ್ಮೂಲಫಲೈರ್ನೃಪಂ ॥೩೮॥

ಶಿವನೈವೇದ್ಯಮಾಸಾದ್ಯ ಸ್ವದೋ ಸ್ವಾದೀಯಮುತ್ತಮಂ ।
ನಿಯುಕ್ತಸ್ತೇನ ಮುನಿನಾ ಸ ತು ರಾಜಾ ಬೃಹದ್ಬಲಃ ॥೩೯॥

ಪ್ರಣಮ್ಯ ತಂ ಮುನಿಂ ರಾಜಾ ಪ್ರಾಂಜಲಿಸ್ತಂ ವಚೋಽಬ್ರವೀತ್ ॥೪೦॥

॥ ರಾಜೋವಾಚ ॥

ಅನುಶಾಸ್ತು ಭವಾನೇವ ತತ್ಕರಿಷ್ಯಾಮಿ ಸಾದರಂ ।
ತದಾ ಬೃಹದ್ಬಲವಚೋ ಮುನಿಃ ಶ್ರುತ್ವಾ ತದಾಬ್ರವೀತ್ ॥೪೧॥

॥ ಮುನಿರುವಾಚ ॥

ರಾಜನ್ನಿಯತವಾನ್ಮೌನೀ ನಿತ್ಯಂ ರುದ್ರಜಪಾದರಃ ।
ಜಪ ಪಂಚಾಕ್ಷರೀಂ ವಿದ್ಯಾಂ ಪಂಚಪಾತಕನಾಶಿನೀಂ ॥೪೨॥

---

ಮುನಿಯು, ಮಂತ್ರಿವರ್ಗದಿಂದ ಕೂಡಿರುವ ರಾಜನಿಗೆ ಕಂದಮೂಲಗಳನ್ನೂ ಮತ್ತು ಹಣ್ಣುಹಂಪಲುಗಳನ್ನೂ ಅರ್ಪಿಸಿ ಭೋಜನವನ್ನು ಮಾಡಿಸಿದನು. ಆ ರಾಜನು, ಅತ್ಯಂತ ರುಚಿಕರವಾದ ಶಿವನೈವೇದ್ಯವನ್ನು ಭಕ್ಷಿಸಿ, ತೃಪ್ತನಾಗಿ, ಮುನಿಯ ಅನುಮತಿಯನ್ನು ಸ್ವೀಕರಿಸಿ ನಗರಕ್ಕೆ ಹೊರಡಲು ಸಿದ್ಧನಾಗಿ, ॥೩೮-೩೯॥

ಮತ್ತೆ ಮುನಿಗೆ ಅಂಜಲಿಬದ್ಧನಾಗಿ, ನಮಸ್ಕರಿಸಿ, ॥೪೦॥

ಮುನಿಪುಂಗವನೇ, ಈಗ ನಾನು ಮುಂದೆ ಯಾವ ಕಾರ್ಯವನ್ನು ಮಾಡಬೇಕೆಂಬುದನ್ನು ಆಜ್ಞಾಪಿಸು. ಅದನ್ನೀಗಲೇ ನೆರವೇರಿಸುವೆನು, ಎನ್ನಲು ಆಗ ಮುನಿಯು ಬೃಹದ್ಬಲನ ಮಾತನ್ನು ಕೇಳಿ, ॥೪೧॥

" ರಾಜಶ್ರೇಷ್ಠನೇ, ಇನ್ನು ಮುಂದೆ ಪ್ರತಿದಿನವೂ ನಿಯಮದಿಂದ ಕೂಡಿದವನಾಗಿ ಮೌನವ್ರತವನ್ನು ಕೈಗೊಂಡು, ರುದ್ರಮಂತ್ರವನ್ನು ಜಪಿಸುವುದರಲ್ಲಾಸಕ್ತನಾಗಿ, ಪಂಚಮಹಾಪಾತಕಗಳನ್ನು ನಾಶಗೊಳಿಸುವುದರಲ್ಲಿ ಸಮರ್ಥವಾದ ಈ ಶಿವಪಂಚಾಕ್ಷರೀಮಂತ್ರವನ್ನು ಬಿಡದೆ ಜಪಿಸುತ್ತಿರು. ॥೪೨॥

ಅಗ್ನಿರಿತ್ಯಾದಿಭಿರ್ಮಂತ್ರೈಃ ಸಮುದ್ಧೂಲಯ ಸ್ವಾಂ ತನುಂ ।
ತ್ರಿಯಾಯುಷೈಸ್ತ್ರ್ಯಂಬಕೈಶ್ಚ ತ್ರಿಪುಂಡ್ರಂ ಧಾರಯಾದರಾತ್ ॥೪೩॥

ಶಿರೋಲಲಾಟವಕ್ಷಸ್ಸು ಕಂಠಬಾಹುಜಸಂಧಿಷು ।
ರುದ್ರಾಕ್ಷಾನ್ಧಾರಯಾದ್ಯಾಶು ಕಂಠಕರ್ಣಕರಾದಿಷು ॥೪೪॥

ಬಿಲ್ವಪತ್ರೈಃ ಬಾಣಲಿಂಗಂ ನಿಯಮೇನ ಸಮರ್ಚಯ ।
ಶಿವನೈವೇದ್ಯಮಾಸಾದ್ಯ ಪ್ರಹೃಷ್ಟೋ ಭವ ಪಾರ್ಥಿವ ॥೪೫॥

ಶಾಂಭವಾನ್ಶಿವನೈವೇದ್ಯೈಃ ಭೋಜಯಾದ್ಯ ಸಹಸ್ರಶಃ ।
ತ್ರಿನೇತ್ರಭುಕ್ತಪಾತ್ರಂ ಹಿ ಶಾಂಭವಾ ಏವ ಕೇವಲಂ ॥೪೬॥

ಶಾಂಭವಾ ಏವ ತೇ ಪೂಜ್ಯಾಶ್ಚಾತುರ್ವರ್ಣ್ಯೇಷು ವೈ ನೃಪ ।
ಶಾಂಭವಾನಾಂ ರಕ್ಷಣೇನ ಶಂಭುಃ ಪ್ರೀಣಾತಿ ನಾನ್ಯಥಾ ॥೪೭॥

---

"ಅಗ್ನಿರಿತಿ ಭಸ್ಮ" ಎಂಬೀ ಮಂತ್ರಗಳಿಂದಲೂ, ತ್ರ್ಯಾಯುಷಮಂತ್ರಗಳಿಂದಲೂ ಮತ್ತು "ತ್ರ್ಯಂಬಕಂ ಯಜಾಮಹೇ" ಎಂಬಿವೇ ಮೊದಲಾದ ರುದ್ರಮಂತ್ರಗಳಿಂದಲೂ ಶರೀರಕ್ಕೆ ಭಸ್ಮವನ್ನು ಲೇಪಿಸಿಕೊಂಡು, ಶಿರಸ್ಸು, ಹಣೆ, ವಕ್ಷಸ್ಥಳ, ಕವುಂಕಳ ಸಂದುಗಳು ಮುಂತಾದ ಪ್ರದೇಶಗಳಲ್ಲಿ ತ್ರಿಪುಂಡ್ರವನ್ನು ಧರಿಸಿ, ಕತ್ತು ಕಿವಿ, ಕೈಗಳು ಇವುಗಳಲ್ಲಿ ರುದ್ರಾಕ್ಷಗಳನ್ನು ಧರಿಸು. ॥೪೩-೪೪॥

ಪ್ರತಿ ದಿನವೂ ತಪ್ಪದೇ ಬಿಲ್ವಪತ್ರೆಗಳಿಂದ ಬಾಣಲಿಂಗವನ್ನು ಅರ್ಚಿಸಿ ಬಳಿಕ ಶಿವನೈವೇದ್ಯವನ್ನು ಭಕ್ಷಿಸಿ ಸಂತುಷ್ಟನಾಗು. ॥೪೫॥

ರಾಜನೇ, ದಿನವೂ ಸಾವಿರಾರು ಈಶ್ವರ ಭಕ್ತರಿಗೆ ಶಿವನೈವೇದ್ಯಗಳನ್ನು ಉಣಬಡಿಸು. ಈಶ್ವರ ಭಕ್ತರು ಸದಾ ಈಶ್ವರನ ಭೋಜನಪಾತ್ರರಾಗಿಯೇ ಇರುವರು. ॥೪೬॥

ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳಲ್ಲಿ ಈಶ್ವರಭಕ್ತರಾದ ಜನರೇ ಪೂಜ್ಯತಮರು. ಈಶ್ವರಭಕ್ತರನ್ನು ರಕ್ಷಿಸುವುದರಿಂದಲೇ ಶಿವನು ಸುಪ್ರೀತನಾಗುವನಲ್ಲದೇ ಅನ್ಯಥಾ ಆಗಲಾರನು. ॥೪೭॥

ಶಾಂಭವೋ ನಾಮ ರಾಜೇಂದ್ರ ಶಿವೈಕಶರಣಸ್ತು ಯಃ ।
ಭಸ್ಮತ್ರಿಪುಂಡ್ರರುದ್ರಾಕ್ಷಮಾಲಾಭಿರ್ಲಿಂಗಪೂಜಕಃ ॥೪೮॥

ಸೋಮವಾರವ್ರತಶ್ಚೈವ ನಕ್ತಭೋಜೀ ಶಿವಾರ್ಚಕಃ ।
ತತ್ತ್ಯಕ್ತ್ವಾ ಪತಿತೋ ಭೂಯಾದಿತಿ ಜಾಬಾಲಪಾರಗಾಃ ॥೪೯॥

ಶಿವಂ ಮಾಸಚತುರ್ದಶ್ಯಾಂ ಕೃಷ್ಣಪಕ್ಷೇ ವಿಶೇಷತಃ ।
ಸಮರ್ಚಯ ಮಹಾದೇವಂ ನಕ್ತಾಶೀ ಸತತಂ ಭವ ॥೫೦॥

ತತ್ತ್ಯಕ್ತ್ವಾ ಪತಿತೋ ಭೂಯಾದಿತಿ ಜಾಬಾಲಪಾರಗಃ ।
ಶ್ರೀಪ್ರದೋಷವ್ರತಂ ಪುಣ್ಯಂ ಪಕ್ಷೇ ಚ ನಿಯತಂ ಕುರು ॥೫೧॥

ಸಂಪೂಜ್ಯ ರಾತ್ರೌ ನಕ್ತಾಶೀ ಮಾಸಿ ಮಾಸಿ ನೃಪೋತ್ತಮ ।
ತತ್ತ್ಯಕ್ತ್ವಾ ಪತಿತೋ ಭೂಯಾದಿತಿಜಾಬಾಲಪಾರಗಾಃ ॥೫೨॥

ಎಲೈ ರಾಜೇಂದ್ರನೇ, ಅನನ್ಯ ಭಕ್ತಿಯಿಂದ ಶಿವನನ್ನೇ ಮೊರೆಹೊಕ್ಕು ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲೆ ಇವುಗಳನ್ನು ಧರಿಸಿ ಶಿವಲಿಂಗವನ್ನು ಪೂಜಿಸುವವನೇ ಈಶ್ವರ ಭಕ್ತನೆಂದೆನಿಸಿಕೊಳ್ಳುವನು. ಅವನೇ ಶಾಂಭವನು. ॥೪೮॥

ಈಶ್ವರಾರ್ಚಕನು ಪ್ರತಿ ಸೋಮವಾರವೂ ನಿಯಮದಿಂದಿದ್ದು, ಹಗಲೆಲ್ಲಾ ಉಪವಾಸವನ್ನು ಮಾಡಿ, ರಾತ್ರಿ ಭೋಜನವನ್ನಾಚರಿಸಬೇಕು. ಅದಿಲ್ಲದಿದ್ದರೆ ಅವನು ಪತಿತನಾಗುವನೆಂದು ಜಾಬಾಲಶ್ರುತಿಯನ್ನು ಅಧ್ಯಯನ ಮಾಡಿದವರು ಹೇಳುವರು. ॥೪೯॥

ಭೂಪಾಲಕನೇ, ಪ್ರತಿಯೊಂದು ತಿಂಗಳಿನ ಕೃಷ್ಣಪಕ್ಷದ ಚತುರ್ದಶಿಯ ದಿನ, ಶಿವನನ್ನು ವಿಶೇಷವಾಗಿ ಪೂಜಿಸಿ, ರಾತ್ರಿಯ ಕಾಲದಲ್ಲಿ ಭೋಜನವನ್ನು ಆಚರಿಸು. ॥೫೦॥

ಅದನ್ನು ಬಿಟ್ಟರೆ, ಪತಿತನಾಗುವನೆಂದು ಜಾಬಾಲ ಶ್ರುತಿಯನ್ನು ತಿಳಿದವರು ಹೇಳುವರು. ಪ್ರತಿಪಕ್ಷದಲ್ಲಿಯೂ ಪುಣ್ಯಕರವಾದ ಈ ಪ್ರದೋಷವ್ರತವನ್ನು ತಪ್ಪದೇ ಆಚರಿಸು. ॥೫೧॥

ನೃಪಪುಂಗವನೇ! ಪ್ರತಿ ತಿಂಗಳಿನಲ್ಲಿಯೂ, ಪ್ರದೋಷದಲ್ಲಿ ಶಿವನನ್ನು ಪೂಜಿಸಿ ಅನಂತರ ಭೋಜನವನ್ನಾಚರಿಸಬೇಕು. ಅದನ್ನು ಬಿಟ್ಟರೆ ಪತಿತನಾಗುವನೆಂದು ಜಾಬಾಲಶ್ರುತಿಜ್ಞರು ಹೇಳುವರು. ॥೫೨॥

ಪಂಚಾಮೃತೈರ್ಲಿಂಗಮೌಲಿಂ ಫಲಸಾರೈರ್ಮಹೇಶ್ವರಂ ।
ಬಿಲ್ವಪತ್ರೈಃ ಪಂಕಜೈಶ್ಚ ಸಮಭ್ಯರ್ಚ್ಯ ಶಿವಂ ಸದಾ ॥೫೩॥

ಗ್ರಹಣೇ ಸೋಮಸೂರ್ಯೋರ್ತ್ಥೇ ಪುಣ್ಯಪರ್ವಸು ಶಂಕರಂ ।
ಸಂಪೂಜ್ಯ ದೇವದೇವಸ್ಯ ಲಿಂಗಂ ಪಾಪೈರ್ವಿಮುಚ್ಯತೇ ॥೫೪॥

ಭಸ್ಮರುದ್ರಾಕ್ಷಹೀನಾಂಗಾನ್ದಂಡಯಾಶು ವಿನಾಶಯ ।
ಊರ್ಧ್ವಂ ಪುಂಡ್ರಾದಿಚಕ್ರಾಂಕಾನ್ದೇಶಾನ್ನಿಃಸಾರಯಾಧುನಾ ॥೫೫॥

ಊರ್ಧ್ವಪುಂಡ್ರಂ ಧೃತಂ ಯೇನ ತನ್ಮುಖಂ ನಾವಲೋಕಯೇತ್ ।
ಯದಿ ಪಶ್ಯೇದ್ಭ್ರಮಾದ್ವಾಪಿ ಚಂಡಭಾನುಮುದೀಕ್ಷ್ಯ ಚ ॥೫೬॥

ಜಪ ಪಂಚಾಕ್ಷರೀಂ ವಿದ್ಯಾಂ ಸರ್ವಾಘೌಘನಿವಾರಿಣೀಂ ।
ಭಾವ್ಯೈಃ ಸಹಾಸ್ತು ಸಲ್ಲಾಪೋ ಹಲ್ಲಾಸೋನ್ಮಾದಿಲಾಪತಃ ॥೫೭॥

---

ಶಿವಲಿಂಗವನ್ನು ಪಂಚಾಮೃತಗಳಿಂದಲೂ ಹಣ್ಣಿನ ರಸದಿಂದಲೂ, ಅಭಿಷೇಕಿಸಿ, ಬಿಲ್ವಪತ್ರೆಗಳಿಂದಲೂ, ಮತ್ತು ಕಮಲಪುಷ್ಪಗಳಿಂದಲೂ, ಶಿವನನ್ನು ಪೂಜಿಸಿ ನಿಯಮದಿಂದಿರಬೇಕು. ॥೫೨-೫೩॥

ಚಂದ್ರ ಸೂರ್ಯಗ್ರಹಣಕಾಲದಲ್ಲಿಯೂ, ಪ್ರದೋಷ, ಸಂಕ್ರಮಣ, ಅಷ್ಟಮೀ ಅಮಾವಾಸ್ಯೇ, ಹುಣ್ಣಿಮೆ ಮುಂತಾದ ಪರ್ವಕಾಲಗಳಲ್ಲಿಯೂ, ಶಿವನ ಲಿಂಗವನ್ನು ಪೂಜಿಸುವವನು ಪಾಪದಿಂದ ವಿನಿರ್ಮುಕ್ತನಾಗುವನು. ॥೫೪॥

ಭೂಪಾಲಕನೇ! ನಿನ್ನ ರಾಜ್ಯದಲ್ಲಿ, ಭಸ್ಮ ಮತ್ತು ರುದ್ರಾಕ್ಷಗಳನ್ನು ಧರಿಸದಿರುವ ಪ್ರಜೆಗಳು, ಯಾರಾದರೂ ಇದ್ದರೆ ಇವರನ್ನು ಸಂಹರಿಸು. ಊರ್ಧ್ವ ಪುಂಡ್ರ ಮತ್ತು ಚಕ್ರಚಿಹ್ನೆ, ಇವುಗಳನ್ನು ಧರಿಸಿದವರಾರಾದರೂ ಇದ್ದರೆ ಅವರನ್ನು ದೇಶದಿಂದ ಹೊರಕ್ಕೆ ಕಳುಹಿಸು. ॥೫೫॥

ಯಾವನು ಊರ್ಧ್ವಪುಂಡ್ರವನ್ನು ಧರಿಸುವನೋ, ಅವನ ಮುಖವನ್ನೇ ನೋಡಬಾರದು. ಆಕಸ್ಮಿಕವಾಗಿ ಅವನನ್ನು ನೋಡಿದರೂ ಸಹ ಮಧ್ಯಾಹ್ನ ಕಾಲದ ಸೂರ್ಯನನ್ನು ನೋಡಿ, ಆ ಪಾಪವನ್ನು ಕಳೆದುಕೊಳ್ಳಬೇಕು. ॥೫೬॥

ಆ ಪಾಪಪರಿಹಾರಕ್ಕಾಗಿ ಸಕಲ ಪಾಪಗಳನ್ನೂ, ನಾಶಪಡಿಸುವ, ಶಿವಪಂಚಾಕ್ಷರೀ ಮಂತ್ರವನ್ನು ಜಪಿಸು. ನಿಷ್ಪ್ರಯೋಜನವಾದ ಮಾತುಗಳನ್ನಾಡಿ ಕಾಲಕಳೆಯುವುದ

ತ್ರಿಕಾಲಮಪ್ರಮಾದೇನ ಬಿಲ್ವಪತ್ರೈಃ ಸಮರ್ಚಯ ।
ಸ ಪೌರವರ್ಗಃ ಸಾಮಾತ್ಯಃ ಸದಾರಸ್ತ್ವಂ ಮಹೇಶ್ವರಂ ॥೫೮॥

ಕುರು ಬಿಲ್ವವನಾದೀನಿ ಪುಷ್ಪಾರಾಮವನಾನ್ಯಪಿ ।
ಶಾಂಭವಾಂಛಿವನೈವೇದ್ಯೈಃ ಪಾವನೈರ್ಭೋಜಯಾಧುನಾ ॥೫೯॥

ಭವೋ ಭಾವಸುಖೇನೈವ ಭುಂಕ್ತೇಽನ್ನಾನಿ ನೃಪೋತ್ತಮ ।
ಶೃಣು ಶೈವೀಂ ಕಥಾಮೇವ ಶಾಂಭವೈರ್ಭೂರಿಭೂಷಿತಃ ॥೬೦॥

ಬಿಲ್ವಮೂಲೇಷು ಸತತಂ ಶಿವಲಿಂಗಾನಿ ಪೂಜಯ ।
ನೀಲೋತ್ಪಲೈರ್ಬಿಲ್ವಪತ್ರೈರ್ದೂರ್ವಾಪಾಮಾರ್ಗಜೈರ್ದಲೈಃ ॥೬೧॥

---

ಕ್ಕಿಂತ, ಈಶ್ವರಭಕ್ತರಾದ ಜನರೊಂದಿಗೆ ಮಾತನಾಡುವುದು ಶ್ರೇಯಸ್ಕರವು. ಪ್ರಾತಃಕಾಲ ಮಧ್ಯಾಹ್ನ ಮತ್ತು ಸಂಧ್ಯಾಕಾಲ ಈ ತ್ರಿಕಾಲಗಳಲ್ಲಿಯೂ, ತಪ್ಪದೇ ಸಪತ್ನೀಕನಾಗಿ, ಅಮಾತ್ಯರಿಂದಲೂ, ಪಟ್ಟಣಿಗರಿಂದಲೂ, ಕೂಡಿ ಬಿಲ್ವಪತ್ರೆಗಳಿಂದ ಶಿವನನ್ನು ಅರ್ಚಿಸು. ॥೫೭-೫೮॥

ನಿನ್ನ ನಗರದಲ್ಲಿ ಅಲ್ಲಲ್ಲಿ ಬಿಲ್ವವೃಕ್ಷಗಳ ವನಗಳನ್ನೂ, ನಾನಾ ಬಗೆಯ ಹೂದೋಟಗಳನ್ನೂ ನಿರ್ಮಿಸು. ಈಗಲೇ ಮನೆಗೆ ಹೋಗಿ ಈಶ್ವರಭಕ್ತರಿಗೆ ಶಿವ ನೈವೇದ್ಯವನ್ನು ಊಣಬಡಿಸಿ ಅವರನ್ನು ತೃಪ್ತಿಪಡಿಸು. ॥೫೯॥

ಭಕ್ತರು ಸುಖವನ್ನನುಭವಿಸಿದರೆ ಅವರಿಂದಲೇ ಶಿವನೂ ಸುಖವನ್ನನುಭವಿಸುವನು. ಶಾಂಭವರ ಸುಖವೇ ಅವನ ಸುಖ. ಆದುದರಿಂದ ಶಾಂಭವರಿಗೆ ಅನ್ನವನ್ನು ಅರ್ಪಿಸಿದರೆ ಶಿವನಿಗೂ ಅನ್ನವನ್ನು ಸಮರ್ಪಿಸಿದಂತಾಗುವುದು. ಎಲೈ ರಾಜೇಂದ್ರನೇ! ನಿರಂತರವೂ ಭಸ್ಮಾಲಂಕೃತನಾಗಿ, ಈಶ್ವರ ಭಕ್ತರೊಂದಿಗೆ ಕಲೆತು ಶಿವಕಥಾಮೃತವನ್ನು ಪಾನಮಾಡು ॥೬೦॥

ಯಾವಾಗಲೂ, ಬಿಲ್ವವೃಕ್ಷಗಳ ಕೆಳಗಡೆಯಲ್ಲಿ ಶಿವಲಿಂಗಗಳನ್ನು ಸ್ಥಾಪಿಸಿ ಅವುಗಳನ್ನು ಕನ್ನೈದಿಲೆ ಬಿಲ್ವಪತ್ರೆ, ಅಪಾಮಾರ್ಗಪತ್ರೆ (ಉತ್ತರಣೆಯ ಎಲೆ) ಇವುಗಳಿಂದ ಪೂಜಿಸು. ಇದರಿಂದ ಸಕಲ ಪಾಪಗಳೂ ಕ್ಷಯಿಸುವುವು. ॥೬೧॥

ಸಂಪೂಜಯ ಮಹಾದೇವಂ ತೇನ ಪಾಪಕ್ಷಯೋ ಭವೇತ್ ।
ಶಿವಾಲಯಾನಾಂ ನಿರ್ಮಾಣಂ ಕುರುಷ್ವೋದ್ದಾಮಗೋಪುರಂ ॥೬೨॥

ಪ್ರಾಕಾರಮಂಟಪೋಪೇತಂ ರಥೋತ್ಸವವಿರಾಜಿತಂ ।
ಶಿವಲಿಂಗಾಲಯಾನ್ಯೇವ ದೀಪ್ಯೈರುಜ್ಜ್ವಲಯಾಧುನಾ ॥೬೩॥

ಸಂಮಾರ್ಜಿತಾನಿ ಸತತಂ ಧೂಪಿತಾನಿ ಸದಾ ಕುರು ।
ಗಂಧಾಗುರೂತ್ಥತೋಯೈಸ್ತ್ವಮಾಸೇಚಯ ಮಹೇಶ್ವರಂ ॥೬೪॥

ರುದ್ರಸೂಕ್ತೈರ್ಮಹಾದೇವಂ ಜಲವಿಚ್ಛಿನ್ನಧಾರಯಾ ।
ದುಂದುಭ್ಯಾಘಟಜಾರಾವೈರ್ನಾಟ್ಯೈಃ ಕಾಹಲಶಂಖಜೈಃ ॥೬೫॥

ನಾದ್ಯೈಃ ಸಂನಾದಿತಂ ಶಂಭೋರಾಲಯಂ ಕುರು ಭೂಪತೇ ।
ಸ್ವರ್ಣರೂಪ್ಯಾದಿಪಾತ್ರಾಣಿ ಪೂಜಾರ್ಥಂ ಶಂಕರೇ ಕುರು ॥೬೬॥

ರಾಷ್ಟ್ರದಲ್ಲಿ ಅಲ್ಲಲ್ಲಿ ಶಿವದೇವಾಲಯಗಳನ್ನು ನಿರ್ಮಿಸಿ, ಉನ್ನತವಾದ ಗೋಪುರವನ್ನೂ, ಕೋಟೆ, ಮಂಟಪ, ಮುಂತಾದುವನ್ನೂ ನಿರ್ಮಿಸು. ಶಿವನಸನ್ನಿಧಿಯಲ್ಲಿ ರಥೋತ್ಸವಗಳೂ ಸಹ ಜರುಗುವಂತೆ ಮಾಡು. ಇದೀಗಲೇ ರಾಜ್ಯಕ್ಕೆ ಹೋಗಿ, ಅಲ್ಲಿರುವ ಶಿವಲಿಂಗಗಳನ್ನು ದೀಪಮಾಲೆಗಳಿಂದ ಪ್ರಕಾಶಪಡಿಸು. ||೬೨-೬೩||

ಆ ಶಿವಾಲಯಗಳನ್ನು ನಿರಂತರವೂ ಶುಚಿಯಾಗಿರಿಸಿ, ಸುಗಂಧಯುಕ್ತವಾದ ಧೂಪಗಳನ್ನು ಸ್ಥಾಪಿಸು. ಗಂಧ, ಅಗುರು ಮುಂತಾದ ಸುಗಂಧದ್ರವ್ಯಗಳ ಉದಕಗಳಿಂದ ಈಶ್ವರನಿಗೆ ಅಭಿಷೇಕಮಾಡು. ||೬೪||

ರುದ್ರಸೂಕ್ತವನ್ನು ಪಠಿಸುತ್ತಾ, ಅವಿಚ್ಛಿನ್ನವಾದ ಜಲಧಾರೆಗಳಿಂದ ಶಿವಲಿಂಗಕ್ಕೆ ಅಭಿಷೇಕಮಾಡಿಸು. ಅಲ್ಲದೇ, ಶಿವಾಲಯದಲ್ಲಿ, ಎಲ್ಲೆಲ್ಲಿಯೂ, ದುಂದುಭಿ ಕಹಳೆ, ಶಂಖ, ನಾಟ್ಯ ಮುಂತಾದುವುಗಳಿಂದುಂಟಾಗುವ ಧ್ವನಿಯು ಪ್ರಸರಿಸುವಂತೆ ಏರ್ಪಡಿಸು. ಶಿವಾರ್ಚನೆಗೋಸ್ಕರ, ಬೆಳ್ಳಿ, ಬಂಗಾರಗಳ ಪಾತ್ರೆಗಳನ್ನು ಉಪಯೋಗಿಸು. ||೬೬||

ರಥೋತ್ಸವಾದಿಕಂ ಶಂಭೋಃ ರಾಜನ್ರಥಪತೇಃ ಕುರು ।
ಸತ್ರಾತಿರಾತ್ರೈರ್ವಿವಿಧೈಸ್ತ್ರಿನೇತ್ರಂ ಸಂಯಜಾಧುನಾ ॥೧೭॥

ಅಧ್ವರೇಶಂ ಮಹಾದೇವಂ ಸರ್ವದಾ ಶರಣಂ ವ್ರಜ ।
ಸೋಮನಾಥಂ ಮಹಾದೇವಂ ಸೋಮಾರ್ಧಕೃತಶೇಖರಂ ॥೧೮॥

ಧ್ಯಾಯನ್ದೇವಂ ವಿರೂಪಾಕ್ಷಂ ದಾಕ್ಷಾಯಣ್ಯಾ ಸಮನ್ವಿತಂ ।
ಮಂತ್ರಿವರ್ಗೇ ಸಮಾಧಾಯ ರಾಜ್ಯಮೇತದಖಂಡಿತಂ ॥೧೯॥

ಖಂಡೇಂದುಮೌಳೌ ಸತತಂ ನಿವೇಶಯ ಮನೋ ನೃಪ ।
ತೇನಾತ್ಯಾಖಂಡಲಾಂ ಲಕ್ಷ್ಮೀಂ ಕಾಮಂ ಕಾಮಾರಿಶಾಸನಾತ್ ॥೨೦॥

ಪ್ರಾಪ್ನೋಷಿ ನಿಯತಂ ರಾಜನ್ನೈವಂ ತೇಽವಿಷಯೋ ಭವೇತ್ ।
ಸೋಮನಾಥಂ ಮಹಾಲಿಂಗಂ ಪಯೋಷ್ಣೀತೀರಸಂಸ್ಥಿತಂ ॥೨೧॥

ತತ್ರ ತ್ವಂ ನಿಯತೋ ಭೂತ್ವಾ ತಪಃ ಕುರು ಮಹಾಮತೇ ।
ಸಾದರಃ ಶಿವಪೂಜಾಯಾಂ ರುದ್ರಸೂಕ್ತಜಪಾದರಃ ॥೨೨॥

---

ಎಲೈ, ರಾಜೇಂದ್ರನೇ! ರಥೋತ್ಸವವನ್ನು ನೆರವೇರಿಸಿ ರಥಪತಿಯಾದ ಶಿವನನ್ನು ತೃಪ್ತಿಗೊಳಿಸು. ಸತ್ರ, ಅತಿರಾತ್ರ ಮುಂತಾದ ಶ್ರೌತಕರ್ಮಗಳಿಂದ ಈಶ್ವರನನ್ನು ಆರಾಧಿಸು. ॥೧೭॥

ಯಜ್ಞಪತಿಯೂ, ಚಂದ್ರಶೇಖರನೂ, ಸೋಮನಾಥನೂ ಆದ ಶಿವನನ್ನೇ ಯಾವಾಗಲೂ ಮರೆಹೊಗು. ॥೧೮॥

ಎಲೈ, ನೃಪೋತ್ತಮನೇ! ನಿನ್ನ ಅಖಂಡವಾದ ಚಕ್ರಾಧಿಪತ್ಯವನ್ನು ಮಂತ್ರಿವರ್ಗದಲ್ಲಿ ಅರ್ಪಿಸಿ, ದಾಕ್ಷಾಯಣಿಯ ಪತಿಯೂ ವಿರೂಪಾಕ್ಷನೂ ಆದ ಶಿವನನ್ನೇ ಧ್ಯಾನಿಸುತ್ತಾ, ಅನವರತವೂ, ಚಿತ್ತವನ್ನು ಚಂದ್ರಶೇಖರನಲ್ಲಿಯೇ ಇರಿಸು. ಆದರಿಂದ ನಿನಗೆ ಇಂದ್ರ ವೈಭವದಂತಿರುವ, ಶಾಶ್ವತವಾದ ಸಂಪತ್ತು ಲಭಿಸುವುದು. ಅಲ್ಲದೇ, ಪರಶಿವನ ಅನುಗ್ರಹದಿಂದ ನಿನಗೆ ನಿಲುಕದಿರುವ ವಸ್ತುವೇ ಸಂಭವಿಸುವುದಿಲ್ಲ. ॥೨೦॥

ಪಯೋಷ್ಣೀನದಿಯ ತೀರದಲ್ಲಿ, ಸೋಮನಾಥನೆಂಬ ಹೆಸರುಳ್ಳ ಶಿವಲಿಂಗವಿರುವುದು. ನೀನು ಅದರ ಸಮೀಪವನ್ನು ಪಡೆದು ಅಲ್ಲಿ ನಿಯಮಬದ್ಧನಾಗಿ, ಶಿವ

ಜಪ ಪಂಚಾಕ್ಷರೀಂ ವಿದ್ಯಾಮಯುತಂ ಪ್ರತ್ಯಹಂ ನೃಪ ।
ತದಾ ಶಿವಪ್ರಸಾದೇನ ತನಯೋ ವಿನಯೋಜ್ವಲಃ ॥೭೩॥

ಭವೋದ್ಭವಪ್ರಸಾದೇನ ಸ ಮಹೀಂ ಪಾಲಯಿಷ್ಯತಿ ।
ಮಾ ಶುಚಸ್ತ್ವಂ ನೃಪಶ್ರೇಷ್ಠ ಗಚ್ಛ ಸೋಮೇಶ್ವರಾಲಯಂ ॥೭೪॥

ವರ್ಷಾಣಿ ತ್ರೀಣಿ ನಿಯತಂ ತತ್ರ ಸಮ್ಯಕ್ತಪಃ ಕುರು ।
ಪ್ರದೋಷೇಷು ಮಹಾದೇವಂ ಸೋಮನಾಥಂ ಸಮರ್ಚಯ ॥೭೫॥

ಮಂದಪ್ರದೋಷೇ ಶಿವಲಿಂಗಪೂಜಾಂ
ಕುರ್ವನ್ನಭೇದ್ದ್ವಾದಶವರ್ಷಪೂಜಾಂ ।
ಮಂದಾರಕುಂದನವಚಂಪಕಬಿಲ್ವಪತ್ರೈ
ರ್ಮುಕ್ತಿಂ ಪ್ರಯಾತಿ ಸುಕೃತಂ ಚ ಫಲಂ ಲಭೇತ ॥೭೬॥

---

ಪೂಜೆಯಲ್ಲಿಯೂ ಮತ್ತು ರುದ್ರಸೂಕ್ತಗಳ ಜಪದಲ್ಲಿಯೂ ಅತ್ಯಾದರ ಭಾವನೆಯುಳ್ಳವನಾಗಿ ತಪಸ್ಸನ್ನು ಆಚರಿಸು. ॥೭೧-೭೨॥

ನೃಪವರ್ಯನೇ, ಸೋಮೇಶ್ವರಾಲಯದಲ್ಲಿ ವಾಸವಾಗಿದ್ದು ಪ್ರತಿದಿನವೂ ಹತ್ತು ಸಾವಿರ ಬಾರಿ ಶಿವಪಂಚಾಕ್ಷರೀಮಂತ್ರವನ್ನು ತಪ್ಪದೇ ಜಪಿಸು. ಆಗ ಶಿವನ ಅನುಗ್ರಹದಿಂದ ನೀನು ವಿನಯಶಾಲಿಯಾದ ಒಬ್ಬ ಸುಪುತ್ರನನ್ನು ಹೊಂದುವೆ. ಆ ಪುತ್ರನೇ ಮುಂದೆ ಅಭಿವೃದ್ಧಿಯನ್ನು ಹೊಂದಿ ನಿನ್ನ ರಾಜ್ಯವನ್ನಾಳುವನು. ಆದುದರಿಂದ ಎಲೈ ರಾಜನೇ, ಈಗಲೇ ಸೋಮೇಶ್ವರಾಲಯಕ್ಕೆ ತೆರಳು, ಶೋಕಿಸಬೇಡ. ಪ್ರತಿ ಪ್ರದೋಷಕಾಲದಲ್ಲಿಯೂ ತಪ್ಪದೆ ಆ ಶಿವಲಿಂಗವನ್ನು ಪೂಜಿಸು. ॥೭೩-೭೪॥

ಅಲ್ಲಿ ಮೂರು ವರ್ಷಗಳ ಕಾಲ ಶಿವನನ್ನು ಕುರಿತು ತಪ್ಪದೇ ತಪಸ್ಸನ್ನಾಚರಿಸು. ॥೭೫॥

ಹನ್ನೆರಡು ವರ್ಷಗಳ ಕಾಲ ಪ್ರತಿಯೊಂದು ಶನಿಪ್ರದೋಷದಲ್ಲಿಯೂ ಮಾಗಿಯ ಮಲ್ಲಿಗೆ, ಸಂಪಿಗೆ ಮುಂತಾದ ಪುಷ್ಪಗಳಿಂದಲೂ ಮತ್ತು ಬಿಲ್ವಪತ್ರೆಗಳಿಂದಲೂ ಶಿವನನ್ನು ಅರ್ಚಿಸುವವನು ತನ್ನಿಷ್ಟಫಲವನ್ನು ಹೊಂದಿ ಅಂತ್ಯದಲ್ಲಿ ಮುಕ್ತಿಯನ್ನು ಪಡೆಯುವನು. ॥೭೬॥

ಮೀಢುಷ್ಟಮಃ ಶಿವತಮಃ ಶ್ರುತಿಷು ಪ್ರಸಿದ್ಧಃ
ಸಿದ್ಧೌಘವಂದಿತಮಹಾಪದಪದ್ಮಯುಕ್ತಃ ।
ತ್ವಂ ಭಕ್ತಿಯುಕ್ತಮನಸಾ ಸಮುಪಾಸ್ಯ ಶಂಭುಂ
ಸೋಮೇಶ್ವರಂ ನತಸುರಾಸುರವೃಂದಮೌಳಿಂ ॥೨೭॥

ವಸುಧಾಧಿಪತೇ ಪತಿಂ ಪತೀನಾಂ
ಸಮುಪಾಸ್ಯ ಪ್ರಮಥಾಧಿನಾಥನಾಥಂ ।
ಧೃತಚಂದ್ರಕಲಂ ಗಲೇ ಗರಂ
ತ್ವಯಿ ಮೋದಾತ್ಸುತಮಾಶು ದಾಪಯೇತ್ ॥೨೮॥

॥ ಸೂತ ಉವಾಚ ॥

ಇತಿ ಮುನಿವಚನಂ ನಿಶಮ್ಯ ರಾಜಾ
ಸತತಂ ಶಂಕರಪಾದಪದ್ಮಲೋಲಃ ।
ಸ ತು ಸೈನ್ಯಸಮಾವೃತೋ ಯಯೌ
ಪ್ರಣತಸ್ತಂ ಮುನಿಮಾಶು ಸೋಮನಾಥಂ ॥೨೯॥

ನೃಪತಿಯೇ, ಆ ಪರಶಿವನು, ಭಕ್ತರ ಸಕಲ ಇಷ್ಟಾರ್ಥಗಳನ್ನು ಈಡೇರಿಸು ವವನೂ, ಮಂಗಳಮೂರ್ತಿಯೂ, ವೇದಗಳಲ್ಲಿ ವಿಖ್ಯಾತನೂ, ಸಿದ್ಧರಿಂದ ವಂದಿಸ ಲ್ಪಟ್ಟ ಪಾದಕಮಲಗಳುಳ್ಳವನೂ ಆಗಿರುವನು. ಆದುದರಿಂದ ನೀನು ದೇವತೆಗ ಳಿಂದಲೂ ಮತ್ತು ರಾಕ್ಷಸರಿಂದಲೂ ನಮಸ್ಕರಿಸಲ್ಪಟ್ಟ ಸೋಮೇಶ್ವರನನ್ನು ಭಕ್ತಿಯುಕ್ತವಾದ ಮನಸ್ಸಿನಿಂದ ಧ್ಯಾನಿಸಿ, ಅವನ ಅನುಗ್ರಹದಿಂದ ನಿನ್ನ ಇಷ್ಟಾರ್ಥ ಗಳನ್ನು ಪಡೆ. ॥೨೭॥

ಎಲೈ ರಾಜೇಂದ್ರನೇ, ಲೋಕನಾಥನೂ, ಪ್ರಮಥಗಣಗಳ ಸ್ವಾಮಿಯೂ, ಚಂದ್ರಶೇಖರನೂ, ನೀಲಕಂಠನೂ ಆದ ಆ ಪರಶಿವನನ್ನು ಧ್ಯಾನಿಸು. ಅವನು ಸಂತೋಷದಿಂದ ನಿನಗೆ ಪುತ್ರಸಂಪತ್ತನ್ನು ಅನುಗ್ರಹಿಸುವನು.” ॥೨೮॥

ಈರೀತಿ ನುಡಿದ ಮುದ್ಗಲಮುನಿಯ ವಚನಗಳನ್ನು ರಾಜನು ಕೇಳಿ, ಶಿವನ ಅಡಿದಾವರೆಗಳಲ್ಲಿಯೇ ಆಸಕ್ತವಾದ ಚಿತ್ತವುಳ್ಳವನಾಗಿ, ಆ ಮುನಿಗೆ ನಮಸ್ಕರಿಸಿ

**ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಮುದ್ಗಲಬೃಹದ್ಬಲ ಸಂವಾದೇ ನೃಪೋಪದೇಶವರ್ಣನಂ ನಾಮ ಚತುರ್ದಶೋಽಧ್ಯಾಯಃ**

---

ಸೇನಾಸಮೇತನಾಗಿ ಸೋಮೇಶ್ವರಲಿಂಗವಿದ್ದ ಪ್ರದೇಶವನ್ನು ಕುರಿತು ತೆರಳಿದನು. ಎಂದು ಸೂತಮಹರ್ಷಿಗಳು ಶೌನಕಾದಿಗಳಿಗೆ ತಿಳಿಸಿದರು. ||೭೯||

ಇಲ್ಲಿಗೆ ಶ್ರೀಶಿವರಹಸ್ಯದ ಐದನೆಯ ಅಂಶದಲ್ಲಿ ಮುದ್ಗಲಮುನಿ ಮತ್ತು ಬೃಹದ್ಬಲರ ಸಂಭಾಷಣೆಯಲ್ಲಿ ಮುದ್ಗಲಮುನಿಯು ರಾಜನಿಗೆ ಮಾಡಿದ ಶಿವಮಹಿಮಾ ವರ್ಣನೆಯೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಪಂಚದಶೋಽಧ್ಯಾಯಃ

॥ ಸೂತ ಉವಾಚ ॥

**ಸೌರಾಷ್ಟ್ರೇ ಸೋಮನಾಥಂ ತಂ ಗತ್ವಾ ಭಸ್ಮವಿಭೂಷಣಃ ।**
**ಪಯೋಷ್ಣೀಸಲಿಲೇ ಸ್ನಾತ್ವಾ ಅಮಾತ್ಯೇ ರಾಜ್ಯಮಾದರಾತ್ ॥೧॥**

**ಸಮಾವೇಶ್ಯ ಸದಾರಶ್ಚ ತಪಶ್ಚಕ್ರೇ ಸುದಾರುಣಂ ।**
**ಸುಸುತಾರ್ಥಂ ತದಾ ರಾಜಾ ಶಿವೇ ವಿನ್ಯಸ್ತಮಾನಸಃ ॥೨॥**

**ಮಹಾರ್ಹವಸನಾದೀನಿ ತಥೈವಾಭರಣಾನಿ ಚ ।**
**ತ್ಯಕ್ತ್ವಾ ಚೀರಾದಿಸಂಛನ್ನೋ ರುದ್ರಾಕ್ಷಾಭರಣೋಜ್ಜ್ವಲಃ ॥೩॥**

---

## ಹದಿನೈದನೆಯ ಅಧ್ಯಾಯ

ತರುವಾಯ ಸೂತಮಹರ್ಷಿಯು ಮುನಿಗಳಿಗೆ ಕಥೆಯನ್ನು ಮುಂದುವರಿಸಿ ಹೀಗೆ ತಿಳಿಸಿದನು. ಮುನಿಪುಂಗವರೇ, ಮುದ್ಗಲಮುನಿಯ ಹಿತೋಪದೇಶವನ್ನು ಕೇಳಿ ಬೃಹದ್ಬಲನು ಸಂತೋಷಗೊಂಡು ತಾನು ಶಿವನನ್ನು ಕುರಿತು ತಪಸ್ಸನ್ನಾಚರಿಸಬೇಕೆಂಬ ಇಚ್ಛೆಯಿಂದ ತನ್ನ ರಾಜ್ಯವನ್ನು ಮಂತ್ರಿಗಳಲ್ಲಿ ಅರ್ಪಿಸಿ, ಸಪತ್ನೀಕನಾಗಿ ಸೌರಾಷ್ಟ್ರದೇಶಕ್ಕೆ ತೆರಳಿ ಅಲ್ಲಿ ಪಯೋಷ್ಣೀ ನದಿಯ ಜಲದಲ್ಲಿ ಸ್ನಾನವನ್ನು ನೆರವೇರಿಸಿ, ಸತ್ಪುತ್ರನನ್ನು ಪಡೆಯಬೇಕೆಂಬ ಇಚ್ಛೆಯಿಂದ ಅನನ್ಯವಾದ ಭಕ್ತಿಯಿಂದ ಶಿವನನ್ನು ಧ್ಯಾನಿಸುತ್ತಾ ಘೋರವಾದ ತಪಸ್ಸನ್ನಾಚರಿಸಿದನು. ॥೧-೩॥

ಆಗ ಅವನು ಅಮೂಲ್ಯವಾದ ಉಡುಪುಗಳನ್ನೂ ಮತ್ತು ಆಭರಣಗಳನ್ನೂ ತ್ಯಜಿಸಿ, ನಾರುಬಟ್ಟೆಗಳನ್ನು ಧರಿಸಿ, ರುದ್ರಾಕ್ಷಿಗಳಿಂದ ಅಲಂಕೃತನಾಗಿ ಶರೀರದಾದ್ಯಂ

ಭಸ್ಮಚ್ಛನ್ನಸ್ತ್ರಿಪುಂಡ್ರಾಂಕಃ ಸರ್ವದಾ ಶಿವಪೂಜಕಃ ।
ಸರ್ವಮನ್ಯತ್ಪರಿತ್ಯಜ್ಯ ಶಿವಂ ಧ್ಯಾಯನ್ನಿಮತ್ಸರಃ ॥೪॥

ರುದ್ರಾವರ್ತನಶೀಲಶ್ಚ ಸದಾ ಪಂಚಾಕ್ಷರಂ ಜಪನ್ ।
ಭಕ್ತ್ಯಾ ತ್ವನನ್ಯಯಾ ಶೈವಲಿಂಗಾರ್ಚನಪರಾಯಣಃ ॥೫॥

ಬಿಲ್ವಪತ್ರೈರ್ವನ್ಯಪುಷ್ಪೈಃ ಫಲಮೂಲೈರ್ಮಹೇಶ್ವರಂ ।
ಸ್ವರ್ಭಾನುರಿಪುಚಂಡಾಂಶುಸೋದರದ್ರುಮಮೂಲಗಃ ॥೬॥

ತಚ್ಛದಚ್ಛನ್ನಸೂರೋರುಕಿರಣಃ ಸ್ವಸ್ಥಮಾನಸಃ ।
ಪದಾರ್ಥಬೋಧವಿಸ್ಪಷ್ಟವಚಸಾ ರುದ್ರಜಾಪಕಃ ॥೭॥

ರುದ್ರವಿನ್ಯಸ್ತಹೃದಯಸ್ತುಚ್ಛೀಕೃತಜಗತ್ತ್ರಯಃ ।
ತಸ್ಯ ದಾರಾ ಮಹೋದಾರಾಸ್ತತ್ಸೇವಾನಿರತಾಃ ಸದಾ ॥೮॥

---

ತವೂ ಭಸ್ಮವನ್ನು ಲೇಪಿಸಿ, ಹಣೆಯಲ್ಲಿ ಭಸ್ಮತ್ರಿಪುಂಡ್ರಗಳನ್ನಿಟ್ಟು, ಇತರ ಭೋಗ್ಯ ವಸ್ತುಗಳಲ್ಲಿ ಅನುರಾಗವನ್ನು ತೊರೆದು, ಶಿವನಲ್ಲಿಯೇ ಏಕಾಗ್ರವಾದ ಭಕ್ತಿಯನ್ನಿಟ್ಟು ಶಿವನನ್ನು ಆರಾಧಿಸಿದನು. ॥೩-೪॥

ಅನೇಕ ಬಾರಿ ರುದ್ರಸೂಕ್ತವನ್ನು ಪಠಿಸುತ್ತಾ, ಅನವರತವೂ ಶಿವಪಂಚಾಕ್ಷರೀಜಪದಲ್ಲಿ ಮಗ್ನನಾಗಿ ಅನನ್ಯವಾದ ಈಶ್ವರಲಿಂಗಾರ್ಚನೆಯಲ್ಲಿ ಆಸಕ್ತನಾದನು. ॥೫॥

ಬಿಲ್ವಪತ್ರೆಗಳಿಂದಲೂ ಮತ್ತು ವನದಲ್ಲಿ ಹುಟ್ಟಿದ ಹೂವುಗಳಿಂದಲೂ ಶಿವನನ್ನು ಅರ್ಚಿಸಿ, ಅರಣ್ಯದಲ್ಲಿ ಬೆಳೆದ ಹಣ್ಣುಹಂಪಲುಗಳಿಂದಲೂ ಗೆಡ್ಡೆಗೆಣಸುಗಳಿಂದಲೂ ಶಿವನನ್ನು ತೃಪ್ತಿಪಡಿಸಿದನು. ಪ್ರಖರವಾದ ಕಿರಣಗಳುಳ್ಳ ಸೂರ್ಯನ ತಾಪವನ್ನು ತಡೆದು ನೆಳಲನ್ನು ನೀಡುವ, ಕೆಂಪು ಚಿಗುರುಗಳುಳ್ಳ ಬಿಲ್ವಮರದ ಕೆಳಗಡೆಯಲ್ಲಿ ಕುಳಿತು ಶಾಂತಚಿತ್ತನಾಗಿ, ಶಬ್ದಾರ್ಥಗಳನ್ನು ಸ್ಪಷ್ಟವಾದ ತಿಳಿಯಪಡಿಸುವಂತೆ ಶಬ್ದಮಯವಾದ ರುದ್ರಮಂತ್ರವನ್ನು ಜಪಿಸುತ್ತಿದ್ದನು. ವೃಕ್ಷದ ಎಲೆಗಳು ಸೂರ್ಯಕಿರಣಗಳನ್ನು ತಡೆದು ವೃಕ್ಷದ ಮೂಲದಲ್ಲಿ ಕುಳಿತಿರುವ ರಾಜನಿಗೆ ತಂಪಾದ ತಮ್ಮ ಛಾಯೆಯನ್ನು ಒದಗಿಸುತ್ತಿದ್ದುವು. ॥೬-೭॥

ಹೀಗೆ ಆ ರಾಜನು ಜಗತ್ತ್ರಯಗಳನ್ನೂ ಅಲಕ್ಷಿಸಿ ಏಕಾಗ್ರಚಿತ್ತದಿಂದ

ಬಿಲ್ವಪತ್ರಾಣಿ ಪುಷ್ಪಾಣಿ ಕಮಲಾನ್ಯಮಲಾನ್ಯಪಿ ।
ನೀಲೋತ್ಪಲಾನಿ ಫುಲ್ಲಾನಿ ತಥಾ ಕೋಕನದಾನ್ಯಪಿ ॥೯॥

ಫಲಮೂಲಾನಿ ಚಾರೂಣಿ ಸುಸ್ವಾದೂನಿ ತದಂಗನಾಃ ।
ಸಮಾಹೃತ್ಯ ಸ್ವಭರ್ತುಸ್ತಾಃ ಪರಿಚರ್ಯಾಪರಾಯಣಾಃ ॥೧೦॥

ತಸ್ಯಾಮಾತ್ಯಗಣಾಃ ಸರ್ವೇ ತಸ್ಯ ರಾಜ್ಯಸ್ಯ ಸತ್ಕ್ರಿಯಾಃ ।
ನಿವೇದಯಂತಿ ಸತತಂ ಶಿವಧ್ಯಾನಪರಾಯಣಂ ॥೧೧॥

ರಾಜಾನಂ ತೇ ಸಮಾಗಮ್ಯ ಪ್ರಣಮ್ಯ ವಿನಯಾನ್ವಿತಾಃ ।
ಸಭೋಗ್ಯಭಾಗ್ಯೈಃ ಸತತಂ ಸಭಾಗ್ಯಃ ಪೂಜಯಚ್ಛಿವಂ ॥೧೨॥

ಏವಂ ಸಂವಸತಸ್ತಸ್ಯ ಕಾಲೋ ಭೂಯಾನವರ್ತತ ।
ತಪಸ್ಯಂತಂ ತು ರಾಜಾನಂ ದೃಷ್ಟ್ವಾ ಮುನಿಗಣಾಸ್ತದಾ ॥೧೩॥

ಶಿವನನ್ನು ಧ್ಯಾನಿಸುತ್ತಿದ್ದನು. ಪತಿಶುಶ್ರೂಷಾಪರಾಯಣರಾದ ಅವನ ಪತ್ನಿಯರೂ ಸಹ ತಮ್ಮ ಪತಿಯನ್ನೇ ಎಡೆಬಿಡದೇ ಸೇವಿಸುವುದರಲ್ಲಿ ಮಗ್ನರಾದರು. ॥೮॥

ಅವರು ಬಿಲ್ವಪತ್ರೆಗಳನ್ನೂ, ಶುಭ್ರವಾದ ಕಮಲಗಳನ್ನೂ, ಚೆನ್ನಾಗಿ ಅರಳಿದ ರಕ್ತೋತ್ಪಲ (ಕೆಂದಾವರೆ) ಗಳನ್ನೂ, ಹಣ್ಣು ಹಂಪಲು, ಕಂದಮೂಲ ಮುಂತಾದ ವಸ್ತುಗಳನ್ನೂ ಸಂಗ್ರಹಿಸಿ ಪತಿಯ ಮುಂದಿಟ್ಟು ಅವನನ್ನು ಸೇವಿಸುತ್ತಿದ್ದರು. ॥೯-೧೦॥

ಅವನ ಮಂತ್ರಿವರ್ಗದವರೆಲ್ಲರೂ ರಾಜ್ಯದಲ್ಲಿ ನಡೆದ ನೂತನ ವೃತ್ತಾಂತಗಳನ್ನೆಲ್ಲಾ ಪ್ರತಿದಿನವೂ ಶಿವಧ್ಯಾನಮಗ್ನನಾದ ಅವನಲ್ಲಿ ಅರಿಕೆಮಾಡುತ್ತಿರುವರು. ॥೧೧॥

ರಾಜನು ಈ ರೀತಿಯಲ್ಲಿ ಭಕ್ತಿಶ್ರದ್ಧೆಗಳಿಂದ ಕೂಡಿ, ಈಶ್ವರನಿಗೆ ಪ್ರಿಯವಾದ ವಸ್ತುಗಳಿಂದ ಶಿವನನ್ನು ಸಂತೋಷಗೊಳಿಸುತ್ತಾ ನಿತ್ಯವೂ ಸ್ವಾಮಿಯನ್ನು ಪೂಜಿಸುತ್ತಿದ್ದನು. ॥೧೨॥

ಈ ರೀತಿ ಎಡೆಬಿಡದೆ ನಿಶ್ಚಲವಾದ ಭಕ್ತಿಯಿಂದ ಶಿವಪೂಜಾಸಕ್ತನಾಗಿರಲು ದೀರ್ಘಕಾಲ ಕಳೆಯಿತು. ಈಶ್ವರಪೂಜಾಪರಾಯಣನಾಗಿ ತಪಸ್ಸನ್ನಾಚರಿಸುತ್ತಿದ್ದ

ಅತ್ಯಂತಂ ವಿಸ್ಮಯಾವಿಷ್ಟಾಃ ಶಿಪಿವಿಷ್ಟಪರಾಯಣಂ ।
ಮುನಯಸ್ತಂ ತದಾ ದೃಷ್ಟ್ವಾ ಇದಮೂಚುಃ ಪರಸ್ಪರಂ ॥೧೪॥

ಅಹೋಹ್ಯೇತಾದೃಶೀ ನಿಷ್ಠಾ ನ ಕ್ವಾಪಿ ಭುವಿ ವಿಶ್ರುತಾ ।
ಕುತೋಽದ್ಯ ದರ್ಶನಂ ವಿಪ್ರಾ ನಷ್ಟಾಪತ್ಕುಲಸಂಚಯಃ ॥೧೫॥

ಧನ್ಯೋಽಯಂ ಕೃತಕೃತ್ಯೋಽಯಂ ಸೋಮನಾಥಾರ್ಚನೇ ರತಃ ।
ರಾಜ್ಞೋಽಥ ಶಾಂಭವಸ್ಯಾಸ್ಯ ದರ್ಶನಾನ್ನಷ್ಟಕಿಲ್ಬಿಷಾಃ ॥೧೬॥

ವಯಮಪ್ಯನುಯಾಸ್ಯಾಮೋ ನಿಷ್ಠಾಂ ಕಷ್ಟವಿನಾಶಿನೀಂ ।
ಏತಸ್ಯ ಸುಕುಮಾರಾಂಗ್ಯೋ ದಾರಾ ಮಾರಮನೋಹರಾಃ ॥೧೭॥

ರಂಭಾಧಿಕ್ಕಾರಕಾರಿಣ್ಯಸ್ತರುಣ್ಯಃ ಪ್ರಿಯದರ್ಶನಾಃ ।
ವಿಸ್ತೀರ್ಣಾಯತಸುಶ್ರೋಣ್ಯಃ ಪೀನವೃತ್ತಪಯೋಧರಾಃ ॥೧೮॥

ಆ ರಾಜನನ್ನು ನೋಡಿ ಅಲ್ಲಿದ್ದ ಮುನಿಪುಂಗವರೆಲ್ಲರೂ ಅತ್ಯಂತ ಅಚ್ಚರಿಗೊಂಡವ ರಾಗಿ ತಮ್ಮತಮ್ಮೊಳಗೆ ಹೀಗೆಂದು ಮಾತನಾಡಿಕೊಂಡರು. ||೧೩-೧೪||

ದ್ವಿಜೋತ್ತಮರೇ, ಈ ರೀತಿಯಾದ ಭಕ್ತಿಭಾವನೆಯನ್ನು ನಾವು ಈ ಭೂಲೋಕದಲ್ಲೆಲ್ಲಿಯೂ ಕೇಳಿರುವುದಿಲ್ಲ. ಇವನ್ನು ನೋಡಿದುದರಿಂದ ನಮ್ಮ ಕಷ್ಟಪರಂಪರೆಗಳು ನಾಶವಾದುವೆಂಬುದರಲ್ಲಿ ಸಂಶಯವಿರುವುದಿಲ್ಲ. ||೧೫||

ಸೋಮನಾಥೇಶ್ವರನ ಪೂಜೆಯಲ್ಲಿ ಆಸಕ್ತನಾದ ಈ ರಾಜನೇ ಪುಣ್ಯಶಾಲಿಯೂ ಕೃತಾರ್ಥನೂ ಆಗಿರುವನು. ಈಶ್ವರಭಕ್ತನಾದ ಇವನ ದರ್ಶನದಿಂದ ನಮ್ಮ ಪಾಪರಾಶಿಗಳು ನಷ್ಟವಾಗಿರುವುವು. ||೧೬||

ಇನ್ನು ಮುಂದೆ ನಾವೂ ವಿಪತ್ಪರಂಪರೆಗಳನ್ನು ನಾಶಗೊಳಿಸುವ ಈಶ್ವರಾರಾಧನೆಯಲ್ಲಿ ಮಗ್ನರಾಗೋಣ. ರಾಜನಾದ ಈ ತಪಸ್ವಿಯ ಪತ್ನಿಯರಾದರೋ ಸುಕುಮಾರಾಂಗಿಯರೂ, ಅತಿ ಸುಂದರಿಯರೂ, ಅಪ್ಸರಸ್ತ್ರೀಯಾದ ರಂಭೆಯನ್ನೇ ತಿರಸ್ಕರಿಸುವವರೂ, ನೋಡಲು ಚೆಲುವೆಯರೂ, ಯೌವ್ವನಭರಿತರೂ, ವಿಶಾಲವಾಗಿಯೂ ವರ್ತುಲವಾಗಿಯೂ ಇರುವ ಕಟಿಪಶ್ಚಾದ್ಭಾಗದಿಂದ (ಸೊಂಟದ ಹಿಂಭಾಗದಿಂದ) ಶೋಭಿಸುವವರೂ, ಮಾಂಸಭರಿತವಾಗಿ ವರ್ತುಲವಾಗಿರುವ ಸ್ತನಗಳಿಂದ ಶೋಭಿಸುವವರೂ ಆಗಿರುವರು. ಪ್ರಾಪ್ತವಯಸ್ಕರಾಗಿ ಅತ್ಯಂತ ಚೆಲುವೆಯ

ಗೌರೀಮಾರಾಧಯಂತಿ ಸ್ಮ ಬಲಿಧೂಪಾದಿಭಿಃ ಸದಾ ।
ರಾಜ್ಞೋಽಸ್ಯಸ್ಯ ಸದಾರಾಣಾಂ ಕಿಂ ವಾ ದಾಸ್ಯತಿ ಶಂಕರಃ ॥೧೯॥

ಅನೇನ ಕೃತಕೃತ್ಯೇನ ವಯಂ ಧನ್ಯಾಃ ಸ್ಮ ಸರ್ವದಾ ।
ಇತ್ಯನ್ಯೋನ್ಯಂ ಮುನಿಗಣಾಃ ಸಾದರಾಃ ಸಕುಮಾರಕಾಃ ॥೨೦॥

ವಿನಯವನತಾಃ ಸರ್ವೇ ಉಪತಸ್ಥುಸ್ತದಾ ನೃಪಂ ।
ಪ್ರಾಜ್ಯೈರ್ಮೂಲಫಲೈಃ ಪುಷ್ಪೈರ್ಬೃಸೀಭಿರಜಿನೈರಪಿ ॥೨೧॥

ತಾನಾಗತಾನ್ನೃಪೋ ದೃಷ್ಟ್ವಾ ಉತ್ಥಾಯಾಥ ಪ್ರಣಮ್ಯ ಚ ।
ತಾನ್ಪೂಜಯಿತ್ವಾ ಧರ್ಮೇಣ ಸಾರ್ಘ್ಯಪಾದ್ಯಪುರಃಸರಂ ॥೨೨॥

ಶಾಂಭವಾನ್ವಿನಯಾದ್ರಾಜಾ ಭೂತಿರುದ್ರಾಕ್ಷಧಾರಿಣಃ ।
ಪ್ರಾಂಜಲಿರ್ವಿನಯೋಽನಾಹ ಭವಭಕ್ತಾನ್ಧೃತವ್ರತಾನ್ ॥೨೩॥

---

ದಾಗಿರುವ ಈ ಸ್ತ್ರೀಪುರುಷರೂ ಸಹ ಧೂಪದೀಪಗಳಿಂದಲೂ ಮತ್ತು ನೈವೇದ್ಯಗಳಿಂದಲೂ ಶಿವನನ್ನು ಆರಾಧಿಸುತ್ತಿರುವರು. ಪತ್ನಿಯರಿಂದೊಡಗೂಡಿ ಹಗಲಿರುಳೂ ಶಿವಾರಾಧನೆಯಲ್ಲಿ ನಿರತನಾಗಿರುವ ಈ ರಾಜನಿಗೆ ಶಿವನು ಯಾವ ಫಲವನ್ನು ಕೊಡುವನು? ॥೧೭-೧೮-೧೯॥

ಪುಣ್ಯಶಾಲಿಯಾದ ಈ ರಾಜನ ಸಹವಾಸದಿಂದ ನಾವು ಕೂಡ ಕೃತಾರ್ಥರಾದೆವು. ಈ ಪ್ರಕಾರವಾಗಿ ಅನ್ಯೋನ್ಯವಾಗಿ ಮಾತನಾಡಿಕೊಂಡು ಆ ಮುನಿಶ್ರೇಷ್ಠರೆಲ್ಲರೂ ತಮ್ಮ ತಮ್ಮ ಮಕ್ಕಳುಮರಿಗಳಿಂದೊಡಗೂಡಿ, ಕಂದ, ಮೂಲ, ಫಲ, ದರ್ಭಾಸನ ಮುಂತಾದ ವಸ್ತುಗಳನ್ನು ತೆಗೆದುಕೊಂಡು ರಾಜನ ಸಮೀಪಕ್ಕೆ ಬಂದು ವಿನಯದಿಂದ ಅವನಿಗೆ ನಮಸ್ಕರಿಸಿದರು. ॥೨೦-೨೧॥

ಭಸ್ಮಾಲಂಕೃತರಾಗಿ, ರುದ್ರಾಕ್ಷಗಳನ್ನು ಧರಿಸಿ, ತನ್ನ ಬಳಿಗೆ ಬಂದಿರುವ ಈಶ್ವರಭಕ್ತಾಗ್ರೇಸರರು ಆ ಮುನಿಗಳನ್ನು ನೋಡಿದೊಡನೆಯೇ, ರಾಜನು ಆಸನದಿಂದ ಮೇಲಕ್ಕೆದ್ದು ಅವರಿಗೆ ನಮಸ್ಕರಿಸಿ, ಶಾಸ್ತ್ರೋಕ್ತಪ್ರಕಾರವನ್ನನುಸರಿಸಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಅಂಜಲಿಬದ್ಧನಾಗಿ ವಿನಯದಿಂದ ಹೀಗೆಂದನು. ॥೨೨-೨೩॥

|| ರಾಜೋವಾಚ ||

ಧನ್ಯೋಽಸ್ಮ್ಯಹಂ ಮಹಾಶೈವಾಃ ಭವತ್ಪಾದಾಬ್ಜದರ್ಶನಾತ್ ।
ತ್ರಿನೇತ್ರರೂಪಾಃ ಸುತ್ರಾಮಮಾನ್ಯಾ ಯೂಯಂ ವಿಶೇಷತಃ ॥೨೪॥

ಭವದಾಗಮನೇನೈವ ವಿಪಿನಂ ಪಾವನಂ ಮಮ ।
ವಾಣೀಪತಿನಿಭಾ ಯೂಯಂ ಬ್ರೂತ ಕಿಂ ಕರವಾಣಿ ವಃ ॥೨೫॥

ಇತಿ ರಾಜ್ಞೋಽರ್ಥಗಂಭೀರಾಂ ಶ್ರುತ್ವಾ ವಾಚಂ ತು ಶಾಂಭವಾಃ ।
ರಾಜಾನಂ ಶಾಂಭವಶ್ರೇಷ್ಠಂ ಸೋಮಶೇಖರಪೂಜಕಂ ॥೨೬॥

ಪ್ರಾಹುಸ್ತೇ ವಿನಯೋಪೇತಂ ಸದಾರಾಃ ಸಕುಮಾರಕಾಃ ॥೨೭॥

|| ಶಾಂಭವಾ ಊಚುಃ ||

ಸುಧಾಧಾಮಖಂಡೋಜ್ಜ್ವಲನ್ಮೌಲಿಗಂಗಾ
ಪ್ರಕೃಷ್ಟೋರುಲಿಂಗಾರ್ಚನಾಸಕ್ತಚಿತ್ತಾಃ ।
ವಿರಕ್ತಾಃ ಸುರಕ್ತಾಸ್ತ್ವಯಾ ಶಾಂಭವೇನ
ವಸಾಮೋಽದ್ಯನಿರ್ವೃತ್ತಚಿತ್ತಾಃ ಸುಖಾಯ ॥೨೮॥

---

ಪೂಜ್ಯರಾದ ಶಿವಭಕ್ತರೇ, ಈ ದಿವಸ ನಿಮ್ಮ ಅಡಿದಾವರೆಗಳ ದರ್ಶನದಿಂದ ನಾನು ಧನ್ಯನಾಗಿರುವೆನು. ಸಾಕ್ಷಾದೀಶ್ವರಸ್ವರೂಪಿಗಳಾದ ನೀವು ದೇವೇಂದ್ರನಿಗೂ ಪೂಜ್ಯರಾಗಿರುವಿರಿ. ||೨೪||

ನಿಮ್ಮ ಸಮಾಗಮದಿಂದಲೇ ನಾನು ವಾಸವಾಗಿರುವ ಈ ಅರಣ್ಯವು ಪವಿತ್ರವಾಯಿತು. ನೀವು ವಾಗ್ದೇವಿಯ ಪತಿಯಾದ ಬ್ರಹ್ಮನನ್ನು ಹೋಲುವಿರಿ. ನನ್ನಿಂದ ನಿಮಗೆ ಈಗ ಆಗಬೇಕಾದ ಕಾರ್ಯವೇನೆಂಬುದನ್ನು ಹೇಳಿರಿ. ||೨೫||

ರಾಜನ ಗಂಭೀರವಾದ ಅರ್ಥದಿಂದ ಕೂಡಿರುವ ಆ ಮಾತನ್ನು ಕೇಳಿ ಪತ್ನಿಯರೊಂದಿಗೂ, ಮಕ್ಕಳೊಂದಿಗೂ ಬಂದು ನಿಂತಿದ್ದ ಆ ಮುನಿಗಳು, ವಿನಯಾನ್ವಿತನೂ ಸೋಮೇಶ್ವರಾರಾಧಕನೂ ಈಶ್ವರಭಕ್ತಾಗ್ರಣಿಯೂ ಆದ ರಾಜನನ್ನು ಕುರಿತು ಹೀಗೆಂದನು. ||೨೬-೨೭||

ತಪಸ್ವಿಯೇ, ವಿಷಯಸುಖಗಳಲ್ಲಿ ಅನುರಕ್ತರಾದ ಪಾಮರರೂ ಸಹ ಗಂಗಾಧರನೂ, ಚಂದ್ರಶೇಖರನೂ ಆದ ಶಿವನ ಲಿಂಗವನ್ನು ಅರ್ಚಿಸುವುದರಲ್ಲಿ ಆಸಕ್ತ

ಚಿರಾಯಾದ್ಯ ಬಿಲ್ವೈಃ ಸಮಭ್ಯರ್ಚ್ಯ ಲಿಂಗಾ
ನ್ಯಮೋಘಾನಿ ಬಿಲ್ವದ್ರುಸಂಮೂಲಗಾನಿ ।
ಲಭಾಮೋಽದ್ಯ ಮುಕ್ತಿಂ ಭಜಾಮೋಽದ್ಯ ಭಕ್ತಿಂ
ತ್ವಯಾ ಶಾಂಭವೇನಾದ್ಯ ವಸ್ತುಂ ಮನೋ ನಃ ॥೨೯॥

॥ ಸೂತ ಉವಾಚ ॥

ಶಾಂಭವಾನಾಂ ವಚಃ ಶ್ರುತ್ವಾ ರಾಜಾ ಸಂತುಷ್ಟಮಾನಸಃ
ಪ್ರಾಹ ತಾನ್ಪ್ರಣಯೋದಾರಾನ್ಸದಾರಃ ಪ್ರಾಂಜಲಿಸ್ತದಾ ॥೩೦॥

॥ ರಾಜೋವಾಚ ॥

ಭವದ್ಭಿಃ ಶಾಂಭವೈಃ ಸಾರ್ಧಂ ಸೋಮಶೇಖರಪೂಜಕಃ
ವಸಾಮಿ ಸಾಮಿಸೋಮಾಂಕಲಿಂಗಪೂಜಾಪರಾಯಣಃ ॥೩೧॥

ರಾದರೆ ಅತ್ಯಂತ ವಿರಕ್ತಿಯನ್ನು ಹೊಂದುವರು. ಹಾಗಿರುವಾಗ ಈಶ್ವರಭಕ್ತನಾದ ನಿನ್ನ ದರ್ಶನದಿಂದ ಚಿತ್ತಶಾಂತಿ ಹೊಂದಿರುವ ನಾವು ನಿರತಿಶಯವಾದ ಆತ್ಮಾನಂದ ವನ್ನು ಅನುಭವಿಸುವುದಕ್ಕೋಸ್ಕರ ಶಿವಲಿಂಗಾರ್ಚಕನಾದ ನಿನ್ನೊಂದಿಗೆ ವಾಸ ವಾಗಿದ್ದು ಈಶ್ವರಧ್ಯಾನದಲ್ಲಿ ಕಾಲವನ್ನು ಕಳೆಯುವೆವು. ॥೨೮॥

ಇನ್ನು ಮುಂದೆ ಬದುಕಾಲಪರ್ಯಂತ ಬಿಲ್ವವೃಕ್ಷದ ಕೆಳಭಾಗದಲ್ಲಿ ನೆಲೆಸಿ ರುವ ಈ ಶಿವಲಿಂಗಗಳನ್ನು ಬಿಲ್ವಪತ್ರೆಗಳಿಂದ ಪೂಜಿಸಿ, ಶಿವನಲ್ಲಿ ನಮ್ಮ ನೈಜವಾದ ಭಕ್ತಿಯನ್ನು ತೋರ್ಪಡಿಸಿ, ಮೋಕ್ಷವನ್ನು ಹೊಂದುವೆವು. ನಮ್ಮ ಚಿತ್ತವು ಶಾಂಭವನಾದ ನಿನ್ನೊಂದಿಗೆ ವಾಸವಾಗಿರಬಯಸುತ್ತದೆ. ॥೨೯॥

ಈಶ್ವರ ಭಕ್ತರಾದ ಆ ಮುನಿಗಳ ಮಾತನ್ನು ಕೇಳಿ ರಾಜನು ಸಂತೋಷ ಗೊಂಡು, ಭಕ್ತಿಯಿಂದ ವಿನೀತರಾದ ಅವರನ್ನು ಕುರಿತು ಅಂಜಲಿಬದ್ಧನಾಗಿ ಹೀಗೆಂದನು. ॥೩೦॥

"ಎಲೈ ಮುನಿಪುಂಗವರೇ, ಸೋಮೇಶ್ವರಲಿಂಗವನ್ನು ಆರಾಧಿಸುತ್ತಿರುವ ನಾನು, ಅನವರತವೂ ಅರ್ಧ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವ ಶಿವನಲ್ಲಿಯೇ ನೆಟ್ಟಮನಸ್ಸುಳ್ಳವನಾಗಿ ಈಶ್ವರಭಕ್ತರಾದ ನಿಮ್ಮೊಂದಿಗೆ ವಾಸಿಸುವೆನು. ॥೩೧॥

ಅತಃ ಪರಃ ಕಿಮುತ್ಕೃಷ್ಟಂ ಭಾಗ್ಯಂ ಶಾಂಭವಸತ್ತಮಾಃ ।
ಭವತ್ಪೂತಾಂಗಸಂಗೇನ ಪಾಪಭಂಗೋ ಭವೇನ್ಮಮ ॥೩೨॥

ಓಮಿತ್ಯುಕ್ತ್ವಾಥ ಮುನಯೋ ಬಿಲ್ವಮೂಲೇಷು ಶಂಕರಂ ।
ಭಸ್ಮನೋದ್ಧೂಲ್ಯ ಸರ್ವಾಂಗಮಗ್ನಿರಿತ್ಯಾದಿಮಂತ್ರತಃ ॥೩೩॥

ರುದ್ರಾಕ್ಷಧಾರಿಣಃ ಸರ್ವೇ ಕಂಠಕರ್ಣಗಲಾದಿಷು ।
ಬಾಣಲಿಂಗೇಷು ತುಂಗೇಷು ಬಿಲ್ವಮೂಲಸ್ಥಿತೇಷು ಚ ॥೩೪॥

ಬಿಲ್ವಪತ್ರೈಃ ಸದಾರಾಸ್ತೇ ಪೂಜಯಾಮಾಸುರೀಶ್ವರಂ ।
ಶಾಂಭವಾಂಶ್ಚ ಸಹಾಯಾಂಸ್ತಾಂಛಿವನೈವೇದ್ಯರಾಶಿಭಿಃ ॥೩೫॥

ಭೋಜಯಾಮಾಸ ನೃಪತಿರ್ನಿತ್ಯಂ ಶತಸಹಸ್ರಶಃ ।
ಸದಾಶಿವಕಥಾ ಏವ ತಸ್ಯಾವರ್ತಂತ ಸಂಸದಿ ॥೩೬॥

ಎಲೈ ಈಶ್ವರಭಕ್ತಾಗ್ರಣಿಗಳೇ, ಇದಕ್ಕಿಂತಲೂ ಶ್ರೇಷ್ಠವಾದ ಭಾಗ್ಯವು ಇನ್ನಾವುದಿರುವುದು? ಪವಿತ್ರವಾದ ನಿಮ್ಮ ಅಂಗಗಳ ಸಂಬಂಧದಿಂದ ನನ್ನ ಪಾಪಗಳು ಪೂರ್ಣವಾಗಿ ಕ್ಷಯಿಸುವುವು. ॥೩೨॥

ಬಳಿಕ ಮುನಿಗಳೆಲ್ಲರೂ ರಾಜನ ವಚನವನ್ನಂಗೀಕರಿಸಿ, ಬಿಲ್ವವೃಕ್ಷದ ಕೆಳಗಡೆ ಮೂಲಭಾಗದಲ್ಲಿ ಶಿವನನ್ನು ಅರ್ಚಿಸಲಿಚ್ಛಿಸಿದವರಾಗಿ "ಅಗ್ನಿರಿತಿಭಸ್ಮ" ಎಂಬಿವೇ ಮುಂತಾದ ಮಂತ್ರಗಳನ್ನು ಪಠಿಸಿ, ದೇಹದ ಆದ್ಯಂತವೂ ವಿಭೂತಿಯನ್ನು ಲೇಪಿಸಿ, ಕತ್ತು, ಕಿವಿ ಮುಂತಾದ ಭಾಗಗಳಲ್ಲಿ ರುದ್ರಾಕ್ಷಮಾಲೆಗಳನ್ನು ಧರಿಸಿ, ಪತ್ನಿಯರಿಂದೊಡಗೂಡಿ, ಬಿಲ್ವವೃಕ್ಷದ ಕೆಳಗಡೆಯಲ್ಲಿದ್ದ ಶಿವಲಿಂಗಗಳಲ್ಲಿ ಈಶ್ವರನನ್ನು ಪೂಜಿಸಿದರು. ॥೩೩-೩೪॥

ರಾಜನು ಈಶ್ವರಾರಾಧನೆಯಲ್ಲಿ ತನಗೆ ಸಹಾಯಕರಾದ ಅನೇಕ ಮುನಿಶ್ರೇಷ್ಠರಿಗೆ ಪ್ರತಿದಿನವೂ ಯಥೇಚ್ಛೆಯಿಂದ ಶಿವನೈವೇದ್ಯವನ್ನು ಉಣಬಡಿಸಿದನು. ರಾಜನ ಆ ಸಭೆಯಲ್ಲಿ ನಿರಂತರವೂ ಶಿವಕಥಾಲಾಪಗಳು ಜರುಗುತ್ತಿದ್ದವು. ॥೩೫-೩೬॥

ಕೇಚಿದ್ರುದ್ರಂ ಜಪಂತಿ ಸ್ಮ ಬಿಲ್ವಮೂಲೇ ದ್ವಿಜೋತ್ತಮಾಃ ।
ಕೇಚಿತ್ಪಂಚಾಕ್ಷರಜಪಂ ಕುರ್ವಂತಿ ನಿಯತಂ ಶಿವೇ ॥೩೭॥

ಬಿಲ್ವಮೂಲೇಷು ಲಿಂಗೇಷು ನೀರಧಾರಾಪ್ರಕಲ್ಪನೈಃ ।
ಕಾಲಂ ನಯಂತಿ ತೇ ಶೈವಾಃ ಬಿಲ್ವಪತ್ರಾರ್ಚನೈಃ ಪರೇ ॥೩೮॥

ಆಸಾಯಮಪ್ರಮಾದೇನ ಆಸೂರ್ಯೋದಯಮದ್ರಿಜೇ ।
ಕಾಲಕಾಲಾರ್ಚನೇನೈವ ಕಾಲಸ್ತೇಷಾಂ ಕ್ಷಣಾಯತೇ ॥೩೯॥

ಶಿಪಿವಿಷ್ಟಾರ್ಚನಪರಾಸ್ತೇನ ರಾಜ್ಞಾ ಪ್ರಪೂಜಿತಾಃ ।
ತಾನ್ದೃಷ್ಟ್ವಾ ಸ ತದಾ ರಾಜಾ ಪ್ರಹೃಷ್ಟಃ ಶೈವಪುಂಗವಾನ್ ॥೪೦॥

ಪ್ರಕೃಷ್ಟತರಮಾತ್ಮಾನಂ ಮನ್ಯತೇಽಸೌ ಬೃಹದ್ಬಲಃ ।
ಶಾಂಭವೈಃ ಸಹ ಸಲ್ಲಾಪಂ ಕುರ್ವನ್ ಶಿವಕಥಾದಿಭಿಃ ॥೪೧॥

---

ಭವಾನಿಯೇ, ಅಲ್ಲಿ ಕೆಲವರು ಸದಾ ರುದ್ರಸೂಕ್ತವನ್ನು ಪಠಿಸುತ್ತಿದ್ದರು. ಇನ್ನು ಕೆಲವರು, ಶಿವಪಂಚಾಕ್ಷರಮಂತ್ರವನ್ನು ಜಪಿಸುತ್ತಿದ್ದರು. ॥೩೭॥

ಮತ್ತೆ ಕೆಲವರು ಬಿಲ್ವವೃಕ್ಷದಡಿಯಲ್ಲಿದ್ದ ಲಿಂಗಗಳಿಗೆ ಧಾರಾಕಾರವಾಗಿ ನೀರನ್ನೆರೆಯುತ್ತಾ ಕಾಲವನ್ನು ಕಳೆಯುವರು. ಮತ್ತೆ ಕೆಲವರು ಶಿವನನ್ನು ಬಿಲ್ವಪತ್ರೆಗಳಿಂದ ಪೂಜಿಸುತ್ತಿದ್ದರು. ॥೩೮॥

ಎಲೌ ಗಿರಿಜೆಯೇ, ಹೀಗೆ ಆ ಈಶ್ವರಭಕ್ತರು ಪ್ರತಿದಿನವೂ ಸೂರ್ಯೋದಯದ ಕಾಲದಿಂದ ಹಿಡಿದು ಪ್ರದೋಷಕಾಲದವರೆಗೂ. ಪ್ರದೋಷಕಾಲದಿಂದ ಸೂರ್ಯೋದಯದವರೆಗೂ, ತಪ್ಪದೇ ಮೃತ್ಯುಂಜಯನಾದ ಶಿವನನ್ನು ಸೇವಿಸುವುದರಿಂದಲೇ ಕಾಲವನ್ನು ಕಳೆಯುತ್ತಿದ್ದರು. ಅದರಿಂದ ಅವರಿಗೆ ದೀರ್ಘವಾದ ಕಾಲವು ಕ್ಷಣದಂತೆ ಪರಿಣಮಿಸುತ್ತಿತ್ತು. ॥೩೯॥

ರಾಜನೂ ಸಹ ಶಿವಪೂಜಾಸಕ್ತರಾದ ಅವರನ್ನು ಪೂಜಿಸಿದನು. ಆಗ ರಾಜನಾದ ಬೃಹದ್ಬಲನು ಆ ಮುನಿಪುಂಗವರನ್ನು ನೋಡಿ ತಾನು ಧನ್ಯನೆಂದು ತಿಳಿದುಕೊಳ್ಳುವನು. ॥೪೦॥

ಆ ರಾಜನು ಹೀಗೆ ನಿರಂತರವೂ ಈಶ್ವರಭಕ್ತರಾದ ಆ ಮುನಿಪುಂಗವರೊಂದಿಗೆ ಶಿವಕಥೆಯನ್ನಧಿಕರಿಸಿ ಸಂಭಾಷಿಸುತ್ತಾ, ಮೃತ್ಯುಂಜಯನಾದ ಶಿವನ ಆರಾಧನೆಯಿಂದ ಕಾಲವನ್ನು ಕಳೆದನು. ॥೪೧॥

ಚಕಾರ ಕಾಲಾಪನಯಂ ಕಾಲಕಾಲಾರ್ಚನಾನ್ನೃಪಃ ।
ತದ್ದ್ವಾರಾ ಮುನಿಪತ್ನ್ಯಸ್ತಾಸ್ತೇಷಾಂ ಚ ಪರಿಚರ್ಯಯಾ ॥೪೨॥

ಶಿವಾರ್ಚಕಾರ್ಚನೇನೈವ ನೈವೇದ್ಯಪರಿಕಲ್ಪನೈಃ ।
ಕಾಲೋ ನೀತೋ ಮಹಾದೇವಿ ತೈಃ ಸರ್ವೈರ್ಮುನಿಭಿರ್ನೃಪಃ ॥೪೩॥

ಮೋದಮಾಪ ತದಾತ್ಯಂತಂ ಸೋಮನಾಥಾರ್ಚನೇ ರತಃ ।
ವಿಪಿನಸ್ಥೋಽಪಿ ನೃಪತಿಃ ಶಾಂಭವೈಃ ಪರಿವಾರಿತಃ ॥೪೪॥

ತ್ರಿವಿಷ್ಟಪಸುಖಂ ಪ್ರಾಪ ಭೂಮಾವಾಖಂಡಲೋ ಯಥಾ ।
ತಾನ್ದ್ರಷ್ಟುಮಾಗತಾಃ ಸರ್ವೇ ಮಯಾ ಚ ಪ್ರೇಷಿತಾ ಗಣಾಃ ॥೪೫॥

ನಂದ್ಯಾದಯೋ ಮಹಾದೇವಿ ವಿಮಾನೈರ್ಹಂಸಯಾಯಿಭಿಃ ।
ತ್ರಿಶೂಲಹಸ್ತಾ ಭಸ್ಮಾಂಗಾಸ್ತ್ರಿಪುಂಡ್ರಾವಲಿಭಾಸುರಾಃ ॥೪೬॥

ಆ ಮುನಿಗಳ ಪತ್ನಿಯರು ಪತಿಶುಶ್ರೂಷೆಯಲ್ಲಿ ನಿರತರಾಗಿ ಶಿವನೈವೇದ್ಯವನ್ನು ಸಿದ್ಧಗೊಳಿಸುವರು. ದೃಢಭಕ್ತಿಯಿಂದ ಅವರು ಮುನಿಗಳೊಂದಿಗೆ ವಾಸವಾಗಿರುತ್ತಾ ಶಿವಾರಾಧಕರಾದ ಅವರ ಸೇವೆಯಿಂದಲೇ ಕಾಲವನ್ನು ತಳ್ಳುತ್ತಿದ್ದರು. ಸೋಮೇಶ್ವರನನ್ನು ಅರ್ಚಿಸುವುದರಲ್ಲಿ ಆಸಕ್ತನಾದ ಆ ರಾಜನು ಈಶ್ವರಭಕ್ತರಾದ ಮುನಿಗಳಿಂದ ಸಮೇತನಾಗಿ ಅರಣ್ಯದಲ್ಲಿ ವಾಸವಾಗಿದ್ದರೂ ಸಹ ಅತ್ಯಂತಸಂತೋಷವನ್ನೇ ಹೊಂದಿದ್ದನು. ॥೪೨-೪೩-೪೪॥

ಭೂಲೋಕದಲ್ಲಿ ಮುನಿಗಳಿಂದ ಸಮೇತನಾದ ಆ ರಾಜನು ದೇವತೆಗಳಿಂದ ಕೂಡಿದ ಇಂದ್ರನೋಪಾದಿಯಲ್ಲಿ ಸ್ವರ್ಗಸುಖವನ್ನು ಹೊಂದಿದನು. ದೇವಿ, ಹೀಗಿರುತ್ತಿರಲು ಒಂದಾನೊಂದು ದಿನ ನಾನು ನಂದಿಯೇ ಮೊದಲಾದ ಪ್ರಮಥಗಣಗಳನ್ನು ಆ ರಾಜನ ಬಳಿಗೆ ಕಳುಹಿಸಿದೆನು. ನನ್ನಿಂದ ನಿಯೋಜಿತರಾದ ಆ ಗಣಗಳು ಕೈಗಳಲ್ಲಿ ತ್ರಿಶೂಲವನ್ನು ಧರಿಸಿ ಶರೀರದಲ್ಲಿ ವಿಭೂತಿಯನ್ನಿಟ್ಟು ಹಣೆಯಲ್ಲಿ ಭಸ್ಮತ್ರಿಪುಂಡ್ರಗಳನ್ನು ಧರಿಸಿ, ಜಟಾಧಾರಿಗಳಾಗಿ ಕಿರೀಟದಲ್ಲಿ ಚಂದ್ರನನ್ನು ಧರಿಸಿ, ಹಂಸಗಮನವುಳ್ಳ ವಿಮಾನಗಳನ್ನೇರಿ ರಾಜನ ಬಳಿಗೆ ಬಂದರು. ಅವರು ಇಂದ್ರನನ್ನೂ ಸಹ ಧಿಕ್ಕರಿಸುವಂತೆ ಅತ್ಯಂತ ಪರಾಕ್ರಮಶಾಲಿಗಳಾಗಿದ್ದರು. ॥೪೫-೪೬॥

ಜಟಾಮುಕುಟಬದ್ಧೇಂದುಖಂಡಾಖಂಡಲಧರ್ಷಕಾಃ ।
ತಾನ್ದೃಷ್ಟ್ವಾ ಶಾಂಭವಶ್ರೇಷ್ಠಾನ್ಪ್ರಣಮ್ಯ ವಿನಯಾನ್ವಿತಾಃ ॥೪೭॥

ಸ ರಾಜಾ ತೇ ಮುನಿಶ್ರೇಷ್ಠಾ ಧನ್ಯಾಃ ಸ್ಮ ಇತಿ ವಾದಿನಃ ।
ತಾನ್ಗಣಾನ್ವಿನಯೇನಾಹ ಮಧುರಾಕ್ಷರಸಂಯುತಂ ॥೪೮॥

॥ ರಾಜೋವಾಚ ॥

ಕುತಃ ಸಮಾಗತೋ ನಂದಿನ್ಕಿಂ ತೇ ಕಾರ್ಯಂ ಸಮುದ್ಯತಂ ।
ಅಸ್ಮಾಕಮದ್ಯ ಸಾಫಲ್ಯಂ ಜನ್ಮನೋಽಸ್ಯ ಪ್ರಜಾಯತೇ ॥೪೯॥

ತ್ವತ್ಕೃಪಾಪಾತ್ರಭೂತಾನಾಂ ಶಾಂಭವಾನಾಂ ವಿಶೇಷತಃ ।
ದುಃಖಜಾಲಾನಿ ಸರ್ವಾಣಿ ವಿನಷ್ಟಾನಿ ಗಣೇಶ್ವರ ॥೫೦॥

॥ ನಂದಿಕೇಶ್ವರ ಉವಾಚ ॥

ಧನ್ಯೋ ಮಾನ್ಯೋಽಸಿ ಮೇ ರಾಜಸ್ತ್ವಂ ಶಾಂಭವಪುಂಗವಃ ।
ತ್ವದಂಗಸಂಗವಾತೋಽಪಿ ಮಂಗಳಾಯ ಪ್ರಜಾಯತೇ ॥೫೧॥

ಈರೀತಿ ತಮ್ಮ ಬಳಿಗೆ ಬಂದ ಈಶ್ವರಭಕ್ತಾಗ್ರೇಸರರಾದ ಅವರನ್ನು ನೋಡಿ ಆ ರಾಜನು ಮತ್ತು ಮುನಿಗಳು, ಈ ದಿನ ನಾವು ಧನ್ಯರಾದೆವು ಎಂದುಕೊಂಡರು. ಬಳಿಕ ರಾಜನು ವಿನೀತನಾಗಿ ಶಿವಗಣಗಳನ್ನು ನೋಡಿ ಮಧುರವಾದ ವಾಣಿಯಿಂದ ಹೀಗೆಂದನು. ॥೪೭-೪೮॥

"ನಂದಿಕೇಶ್ವರನೇ, ನಿನ್ನ ಸಮಾಗಮನದ ಕಾರಣವೇನು? ಯಾವ ಕಾರ್ಯವನ್ನುದ್ದೇಶಿಸಿ ಇಲ್ಲಿಗೆ ದಯೆಗೈದಿರುವೆ? ಇಂದು ನಮ್ಮ ಈ ಜನ್ಮವು ಸಫಲವಾಯಿತು. ॥೪೯॥

ಗಣನಾಥನೇ, ಈಶ್ವರಭಕ್ತರಾಗಿ ನಿನ್ನ ಅನುಗ್ರಹಕ್ಕೆ ಪಾತ್ರರಾಗಿರುವ ನಮ್ಮ ದುಃಖಪರಂಪರೆಗಳು ಈದಿನ ಪೂರ್ಣವಾಗಿ ನಷ್ಟವಾದುವು." ॥೫೦॥

ಬಳಿಕ ನಂದಿಕೇಶ್ವರನು ರಾಜನನ್ನು ಕುರಿತು ಹೀಗೆ ನುಡಿದನು.--ಎಲೈ ರಾಜನೇ, ಈಶ್ವರಭಕ್ತರಲ್ಲಿ ಅಗ್ರೇಸರನಾಗಿರುವ ನೀನೇ ಈ ಲೋಕದಲ್ಲಿ ಪುಣ್ಯಶಾಲಿಯಾಗಿರುವೆ. ನೀನು ನನಗೆ ಪರಮಪೂಜ್ಯನು. ನಿನ್ನ ಅಂಗಗಳಮೇಲೆ ಬೀಸಿ ಬರುವ ವಾಯುವೂ ಸಹ ನಮಗೆ ಕಲ್ಯಾಣಪ್ರದವಾಗಿರುವುದು. ॥೫೧॥

ಮಂಗಳಾಪತಿಸೋತ್ತುಂಗಲಿಂಗಪೂಜಾಪರಾಯಣಃ ।
ಬಿಲ್ವಪತ್ರಾದಿಭಿಃ ಸಮ್ಯಕ್ಸಭಾಗ್ಯೋಽಸಿ ಮಹೀಪತೇ ॥೫೨॥

ಏತೇಽಪಿ ಮುನಯಃ ಸರ್ವೇ ಭವಲಿಂಗಾರ್ಚನೇ ರತಾಃ ।
ತವ ಶಾಂಭವಸಂಗತ್ಯಾ ಧನ್ಯಾಃ ಶರ್ವಪರಾಯಣಾಃ ॥೫೩॥

ಬಿಲ್ವಮೂಲೇಷು ದೃಶ್ಯಂತೇ ಲಿಂಗಾನಿ ವಿಮಲಾನ್ಯಪಿ ।
ಬಿಲ್ವಪತ್ರೈರ್ಗೃತ್ತಮಾಂಗಾನಿ ಚಂದನಾಲಂಕೃತಾನಿ ಚ ॥೫೪॥

ಮಂದಾರಕುಂದಮಾಲಾಭಿಃ ಪೂಜಿತಾನಿ ನೃಪೋತ್ತಮ ।
ಫಾಲಾಕ್ಷಪ್ರತಿರೂಪಾಣಿ ತ್ರಿಪುಂಡ್ರೇಣೋಜ್ಜ್ವಲಾನಿ ಚ ॥೫೫॥

ಪಶ್ಯಾಮಿ ತವ ಭಾಗ್ಯಸ್ಯ ನಾಂತೋಽಸ್ತಿ ನೃಪಸತ್ತಮ ।
ನಯನಾನಂದದಾತ್ರ್ಯೈವ ಕೈಲಾಸಾದಧಿಕಾ ಮಹೀ ॥೫೬॥

ಓ ರಾಜನೇ, ಬಿಲ್ವಪತ್ರಾದಿಗಳಿಂದ ಸರ್ವಮಂಗಳೆಯಾದ ಪಾರ್ವತಿಯ ಪತಿಯಾದ ಶಿವನ ಲಿಂಗವನ್ನು ಪೂಜಿಸುವುದರಲ್ಲಿ ಮಗ್ನನಾದ ನೀನು ಭಾಗ್ಯಶಾಲಿಯಾಗಿರುವೆ. ॥೫೨॥

ಈಶ್ವರಲಿಂಗಾರ್ಚನೆಯಲ್ಲಿ ಆಸಕ್ತರಾದ ಈ ಮುನಿಪುಂಗವರೂ ಈಶ್ವರ ಭಕ್ತನಾದ ನಿನ್ನ ಸಹವಾಸದಿಂದ ಕೃತಕೃತ್ಯರಾಗಿರುವರು. ॥೫೩॥

ರಾಜೇಂದ್ರನೇ, ಈ ಬಿಲ್ವವೃಕ್ಷಗಳ ಕೆಳಗಡೆಯಲ್ಲಿ ಕಾಣಿಸುತ್ತಿರುವ ಶಿವಲಿಂಗಗಳು ಬಿಲ್ವಪತ್ರೆ, ಚಂದನ, ಪುಷ್ಪಮಾಲೆ ಇವುಗಳಿಂದ ಪೂಜಿಸಲ್ಪಟ್ಟಿರುವುವು. ನನ್ನ ಜನ್ಮಾಂತರಭಾಗ್ಯವಿಶೇಷದಿಂದ ಈಶ್ವರನ ಪ್ರತಿಕೃತಿಗಳಂತಿರುವ ಮತ್ತು ತ್ರಿಪುಂಡ್ರಗಳಿಂದ ಶೋಭಿಸುತ್ತಿರುವ ಈ ಲಿಂಗಗಳನ್ನು ನಾನೀಗ ನೋಡುತ್ತಿರುವೆನು. ರಾಜನೇ, ನಿನ್ನ ಭಾಗ್ಯಕ್ಕೆ ಎಲ್ಲೆಯೇ ಇರುವುದಿಲ್ಲ. ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಈ ಮೂರು ಲೋಕಗಳಲ್ಲಿ ಈ ಭೂಲೋಕವೇ ಕೈಲಾಸಕ್ಕಿಂತಲೂ ಹೆಚ್ಚಾಗಿ ಕಣ್ಣುಗಳಿಗೆ ಆನಂದವನ್ನುಂಟುಮಾಡುತ್ತಿರುವುದೆಂದು ತಿಳಿಯುವೆನು. ॥೫೪-೫೫-೫೬॥

ಸೋಮನಾಥಮಿದಂ ಕ್ಷೇತ್ರಂ ಸೋಮರಾಜ್ಞಾ ಪ್ರಪೂಜಿತಂ
ಸೋಮನಾಥಾಖ್ಯಲಿಂಗಸ್ಯ ದರ್ಶನಂ ಸರ್ವಕಾಮದಂ ॥೫೭॥

ತ್ವಯಾ ಶಾಂಭವಧರ್ಮಾಣಾಮಾಚಾರೋ ವಿಸ್ತರೀಕೃತಃ ।
ಯಸ್ತು ಶಾಂಭವಧರ್ಮಾಣಾಂ ಪ್ರವರ್ತನಪರಾಯಣಃ ॥೫೮॥

ಸ ಶಂಕರೋ ನೃಪಶ್ರೇಷ್ಠ ಶಂಕಾತಂಕಾದಿವರ್ಜಿತಃ ।
ಮಹೇಶಪ್ರಿಯಗಾತ್ರಃ ಸ ಗಣೇಶಶ್ಚ ಪ್ರಜಾಯತೇ ॥೫೯॥

ತ್ವದ್ದರ್ಶನಕೃತೋತ್ಕಂಠಾನ್ನೀಲಕಂಠಃ ಪಿನಾಕಧೃಕ್ ।
ಅಸ್ಮಾನ್ಸಂಪ್ರೇಷಯಾಮಾಸ ವಿಮಾನೈಃ ಸಾರ್ವಗಾಮಿಕೈಃ ॥೬೦॥

ತ್ವಯಾ ಶಾಂಭವವೀರೇಣ ಸಂಗತಾಶ್ಚ ಮಹೌಜಸಾ ।
ಭೂಮಂಡಲಾಖಂಡಲಸ್ತ್ವಂ ತ್ವಯಾ ಧನ್ಯತರಾ ಮಹೀ ॥೬೧॥

ಪೂರ್ವಕಾಲದಲ್ಲಿ, ಸೋಮನಾಥಲಿಂಗದಿಂದ ಕೂಡಿರುವ ಈ ಸೌರಾಷ್ಟ್ರವೆಂಬ ಕ್ಷೇತ್ರವು ಸೋಮರಾಜನೆಂಬ ಹೆಸರುಳ್ಳ ಒಬ್ಬಾನೊಬ್ಬ ರಾಜನಿಂದ ರಕ್ಷಿಸಲ್ಪಟ್ಟಿತು. ಸೋಮನಾಥನೆಂಬ ಹೆಸರುಳ್ಳ ಈ ಶಿವಲಿಂಗದ ದರ್ಶನವು ಸಕಲ ಇಷ್ಟಾರ್ಥಗಳನ್ನೂ ಸಿದ್ಧಿಗೊಳಿಸುವುದು. ॥೫೭॥

ನೀನು ಶಿವನಿಗೆ ಪ್ರೀತಿಕರವಾದ ಸದಾಚಾರಗಳನ್ನು ಎಲ್ಲೆಲ್ಲಿಯೂ ಪ್ರಚಾರ ಗೊಳಿಸಿರುವೆ. ನೃಪೋತ್ತಮನೇ, ಯಾವನು ಶಿವಪ್ರಿಯವಾದ ಧರ್ಮಗಳನ್ನು ಎಲ್ಲೆಲ್ಲಿಯೂ ಹರಡಿ ಧರ್ಮಾಚರಣೆಗಳಲ್ಲಿ ಆಸಕ್ತನಾಗುವನೋ ಅವನು ಸಾಕ್ಷಾತ್ ಶಿವಸ್ವರೂಪನೇ ಆಗುವನಲ್ಲದೇ, ಸಕಲ ದುಃಖಗಳಿಂದಲೂ ವಿನಿರ್ಮುಕ್ತನಾಗಿ ಈಶ್ವರನ ಪ್ರೀತಿಗೆ ಪಾತ್ರನಾಗಿ ಶಿವನ ಪ್ರಮಥಗಣಗಳಿಗೆ ಒಡೆಯನಾಗುವನು. ॥೫೮-೫೯॥

ಪಿನಾಕಪಾಣಿಯಾದ ಶಂಕರನು ನಿನ್ನನ್ನು ನೋಡಬೇಕೆಂಬ ಉತ್ಸಾಹದಿಂದ ಎಲ್ಲೆಲ್ಲಿಯೂ ಸಂಚರಿಸುವ ಸಾಮರ್ಥ್ಯವುಳ್ಳ ಈ ವಿಮಾನಗಳಲ್ಲಿ ನಮ್ಮನ್ನು ನಿನ್ನ ಬಳಿಗೆ ಕಳುಹಿಸಿರುವನು. ಇದೀಗ ನಾವು ಈಶ್ವರಭಕ್ತಾಗ್ರೇಸರನಾದ ನಿನ್ನ ಬಳಿಗೆ ಬಂದಿರುವೆವು. ನೀನು ಈ ಭೂಲೋಕಕ್ಕೆ ಇಂದ್ರನಂತಿರುವೆ. ನಿನ್ನ ಸಹವಾಸ ದಿಂದ ಈ ಭೂಮಂಡಲವೇ ಭಾಗ್ಯಶಾಲಿಯಾಗಿರುವುದು. ॥೬೦-೬೧॥

ಯತ್ರ ಶಾಂಭವಪಾದಾಬ್ಜರೇಣುಃ ಪತತಿ ಭೂತಲೇ ।
ಸ ದೇಶಃ ಪಾವನೋ ಧನ್ಯಃ ತೇನ ಧನ್ಯತರಾ ಮಹೀ ॥೬೨॥

ಯತಃ ಶಾಂಭವಕೋಟೀಭಿಃ ಸತತಂ ತ್ವಮುಪಾಸಿತಃ ।
ಭಸ್ಮರುದ್ರಾಕ್ಷಯುಕ್ತೈಶ್ಚ ಚಾತುರ್ವರ್ಣ್ಯೇಷು ಮಾನವಃ ॥೬೩॥

ಸ ಪೂಜ್ಯಃ ಸರ್ವಯತ್ನೇನ ಮಾನನೀಯಶ್ಚ ಕೇವಲಂ ।
ತತ್ರಾಪಿ ಬ್ರಾಹ್ಮಣಾಃ ಪೂಜ್ಯಾಃ ಶಾಂಭವಾಸ್ತೇ ನೃಪೋತ್ತಮ ॥೬೪॥

ಧನ್ಯಾಃ ಪೂಜಯಿತವ್ಯಾಶ್ಚ ಯತೋ ಬ್ರಹ್ಮಣ್ಯ ಈಶ್ವರಃ ।
ಬ್ರಾಹ್ಮಣೇ ಶಾಂಭವಶ್ರೇಷ್ಠೇ ವಸೇನ್ನಿತ್ಯಂ ಪಿನಾಕಧೃಕ್ ॥೬೫॥

ಬ್ರಹ್ಮಣ್ಯಸ್ತ್ವಂ ಯತೋ ರಾಜಂಛಾಂಭವಾರ್ಚಾಪರಾಯಣಃ ।
ತ್ರಿನೇತ್ರಗಾತ್ರರೂಪೋಽಸಿ ಸುತ್ರಾಮಾದ್ಯಭಿಪೂಜಿತಃ ॥೬೬॥

ಭೂಮಂಡಲದ ಯಾವ ಪ್ರದೇಶದಲ್ಲಿ ಈಶ್ವರ ಭಕ್ತನ ಅಡಿದಾವರೆಗಳ ಧೂಳಿಯು ಬೀಳುವುದೋ, ಆ ಪ್ರದೇಶವೇ ಪವಿತ್ರವೂ ಮತ್ತು ಸಫಲವೂ ಆಗಿರುವುದು. ಅಂತಹ ಪ್ರದೇಶಗಳಿಂದ ಕೂಡಿರುವ ಈ ಭೂಮಿಯು ಅತ್ಯಂತ ಭಾಗ್ಯಶಾಲಿಯಾದುದು. ॥೬೨॥

ಅನೇಕ ಈಶ್ವರಭಕ್ತರಿಂದ ನೀನು ಸೇವಿಸಲ್ಪಡುತ್ತಿರುವೆಯಾದುದರಿಂದ ಈ ಭೂಲೋಕವು ಅತ್ಯಂತ ಧನ್ಯವಾದುದು. ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳಲ್ಲಿ ಭಸ್ಮರುದ್ರಾಕ್ಷಗಳನ್ನು ಧರಿಸಿದ ಮನುಜನೊಬ್ಬನೇ ಪೂಜ್ಯನಾಗಿರುವನಲ್ಲದೇ, ಸರ್ವಜನರ ಮನ್ನಣೆಗೂ ಪಾತ್ರನಾಗಿರುವನು. ಅದರಲ್ಲಿಯೂ ಈಶ್ವರ ಭಕ್ತರಾದ ಬ್ರಾಹ್ಮಣರು ಅತ್ಯಂತ ಪೂಜ್ಯರು. ॥೬೩-೬೪॥

ಬ್ರಾಹ್ಮಣನು ಸಾಕ್ಷಾದೀಶ್ವರಸ್ವರೂಪನೇ ಆಗಿರುವುದರಿಂದ ಅವನೇ ಧನ್ಯನೂ ಮತ್ತು ಪೂಜ್ಯನೂ ಆಗಿರುವನು. ಪಿನಾಕಪಾಣಿಯಾದ ಈಶ್ವರನು ಈಶ್ವರಭಕ್ತನಾದ ಬ್ರಾಹ್ಮಣನಲ್ಲಿ ಸದಾ ವಾಸವಾಗಿರುವನು. ॥೬೫॥

ಓ ರಾಜನೇ, ಬ್ರಹ್ಮಮಾರ್ಗಗಾಮಿಯಾದ ನೀನು ಈಶ್ವರಾರಾಧನೆಯಲ್ಲಿ ಆಸಕ್ತನಾಗಿರುವುದರಿಂದ ನೀನು ಶಿವಸ್ವರೂಪನೇ ಆಗಿರುವೆಯಲ್ಲದೆ ದೇವೇಂದ್ರನಿಗೂ ಪೂಜ್ಯನಾಗಿರುವೆ. ॥೬೬॥

ಇತ್ಯುಕ್ತ್ವಾ ನಂದಿಕೇಶಃ ಸ ನೃಪತಿಂ ಶಾಂಭವೋತ್ತಮಂ ।
ಬ್ರಾಹ್ಮಣಾಂಸ್ತಾನ್ನಮಸ್ಕೃತ್ಯ ರಾಜಾನಂ ಪರಿಷಸ್ವಜೇ ॥೬೭॥

ಶಾಂಗಸಂಗಾಲಿಂಗನೇನ ಹರ್ಷಾನಂದಾಶ್ರುಸಂಯುತಃ ।
ಉವಾಚ ಗಣಪಾನ್ವೀಕ್ಷ್ಯ ರಾಜಾನಂ ಚ ಗಣೇಶ್ವರಃ ॥೬೮॥

॥ ನಂದಿಕೇಶ್ವರ ಉವಾಚ ॥

ಅಹೋ ಬಿಲ್ವಮೂಲಸ್ಥಲಿಂಗಾರ್ಚನೇನ
ಪ್ರಕೃಷ್ಟಾನಿ ಕಷ್ಟಾನಿ ನಷ್ಟಾನಿ ಸದ್ಯಃ ।
ವಿನಾಶ್ಯಾಘಸಂಘೋ ವಸಿಷ್ಠಾದ್ವಿಶಿಷ್ಟಃ
ಸ ಏವಾಷ್ಟಮೂರ್ತೇಃ ಕಟಾಕ್ಷೈಕಲೇಶ್ಯೈಃ ॥೬೯॥

ಗತ್ವಾ ಬಿಲ್ವವನಂ ನವಾರುಣದಲಾಕ್ರಾಂತೋರುಶಾಖಾನ್ವಿತಂ
ತತ್ತೀರೇ ಸರಸಿ ಪ್ರಭೂತಪಯಸಿ ಸ್ನಾತ್ವಾ ಕೃತೋದ್ಧೂಲನಃ ।

ಹೀಗೆಂದು ನುಡಿದು ನಂದಿಕೇಶ್ವರನು ಈಶ್ವರಭಕ್ತನಾದ ರಾಜನನ್ನೂ ಮತ್ತು ಅಲ್ಲಿದ್ದ ಬ್ರಾಹ್ಮಣರನ್ನೂ ವಂದಿಸಿ ಪ್ರೀತಿಯಿಂದ ರಾಜನನ್ನು ಆಲಿಂಗಿಸಿದನು. ॥೬೭॥

ನಂದಿಕೇಶನು ಈಶ್ವರಭಕ್ತನಾದ ರಾಜನ ಆಲಿಂಗನೆಯಿಂದ ಆನಂದಬಾಷ್ಪಗಳನ್ನು ಸುರಿಸುತ್ತಾ, ತನ್ನ ಬಳಿಯಲ್ಲಿದ್ದ ಪ್ರಮಥಗಣಗಳನ್ನು ನೋಡಿ ರಾಜನನ್ನು ಕುರಿತು ಹೀಗೆಂದನು. ॥೬೮॥

ರಾಜೇಂದ್ರನೇ, ಬಿಲ್ವವೃಕ್ಷಗಳ ಕೆಳಗಡೆಯಲ್ಲಿರುವ ಈ ಶಿವಲಿಂಗಗಳನ್ನು ಅರ್ಚಿಸಿದುದರಿಂದ ಅಸಹ್ಯವಾದ ನಿನ್ನ ಸಾಂಸಾರಿಕ ದುಃಖಗಳು ಇದೀಗಲೇ ನಷ್ಟವಾಗಿರುವುವು. ಯಾವ ಮನುಜನು ಶಿವಲಿಂಗಗಳನ್ನು ಭಕ್ತಿಯಿಂದ ಅರ್ಚಿಸುವನೋ ಅವನೇ, ಅಷ್ಟಮೂರ್ತಿಯಾದ ಪರಶಿವನ ಕಟಾಕ್ಷವೀಕ್ಷಣಗಳಿಗೆ ಪಾತ್ರನಾಗಿ ಸಕಲ ಪಾಪಗಳಿಂದಲೂ ವಿನಿರ್ಮುಕ್ತನಾಗಿ, ವಸಿಷ್ಠಾದಿ ಮುನಿಗಳಿಗಿಂತಲೂ ಶ್ರೇಷ್ಠನಾಗುವನು. ಅದೇನು ಆಶ್ಚರ್ಯವಲ್ಲ. ॥೬೯॥

ಯಾವ ಮನುಜನು ನಿರ್ಮಲವಾದ ನೀರಿನಿಂದ ಕೂಡಿರುವ ಸರೋವರದ ತೀರವನ್ನು ಪಡೆದು, ಶುಭ್ರವಾದ ಆ ನೀರಿನಲ್ಲಿ ಸ್ನಾನಮಾಡಿ ಭಸ್ಮಲೇಪನವನ್ನು ಹೊಂದಿ, ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಿ, ಕಂಠದಲ್ಲಿ ರುದ್ರಾಕ್ಷಮಾಲೆಯನ್ನು

ಧೃತ್ವಾ ಫಾಲತಲೇ ತ್ರಿಪುಂಡ್ರರಚನಾಂ ರುದ್ರಾಕ್ಷಮಾಲಾಂ ಗಲೇ
ಧೃತ್ವಾ ಶಂಕರಮರ್ಚ್ಯ ಪಾತಕಯುತೋ ನತ್ವಾ ಜನೋ ಮುಕ್ತಿಭಾಕ್ ॥೭೦॥

ಜಪ್ತ್ವಾ ಶ್ರೀತರುಮೂಲಗೋಮನುಗಣಂ ಗಚ್ಛೇತ್ಫಲಾಧಿಕ್ಯತಾಂ
ಶೈವಂ ಚಾಪಿ ಷಡಕ್ಷರಂ ಪ್ರಜಪತಾಂ ಮುಕ್ತಿಂ ದದಾತೀಶ್ವರಃ ।
ಶ್ರೀರುದ್ರಂ ಯಜುಷಾಂ ವರಂ ಚ ಪಠತಾಂ ಪ್ರೀತೋ ಭವೇಚ್ಛಂಕರ
ಸ್ತನ್ಮೂಲೋತ್ಥಜಲೈಃ ಶಿರಃ ಪ್ರಸಿಚಯನ್ತೀರ್ಥೈಃಸ್ಸಮಸ್ತೈಃ ಪ್ಲುತಃ॥೭೧॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಬೃಹದ್ಬಲರಾಜ
ತಪೋವರ್ಣನೇ ನಂದಿಕೇಶ್ವರರಾಜಸಂವಾದೋ ನಾಮ
ಪಂಚದಶೋಽಧ್ಯಾಯಃ

---

ಹಾಕಿಕೊಂಡು ಕೋಮಲವಾದ ಬಿಲ್ವದಳಗಳಿಂದ ಶೋಭಿಸುತ್ತಾ ಕೊಂಬೆಗಳಿಂದ ಕೂಡಿರುವ ಬಿಲ್ವವನವನ್ನು ಪಡೆದು ಅಲ್ಲಿ ಶಿವನನ್ನು ಆರಾಧಿಸುವನೋ ಅವನು ಪಾಪಿಷ್ಠನಾಗಿದ್ದರೂ ಸಹ ಈಶ್ವರಾರಾಧನೆಯ ಮಹಿಮೆಯಿಂದ ಸಕಲ ಪಾಪಗಳಿಂದಲೂ ವಿನಿರ್ಮುಕ್ತನಾಗಿ ಮೋಕ್ಷವನ್ನು ಹೊಂದುವನು. ॥೭೦॥

ಬಿಲ್ವವೃಕ್ಷದ ಬುಡದಲ್ಲಿ ಕುಳಿತುಕೊಂಡು, ಶೈವಮಂತ್ರಗಳ ಪಾರಾಯಣ, ಪಂಚಾಕ್ಷರಮಂತ್ರಜಪ, ಯಜುರ್ವೇದದಲ್ಲಿ ಪ್ರಸಿದ್ಧವಾಗಿರುವ ಶ್ರೀರುದ್ರಮಂತ್ರ ಪಠನ ಇವೇ ಮೊದಲಾದುವುಗಳನ್ನು ನಡೆಸುವುದರಿಂದ ಮಹಾದೇವನು ನಿಜವಾಗಿಯೂ ತೃಪ್ತನಾಗುವನು. ಮತ್ತು ಬಿಲ್ವಮೂಲದಲ್ಲಿ ಶಿವನಿಗೆ ಅಭಿಷೇಕಮಾಡಿ, ಆ ಶಿವತೀರ್ಥವನ್ನು ತಲೆಗೆ ಪ್ರೋಕ್ಷಣೆಮಾಡಿಕೊಂಡು, ಪರಮೇಶ್ವರ ಸ್ಮರಣೆಮಾಡಿದವನಿಗೆ ಶಿವಸಾನ್ನಿಧ್ಯವು ಸುಲಭವಾಗಿ ದೊರೆಯುವುದೆಂಬುದರಲ್ಲಿ ಯಾವ ಸಂಶಯವೂ ಇಲ್ಲವೆಂದು ಸೂತಮಹರ್ಷಿಗಳು ಶೌನಕಾದಿಗಳಿಗೆ ತಿಳಿಸಿದರು. ॥೭೧॥

ಇಲ್ಲಿಗೆ ಶ್ರೀಶಿವರಹಸ್ಯದ ಐದನೆಯ ಅಂಶದಲ್ಲಿ ಬೃಹದ್ಬಲರಾಜನ ತಪೋವರ್ಣನೆಯ ಕಾಲದಲ್ಲಿ ನಂದಿಕೇಶ್ವರ ಬೃಹದ್ಬಲರ ನಡುವೆ ಉಂಟಾದ ಸಂಭಾಷಣೆಯ ವರ್ಣನೆಯೆಂಬ ಹದಿನೈದನೆಯ ಅಧ್ಯಾಯವು ಕೊನೆಗಂಡಿತು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಷೋಡಶೋಽಧ್ಯಾಯಃ

॥ ರಾಜೋವಾಚ ॥

ಸೋಮನಾಥೇಶ್ವರಂ ಲಿಂಗಂ ಸೋಮರಾಜ್ಞಾ ಪ್ರಪೂಜಿತಂ ।
ಇತ್ಯುಕ್ತಂ ಚ ತ್ವಯಾ ನಂದಿನ್ತೇನ ಸಂಪೂಜಿತಂ ಕಥಂ ॥೧॥

ತದಾಖ್ಯಾನವಿಶಿಷ್ಟಂ ಮೇ ಸರ್ವಂ ಕಥಯ ವಿಸ್ತರಾತ್ ॥೨॥

॥ ಸೂತ ಉವಾಚ ॥

ಸ ರಾಜ್ಞೋ ವಚನಂ ಶ್ರುತ್ವಾ ನಂದಿಕೇಶಃ ಶಿವಾರ್ಚಕಃ ।
ಶಿವಪಾದಾಂಬುಜಂ ಧ್ಯಾಯನ್ಸ್ತುತ್ವಾ ಶಾಂಭವಪುಂಗವಾನ್ ॥೩॥

---

## ಹದಿನಾರನೆಯ ಅಧ್ಯಾಯವು

ತರುವಾಯ ರಾಜನು ನಂದಿಕೇಶ್ವರನನ್ನು ಕುರಿತು ಹೀಗೆಂದನು—ಎಲೈ ನಂದಿಕೇಶ್ವರನೇ, ಈ ಸೋಮನಾಥೇಶ್ವರಲಿಂಗವನ್ನು ಸೋಮರಾಜನು ಪೂಜಿಸಿರುವನೆಂದು ಹೇಳಿದೆಯಲ್ಲವೇ! ಆ ಸೋಮರಾಜನು ಈ ಲಿಂಗವನ್ನು ಪೂಜಿಸಿದ ಬಗೆ ಹೇಗೆ? ಮತ್ತು ಅವನು ಇದನ್ನು ಪೂಜಿಸಲು ಕಾರಣವೇನೆಂಬುದನ್ನು ನನಗೆ ಹೇಳು. ॥೧॥

ಬಳಿಕ ಸೂತಮಹರ್ಷಿಯು ಮುನಿಗಳನ್ನು ಕುರಿತು, ಈಶ್ವರನು ಪಾರ್ವತಿಗೆ ಹೇಳಿದ ಶಿವರಹಸ್ಯವನ್ನು ಸಾವಧಾನಚಿತ್ತದಿಂದ ಕೇಳುವಂತೆ ಹೇಳುತ್ತಾ, ಎಲೈ ಮುನಿಪುಂಗವರೇ, ಅನಂತರ ಶಿವನು ಶಿವರಹಸ್ಯವನ್ನು ಮುಂದುವರಿಸುತ್ತಾ ಗಿರಿಜೆ

ಬೃಹದ್ಬಲಂ ಚ ರಾಜಾನಂ ಗಣೇಶೋ ನಂದಿಕೇಶ್ವರಃ ।
ಪ್ರಾಹ ತಂ ಶಾಂಭವಂ ವಿಪ್ರಾನ್ ಶೈಲಾದಿರ್ಗಿರಿಜೇ ತದಾ ॥೪॥

॥ ನಂದಿಕೇಶ್ವರ ಉವಾಚ ॥

ಅತ್ರೇತಿಹಾಸಂ ವಕ್ಷ್ಯಾಮಿ ಸಾವಧಾನಮನಾಃ ಶೃಣು ।
ಬೃಹದ್ಬಲ ಮಹಾಭಾಗ ಶಾಂಭವೈಃ ಸಹ ಸಾದರಂ ॥೫॥

ಪಂಚಾಶತ್ಕನ್ಯಕಾಶ್ಚಾಸನ್ದಕ್ಷಸ್ಯೈವ ಪ್ರಚೇತಸಃ ।
ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ॥೬॥

ಸಪ್ತವಿಂಶತಿ ಸೋಮಾಯ ಚತಸ್ರೋಽರಿಷ್ಟನೇಮಯೇ ।
ಸತೀಂ ದದೌ ಸ ರುದ್ರಾಯ ಮಹಾದೇವಾಯ ಶೂಲಿನೇ ॥೭॥

ಶಿವನಿಂದಾಕರಂ ಜ್ಞಾತ್ವಾ ಪಿತರಂ ಸ್ವಾಂ ತನುಂ ತದಾ ।
ಪ್ರಾದಹತ್ಸಾ ಸತೀ ಕೋಪಾದ್ದಕ್ಷೋ ನೀತೋ ಹ್ಯದಕ್ಷತಾಂ ॥೮॥

ಯನ್ನು ಕುರಿತು ಹೀಗೆಂದನು—ಎಲೌ ಗಿರಿಜೆಯೇ, ರಾಜನ ಆ ಮಾತನ್ನು ಕೇಳಿ, ಈಶ್ವರಾರಾಧಕನಾದ ನಂದಿಕೇಶ್ವರನು ಈಶ್ವರನ ಅಡಿದಾವರೆಗಳನ್ನು ಧ್ಯಾನಿಸಿ, ರಾಜನಾದ ಬೃಹದ್ಬಲನನ್ನೂ ಮತ್ತು ಅಲ್ಲಿದ್ದ ಈಶ್ವರಭಕ್ತರಾದ ಮುನಿಪುಂಗವರನ್ನೂ ಕುರಿತು ಹೀಗೆ ನುಡಿದನು. ॥೩೪॥

ಎಲೈ ಬೃಹದ್ಬಲನೇ, ಈ ವಿಷಯದಲ್ಲಿ ಪೂರ್ವಕಾಲದ ಒಂದಾನೊಂದು ವೃತ್ತಾಂತವನ್ನು ಹೇಳುವೆನು. ಈಶ್ವರ ಭಕ್ತರಾದ ಈ ಮುನಿಗಳೊಂದಿಗೆ ಸಾವಧಾನ ಚಿತ್ತನಾಗಿ ಅದನ್ನು ಭಕ್ತಿಯಿಂದ ಕೇಳು. ॥೫॥

ಪ್ರಚೇತಸಪುತ್ರನಾದ ದಕ್ಷಪ್ರಜಾಪತಿಗೆ ಐವತ್ತು ಮಂದಿ ಕನ್ಯೆಯರಿದ್ದರು. ಅವನು ಆ ಕನ್ನಿಕೆಯರಲ್ಲಿ ಹತ್ತುಮಂದಿ ಕನ್ನಿಕೆಯರನ್ನು ಯಮನಿಗೂ, ಹದಿಮೂರು ಕನ್ನಿಕೆಯರನ್ನು ಕಶ್ಯಪನಿಗೂ ದಾನಮಾಡಿದನು. ॥೬॥

ಅದರಂತೆ ಇಪ್ಪತ್ತೇಳು ಮಂದಿಯನ್ನು ಚಂದ್ರನಿಗೂ, ನಾಲ್ಕು ಜನ ಕನ್ನಿಕೆಯರನ್ನು ಅರಿಷ್ಟನೇಮಿಯೆಂಬವನಿಗೂ, ಸತೀ ಎಂಬ ಹೆಸರುಳ್ಳ ಕನ್ಯೆಯನ್ನು ಶೂಲಪಾಣಿಯಾದ ಪರಮೇಶ್ವರನಿಗೂ ಕೊಟ್ಟನು. (ದಕ್ಷನಿಗೆ ಅರುವತ್ತು ಮಕ್ಕಳೆಂದು ಕೆಲವೆಡೆ ಇದೆ). ॥೭॥

ದಕ್ಷಬ್ರಹ್ಮನು ತಾನು ಆಚರಿಸುವ ಯಾಗಕ್ಕೆ ಈಶ್ವರನನ್ನು ಆಹ್ವಾನಿಸದೇ ಯಾಗನಿರತನಾದನು. ಈರೀತಿಯಲ್ಲಿ ತನ್ನ ತಂದೆಯು ಶಿವನನ್ನು ನಿಂದಿಸಿದುದನ್ನು

ಮಖಾಂತಕಸ್ತದಾ ರಾಜನ್ಸ್ವೇನಃ ಸಂಕಾದಿಕೋ ಗಣೈಃ ।
ದಕ್ಷಯಜ್ಞಹರಃ ಶಂಭುರ್ನಾಮ್ನಾಸೀತ್ಸ ತಥಾ ಶಿವಃ ॥೯॥

ಸೋಮೋಽಥ ರೋಹಿಣೀಂ ಪ್ರಾಪ್ಯ ಮುದಮಾಪ ತದಾ ಸುಖಂ ।
ಅನ್ಯಾಸ್ತಾ ದಕ್ಷದುಹಿತಾಃ ದಕ್ಷಂ ಪ್ರಾಪ್ಯ ಸುದುಃಖಿತಾಃ ॥೧೦॥

ಲಜ್ಜಯಾ ಕಿಂಚಿದಾನಮ್ಯ ವಚನಂ ತಾಃ ಸಮಬ್ರುವನ್ ॥೧೧॥

॥ ದಕ್ಷಕನ್ಯಾ ಊಚುಃ ॥

ಭಗವನ್ಸೋಮರಾಜ್ಞಾ ಹಿ ವಯಂ ಸರ್ವಾ ವಿಮಾನಿತಾಃ ।
ರೋಹಿಣೀಮೇವ ಭಜತೇ ನಾಸ್ಮಾಸು ರಮತೇ ತಥಾ ॥೧೨॥

ಇತ್ಥಂ ಪುತ್ರೀವಚಃ ಶ್ರುತ್ವಾ ಸಾಂತ್ವಪೂರ್ವಮಿದಂ ವಚಃ ।
ಪ್ರಾಹ ದಕ್ಷಸ್ತತೋ ಗತ್ವಾ ಸೋಮಂ ತೇನ ಚ ಪೂಜಿತಃ ॥೧೩॥

ತಿಳಿದು ಸತಿಯು ಯೋಗಾಗ್ನಿಯಿಂದ ತನ್ನ ದೇಹವನ್ನು ದಹಿಸಿದಳು ಇದನ್ನು ತಿಳಿದ ಪರಮೇಶ್ವರನು ದಕ್ಷನನ್ನು ಶಿಕ್ಷಿಸಿದನು. ॥೮॥

ಆಗ ಸತಿಯು ದೇಹವನ್ನು ತ್ಯಜಿಸಿದ ವಾರ್ತೆಯನ್ನು ಕೇಳಿ, ಕೋಪಗೊಂಡ ಪರಮೇಶ್ವರನು ತನ್ನ ಗಣಗಳಿಂದೊಡಗೂಡಿ ದಕ್ಷನ ಯಜ್ಞವನ್ನು ನಾಶಗೊಳಿಸಿದನು. ಆ ಕಾಲದಲ್ಲಿ ಯಜ್ಞಧ್ವಂಸಕನಾದ ಶಿವನು, ಏಳು ಹೆಸರುಗಳಿಂದ ಪ್ರಸಿದ್ಧನಾದನು. ॥೯॥

ಇತ್ತ ಚಂದ್ರನು ರೋಹಿಣಿಯೆಂಬ ಪತ್ನಿಯಲ್ಲಿ ಮಾತ್ರ ಅತ್ಯಂತವಾಗಿ ಪ್ರೀತಿಯಿಟ್ಟು ಸದಾ ಅವಳಲ್ಲಿಯೇ ಅನುರಕ್ತನಾಗಿ ಅವಳೊಂದಿಗೆ ಸುಖವಾಗಿದ್ದನು. ಉಳಿದ ಇಪ್ಪತ್ತಾರು ಜನರು ಪತಿಯಾದ ಚಂದ್ರನಿಂದ ತಮಗೆ ಸೌಖ್ಯವು ದೊರಕದಿರಲು ಅತ್ಯಂತ ದುಃಖಗೊಂಡವರಾಗಿ ತಂದೆಯ ಬಳಿಗೆ ಹೋಗಿ, ನಾಚಿಕೆಯಿಂದ ಮುಖವನ್ನು ಸ್ವಲ್ಪ ತಗ್ಗಿಸಿಕೊಂಡು ತಂದೆಯನ್ನು ಕುರಿತು, ॥೧೦-೧೧॥

ಪೂಜ್ಯನಾದ ತಂದೆಯೇ, ನಮ್ಮೆಲ್ಲರನ್ನೂ ಚಂದ್ರನು ಪೂರ್ಣವಾಗಿ ತಿರಸ್ಕರಿಸಿರುವನು. ಅವನು ನಮ್ಮೊಂದಿಗೆ ರಮಿಸದೇ ರೋಹಿಣಿಯನ್ನೇ ಪ್ರೀತಿಸುತ್ತಿರುವನು ಎಂದರು. ॥೧೨॥

ಪುತ್ರಿಯರ ಆ ಮಾತನ್ನು ಕೇಳಿ ದಕ್ಷನು ಚಂದ್ರನ ಬಳಿಗೆ ಹೋಗಿ

|| ದಕ್ಷ ಉವಾಚ ||

ಸರ್ವಾಃ ಪಾಣಿಗೃಹೀತಾಸ್ತೇ ಅತಿಚಾರೋ ಹಿ ತಾಸು ಕಿಂ ।
ಭಜಸೇ ರೋಹಿಣೀಮೇವ ನೈತತ್ತ್ವಯ್ಯುಪಪದ್ಯತೇ ||೧೪||

ಪುತ್ರ್ಯೋ ಮೇ ನಾವಮಂತವ್ಯಾ ವರ್ತಸ್ವ ತ್ವಂ ಯಥಾಕ್ರಮಂ ।
ಬಹುಭಾರ್ಯೋ ಯಶ್ಚ ಭವೇತ್ತ್ವೇಕಸ್ಯೈಕಾಂ ಕಾಮಮೋಹಿತಃ ||೧೫||

ಅದೋಷಾಂ ಭಜತೇ ಯಶ್ಚ ಸ ಯಾಮ್ಯಾಯಾತನಾಗ್ರ್ಯಭುಕ್ ।
ನೈವ ದೇವಾ ಹವಿಸ್ತಸ್ಯ ಪಿತರಸ್ತತ್ಸ್ವಧಾಮಪಿ ||೧೬||

ನಾಶ್ನಂತಿ ಶತವರ್ಷಾಣಿ ಭ್ರೂಣಹಾ ಸದ್ಭಿರುಚ್ಯತೇ ।
ಮೃತೋ ಹಿ ಶ್ವಾನಯೋನೀಷು ದಾರತ್ಯಾಗೀ ವಸೇನ್ನರಃ ||೧೭||

ಅವನಿಂದ ಪೂಜಿಸಲ್ಪಟ್ಟವನಾಗಿ ಅಳಿಯನನ್ನು ಕುರಿತು ಶಾಂತತೆಯಿಂದ ಹೀಗೆಂದನು. ||೧೩||

ಎಲೈ ಸೋಮರಾಜನೇ, ನೀನು ನನ್ನ ಈ ಕನ್ನಿಕೆಯರನ್ನೆಲ್ಲರನ್ನೂ ವಿಧಿಪೂರ್ವಕವಾಗಿ ವರಿಸಿರುವೆ. ಹೀಗಿರಲು ವೃಥಾ ಇವರನ್ನೇಕೆ ತಿರಸ್ಕರಿಸುವೆ. ನೀನು ಇವರೆಲ್ಲರನ್ನೂ ತೊರೆದು ರೋಹಿಣಿಯೊಂದಿಗೆ ಮಾತ್ರ ರಮಿಸುತ್ತಿರುವೆ ಯಂತೆ. ಇದು ನಿನಗೆ ಉಚಿತವಲ್ಲ. ||೧೪||

ನನ್ನ ಉಳಿದ ಈ ಕನ್ನಿಕೆಯರನ್ನು ದೂರಗೊಳಿಸದೇ ಕ್ರಮವಾಗಿ ಒಬ್ಬೊಬ್ಬಳೊಂದಿಗೂ ಕ್ರೀಡಿಸು. ಯಾವನು ಅನೇಕ ಸ್ತ್ರೀಯರನ್ನು ಮದುವೆಯಾಗಿ ಅವರಲ್ಲಿ ಒಬ್ಬಳಲ್ಲಿಯೇ ಅನುರಕ್ತನಾಗುವನೋ, ಅವನು ಅಂತ್ಯದಲ್ಲಿ ದಾರುಣವಾದ ಯಮಯಾತನೆಗಳನ್ನು ಅನುಭವಿಸುವನು. ಅವನು ಅರ್ಪಿಸಿದ ಹವಿಸ್ಸನ್ನು ದೇವತೆಗಳಾಗಲಿ, ಪಿತೃಗಳಾಗಲಿ ಸ್ವೀಕರಿಸುವುದಿಲ್ಲ. ಪತ್ನಿಯನ್ನು ತ್ಯಜಿಸಿದ ಅವನನ್ನು ಸತ್ಪುರುಷರು ಭ್ರೂಣಹತ್ಯೆಯನ್ನಾಚರಿಸಿದವನೆಂದು ಹೇಳುವರು. ||೧೫-೧೬||

ಧರ್ಮಪತ್ನಿಯನ್ನು ತ್ಯಜಿಸಿದ ಮನುಜನು ಮೃತನಾದ ಬಳಿಕ ಶ್ವಾನಜನ್ಮವನ್ನು ತಾಳುವನು. ||೧೭||

**ಸೋಮೋ ದಕ್ಷವಚಃ ಶ್ರುತ್ವಾ ಸಾಂತ್ವಯನ್ಮಧುರಂ ನೃಪ ॥೧೮॥**

**ವಾಚಮಾಹ ತದಾ ಭೀತಃ ಪ್ರಾಂಜಲಿಃ ಪ್ರಣತಸ್ತದಾ ॥೧೯॥**

॥ ಸೋಮ ಉವಾಚ ॥

**ಪ್ರಜಾಪತೇ ಕ್ಷಮಸ್ವೇಮಂ ಮಂತುಂ ಮಾ ಕ್ರುಧ ಮಯ್ಯಪಿ ।**
**ಸರ್ವಾಸ್ವೇವಾನುವರ್ತೇಽಹಂ ಯಥಾಪೂರ್ವಂ ನ ಸಂಶಯಃ ॥೨೦॥**

**ದಕ್ಷಃ ಸೋಮವಚಃ ಶ್ರುತ್ವಾ ಸ್ವಕೀಯಂ ಭವನಂ ಗತಃ ।**
**ಪುನಶ್ಚ ಕಾಮಾನ್ಮಂದಾತ್ಮಾ ರೋಹಿಣೀಮುಪಸೇವತೇ ॥೨೧॥**

**ತದಾ ತಾಃ ಕನ್ಯಕಾಃ ಸರ್ವಾಃ ಪುನಃ ಪ್ರೋಚುಶ್ಚ ತತ್ಕೃತಂ ॥೨೨॥**

॥ ಕನ್ಯಕಾ ಊಚುಃ ॥

**ಯಸ್ತ್ವಯಾ ಸಾಂತ್ವಿತಃ ಪೂರ್ವಂ ಸೋಮೋ ನಾಸ್ಮಾಸು ವರ್ತತೇ।**
**ಯಥಾಪೂರ್ವಂ ಸ ಕಾಮಾತ್ಮಾ ರೋಹಿಣೀಮುಪಸೇವತೇ ॥೨೩॥**

ರಾಜನೇ, ದಕ್ಷನ ಮಾತನ್ನು ಕೇಳಿ ಚಂದ್ರನು ಮಾವನನ್ನು ಸಮಾಧಾನಗೊಳಿಸುತ್ತಾ ಭಯಗೊಂಡು ಅಂಜಲಿಬದ್ಧನಾಗಿ ನಮಸ್ಕರಿಸಿ ಹೇಳಿದನು. ॥೧೮-೧೯॥

"ದಕ್ಷಪ್ರಜಾಪತಿಯೇ, ನನ್ನ ಈ ಅಪರಾಧವನ್ನು ಕ್ಷಮಿಸು. ನನ್ನಲ್ಲಿ ಕೋಪಗೊಳ್ಳಬೇಡ. ಇಂದಿನಿಂದ ಇವರೆಲ್ಲರಲ್ಲಿಯೂ ಏಕರೀತಿಯಿಂದ ವರ್ತಿಸುವೆನು. ಈ ವಿಷಯದಲ್ಲಿ ಸಂಶಯಪಡಬೇಡ." ॥೨೦॥

ಚಂದ್ರನ ಆ ಮಾತನ್ನು ಕೇಳಿ ದಕ್ಷನು ತನ್ನ ಮನೆಗೆ ತೆರಳಿದನು. ಆದರೆ ಅವಿವೇಕಿಯಾದ ಚಂದ್ರನು ಕಾಮಾಂಧನಾಗಿ ಎಂದಿನಂತೆ ಪುನಃ ರೋಹಿಣಿಯಲ್ಲಿಯೇ ಅನುರಕ್ತನಾದನು. ॥೨೧॥

ಆಗ ದಕ್ಷನ ಆ ಕನ್ಯೆಯರೆಲ್ಲರೂ ಪುನಃ ತಂದೆಯ ಬಳಿಗೆ ಹೋಗಿ ತಮ್ಮ ಪತಿಯ ದುರ್ವರ್ತನೆಯನ್ನು ತಿಳಿಸಿದರು. ॥೨೨॥

ಜನಕನೇ, ಮೊದಲು ನಿನ್ನ ಹಿತೋಪದೇಶವನ್ನು ಕೇಳಿಯೂ ಸಹ ಕಾಮಾಂಧನಾದ ಚಂದ್ರನು ನಮ್ಮನ್ನು ಪ್ರೀತಿಸದೇ ಎಂದಿನಂತೆ ರೋಹಿಣಿಯಲ್ಲಿಯೇ ಅನುರಕ್ತನಾಗಿರುವನು. ॥೨೩॥

ಶಶಾಪ ಕ್ರೋಧಾದ್ದಕ್ಷಸ್ತಂ ಕನ್ಯಾನಾಂ ವಾಕ್ಯಸಾಯಕೈಃ ॥೨೪॥

ಭವ ಯಕ್ಷ್ಮಗೃಹೀತಸ್ತ್ವಂ ಸದ್ಯೋ ನಿರ್ವೀರ್ಯತಾಂ ಗತಃ ।
ಅತಿಕಾಮೋದ್ಧತೋ ನಿತ್ಯಂ ಮದ್ವಾಕ್ಯಸ್ಯ ಚ ಲಂಘನಾತ್ ॥೨೫॥

ತತ್ಕ್ಷಣಾದಭವತ್ಸೋಮಃ ಸದ್ಯೋ ನಿಷ್ಪ್ರಭತಾಂ ಗತಃ ।
ಯಕ್ಷ್ಮಣಾ ಸ ಗೃಹೀತಶ್ಚ ಹಿಕ್ಕಾಜ್ವರ ಸಮನ್ವಿತಃ ॥೨೬॥

ತ್ವಗಸ್ಥಿಶೇಷಃ ಸೋಮೋ ಹಿ ಬಲಹೀನಸ್ತದಾ ನೃಪ ।
ಆರ್ತಿಂ ಜಗಾಮ ಪರಮಾಂ ತಮತ್ರಿಃ ಪ್ರಣತಂ ದ್ವಿಜಃ ॥೨೭॥

ಸೋಮರಾಜಾನಮಾಹೇದಂ ದಕ್ಷಶಾಪವಿಮುಕ್ತಯೇ ॥೨೮॥

ಆಗ ದಕ್ಷನು ಹರಿತವಾದ ಬಾಣಗಳಂತಿರುವ, ಕನ್ಯೆಯರ ತೀವ್ರವಾದ ಆ ಮಾತುಗಳನ್ನು ಕೇಳಿ ದುಃಖಿತನಾಗಿ ಕೋಪದಿಂದ ಚಂದ್ರನನ್ನು ಹೀಗೆಂದು ಶಪಿಸಿದನು. ॥೨೪॥

'ಎಲೈ ಚಂದ್ರನೇ ! ಅತ್ಯಂತ ಕಾಮಾಂಧನಾದ ನೀನು, ನನ್ನ ವಾಕ್ಯವನ್ನು ಉಲ್ಲಂಘಿಸಿದುದರಿಂದ, ಭಯಂಕರವಾದ ಕ್ಷಯರೋಗಕ್ಕೆ ಗುರಿಯಾಗಿ ನಿರ್ವೀರ್ಯನಾಗು.' ॥೨೫॥

ದಕ್ಷನು ಹೀಗೆ ಶಪಿಸಲು, ಆ ಕ್ಷಣದಲ್ಲಿಯೇ, ಚಂದ್ರನಿಗೆ ಕ್ಷಯರೋಗವು ಪ್ರಾಪ್ತವಾಯಿತು. ಆಗ ಅವನು ಬಿಕ್ಕಳಿಕೆಯಿಂದ ಜ್ವರವನ್ನು ಅನುಭವಿಸುತ್ತಾ ಕ್ಷಣಕಾಲದಲ್ಲಿ ಕಾಂತಿಹೀನನಾದನು. ॥೨೬॥

ರಾಜನೇ! ಈರೀತಿಯಲ್ಲಿ ದಕ್ಷನ ಶಾಪಕ್ಕೆ ಗುರಿಯಾದ ಚಂದ್ರನು, ಕೇವಲ ಎಲುಬು ಚರ್ಮಗಳಿಂದ ಕೂಡಿದವನಾಗಿ, ಅಶಕ್ತನಾಗಿ, ಅತ್ಯಂತ ಚಿಂತಾಕ್ರಾಂತನಾದನು. ಆಗ ಅವನು, ಯಾವ ಬಗೆಯಿಂದಲಾದರೂ, ಶಾಪದಿಂದ ವಿಮೋಚನೆಯನ್ನು ಹೊಂದಬೇಕೆಂಬ ಇಚ್ಛೆಯಿಂದ, ದ್ವಿಜಶ್ರೇಷ್ಠನಾದ ಅತ್ರಿಮುನಿಯ ಸಮೀಪವನ್ನು ತೆರಳಿ, ಮುನಿಗೆ ನಮಸ್ಕರಿಸಿ, ತನ್ನ ದುಃಖವನ್ನು ಅವನೊಡನೆ ಹೇಳಿಕೊಂಡನು. ಆಗ ಅತ್ರಿಯು ಚಂದ್ರನಿಗೆ ಬಂದಿರುವ ಈ ಶಾಪವನ್ನು ಹೋಗಲಾಡಿಸುವುದಕ್ಕೋಸ್ಕರ ಅವನನ್ನು ಕುರಿತು ಹೀಗೆಂದನು. ॥೨೭-೨೮॥

ಶೃಣುಷ್ವ ಮೇ ವಚೋ ರಾಜನ್ಸ್ವರಾಜ್ಯಮೀಪ್ಸಸಿ ।
ಶರಣಂ ಗಚ್ಛ ದೇವೇಶಂ ತಪಸಾ ಶಿವಪೂಜಯಾ ॥೨೯॥

ಸೋಮನಾಥಾಭಿಧಂ ಲಿಂಗಂ ಸೌರಾಷ್ಟ್ರೇ ಸಂಸ್ಥಿತಃ ಶಶಿನ್ ।
ಮುನಿಭಿಃ ಪ್ರಣತಂ ಲಿಂಗಂ ಪಯೋಷ್ಣೀತೀರಸಂಸ್ಥಿತಂ ॥೩೦॥

ಬ್ರಹ್ಮವಿಷ್ಣ್ವಾದಿಭಿರ್ದೇವೈಃ ಸೇವಿತಂ ಸರ್ವಕಾಮದಂ ।
ತಸ್ಮಿನ್ಲಿಂಗೇ ಮಹಾದೇವೋ ನಿವಸತ್ಯಂಬಿಕಾಸಖಃ ॥೩೧॥

ಇತ್ಯತ್ರಿವಚಸಾ ಸೋಮೋ ಜ್ಞಾತ್ವಾ ಗತ್ವಾ ಮಹೇಶ್ವರಂ ।
ಸ್ನಾತ್ವಾ ನತ್ವಾ ಮಹಾದೇವಂ ಪಯೋಷ್ಣ್ಯಾಂ ಧೂತಕಿಲ್ಬಿಷಃ ॥೩೨॥

ಭಸ್ಮನೋದ್ಧೂಳ್ಯ ಸರ್ವಾಂಗಂ ತತಾಪ ಪರಮಂ ತಪಃ ।
ಶಿವಲಿಂಗಾರ್ಚನರತೋ ಪಂಚಾಕ್ಷರಪರಾಯಣಃ ॥೩೩॥

---

'ಎಲೈ, ಚಂದ್ರನೇ! ನನ್ನ ಮಾತನ್ನು ಕೇಳು! ನೀನು, ಸುಖಿಯಾಗಬೇಕೆಂಬ ಇಚ್ಛೆಯುಳ್ಳವನೇ ಆದರೆ, ಶಿವಪೂಜೆಯಿಂದಲೂ, ಮತ್ತು ಶಿವತಪೋನುಷ್ಠಾನದಿಂದಲೂ ದೇವೇಶನಾದ ಶಿವನನ್ನು ಮೊರೆಹೊಗು. ॥೨೯॥

ಎಲೈ, ಶಶಿಯೇ! ಸೌರಾಷ್ಟ್ರದೇಶದಲ್ಲಿ, ಪಯೋಷ್ಣೀನದಿಯ ತೀರದಲ್ಲಿ, ಮುನಿಗಳಿಂದ ನಮಸ್ಕರಿಸಲ್ಪಟ್ಟ, ಸೋಮನಾಥನೆಂಬ ಹೆಸರುಳ್ಳ ಒಂದಾನೊಂದು ಈಶ್ವರಲಿಂಗವಿರುವುದು. ॥೩೦॥

ಆ ಲಿಂಗವು, ಬ್ರಹ್ಮ, ವಿಷ್ಣು, ಮುಂತಾದ ಸಕಲ ದೇವತೆಗಳಿಂದಲೂ ಪೂಜಿಸಲ್ಪಡುತ್ತಿರುವುದಲ್ಲದೇ, ಭಕ್ತರ ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವುದು. ಅದರಲ್ಲಿ ಗಿರಿಜಾ ವಲ್ಲಭನಾದ ಪರಶಿವನು ವಾಸವಾಗಿರುವನು.' ॥೩೧॥

ಈ ಪ್ರಕಾರವಾಗಿ ಚಂದ್ರನು ಅತ್ರಿಮುನಿಯ ಮೂಲಕ ಸೋಮನಾಥ ಲಿಂಗದ ಮಹಿಮೆಯನ್ನು ತಿಳಿದು, ಅಲ್ಲಿಗೆ ಹೋಗಿ ಪಯೋಷ್ಣೀನದಿಯಲ್ಲಿ ಸ್ನಾನವನ್ನಾಚರಿಸಿ ಶಿವಲಿಂಗಕ್ಕೆ ನಮಸ್ಕರಿಸಿ ಸರ್ವಾಂಗಗಳಿಗೂ ಭಸ್ಮವನ್ನು ಲೇಪಿಸಿ ಶಿವಪಂಚಾಕ್ಷರಮಂತ್ರಗಳನ್ನು ಜಪಿಸುತ್ತಾ ಈಶ್ವರಪೂಜಾಸಕ್ತನಾಗಿ ಕಠಿಣವಾದ ತಪಸ್ಸನ್ನಾಚರಿಸಿದನು. ॥೩೨-೩೩॥

ಭಸ್ಮಸ್ಥಂಡಿಲಸಂಸ್ಥಶ್ಚ ರುದ್ರಮಾವರ್ತಯಂತ್ಸದಾ ।
ಶುಶ್ರೂಷಂತ್ಯಾ ಚ ರೋಹಿಣ್ಯಾ ಕಂದಪುಷ್ಪಫಲಾದಿಭಿಃ ॥೩೪॥

ಅತಿಷ್ಠತ್ಸ ತದಾ ಮೌನೀ ದಶವರ್ಷಾಣ್ಯಥಾಂಬಿಕೇ ।
ತಪಸ್ಯತೋಽಥ ಸೋಮಸ್ಯ ಶಕ್ತಿರಾಸೀಚ್ಛಿವಾಜ್ಞಯಾ ॥೩೫॥

ಸೋಮನಾಥಂ ಮಹಾಲಿಂಗಂ ಬಿಲ್ವಪತ್ರೈಃ ಸಮರ್ಚಯನ್ ।
ತ್ರಿಕಾಲಮಪ್ರಮಾದೇನ ಸೋಮಾರ್ಧಕೃತಶೇಖರಂ ॥೩೬॥

ಏವಂ ಸಂವಸತಸ್ತಸ್ಯ ಸೋಮಃ ಸೋಮಾಯ ತೋಷಿತಃ ।
ಸೋಮನಾಥಾಹ್ವಯಾಲ್ಲಿಂಗಾತ್ತಸ್ಮೈ ಪ್ರಾದುರಭೂಚ್ಛಿವಃ ॥೩೭॥

ಗಂಗಾಚಂದ್ರಕಲಾಮೌಲಿರ್ಮಹೋಕ್ಷವರವಾಹನಃ ।
ಉಮಾಸಂಶ್ಲಿಷ್ಟವಾಮಾಂಗೋ ಗಣವೃಂದನಿಷೇವಿತಃ ॥೩೮॥

---

ಅವನು ಭಸ್ಮನಿರ್ಮಿತವಾದ ಸ್ಥಂಡಿಲದಲ್ಲಿ ನಿಂತು ಅನವರತವೂ ರುದ್ರ ಸೂಕ್ತವನ್ನು ಪಠಿಸಿದನು. ಪತ್ನಿಯಾದ ರೋಹಿಣಿಯು ಗೆಡ್ಡೆ, ಗೆಣಸು, ಹಣ್ಣು, ಹೂವು ಮುಂತಾದುವುಗಳನ್ನು ತಂದಿರಿಸಿ ಪತಿಯನ್ನು ಸೇವಿಸುತ್ತಿದ್ದಳು. ॥೩೪॥

ಎಲೌ ದೇವಿಯೇ, ಆಗ ಅವನು ಹತ್ತು ಸಂವತ್ಸರಗಳು ಕಳೆಯುವವರೆಗೂ ಮೌನವ್ರತವನ್ನಾಚರಿಸಿದನು. ಅಷ್ಟೊಂದು ದೀರ್ಘಕಾಲದವರೆಗೆ ನಿಯಮದಿಂದಿರಲು ಈಶ್ವರಾನುಗ್ರಹದಿಂದ ಅವನಲ್ಲಿ ಶಕ್ತಿಯಿದ್ದಿತು. ॥೩೫॥

ಈರೀತಿ ಚಂದ್ರನು ಸೋಮನಾಥಲಿಂಗವನ್ನು ತ್ರಿಕಾಲಗಳಲ್ಲಿಯೂ ತಪ್ಪದೆ ಪ್ರತಿದಿನವೂ ಬಿಲ್ವಪತ್ರೆಗಳಿಂದ ಅರ್ಚಿಸುತ್ತಿದ್ದನು. ॥೩೬॥

ಹೀಗೆ ಈಶ್ವರಲಿಂಗಾರ್ಚನೆಯಲ್ಲಿಯೇ ಮಗ್ನನಾಗಿ ನಿಯಮದಿಂದಿದ್ದ ಚಂದ್ರನ ತಪಸ್ಸಿನಿಂದ ಶಿವನು ಸಂತೋಷಗೊಂಡವನಾಗಿ ಚಂದ್ರನೆದುರಿಗೆ ಸೋಮನಾಥಲಿಂಗದಿಂದ ತಾನು ಪ್ರಾದುರ್ಭವಿಸಿದನು. ॥೩೭॥

ಶಿವನು ಚಂದ್ರಕಲೆ, ದೇವಗಂಗೆ ಇವರನ್ನು ಶಿರಸ್ಸಿನಲ್ಲಿ ಧರಿಸಿ, ವಾಹನವಾದ ನಂದಿಯನ್ನೇರಿ ಎಡಪಾರ್ಶ್ವದಲ್ಲಿ ದೇವಿಯಾದ ಗಿರಿಜೆಯಿಂದ ಆಲಿಂಗಿಸಲ್ಪಟ್ಟವನಾಗಿ ಪ್ರಮಥಗಣಗಳಿಂದ ಸೇವಿಸಲ್ಪಡುತ್ತಿದ್ದನು. ॥೩೮॥

ಬ್ರಹ್ಮವಿಷ್ಣ್ವಾದಿಭಿರ್ದೇವೈರ್ಮಹೇಂದ್ರಾದ್ಯೈಃ ಸುರೋತ್ತಮೈಃ ।
ಕುಮಾರಗಣನಾಥೈಶ್ಚ ಮಯಾ ಚ ಪರಿಸೇವಿತಃ ॥೩೯॥

ಗಜಗರುಡಾಖುಮಯೂರಹಂಸಯಾನೈಃ
ಸುರವರ್ಗೈರನುಯಾಯಿಭಿಃ ಪೃಷ್ಠತೋಽಗ್ರೇ ।
ರಜತಾದ್ರಿನಿಭಪ್ರಭಾವಿಭಾತಿತಾಂಗಂ
ವೃಷಭಂ ಕೇಸರಿಯಾನಯಾನುಯಾತಃ ॥೪೦॥

ಅಧಿರುಹ್ಯಾಮಲಚಾಮರೌಘವಾತೈ
ರ್ವ್ಯಜನೈಶ್ಛತ್ರಗಣೈರ್ವಿಶೋಭಿತಾಂಗಃ ।
ಪರಶುವರಕುರಂಗ ಚಾಲಪಾಣಿಃ
ಭಗವಾನಾವಿರಭೂತ್ತದಾ ಮುದಾ ಮಹೇಶಃ ॥೪೧॥

ತಥಾಗತಂ ಮಹಾದೇವಂ ದೃಷ್ಟ್ವಾ ಹೃಷ್ಟತನೂರುಹಃ ।
ಪ್ರಣಮ್ಯ ಸೋಮಃ ಸಾಷ್ಟಾಂಗಮಷ್ಟಮೂರ್ತಿಂ ಕೃಪಾಕರಂ ॥೪೨॥

---

ಬ್ರಹ್ಮ, ವಿಷ್ಣು, ಭೂದೇವಿ, ಇಂದ್ರ ಮೊದಲಾದ ದೇವತೆಗಳೂ ಮತ್ತು ಕುಮಾರಸ್ವಾಮಿ, ಪ್ರಮಥಗಣಗಳು, ಗಣಪತಿ ಇವರೆಲ್ಲರೂ ಶಿವನನ್ನು ಸೇವಿಸುತ್ತಿದ್ದರು. ಅಲ್ಲದೇ ನಾನೂ ಸಹ (ನಂದಿ) ಶಿವನನ್ನು ಸೇವಿಸುತ್ತಿದ್ದೆನು. ॥೩೯॥

ಆ ಪರಶಿವನ ಹಿಂಭಾಗದಲ್ಲಿ ಆನೆ, ಗರುಡ, ಮೂಷಕ, ನವಿಲು, ಹಂಸ ಮುಂತಾದ ವಾಹನಗಳನ್ನೇರಿ ಇಂದ್ರ ವಿಷ್ಣುವೇ ಮುಂತಾದ ದೇವತೆಗಳು ಶಿವನನ್ನು ಹಿಂಬಾಲಿಸಿ ಬರುತ್ತಿದ್ದರು. ಶಿವನ ಮುಂಭಾಗದಲ್ಲಿ ರಜತಾದ್ರಿಯಂತೆ ಶ್ವೇತವರ್ಣದ ಕಾಂತಿಯಿಂದ ಕಂಗೊಳಿಸುತ್ತಿದ್ದ ನಂದಿಯು ನಿಂತಿದ್ದನು. ಅಲ್ಲದೇ ದೇವಿಯು ವಾಹನವಾದ ಸಿಂಹವನ್ನೇರಿ ಶಿವನ ಮುಂಭಾಗದಲ್ಲಿ ನಿಂತಿದ್ದಳು. ॥೪೦॥

ಶಿವನ ಪಾರ್ಶ್ವದಲ್ಲಿ, ಕೆಲವು ಪ್ರಮಥ ಗಣಗಳು, ಶಿವನಿಗೆ ಚಾಮರಗಳನ್ನು ಬೀಸುತ್ತಿದ್ದರು. ಇನ್ನು ಕೆಲವು ಗಣಗಳು, ಛತ್ರ ಚಾಮರಾದಿಗಳನ್ನು ಧರಿಸಿ, ಅವನ ಪಾರ್ಶ್ವದಲ್ಲಿ ನಿಂತಿದ್ದರು. ಶಿವನು, ಕೈಯಲ್ಲಿ, ಪರಶು, ಜಿಂಕೆಯಮರಿ, ಇವುಗಳನ್ನು ಧರಿಸಿದ್ದನು. ಈ ರೀತಿಯಲ್ಲಿ, ಪರಶಿವನು ಸೋಮೇಶ್ವರಲಿಂಗದಿಂದ ಆವಿರ್ಭವಿಸಿ ಮುಂದೆ ನಿಂತನು. ॥೪೧॥

ಸೋಮೇಶ್ವರಲಿಂಗದಿಂದ ಈರೀತಿ ಆವಿರ್ಭವಿಸಿದ, ಅಷ್ಟಮೂರ್ತಿ

ತುಷ್ಟಾವ ಪ್ರಾಂಜಲಿರ್ಧೀರಸ್ತಂ ಸಾಂಬಂ ಪರಮೇಶ್ವರಂ ॥೪೩॥

ನಮಸ್ತೇ ಮಹಾದೇವ ವಿಶ್ವಾಧಿಕೇಶ
ನಮಸ್ತೇ ಮಹೇಶಾನ ಲೋಕೇಶ ಶಂಭೋ ।
ನಮಸ್ತೇ ಗಣಾಧೀಶ ವೃಂದಾರವಂದ್ಯ
ನಮಸ್ತೇ ಹರಿಬ್ರಹ್ಮಮೃಗ್ಯಾಂಘ್ರಿಮೌಲೇ ॥೪೪॥

ನಮಸ್ತೇ ಮಹೋಕ್ಷೈಕವಾಹಿನ್ಪ್ರಸನ್ನಂ
ಸದಾಪಾಂಗಸಂಗಾಚ್ಛಯಾಜಾದ್ಯತುಷ್ಟ್ಯಾ ।
ನಮಸ್ತೇ ತ್ವಮೀಶಾನವಿಶ್ವೈಕವಂದ್ಯ
ಕ್ಷಯಾರ್ತಿರ್ವಿನಾಶಾಶು ಮಾಂ ತಾರಯಾದ್ಯ ॥೪೫॥

---

ಯಾದ ಪರಮೇಶ್ವರನನ್ನು ನೋಡಿ ಚಂದ್ರನು, ಅತ್ಯಂತ ಸಂತೋಷಗೊಂಡವನಾಗಿ ಭಕ್ತಿಯಿಂದ ನಮಸ್ಕರಿಸಿ, ॥೪೨॥

ಅಂಜಲಿಬದ್ಧನಾಗಿ ನಿಂತು, ಉಮಾಸಹಿತನಾದ ಪರಮೇಶ್ವರನನ್ನು ಹೀಗೆಂದು ಸ್ತುತಿಸಿದನು. ॥೪೩॥

" ಓ, ಮಹಾದೇವನೇ, ಜಗತ್ಪ್ರಭುವೇ, ಲೋಕೇಶನೇ, ಶಂಭುವೇ, ನಿನಗೆ ನಮಸ್ಕರಿಸುವೆನು. ಓ, ಗಣನಾಥನೇ, ದೇವತೆಗಳಿಗೂ ಪೂಜ್ಯನೇ ! ನಿನ್ನನ್ನು ವಂದಿಸುವೆನು. ದೇವನೇ ! ಬ್ರಹ್ಮ, ವಿಷ್ಣ್ವಾದಿ ದೇವತೆಗಳಿಗೂ ನೀನು ದುರ್ಲಭನು. ನಿನ್ನ ಪಾದಗಳನ್ನು ಬ್ರಹ್ಮ ವಿಷ್ಣುಗಳು ಅನ್ವೇಷಿಸುತ್ತಿರುವರಲ್ಲವೇ, ನಿನ್ನ ಮಹಿಮೆಯನ್ನು ಏನೆಂದು ಹೇಳಲಿ ! ॥೪೪॥

ಓ ವೃಷಭಾರೂಢನೇ ! ನಿನ್ನನ್ನು ವಂದಿಸುವೆನು ! ನಿನ್ನನ್ನೇ ಮರೆಹೊಕ್ಕಿರುವ ನನ್ನನ್ನು ನಿನ್ನ ಕರುಣಾಕಟಾಕ್ಷಗಳಿಗೆ ಪಾತ್ರನನ್ನಾಗಿಮಾಡು. ಜಗತ್ಪ್ರಭುವಾದ ನೀನು, ಈ ಲೋಕದಲ್ಲಿರುವ ಸಕಲ ಚರಾಚರ ಪ್ರಾಣಿಗಳಿಗೂ ವಂದ್ಯನಾಗಿರುವೆ. ನಿನ್ನನ್ನು ವಂದಿಸುವೆನು. ನನಗೆ ಪ್ರಾಪ್ತವಾಗಿರುವ ಈ ಕ್ಷಯರೋಗವನ್ನು ಶೀಘ್ರವಾಗಿ ನಾಶಗೊಳಿಸಿ ನನ್ನನ್ನು ಉದ್ಧರಿಸು. ॥೪೫॥

ನಮಸ್ತೇ ಭಿಷಕ್ಛ್ರೇಷ್ಠ ಭೈಷಜ್ಯಚಿಂತಾಂ
ವಹಸ್ವಾದ್ಯ ಮಾಮದ್ಯ ಯಕ್ಷ್ಮಾದಿಯುಕ್ತಂ ।
ವಿಮುಕ್ತಂ ಕುರುಷ್ವಾದ್ಯ ಪಾಪೌಘಜಾಲೈಃ
ನಮಸ್ತೇಽಸ್ತು ಶಂಭೋ ಪ್ರಸೀದ ಪ್ರಸೀದ ॥೪೬॥

ಇತಿ ಸಂಪ್ರಾರ್ಥಿತೋ ದೇವಃ ಸೋಮರಾಜ್ಞಾಥ ಸಂಸ್ತುತಃ ।
ದಯಾದ್ರ್ರದೃಷ್ಟ್ಯಾ ಸಂವೀಕ್ಷ್ಯ ಸಮಾಲಂಭ್ಯ ಚ ಪಾಣಿನಾ ॥೪೭॥

ಪುನಃ ಪುಷ್ಟಿಂ ತಸ್ಯ ಗಾತ್ರೇ ಅಮೃತೈಃ ಪೂರಯತ್ತದಾ ।
ತಮಾಹ ವಿನಯೋಪೇತೋ ಸೋಮಂ ಸಾಂಬಸ್ತಥಾ ಮುದಾ ॥೪೮॥

॥ ಈಶ್ವರ ಉವಾಚ ॥

ದಕ್ಷಶಾಪವಶಾತ್ಸೋಮ ಕ್ಷಯೇಽಪಾರ್ತಿಂಪರಾಂ ಗತಃ ।
ಪುನರಾಪ್ಯಾಯಿತಶ್ಚಾಸಿ ಮಯಾ ತ್ವಂ ಸುರಸತ್ತಮ ॥೪೯॥

---

ಓ ವೈದ್ಯಶ್ರೇಷ್ಠನೇ! ನಿನ್ನನ್ನು ವಂದಿಸುವೆನು. ಕ್ಷಯರೋಗದಿಂದ ಪೀಡಿತನಾದ, ನನಗೆ ಯೋಗ್ಯವಾದ, ಔಷಧೋಪಚಾರವನ್ನು ಮಾಡಿ, ನನ್ನನ್ನು ಪಾಪರಾಶಿಗಳಿಂದ ಮುಕ್ತನನ್ನಾಗಿ ಮಾಡು. ಓ, ಶಂಭುವೇ! ನಿನಗೆ ನಮಸ್ಕಾರವು, ಪ್ರಸನ್ನನಾಗು." ॥೪೬॥

ಈ ಪ್ರಕಾರವಾಗಿ ಚಂದ್ರನು ಶಿವನನ್ನು ಸ್ತುತಿಸಿ ಮೊರೆಯಿಡಲು, ಆಗ ದಯಾಶಾಲಿಯಾದ ಪರಶಿವ ಕೃಪಾಪೂರಿತನಾದ ದೃಷ್ಟಿಯಿಂದ ಅವನ ಕಡೆ ನೋಡಿ, ತನ್ನ ಕೈಗಳಿಂದ ಅವನ ಶರೀರವನ್ನು ತಡವರಿಸಿ, ನಷ್ಟವಾದ ಅಮೃತಕಲೆಗಳನ್ನು ದಯಪಾಲಿಸಿ, ಹಿಂದಿನಂತೆ ಅವನ ಶರೀರವನ್ನು ದೃಢವಾಗುವಂತೆ ಮಾಡಿದನು. ಬಳಿಕ ಅಂಬಾಸಹಿತನಾದ ಶಿವನು ಚಂದ್ರನನ್ನು ಕುರಿತು ಸಂತೋಷದಿಂದ ಹೀಗೆಂದನು. ॥೪೭-೪೮॥

"ಎಲೈ ಸುರಶ್ರೇಷ್ಠನಾದ ಚಂದ್ರನೇ, ಈ ಹಿಂದೆ ನೀನು ದಕ್ಷನ ಶಾಪಕ್ಕೆ ಗುರಿಯಾಗಿ ಕ್ಷಯರೋಗದಿಂದ ಪೀಡಿತನಾಗಿದ್ದೆ. ಈಗ ಪುನಃ ನನ್ನ ಅಮೃತಕಲೆಗಳನ್ನು ನಿನಗೆ ದಯಪಾಲಿಸಿ ಪ್ರಾಪ್ತವಾಗಿರುವ ರೋಗವನ್ನು ಹೋಗಲಾಡಿಸಿ ಸುಖವನ್ನುಂಟುಮಾಡಿರುವೆನು. ॥೪೯॥

ದೇವಾನಾಮನ್ನಭೂತಸ್ತ್ವಮಮೃತಾಂಶುಃ ಕಿಲಾಪುರಾ ।
ತಚ್ಛಾಪಂ ಮಾನಯಸ್ವಾದ್ಯ ಮಾಸಾರ್ಧಂ ಕ್ಷೀಣಮಂಡಲಃ ॥೫೦॥

ದೇವಾನಾಮುಪಭೋಜ್ಯೋಽಸಿ ದೇವಾಶ್ಚಾಪ್ಯಾಯಯಂತ್ಯಪಿ ।
ಪುನಸ್ತ್ವಮೋಷಧೀಶಾನಂ ಪಕ್ಷಾರ್ಧಂ ಮದ್ವರಾತ್ಸ್ಮರ ॥೫೧॥

ಸಂಪೂರ್ಣಕಲಯಾ ನಿತ್ಯಂ ವರ್ಧಮಾನೋ ದಿನೇ ದಿನೇ ।
ಭವಿತಾ ಚಾರುರೂಪೇಣ ಮಮ ಮೌಳಿಕೃತಾಸ್ಪದಃ ॥೫೨॥

ಅಷ್ಟಮಿಮಾಸಾಮಿಸೋಮಾಂಕೋ ಭವಿತಾಹಂ ಸದಾ ಶಶಿನ್ ।
ಚಂದ್ರಚೂಡ ಇತಿ ಖ್ಯಾತಃ ಸಂಸ್ತುತಃ ಸುರಸತ್ತಮೈಃ ॥೫೩॥

ತ್ವಯಾ ಚ ಪೂಜಿತಂ ಲಿಂಗಂ ಸೋಮನಾಥಾಹ್ವಯಂ ಶುಭಂ ।
ಯೇ ಪಶ್ಯಂತಿ ನರಾ ಭಕ್ತ್ಯಾ ತೇ ಸದಾ ಗಣಪಾ ಮಮ ॥೫೪॥

ಈ ಹಿಂದೆ ಅಮೃತಮಯವಾದ ಕಿರಣಗಳಿಂದ ಕೂಡಿದ್ದ ನೀನು ದೇವತೆಗಳಿಗೆ ಆಹಾರವಾಗಿದ್ದೆ. ಆದುದರಿಂದ ಇನ್ನು ಮುಂದೆ ತಿಂಗಳಿನ ಅರ್ಧಭಾಗಪರಿಮಿತವಾದ (ಹದಿನೈದು ದಿವಸಗಳು) ಕಾಲ ಕ್ಷಯಪೀಡಿತನಾಗಿ ದೇವತೆಗಳಿಗೆ ಆಹಾರವಾಗು. ಇದರಿಂದ ದಕ್ಷನ ಶಾಪವನ್ನೂ ಸಫಲಗೊಳಿಸಿದಂತಾಗುವುದು. ದೇವತೆಗಳೂ ಸಹ ನಿನ್ನ ಅಮೃತಕಿರಣಗಳನ್ನು ಪಾನಮಾಡಿ ಸುಖಿಗಳಾಗಲಿ. ಬಳಿಕ ಉಳಿದ ಅರ್ಧಮಾಸಪರಿಮಿತವಾದ ಕಾಲದಲ್ಲಿ ಓಷಧೀಶನಾದ ನೀನು ಪ್ರತಿದಿನವೂ ಬರುಬರುತ್ತಾ ಅಭಿವೃದ್ಧಿಯನ್ನು ಹೊಂದುತ್ತಾ ಶುಕ್ಲಪಕ್ಷದ ಅಂತ್ಯದಲ್ಲಿ ನಿನ್ನ ಸಂಪೂರ್ಣವಾದ ಅಮೃತಕಲೆಗಳನ್ನು ಪಡೆದು ಮನೋಹರವಾದ ದೇಹಕಾಂತಿಯಿಂದ ಶೋಭಿಸುವೆ. ॥೫೦-೫೧-೫೨॥

ಎಲೈ ಶಶಿಯೇ, ಪ್ರತಿಪಕ್ಷದ ಅಷ್ಟಮಿಯ ದಿನ ನಾನು ಅರ್ಧಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿ ಚಂದ್ರಶೇಖರನೆಂಬ ಹೆಸರಿನಿಂದ ಪ್ರಸಿದ್ಧನಾಗಿ ದೇವತೆಗಳಿಂದ ಸ್ತುತಿಸಲ್ಪಡುವೆನು.

ನೀನು ಆರಾಧಿಸಿದ ಸೋಮನಾಥೇಶ್ವರವೆಂಬ ಈ ಶಿವಲಿಂಗವನ್ನು ಯಾರು ಭಕ್ತಿಯಿಂದ ಸಂದರ್ಶಿಸುವರೋ ಅವರು ನನ್ನ ಪ್ರಮಥಗಣಗಳಾಗಿ ಪರಿಗಣಿಸಲ್ಪಡುವರು. ॥೫೪॥

ಸೋಮನಾಥಂ ಸಕೃದ್ದೃಷ್ಟ್ವಾ ಮುಚ್ಯತೇ ಭವಬಂಧನಾತ್ ।
ಪಯೋಷ್ಣ್ಯಾಂ ಯೇ ಸಕೃತ್ಸ್ನಾತ್ವಾ ದೃಷ್ಟ್ವಾ ಸೋಮೇಶ್ವರಂ ನರಾಃ ॥೫೫॥

ಸಂತರ್ಪ್ಯ ಚ ಪಿತೄನ್ಭಕ್ತ್ಯಾ ವಸಂತಿ ಶಿವಮಂದಿರೇ ।
ಪೌಷ್ಯಾಂ ಮಾಘ್ಯಾಮಥಾಷ್ಟಮ್ಯಾಂ ಯೋ ಬಿಲ್ವೈಃ ಸೋಮನಾಥಕಂ ॥೫೬॥

ಸಮರ್ಚಯನ್ಸ ಮುಕ್ತೋ ಹಿ ನಾತ್ರ ಕಾರ್ಯಾ ವಿಚಾರಣಾ ।
ಇತಿ ದತ್ವಾ ವರಂ ತಸ್ಮೈ ತದಾ ಶಂಭುಸ್ತಿರೋದಧೇ ॥೫೭॥

ತಸ್ಮಿನ್ಲಿಂಗೇ ತದಾವಿಷ್ಟಃ ಶಿಪಿವಿಷ್ಟೋಽಂಬಿಕಾಸಖಃ ।
ತಸ್ಮಾತ್ತ್ವಮಪಿ ಭಕ್ತ್ಯಾದ್ಯ ಸೋಮೇಶಂ ಪೂಜ್ಯ ಭಕ್ತಿತಃ ॥೫೮॥

ಲಭಸೇ ಚೇಪ್ಸಿತಾನ್ಕಾಮಾನ್ಕಾಮಾರಿ ಕೃಪಯಾ ನೃಪ ॥೫೯॥

---

ಸೋಮನಾಥಲಿಂಗವನ್ನು ಒಂದೇ ಒಂದುಬಾರಿ ಸಂದರ್ಶಿಸಿದರೂ ಸಹ ಅವನು ಸಂಸಾರಪಾಶದಿಂದ ಬಿಡುಗಡೆಯನ್ನು ಹೊಂದುವನು. ಯಾವ ಮನುಜರು ಈ ಪಯೋಷ್ಣೀನದಿಯಲ್ಲಿ ಸ್ನಾನವನ್ನಾಚರಿಸಿ ಪಿತೃತರ್ಪಣವನ್ನು ನೆರವೇರಿಸಿ ಸೋಮನಾಥಲಿಂಗವನ್ನು ಸಂದರ್ಶಿಸುವರೋ, ಅವರು ಅಂತ್ಯದಲ್ಲಿ ಶಿವಾಲಯವನ್ನು ಪಡೆದು ಅಲ್ಲಿ ಬಹುಕಾಲದವರೆಗೆ ಸುಖದಿಂದ ವಾಸಿಸುವರು. ॥೫೫॥

ಪ್ರತಿ ಸಂವತ್ಸರದ ಪುಷ್ಯಮಾಸದಲ್ಲಿಯೂ, ಮಾಘಮಾಸದಲ್ಲಿಯೂ ಮತ್ತು ಪ್ರತಿಪಕ್ಷದ ಅಷ್ಟಮೀ ತಿಥಿಯಲ್ಲಿಯೂ ಯಾವನು ಈ ಸೋಮನಾಥನೆಂಬ ಲಿಂಗವನ್ನು ಬಿಲ್ವಪತ್ರೆಗಳಿಂದ ಅರ್ಚಿಸುವನೋ, ಅವನು ನಿಜವಾಗಿಯೂ ಮುಕ್ತಿಯನ್ನು ಹೊಂದುವನು. ಈ ವಿಷಯದಲ್ಲಿ ಸಂಶಯಪಡಬೇಕಾದುದಿಲ್ಲ." ॥೫೬॥

ಈ ರೀತಿಯಲ್ಲಿ ಶಿವನು ಚಂದ್ರನಿಗೆ ವರವನ್ನು ದಯಪಾಲಿಸಿ ಬಳಿಕ ತಿರೋಹಿತನಾದನು. ॥೫೭॥

ಆಗ ಅಲ್ಲಿಂದ ಅಂತರ್ಧಾನನಾದ ಶಿವನು ಸೋಮೇಶ್ವರಲಿಂಗದಲ್ಲಿ ಐಕ್ಯವನ್ನು ಹೊಂದಿದನು. ಎಲೈ ರಾಜೇಂದ್ರನೇ, ಆದುದರಿಂದ ನೀನು ಸಹ ಭಕ್ತಿಯಿಂದ ಸೋಮೇಶ್ವರಲಿಂಗವನ್ನು ಪೂಜಿಸಿ, ಈಶ್ವರನ ಅನುಗ್ರಹದಿಂದ ನಿನ್ನ ಇಷ್ಟಾರ್ಥಗಳನ್ನು ಹೊಂದುವೆ. ॥೫೮-೫೯॥

|| ಸೂತ ಉವಾಚ ||

ಇತಿ ನಂದೀ ನೃಪಶ್ರೇಷ್ಠಮನುಜ್ಞಾಪ್ಯ ನೃಪೋತ್ತಮಂ ।
ಸೋಮನಾಥಂ ಬಿಲ್ವಪತ್ರೈಃ ಪಯೋಷ್ಣೀಸರಿದಂಭಸಾ ||೬೦||

ಅಭಿಷಿಚ್ಯಾಥ ರುದ್ರೇಣ ಪೂಜಾಂತೇ ಗಣಪೈರ್ವೃತಃ ।
ತುಷ್ಟಾವ ದೇವಮಭ್ಯರ್ಚ್ಯ ಶೃಣುಧ್ವಂ ದ್ವಿಜಸತ್ತಮಾಃ ||೬೧||

|| ನಂದಿಕೇಶ್ವರ ಉವಾಚ ||

ಕುಂಡಲೀಶ್ವರಕೃತ ಕುಂಡಲ ಶಂಭೋ
ಖಂಡಿತಾಖಿಲಸುರದ್ರುಮಷಂಡ ।
ಬ್ರಹ್ಮಮುಂಡಕಲಿತಾಮಲಮಾಲ
ಸ್ಥೂಲಲಿಂಗಗಣಮಂಡಲಸಂಸ್ಥ ||೬೨||

ನವಚಂದ್ರಾಭರಣೋತ್ತಮಾಂಗ ಗಂಗಾ
ಕಲಿತಾಲಕಭೂಧರೋರುಮಾಲ ।
ಧೃತಹಾಲಾಹಲಕಂಠಮೂಲಬಾಹು
ಸ್ಫುರದುತ್ತಪ್ತಶಿಲಾವಿಧೂತಶೂಲ ||೬೩||

---

ಬಳಿಕ ಸೂತನು ಮುನಿಗಳನ್ನು ಕುರಿತು ಹೀಗೆಂದನು — ಎಲೈ ದ್ವಿಜೋತ್ತಮರೇ, ನಂದಿಯು, ರಾಜನಿಗೆ ಹೀಗೆಂದು ಅನುಜ್ಞೆಯನ್ನಿತ್ತು, ರುದ್ರಮಂತ್ರವನ್ನು ಪಠಿಸುತ್ತಾ ಪಯೋಷ್ಣೀನದಿಯ ನೀರಿನಿಂದ ಸೋಮನಾಥಲಿಂಗವನ್ನು ಅಭಿಷೇಕಿಸಿ ಬಿಲ್ವಪತ್ರೆಗಳಿಂದ ಅರ್ಚಿಸಿ, ಬಳಿಕ ಪ್ರಮಥಗಣಗಳಿಂದೊಡಗೂಡಿ ಶಿವನನ್ನು ಹೀಗೆ ಸ್ತುತಿಸಿದನು. ಅವನು ಸ್ತುತಿಸಿದ ರೀತಿಯನ್ನು ಹೇಳುವೆನು ಕೇಳಿರಿ! ||೬೦-೬೧||

" ಓ ನಾಗಭೂಷನೇ, ದೇವತೆಗಳನ್ನು ನಾಶಗೊಳಿಸಿದ ಅಸುರ ವಿಧ್ವಂಸಕನೇ, ಬ್ರಹ್ಮಕಪಾಲದ ಮಾಲಿಕೆಗಳನ್ನು ಕಂಠದಲ್ಲಿ ಧರಿಸಿರುವವನೇ, ಸ್ಥೂಲವಾದ ಲಿಂಗಗಳ ಆಕಾರದಿಂದ ಗೋಚರಿಸಿರುವವನೇ, ನಿನ್ನನ್ನು ವಂದಿಸುವೆನು. ||೬೨||

ಆಗತಾನೆ ಉದಯಿಸಿದ ಅರ್ಧ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವವನೇ, ದೇವಗಂಗೆಯನ್ನು ಜಟೆಯಲ್ಲಿ ನಿಲ್ಲಿಸಿರುವವನೇ, ಕೈಲಾಸಪರ್ವತವಾಸಿಯೇ,

ಅಲಿಂಗಲಿಂಗಂ ಶಶಿಲಿಂಗಸಂಸ್ಥಂ
ಆಕಾಶಲಿಂಗಂ ಜಗದೇಕಲಿಂಗಂ ।
ಹೃತ್ಕೋಶಜಾಕಾಶ ವಿಕಾಸಲಿಂಗಂ
ಸುಖೈಕಲಿಂಗಂ ಪ್ರಣಮಾಮಿ ನಿತ್ಯಂ ॥೬೪॥

ಇತ್ಥಂ ಸಂಸ್ತುತ್ಯ ನಂದೀಶೋ ಕೈಲಾಸಂ ಗಣೈರ್ಯಯೌ ।
ಗಣೇಂದ್ರಾಸ್ತುಷ್ಟುವುಃ ಶಂಭುಂ ಸೋಮನಾಥಂ ಮುದಾ ತದಾ॥೬೫॥

ಯತಃ ಸೋಮವಾರವ್ರತೇ ತೇಽದ್ಯನಿಷ್ಠಾ
ವಸಿಷ್ಠಾದ್ವಿಶಿಷ್ಟಾಸ್ತ್ವತಸ್ತ್ವತ್ಪದಾಬ್ಜೇ ।
ಮಹಾಭಸ್ಮರುದ್ರಾಕ್ಷಮಾಲಾತನೂಷು
ತ್ವದೀಯಾಂಗಚಿಹ್ನೇ ನಿವೇಶ್ಯೋರುಪಾಪೈಃ ॥೬೬॥

ವಿಮುಕ್ತಾತ್ಮರಾಮೋ ಬಿಭೀಮೋಽದ್ಯ ಶಂಭೋ ॥೬೭॥

ನೀಲಕಂಠನೇ, ಪ್ರಕಾಶಮಾನವಾದ ಬಾಹುಗಳಲ್ಲಿ ಶೈಲಗಳನ್ನೇ ಭೇದಿಸುವ ಶೂಲವನ್ನು ಹಿಡಿದಿರುವವನೇ, ನಿನಗೆ ನಮಸ್ಕಾರವು. ನಮ್ಮನ್ನು ಉದ್ಧರಿಸು. ॥೬೩॥

ಶಿವನೇ ! ನೀನು ಲಿಂಗರೂಪಿಯಲ್ಲದಿದ್ದರೂ, ಲಿಂಗಾಕಾರದಿಂದ ತೋರುತ್ತಿರುವೆ ಮತ್ತು ಈ ಸೋಮೇಶ್ವರಲಿಂಗದಲ್ಲಿ ನೆಲಸಿರುವೆ. ಆಕಾಶದಂತೆ ವ್ಯಾಪಕನಾಗಿಯೂ, ಜಗತ್ತಿನಲ್ಲಿಯೇ, ಮುಖ್ಯವಾಗಿ ಈ ಸೋಮೇಶ್ವರಲಿಂಗರೂಪದಿಂದಿರುವವನೂ, ಯೋಗಿಗಳ ಹಾರ್ದಾಕಾಶದಲ್ಲಿ ಅಭಿವ್ಯಕ್ತನಾಗುವವನೂ, ಸುಖೈಕಸ್ವರೂಪನೂ, ಆದ ನಿನ್ನನ್ನು ನಿತ್ಯವೂ ವಂದಿಸುವೆನು.' ॥೬೪॥

ನಂದಿಕೇಶ್ವರನು ಶಿವನನ್ನು ಹೀಗೆಂದು ಸ್ತುತಿಸಿ, ತನ್ನ ಗಣಗಳೊಂದಿಗೆ ಕೈಲಾಸಕ್ಕೆ ತೆರಳಿದನು. ಆಗ ಪ್ರಮಥಗಣಗಳು, ಶಿವನನ್ನು ಮತ್ತೆ ಹೀಗೆ ಸ್ತುತಿಸಿದುವು ॥೬೫॥

“ ಮಹೇಶ್ವರನೇ, ನಾವು ಸೋಮವಾರವ್ರತವನ್ನು ಭಕ್ತಿಯಿಂದ ನೆರವೇರಿಸಿದೆವು. ಆದರಿಂದ ಮಹರ್ಷಿಯಾದ ವಸಿಷ್ಠರಿಗಿಂತಲೂ ನಾವು ಮಹಿಮೆಯಲ್ಲಿ ಅಧಿಕರೆನಿಸಿರುವೆವು. ಸದಾ ನಿನ್ನ ಪಾದಕಮಲವನ್ನು ಭಜಿಸುತ್ತಾ ಭಸ್ಮರುದ್ರಾಕ್ಷಮಾಲಾಭೂಷಿತರಾಗಿ, ನಿನ್ನ ಅಂಗಚಿಹ್ನೆಗಳ ಧಾರಣೆಯಿಂದ ಪಾಪಮುಕ್ತರೆನಿಸಿ ಆನಂದ

ಇತ್ಥಂ ಸ್ತುತ್ವಾ ಗಣಾ ಯಾತಾ ನಂದಿಕೇಶೇನ ಸಾದರಂ ।
ಸ ರಾಜಾ ವಿಸ್ಮಿತಶ್ಚಾಸೀಚ್ಛಾಂಭವೈಸ್ತತ್ಕಥಾರಸೈಃ ॥೬೮॥

ಚಕ್ಷುಃಶ್ರೋತ್ರವಿಭೂಷಣಸ್ಯ ಸುಮಹಾಲಿಂಗಾರ್ಚನೇ ಸಕ್ತಧೀ-
ರ್ನ್ಯಸ್ತಾಪಾರಭುವೋ ಭರಾದಿವಿಷಯಪ್ರೀತಿಸ್ತದಾ ವೈ ನೃಪಃ ।
ಕಾಮಾದಿ ಪ್ರಭವಾರಿಷಟ್ಕಕಲುಷೈಃ ಕಲ್ಮೀಕೃತಾಂತಸ್ಸ್ಫುರ-
ದ್ಧ್ಯಾನಜಬೋಧಶಿವಪ್ರಸಾದಜನಿತಾನಂದೇನ ವಿಜ್ಞಾನಭಾಕ್ ॥೬೯॥

ಭೂಮಾನಂದೈಕಭೂಮಾ ರವಿಶಶಿಹುತಭುಗ್ಧಾಮಸೀಮಾಹಮೀಶೇ
ತಸ್ಮಿನ್ಲಿಂಗೇಽಹಮಾದ್ಯೇ ಶತಮುಖಮುಖಗೈರ್ದೇವವೃಂದೈಕಪೂಜ್ಯಃ ।
ಸ್ತೋತ್ರಸ್ತೋಮೈರನೇಕೈರ್ನಿಖಿಲಮುನಿಕೃತೈರ್ಹೋಮಧೂಮಾದಿ
ಮಾರ್ಗೈಃ
ರಜ್ಞೈಃ ಸೋಮಂ ಭವಾನಿ ಶ್ರುತಿಶಿಖರವರೈಃ ಸ್ತುತ್ಯಮಾಶಾಸ್ಯಮಾದಿಂ॥೭೦॥

---

ದಿಂದ ವಿಹರಿಸುವೆವು. ಯಾವ ಜನನ ಮರಣಾದಿಗಳಿಗೂ ನಾವು ಹೆದರತಕ್ಕವ ರಾಗಿಲ್ಲ." ॥೬೬-೬೭॥

ಹೀಗೆಂದು ಸ್ತುತಿಸಿ, ಆ ಗಣಗಳು, ನಂದಿಕೇಶ್ವರನೊಂದಿಗೆ ಶಿವಲೋಕಕ್ಕೆ ತೆರಳಿದವು. ಆಗ ಆ ರಾಜನು, ಶಿವಕಥಾಮೃತವನ್ನು ಪಾನಮಾಡುವುದರಲ್ಲಾಸಕ್ತ ರಾದ, ಆ ಈಶ್ವರ ಭಕ್ತರನ್ನು ನೋಡಿ, ಅಚ್ಚರಿಗೊಂಡನು. ॥೬೮॥

ತರುವಾಯ ಈಶ್ವರನು ತನ್ನ ಪ್ರೇಯಸಿಯಾದ ಗಿರಿಜೆಯನ್ನು ಕುರಿತು ಹೀಗೆಂದನು.—ಎಲೌ ದೇವಿಯೇ! ಈ ರೀತಿಯಲ್ಲಿ ಆ ರಾಜನು, ಸರ್ಪಭೂಷಣ ನಾದ ನನ್ನ ಲಿಂಗವನ್ನು ಅರ್ಚಿಸುವುದರಲ್ಲಿಯೇ ಆಸಕ್ತನಾಗಿ, ತನ್ನ ರಾಜ್ಯಭಾರ ವನ್ನು ಮಂತ್ರಿಗಳಲ್ಲಿರಿಸಿ, ಶಿವಧ್ಯಾನದ ಮಹಿಮೆಯಿಂದುಂಟಾದ ನಿರ್ಮಲವಾದ ಜ್ಞಾನದಿಂದ, ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ವಿಧ್ವಂಸಗೊಳಿಸಿ, ಈಶ್ವರಾನು ಗ್ರಹದಿಂದುಂಟಾದ ಅಪಾರವಾದ ಆನಂದವನ್ನನುಭವಿಸುವುದರಲ್ಲಿ ಆಸಕ್ತನಾದನು. ॥೬೯॥

ಭವಾನಿಯೇ, ನಾನು ಅಪಾರವಾದ ನಿತ್ಯಾನಂದಸ್ವರೂಪನಾಗಿರುವೆನು. ಸೂರ್ಯ, ಚಂದ್ರ, ಅಗ್ನಿ ಇವರ ತೇಜಸ್ಸು ನನ್ನ ಒಂದು ಅಂಶವಾಗಿರುವುದು. ಆ ಸೋಮೇಶ್ವರಲಿಂಗದಲ್ಲಿ ನೆಲೆಸಿರುವ ನನ್ನನ್ನು ಇಂದ್ರನೇ ಮೊದಲಾಗಿ ದೇವತೆಗಳು

**ಸೋಮೇಶಾಖ್ಯೇ ಗಣೇಂದ್ರೈರ್ಮುನಿವು ತು ಪರತಮ್ಯೈಶ್ಚಾಂಬಯಾ ಚಾದ್ರಿ
ಜಾನೇ ॥೭೦॥**

**ಇತಿ ಶ್ರೀ ಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ನಂದಿಕೇಶ ಬೃಹದ್ಬಲ
ಸಂವಾದೇ ಸೋಮನಾಥ ಮಹಿಮಾವರ್ಣನಂ
ನಾಮ ಷೋಡಶೋಽಧ್ಯಾಯಃ**

---

ಬಗೆಬಗೆಯಾದ ಸ್ತೋತ್ರಗಳಿಂದ ಸ್ತುತಿಸುವರು. ಮುನಿಗಳು ಯಜ್ಞಯಾಗಾದಿ ಕರ್ಮಗಳಿಂದ ನನ್ನನ್ನು ತೃಪ್ತಿಗೊಳಿಸುವರು. ನನ್ನ ಪ್ರಮಥಗಳು ಸೋಮೇಶ್ವರ ಲಿಂಗದಲ್ಲಿ ವೇದಾಂತವೇದ್ಯನಾದ ನನ್ನನ್ನು ಸದಾ ಪೂಜಿಸುವರು. ॥೭೦-೭೧॥

ಇಲ್ಲಿಗೆ ಶ್ರೀ ಶಿವರಹಸ್ಯದ ಐದನೆಯ ಅಂಶದಲ್ಲಿ ನಂದಿಕೇಶ ಮತ್ತು ಬೃಹದ್ಬಲರಾಜ
ಇವರ ನಡುವೆ ನಡೆದ ಸಂಭಾಷಣೆಯಲ್ಲಿ ಸೋಮನಾಥಲಿಂಗದ ಮಹಿಮೆಯ
ವರ್ಣನೆಯಿಂದೊಳಗೊಂಡ ಹದಿನಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಸಪ್ತದಶೋಽಧ್ಯಾಯಃ

|| ಈಶ್ವರ ಉವಾಚ ||

ಸ ರಾಜಾ ಪುನರೀಶಾನಂ ಸೋಮನಾಥಾಖ್ಯಮೀಶ್ವರಂ ।
ಪೂಜಯಾಮಾಸ ದೇವೇಶಿ ಭಕ್ತ್ಯಾ ಚಾನನ್ಯಯಾ ತದಾ ||೧||

|| ಋಷಯ ಊಚುಃ ||

ಕಥಂ ತಸ್ಯ ತದಾ ಸೂತ! ಸೋಮನಾಥೋ ಮಹೇಶ್ವರಃ ।
ಪ್ರಸನ್ನಃ ಪಾರ್ವತೀನಾಥೋ ನಿಶಾನಾಥನಮಚ್ಛಿರಾಃ ||೨||

ತದ್ವದ ಸ್ವಾನುಪೂರ್ವ್ಯೇಣ ನೈವ ತೃಪ್ಯಾಮಹೇ ವಯಂ ।
ಭಗನೇತ್ರಘ್ನಕಥಯಾ ಪಾವಿತಾಸ್ಸ್ಮ ತ್ವಯಾದ್ಯ ಹಿ ||೩||

## ಹದಿನೇಳನೆಯ ಅಧ್ಯಾಯ

ಎಲೌ! ಗೌರಿಯೇ! ಬಳಿಕ ಆ ರಾಜನು ಸ್ಥಿರಭಕ್ತಿಯಿಂದ ಪುನಃ ಸೋಮನಾಥನೆಂದು ಪ್ರಸಿದ್ಧನಾದ ಈಶ್ವರಲಿಂಗವನ್ನು ಪೂಜಿಸಿದನು. ಎಂದು ಈಶ್ವರನು ಪಾರ್ವತಿಗೆ ಹೇಳಿದ್ದನ್ನು ಸೂತರು ಋಷಿಗಳಿಗೆ ತಿಳಿಸಲು, ಆಗ ಋಷಿಗಳು, ||೧||

"ಎಲೈ! ಸೂತಮಹಾಋಷಿಯೇ! ಆ ಪಾರ್ವತಿಯ ಪ್ರಿಯನೂ, ಚಂದ್ರಮೌಳಿಯೂ ಆದ ಸೋಮನಾಥನೆಂಬ ಶಂಕರನು ಹೇಗೆ ಅವನಿಗೆ ಪ್ರಸನ್ನನಾದನು? ||೨||

ಶಂಕರನ ಆನುಪೂರ್ವೀಸಹಿತವಾಗಿ ಆ ವಿಚಾರವನ್ನು ಪುನಃ ಹೇಳು. ನಮಗೆ

ಭವಾಖ್ಯದಾವದಗ್ಧಾನಾಂ ಶಾಮನೇ ಜಲದೋ ಭವಾನ್ ।
ಮಹೇಶ್ವರಕಥಾಧಾರಾಸುಧಾಶೀಕರವಿಗ್ರಹಾನ್ ॥೪॥

ಕುರುಷ್ವ ತ್ವಂ ಮುನಿಶ್ರೇಷ್ಠ ಕೃಪಾಪಾತ್ರಾ ವಯಂ ಹಿ ತೇ ॥೫॥

॥ ಈಶ್ವರ ಉವಾಚ ॥

ಇತಿ ಪೃಷ್ಟೋ ಮುನೀಂದ್ರೈಸ್ತೈಃ ಸೂತಸ್ತಚ್ಚರಿತಂ ಪುನಃ ।
ಪ್ರಾಂಜಲಿರ್ವಿನಯೇನಾಹ ಪ್ರಣಿಧಾಯ ಮನಃ ಶಿವೇ ॥೬॥

ಸ ರಾಜಾ ಶಾಂಭವೈಃ ಸಾರ್ಧಂ ಶಿವಾರಾಧನತತ್ಪರಃ ।
ಪಂಚಾಗ್ನಿಮಧ್ಯನಿರತಃ ತತಃ ಸೂರ್ಯಗಭಸ್ತಿಭಿಃ ॥೭॥

ಮಾಸಮೇಕಂ ಫಲಾಹಾರೋ ಮಾಸಂ ಪರ್ಣಾಶನೋಽಭವತ್
ಮಾಸಂ ಕಂದಾಶನೋ ರಾಜಾ ಮಾಸಂ ಚೈವ ಜಲಾಶನಃ ॥೮॥

ಇನ್ನೂ ತೃಪ್ತಿಯಾಗಲಿಲ್ಲ. ಈಗ ನೀನು ಹೇಳಿದ ಭಗನೇತ್ರಭಂಗದ ಕಥೆಯನ್ನು ಹೇಳಿ ನಾವೆಲ್ಲರೂ ಪವಿತ್ರರಾದೆವು. (೩)

ಪೂಜ್ಯನೇ! ನೀನು ಸಂಸಾರವೆಂಬ ದಾವಾಗ್ನಿಯನ್ನು ನಿವಾರಿಸಲು ಮೋಡದ ಹಾಗೆ ಇರುತ್ತೀಯೆ. ನಮ್ಮನ್ನೆಲ್ಲಾ ಶ್ರೀಮಹೇಶ್ವರನ ಅಮೃತರೂಪವಾದ ಕಥಾಧಾರೆಯಿಂದ ಪ್ಲಾವಿತರಾಗುವಂತೆಮಾಡು. ನೀನು ನಮ್ಮಲ್ಲಿ ದಯೆಯನ್ನು ತೋರಿಸಬೇಕು" ಎಂದು ಋಷಿಗಳು ಸೂತರೊಡನೆ ವಿಜ್ಞಾಪಿಸಿಕೊಂಡರು. (೪-೫)

ಹೀಗೆ ಆ ಮುನಿಗಳೆಲ್ಲರೂ ಕೇಳಲು ಸೂತಮಹಾಮುನಿಯು ವಿನಯದಿಂದ ಶಂಕರನಿಗೆ ತಲೆಬಾಗಿ ಮತ್ತು ಆತನನ್ನು ಧ್ಯಾನಿಸಿ ಮಹೇಶ್ವರನ ಚರಿತ್ರೆಯನ್ನು ಹೇಳತೊಡಗಿದನು. (೬)

ಅನಂತರ ಶಂಕರಪೂಜಾಸಕ್ತನಾದ ಆ ರಾಜನು ಈಶ್ವರಭಕ್ತರೊಡಗೂಡಿ ತಪಸ್ಸನ್ನು ಪ್ರಾರಂಭಿಸಿದನು. ಪಂಚಾಗ್ನಿ ಮಧ್ಯೆ ತಪಸ್ಸಿಗಾರಂಭಿಸಿದನು. (ನಾಲ್ಕು ಅಗ್ನಿಯನಿಟ್ಟು ಮಧ್ಯೇ ತಾನು ನಿಂತು ಮೇಲೆ ಸೂರ್ಯನ ಬಿಸಿಲನ್ನು ನೋಡುತ್ತಾ ತಪಸ್ಸನ್ನು ಆಚರಿಸುವುದಕ್ಕೆ ಪಂಚಾಗ್ನಿ ತಪಸ್ಸೆಂದು ಹೆಸರು.) ಆ ಕಾಲದಲ್ಲಿ ಒಂದು ತಿಂಗಳು ಹಣ್ಣುಗಳನ್ನೂ ಮತ್ತೆ ಒಂದು ತಿಂಗಳು ಎಲೆಗಳನ್ನೂ ಭಕ್ಷಿಸುತ್ತಾ

ಮಾಸಂ ಯವಾಗುಭಕ್ಷೀ ಸ್ಯಾತ್ ಮಾಸಂ ಚಾನಿಲಭೋಜನಃ
ವರ್ಷಾಸ್ವಭ್ರಾವಕಾಶಶ್ಚ ಹೇಮಂತೇ ಜಲಸಂಶ್ರಯಃ ॥೯॥

ಗ್ರೀಷ್ಮೇ ಪಂಚಾಗ್ನಿಮಧ್ಯಸ್ಥೋ ರುದ್ರಮಾವರ್ತಯನ್ ಸ್ಥಿತಃ ।
ಏವಂ ತಪಸ್ಯತಸ್ತಸ್ಯ ಕಾಲಾತ್ ಪ್ರಾದುರ್ಬಭೌ ಹರಃ ॥೧೦॥

ಬ್ರಹ್ಮವಿಷ್ಣ್ವಾದಿಭಿರ್ದೇವೈಃ ತಸ್ಮೈ ತದ್ದರ್ಶನಂ ದದೌ ।
ನೀಲಕಂಠೋ ಜಟಾಮೌಳಿಃ ತ್ರಿಶೂಲವಿಲಸತ್ಕರಃ ॥೧೧॥

ಸುಧಾಧಾಮಕಲಾಮೌಳಿಃ ಫಾಲೋಜ್ಜ್ವಲಿತಲೋಚನಃ ।
ತ್ರಿಪುಂಡ್ರರೇಖಾವಿಲಸತ್ಫಲಭಾಗಮನೋಹರಃ ॥೧೨॥

ಫಣಿಕಂಕಣಶೋಭಾಢ್ಯವೃತ್ತಬಾಹುಚತುಷ್ಟಯಃ ।
ವಿಧಿಜಾತಮಹಾಮುಂಡಕಲ್ಪಿತಸ್ರಗ್ವಿಭೂಷಿತಃ ॥೧೩॥

---

ಅನಂತರ ಒಂದು ತಿಂಗಳು ಕಂದಮೂಲಫಲಗಳನ್ನು ತೆಗೆದುಕೊಂಡು, ಮುಂದಿನ ಒಂದು ತಿಂಗಳು ನೀರನ್ನು ಮಾತ್ರ ಸ್ವೀಕರಿಸುತ್ತಾ ತಪಸ್ಸುಮಾಡಿದನು. ॥೭-೮॥

ಮತ್ತೆ ಒಂದು ತಿಂಗಳು ಗಂಜಿಯನ್ನೂ, ಬಳಿಕ ಒಂದು ತಿಂಗಳು ಕೇವಲ ವಾಯುವನ್ನೇ ಸೇವಿಸುತ್ತಾ ತಪಸ್ಸುಮಾಡಿದನು. ಆ ರಾಜನು ಮಳೆಗಾಲದಲ್ಲಿ ಮಳೆಯಲ್ಲಿಯೂ, ಹೇಮಂತಋತುವಿನಲ್ಲಿ ನೀರಿನೊಳಗೂ, ಬೇಸಗೆಕಾಲದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿಯೂ ತಪಸ್ಸನ್ನಾಚರಿಸಿದನು. ಹೀಗೆ ತಪಸ್ಸುಮಾಡುತ್ತಿರುವ ಆತನಿಗೆ ಕೆಲವು ಕಾಲದ ಬಳಿಕ ಈಶ್ವರನು ಪ್ರತ್ಯಕ್ಷನಾದನು. ॥೯-೧೦॥

ಶಿವನು ಬ್ರಹ್ಮ, ವಿಷ್ಣು ಇವರೊಂದಿಗೆ ಕೂಡಿ ಆ ರಾಜನಿಗೆ ದರ್ಶನ ಕೊಟ್ಟನು. ಆತನು ನೀಲಕಂಠನಾಗಿದ್ದನು. ಜಟೆಯನ್ನು ತಲೆಯಲ್ಲಿ ಧರಿಸಿದ್ದನು. ಕೈಯಲ್ಲಿ ತ್ರಿಶೂಲವನ್ನು ಹಿಡಿದಿದ್ದನು. ಚಂದ್ರನನ್ನು ಶಿರಸ್ಸಿನಲ್ಲಿ ಅಲಂಕರಿಸಿಕೊಂಡಿದ್ದನು. ಮತ್ತು ಹಣೆಯಲ್ಲಿ ಅಗ್ನಿಮಯವಾದ ನೇತ್ರವು ಪ್ರಜ್ವಲಿಸುತ್ತಿತ್ತು. ಭಸ್ಮತ್ರಿಪುಂಡ್ರರೇಖೆಗಳು ಹಣೆಯಲ್ಲಿ ಕಂಗೊಳಿಸುತ್ತಿದ್ದುವು. ನಾಲ್ಕು ಬಾಹುಗಳಲ್ಲಿಯೂ ಹಾವುಗಳನ್ನು ಆಭರಣವಾಗಿ ಧರಿಸಿದ್ದನು. ಅಲ್ಲದೇ ಕತ್ತಿನಲ್ಲಿ ರುಂಡಮಾಲೆಯು ಕಂಗೊಳಿಸುತ್ತಿತ್ತು. ॥೧೧-೧೨-೧೩॥

ಮಹಾವೃಷಭಮಾರುಹ್ಯ ಛತ್ರಚಾಮರಪಾಣಿಭಿಃ ।
ನಂದಿಕೇಶಮಹಾಕಾಲಗಣವೃಂದೈರ್ನಿಷೇವಿತಃ ॥೧೪॥

ಉಮಾಸಂಶ್ಲಿಷ್ಟವಾಮಾಂಗೋ ರಾಜಾನಂ ಸಮುದೈಕ್ಷತ ।
ದೃಷ್ಟ್ವಾ ಸ ರಾಜಾ ದೇವೇಶಂ ಮಹೇಶಂ ಕರುಣಾಕರಂ ॥೧೫॥

ಪ್ರಣಮ್ಯ ಪರಯಾ ಭಕ್ತ್ಯಾ ಸಾನಂದಜಲಲೋಚನಃ ।
ತುಷ್ಟಾವ ಭಕ್ತಿಭರಿತಃ ಸಾಂಬಂ ಚಂದ್ರಾರ್ಧಶೇಖರಂ ॥೧೬॥

॥ ರಾಜಾ ಉವಾಚ ॥

ಸುರೇಶ್ವರಂ ನಿರೀಶ್ವರಂ ಗಿರೀಶ್ವರಂ ನಟೇಶ್ವರಂ
ಮಹೇಶ್ವರಂ ಮಹಸ್ಕರಂ ಶಿವಂ ಭಜೇಽದ್ಯ ಶಂಕರಂ ।
ಭುಜಂಗರಾಜಹಾರಕಂ ಕುಮಾರಮಾರಹಾರಕಂ
ಮಹಾವಿಷಾಗ್ನಿಧಾರಕಂ ಭಜೇ ವಿಮುಕ್ತಿದಾಯಕಂ ॥೧೭॥

ಆಗ ಶಂಕರನು ಮಹಾವೃಷಭದ ಮೇಲೆ ಮಂಡಿಸಿದ್ದನು. ನಂದಿಕೇಶ್ವರ, ಮಹಾಕಾಲ ಮುಂತಾದ ಗಣಗಳು ಛತ್ರಚಾಮರಗಳನ್ನು ಹಿಡಿದು ಆತನನ್ನು ಸುತ್ತುವರಿದಿದ್ದರು. ಹೀಗೆ ಪರಿವಾರಸಮೇತನಾಗಿ ಶಂಕರನು ತನ್ನ ಎಡಗಡೆ ಯಲ್ಲಿರುವ ಶ್ರೀಗೌರೀದೇವಿಯೊಂದಿಗೆ ರಾಜನಿಗೆ ಕಾಣಿಸಿಕೊಂಡನು. ಆ ರಾಜನಾ ದರೋ ದಯಾಳುವಾದ ಶಂಕರನನ್ನು ಕಂಡು ಭಕ್ತಿಯಿಂದ ನಮಸ್ಕಾರಮಾಡಿದನು. ಆನಂದಪಾರವಶ್ಯದಿಂದ ಅವನ ಕಣ್ಣುಗಳು ಆನಂದಾಶ್ರುಗಳಿಂದ ತುಂಬಿಹೋದವು. ಬಳಿಕ ಆತನು ಅಂಬಿಕೆಯೊಡಗೂಡಿದ ಚಂದ್ರಶೇಖರನನ್ನು ಈ ರೀತಿ ಸ್ತೋತ್ರ ಮಾಡಿದನು. ॥೧೪-೧೫-೧೬॥

"ದೇವತೆಗಳಿಗೆಲ್ಲಾ ಅಧೀಶ್ವರನೂ, ಸ್ವತಂತ್ರನೂ, ಗಿರೀಶ್ವರನೂ ಆದ ಶಂಕರನೇ, ನಿನ್ನನ್ನು ನಾನು ಭಜಿಸುತ್ತೇನೆ. ನೀನು ನಟರಾಜನು. ಎಲ್ಲಾ ಮಹತ್ತಾದ ವಸ್ತುವಿಗಿಂತಲೂ ಅಧಿಕನಾದವನು ನೀನು. ಭಕ್ತರಿಗೆ ಸದಾ ಶುಭವನ್ನು ಉಂಟುಮಾಡುವವನಾದುದರಿಂದ ನೀನು ಶಿವನೆನಿಸಿರುವೆ. ನೀನು ಭುಜಂಗವನ್ನೇ ಒಡವೆಯಹಾಗೆ ಧರಿಸಿರುವೆ. ಅಲ್ಲದೆ ಮನ್ಮಥನನ್ನು ನಾಶಗೊಳಿಸಿರುವೆ. ಶಂಕರನೇ, ನಿನ್ನನ್ನು ನಾನು ಸೇವಿಸುತ್ತೇನೆ. ಕಾಲಕೂಟವಿಷವನ್ನು ಪಾನಮಾಡಿದ ಮುಕ್ತಿ ಕಾರಕನಾದ ಮಹಾದೇವನೇ, ನಿನ್ನನ್ನೇ ನಾನು ಶರಣುಹೊಂದುವೆನು. ॥೧೭॥

ಸುರಾರಿವೃಂದದುಃಖದಂ ಶುಭಾಂಗದಂ ಶುಭಾಸ್ಪದಂ
ಸುಬುದ್ಧಕರ್ಮಮೋಕ್ಷದಂ ಭಜೇ ಶಿವಂ ವಿಮುಕ್ತಿದಂ ।
ವಿಧೀಂದ್ರವಿಷ್ಣುಸಂಮುಖಂ ಮಹೀಗಿರೀಂದ್ರಜಾಸಖಂ
ಧನೇಶಮುಖ್ಯಸತ್ಸಖಂ ಭಜೇ ಶಿವಂ ಮುದುನ್ಮುಖಂ ॥೧೮॥

ಉಮಾಪತಿಂ ಸಭಾಪತಿಂ ದಿಶಾಂ ಪತಿಂ ಪಶೋಃ ಪತಿಂ ।
ಗಿರಾಂ ಪತಿಂ ಪತೇಃ ಪತಿಂ ಭಜೇ ಶಿವಂ ದಿವಸ್ಪತಿಂ ॥೧೯॥

ದಂತಿತ್ವಕ್ಪರಿಧಾನಶಂಕರಮಹಾದೇವೇಶ ಮಾ ಮಾಜಹಿ
ಬಿಭ್ರನ್ಮೇರುಶರಾಸನಂ ಹರ ಶಿರೋಹಸ್ತೇನ ಜಿಘ್ರನ್ ಶಿರಃ ।
ತೂರ್ಣಂ ತರ್ಣಕಮೇತ್ಯ ಪ್ರಸ್ನುತಪಯಃಪೂರಾ ಯಥಾ ಗೌರ್ಭವೇತ್
ತದ್ವತ್ತ್ವಂ ಗಿರಿಜಾಮನೋಹರ ವಿಭೋ ಹೃತ್ಪದ್ಮಸಂಸ್ಥೋ ಭವ ॥೨೦॥

ಶಿವನು ರಾಕ್ಷಸರನೆಲ್ಲರನ್ನೂ ನಾಶಗೊಳಿಸಿದುದಲ್ಲದೇ ಶುಭವನ್ನು ಕೊಡುವವನೂ ಆಗಿದ್ದಾನೆ. ಒಳ್ಳೆಯ ತೋಳುಬಳೆಯನ್ನು ಧರಿಸಿ, ಕರ್ಮಮಾಡಿದವರಿಗೆ ಮೋಕ್ಷವನ್ನು ಕೊಡಲು ಮುಕ್ತಹಸ್ತನಾಗಿರುವನು. ವಿಷ್ಣು, ಬ್ರಹ್ಮ ಇವರೊಂದಿಗೆ ಕೂಡಿ, ಈ ನನ್ನ ಎದುರಿಗೆ ಪಾರ್ವತೀಸಹಿತನಾಗಿ ಪ್ರಸನ್ನನಾಗಿರುವ ಶಂಕರನನ್ನು ಸದಾ ಭಜಿಸುತ್ತೇನೆ. ॥೧೮॥

ಸಭಾಪತಿಯೂ, ದಿಕ್ಕುಗಳಿಗೆ ಒಡೆಯನೂ, ಪಶುಪತಿಯೂ ಆದ ಶಂಕರನೇ, ನೀನು ಸಮಸ್ತ ವಾಕ್ಕುಗಳಿಗೂ ಅಧಿಪತಿಯು. ಮಹಾದೇವನೇ, ಸ್ವರ್ಗಾಧಿಪತಿಯೆಂದರೆ ನೀನೇ ಅಲ್ಲವೆ. ಇಂತಹ ಉಮಾದೇವಿಯೊಡನೆ ಇರುವ ಶಂಕರನನ್ನು (ನಿನ್ನನ್ನು) ಭಜಿಸುತ್ತೇನೆ. ॥೧೯॥

ಶಂಕರನೇ, ನೀನು ಗಜಾಜಿನವನ್ನು ಧರಿಸಿರುವೆ. ದೇವೇಶ್ವರ, ನನ್ನ ಅಜ್ಞಾನವನ್ನು ಹರಣಮಾಡು. ನೀನು ತ್ರಿಪುರಸಂಹಾರ ಸಮಯದಲ್ಲಿ ಮೇರುವನ್ನು ಬಿಲ್ಲಾಗಿ ಹಿಡಿದಿದ್ದೆ. ಅಂತಹ ನೀನು, ಹಸುವು ತನ್ನ ಕರುವಿಗೆ ಕೆಚ್ಚಲಿನಿಂದ ಸುರಿಯುವ ಹಾಲನ್ನು ಕೊಟ್ಟು ಪೋಷಿಸುವಂತೆ ನನ್ನ ಹೃದಯಕಮಲದಲ್ಲಿ ಉಮಾಸಹಿತನಾಗಿ ನಿಂತು ಕೃಪಾದೃಷ್ಟಿಯಿಂದ ಆನಂದಪಡಿಸು. ॥೨೦॥

ತ್ವತ್ಪಾದಭ್ರಮರಸ್ಯ ಭಕ್ತಿಮಕರಂದಾಮೋದಾಪ್ತಯೇ ಕೇವಲಂ ॥೨೦॥

ವಿಷ್ಣುರ್ವೇದೇಷು ಗೀತಸ್ತ್ವಮಸಿ ಭಗವನ್ ಶಂಕರ ವಿಭೋ
ಸುಧನ್ವಾ ಚಾಸಿ ತ್ವಂ ತ್ವಮಸಿ ಭವ ವಿಶ್ವಾಧಿಕಭಿಷಕ್ ।
ತಮೀಶಾನಂ ತ್ವಕ್ಷ್ಯೇ ನಿಖಿಲಸುಮನಸ್ತ್ವಾಯ ಚ ಪರಂ
ನಮಾಮಿ ತ್ವತ್ಪಾದಂ ಶರಣದ ಶಿವಂ ಸ್ತೌಮಿ ವಚಸಾ ॥೨೧॥

ಉನ್ಮತ್ತಕುಂಭೀಕರಸಂನಿಭೋರು
ಕುಂಭೀನಸೋಲ್ಲಾಸವಿಲೋಲಹಾರಂ ।
ಕುಂಭೀಂದ್ರವಕ್ತ್ರೋಜ್ಜ್ವಲಪುತ್ರವರ್ಯಂ
ಭಜಾಮಿ ಕುಂಭೋದ್ಭವಪೂಜಿತಾಂಘ್ರಿಂ ॥೨೨॥

ಇತಿ ಸ್ತುತ್ವಾ ಮಹಾದೇವಂ ಪ್ರಣಮ್ಯ ಸ ನೃಪೋತ್ತಮಃ ।
ದೇವೀಂ ದೇವಾಂಕಭಾಗಸ್ಥಾಂ ತುಷ್ಟಾವ ವಿನತೋ ನೃಪಃ ॥೨೩॥

---

ನಿನ್ನ ಪಾದಕಮಲಗಳಲ್ಲಿ ಸಂಚರಿಸುವ ದುಂಬಿರೂಪನಾದ ನನಗೆ ಆನಂದವೇ ಮುಖ್ಯ ಫಲವಲ್ಲದೆ ಬೇರೆ ಯಾವುದೂ ಬೇಡ. ॥೨೦॥

ಶಂಕರನೇ, ನೀನು ವಿಷ್ಣುವನ್ನು ವ್ಯಾಪಿಸಿರುವೆಯೆಂದು ವೇದಗಳಲ್ಲಿಯೂ ಹೇಳಿದೆ. ನೀನು ಜಗತ್ತನ್ನು ರಕ್ಷಿಸಲು ಬಲಿಷ್ಠವಾದ ಧನುಸ್ಸನ್ನು ಧರಿಸಿರುವೆ. ಅಲ್ಲದೆ ಭವರೋಗಗ್ರಸ್ತನಾದವನಿಗೆ ವೈದ್ಯನೂ ಆಗಿರುವೆ. ಆದುದರಿಂದ ಸರ್ವಸಮರ್ಥನಾದ ನಿನ್ನನ್ನು ಸುಖಕ್ಕಾಗಿ ಆಶ್ರಯಿಸುತ್ತೇನೆ. ಶಂಭೋ, ನಿನ್ನ ಪಾದಗಳಿಗೆ ನಾನು ತಲೆಬಾಗುವೆನು. ॥೨೧॥

ಮದಿಸಿರುವ ಆನೆಯ ಸೊಂಡಲಿನಂತಿರುವ ತೊಡೆಗಳುಳ್ಳ ಶಂಕರನೇ, ನೀನು ನನ್ನನ್ನು ಕಾಪಾಡು. ನೀನು ಸುಂದರವಾದ ಸರ್ಪವನ್ನೇ ಪ್ರಕಾಶವಾದ ಹಾರವಾಗುಳ್ಳವನು. ಗಣಪತಿಯೇ ಮೊದಲಾದ ಮಕ್ಕಳುಳ್ಳವನು. ಅಗಸ್ತ್ಯಪೂಜಿತನು. ಇಂತಹ ನಿನ್ನನ್ನು ಸೇವಿಸುತ್ತೇನೆ.” ॥೨೨॥

ಹೀಗೆ ಆ ರಾಜನು ಶಂಕರನನ್ನು ಸ್ತೋತ್ರಮಾಡಿ ಬಳಿಕ ಮಹಾದೇವನ ಎಡಭಾಗದ ತೊಡೆಯಲ್ಲಿ ಮಂಡಿಸಿರುವ ಉಮಾದೇವಿಯನ್ನು ವಿನಯದಿಂದ ಸ್ತುತಿಸಲಾರಂಭಿಸಿದನು. ॥೨೩॥

॥ ರಾಜಾ ಉವಾಚ ॥

ವಿದ್ರುಮಾಧರನಿರಾಕೃತಬಿಂಬಾಂ
ವಕ್ತ್ರನಿರ್ಜಿತಸುಧಾಕರಬಿಂಬಾಂ
ಈಶ್ವರೀಮನಿಶಮಾತ್ತಕದಂಬಾಂ
ಮನ್ಮನಃ ಸ್ಪೃಶತು ತಾಂ ಜಗದಂಬಾಂ ॥೨೫॥

ಪಾದಯೋರವನತಾಮರದಾರಾನ್
ಭಕ್ತಲೋಕಕಲುಷೌಘವಿದಾರಾನ್ ।
ಭಾವಕಸ್ಯ ಹೃದಯಾಧಿವಿದಾರಾನ್
ಮನ್ಮನೋ ಭಜ ಜಗತ್ಪತಿದಾರಾನ್ ॥೨೬॥

ಪಾಪರಾಶಿಷು ಶಿಖಾಂ ಭೃಶಮೌರ್ವೀಂ
ಬಿಭ್ರತೀಮಧಿಕಚಂ ಸ್ಮರ ಮೌರ್ವೀಂ ।
ನೇತ್ರಪದ್ಮಜಘನೇಷು ಸುಗುರ್ವೀಂ
ಮನ್ಮನಃ ಸ್ಪೃಶತು ತಾಂ ಹೃದಿ ಗುರ್ವೀಂ ॥೨೭॥

---

ಹವಳದಂತಿರುವ ಕೆಳತುಟಿಯಿಂದ ತೊಂಡೆಹಣ್ಣಿನ ಕಾಂತಿಯನ್ನು ಧಿಕ್ಕರಿಸುತ್ತಲೂ, ಚಂದ್ರನಿಗಿಂತಲೂ ಅತಿಶಯ ಕಾಂತಿಯುಳ್ಳ ಮುಖದಿಂದ ಶೋಭಿಸುತ್ತಲೂ ಇರುವ ಜಗದಂಬಿಕೆಯನ್ನು ನನ್ನ ಮನಸ್ಸು ಸದಾ ಸ್ಮರಣೆಮಾಡಲಿ. ॥೨೫॥

ಸಮಸ್ತ ದೇವತಾಸ್ತ್ರೀಯರಿಂದ ಪೂಜಿತವಾದ ಪಾದದ್ವಂದ್ವವುಳ್ಳ ದೇವಿಯು ತನ್ನ ಭಕ್ತಕೋಟಿಯ ಪಾಪರಾಶಿಯನ್ನೆಲ್ಲಾ ನಿರ್ಮೂಲಗೊಳಿಸಬಲ್ಲವಳು. ಹಾಗೆಯೇ ತನ್ನನ್ನೇ ಸದಾ ಧ್ಯಾನಿಸುವವರ ಮನೋವ್ಯಥೆಯನ್ನೆಲ್ಲಾ ಪರಿಹರಿಸತಕ್ಕವಳು. ಅಂತಹ ಜಗತ್ಪತಿಯಾದ ಶಂಕರನ ಮಹಿಷಿಯನ್ನು ನನ್ನ ಮನಸ್ಸು ಸದಾ ಸೇವಿಸುತ್ತಿರಲಿ. ॥೨೬॥

ಸಮಸ್ತ ಪಾಪಗಳನ್ನು ನಾಶಮಾಡಲು ಸಿದ್ಧಳಾದ ಗೌರಿಯನ್ನು ನನ್ನ ಮನಸ್ಸು ನೆನೆಯಲಿ. ಆಕೆಯು ಶಿರೋಮಧ್ಯದಲ್ಲಿ ಮನ್ಮಥನ ಬಿಲ್ಲಿನ ಹಗ್ಗದಂತಿರುವ ಸೀಮಂತರೇಖೆಯನ್ನು ಧರಿಸಿದ್ದಾಳೆ. ಅಲ್ಲದೇ ವಿಶಾಲವಾದ ಕಣ್ಣು, ವಿಪುಲವಾದ ಜಘನಪ್ರದೇಶ ಇವುಗಳಿಂದ ಕಂಗೊಳಿಸುತ್ತಿರುವ ಆ ಪಾರ್ವತಿಯನ್ನು ನನ್ನ ಮನಸ್ಸು ಸದಾ ನೆನೆಯಲಿ. ॥೨೭॥

ಸ ರಾಜಾ ಗಿರಿಜಾಂ ಸ್ತುತ್ವಾ ಸಾದರಃ ಪ್ರಣನಾಮ ಚ ।
ಬದ್ಧಾಂಜಲಿಕರಸ್ತತ್ರ ದೇವದೇವಮುದೈಕ್ಷತ ॥೨೮॥

ತಸ್ಯ ತದ್ಭಾವಮಾಜ್ಞಾಯ ಭವೋ ಭವವಿನಾಶಕಃ ।
ವರೇಣ ಛಂದಯಾಮಾಸ ರಾಜಾನಂ ವಾಕ್ಸುಧಾರಸೈಃ ॥೨೯॥

॥ ಈಶ್ವರ ಉವಾಚ ॥

ಸ್ತುತ್ಯಾನಯಾ ನೃಪಶ್ರೇಷ್ಠ ತುಷ್ಟೋಽಸ್ಮಿ ಗಿರಿಕನ್ಯಯಾ ।
ಮಮ ಭಕ್ತ್ಯಾ ತ್ವಯಾ ತುಲ್ಯೋ ನಾಸ್ತಿ ಭೂಮಂಡಲೇಽಧುನಾ ॥೩೦॥

ಯೇ ಮಾಂ ತ್ವತ್ಕೃತಯಾ ಸ್ತುತ್ಯಾ ತೋಷ್ಯಂತಿ ಭುವಿ ಭಾವಿತಾಃ ।
ತೇಷಾಂ ಮುದೇಽಹಮಸ್ಮ್ಯತ್ರ ಭವಿತಾ ನಾತ್ರ ಸಂಶಯಃ ॥೩೦॥

ಕ್ಷ್ಮಾಮಂಡಲಾಖಂಡಲಸ್ತ್ವತ್ಪುತ್ರೋ ಭೂನ್ನೃಪೋತ್ತಮ ।
ಸ ನಾಮ್ನಾ ಭವಿತಾ ರಾಜನ್ನುತ್ತಮಃ ಸವಿದೂರಥಃ ॥೩೨॥

ಆ ರಾಜನು ಹೀಗೆ ಕೈಜೋಡಿಸಿಕೊಂಡು ಗಿರಿಜಾದೇವಿಯನ್ನು ಪ್ರಾರ್ಥಿಸಿ ನಮಸ್ಕರಿಸಿದನು. ಬಳಿಕ ಹಾಗೆಯೇ ಶಂಕರನನ್ನೂ ನೋಡುತ್ತಾ ನಿಂತನು. ॥೨೮॥

ಬಳಿಕ ಶಂಕರನು ಆತನ ಅಭಿಪ್ರಾಯವನ್ನು ತಿಳಿದು ಅಮೃತದಂತೆ ಮಧುರವಾದ ಮಾತುಗಳಿಂದ ಆತನನ್ನು ಆನಂದಿಸಿದನು. ಮತ್ತು ವರವನ್ನು ಕೇಳುವಂತೆ ಅಭಯವಿತ್ತನು. ॥೨೯॥

ಎಲೈ ದೊರೆಯೇ, ನಿನ್ನ ಸ್ತೋತ್ರದಿಂದ ನಾನೂ ಗೌರಿಯೂ ಸಂತೋಷಪಟ್ಟೆವು. ನನ್ನಲ್ಲಿ ಭಕ್ತಿಯನ್ನಿಟ್ಟಿರುವವರಲ್ಲಿ ನಿನಗೆ ಸಮಾನನಾದವನು ಈ ಭೂಮಿಯಲ್ಲಿ ಮತ್ತಾರೂ ಇಲ್ಲ. ॥೩೦॥

ನೀನು ರಚಿಸಿರುವ ಈ ಸ್ತೋತ್ರದಿಂದ ಯಾರು ನನ್ನನ್ನು ಹೊಗಳುವರೋ ಅವರು ನನಗೆ ಪ್ರಿಯರಾಗುವರು. ಈ ವಿಷಯದಲ್ಲಿ ಸಂದೇಹಬೇಡ. ಅವರನ್ನು ನಾನು ನಿನ್ನಂತೆ ತೃಪ್ತಿಪಡಿಸುವೆನು. ॥೩೧॥

ರಾಜನೇ! ನಿನಗೆ ವಿದೂರಥನೆಂಬ ಒಬ್ಬ ಮಗನು ಜನಿಸುವನು. ಆತನು ಸಮಸ್ತ ಭೂಮಿಗೂ ಇಂದ್ರನಂತೆ ಅಧಿಪತಿಯಾಗುವನು. ॥೩೨॥

ಸೋಽಪಿ ಮಾಂ ಸೋಮನಾಥಾಖ್ಯಂ ಸಮಾರಾಧ್ಯ ಗಣೋಽಭವೇತ್ ।
ಅಶ್ವಮೇಧಾದಿಭಿರ್ಯಜ್ಞೈಃ ಸ ಯಷ್ಟಾ ಚ ಭವಿಷ್ಯತಿ ॥೩೩॥

ತಸ್ಯ ತುಷ್ಟೋಽಹಮುತ್ಕೃಷ್ಟಸ್ತತ್ಕಷ್ಟಂ ನಾಶಯಾಮ್ಯಹಂ ।
ತಸ್ಯ ಪುತ್ರಶತಂ ಭೂಯಾತ್ ಮಹಾರಥಸಮಾಹ್ವಯಂ ॥೩೪॥

ತ್ವಂ ಚಾಂತೇ ಗಣಪಶ್ರೇಷ್ಠೋ ಭವಿಷ್ಯಸಿ ಮಮಾಗ್ರಣೀಃ ।
ಸೋಮನಾಥಮಿದಂ ಲಿಂಗಂ ಸೋಮರಾಜ್ಞಾ ಪ್ರಪೂಜಿತಂ ॥೩೫॥

ಯೇ ಪಶ್ಯಂತಿ ಸದಾ ಭಕ್ತ್ಯಾ ತೇಷಾಂ ಕಾಮಾನ್ ದದಾಮ್ಯಹಂ ।
ಸದಾರಸ್ತ್ವಂ ಚಿರಾಯಾದ್ಯ ಭುಕ್ತ್ವಾ ರಾಜ್ಯಮಕಂಟಕಂ ॥೩೬॥

ವಂಶಂ ಲೋಕೇ ಪ್ರತಿಷ್ಠಾಪ್ಯ ಯಾಸ್ಯಸ್ಯಂತೇ ಮಮಾಗ್ರತಃ ।
ಇತಿ ತಂ ಸಮನುಜ್ಞಾಪ್ಯ ದೇವ ದೇವೋ ಘೃಣಾನಿಧಿಃ ॥೩೭॥

ತಸ್ಮಿನ್ ಲಿಂಗವರೇ ಪುಣ್ಯೇ ಸೋಮನಾಥಾಹ್ವಯೇ ದ್ವಿಜಾಃ ।
ತಿರೋಧತ್ತ ಕ್ಷಣಾತ್ಸಾಂಬೋ ಭಕ್ತಸಂಸಾರಮೋಚಕಃ ॥೩೮॥

ಆ ನಿನ್ನ ಮಗನು ಸೋಮನಾಥನೆಂದು ಹೆಸರುಳ್ಳ ನನ್ನನ್ನು ವಿಶೇಷವಾಗಿ ಪೂಜಿಸುವನು. ಹಾಗೆಯೇ ಆತನು ನನ್ನ ಗಣನಾಥನಾಗಿ ಆಗುವನು. ಅಶ್ವಮೇಧಾದಿ ಅನೇಕ ಯಜ್ಞಗಳನ್ನು ಆತನು ನಡೆಯಿಸುವನು. ಆತನಿಗೆ ಪ್ರಸನ್ನನಾಗುವ ನಾನು ಆತನ ಕಷ್ಟಗಳನ್ನು ನಾಶಮಾಡುತ್ತೇನೆ. ಆ ವಿದೂರಥನಿಗೆ ಒಂದು ನೂರು ಮಕ್ಕಳು ಜನಿಸುವರು. ಅವರೆಲ್ಲಾ ಮಹಾರಥರೆಂದು ಹೆಸರು ಪಡೆಯುವರು. ॥೩೩-೩೪॥

ಎಲೈ ದೊರೆಯೇ, ಕೊನೆಗೆ ನೀನು ಮಾನುಷದೇಹವನ್ನು ಕಳೆದುಕೊಂಡು ನನ್ನ ಬಳಿ ಪ್ರಮಥಗಣಗಳಿಗೆಲ್ಲಾ ಶ್ರೇಷ್ಠನಾಗಿ ನಿಲ್ಲುವೆ. ಈ ಸೋಮನಾಥ ಲಿಂಗವನ್ನು ಸೋಮನಾಥನೆಂಬ ರಾಜನು ಹಿಂದೆ ಪೂಜಿಸಿದನು. ಯಾರು ಇದನ್ನು ಭಕ್ತಿಯಿಂದ ದರ್ಶನಮಾಡುವರೋ, ಅಥವಾ ಪೂಜೆಮಾಡುವರೋ ಅವರಿಗೆ ಬೇಕಾದುದನ್ನು ನೀಡುತ್ತೇನೆ. ನೀನು ಹೆಂಡತಿಯೊಡನೆ ನಿಷ್ಕಂಟಕವಾದ ಈ ರಾಜ್ಯವನ್ನು ಪಾಲಿಸು. ಬಳಿಕ ನಿನ್ನ ಕುಲಕ್ಕೆ ಕೀರ್ತಿಯನ್ನು ಗಳಿಸಿ ಕೊನೆಗೆ ನನ್ನ ಸಾಮೀಪ್ಯವನ್ನು ಹೊಂದುವೆ. ಎಂದು ಆ ಸೋಮನಾಥೇಶ್ವರನು ರಾಜನಿಗೆ ಅನುಗ್ರಹಿಸಿದನು. ಎಲೈ ಬ್ರಾಹ್ಮಣರೇ, ಬಳಿಕ ಭಕ್ತರನ್ನು ಸಂಸಾರಬಂಧದಿಂದ ಮುಕ್ತ

ಪಶ್ಯತಾಂ ಚೈವ ಸರ್ವೇಷಾಂ ಶಾಂಭವಾನಾಂ ನೃಪಸ್ಯ ಹಿ ।
ತತ್ಸ್ವಪ್ನಸದೃಶಂ ಸರ್ವಂ ದೃಷ್ಟ್ವಾ ರಾಜಾ ಚ ವಿಸ್ಮಿತಃ ॥೩೯॥

ಶಾಂಭವೈಃ ಸಂಸ್ತುತೋ ರಾಜಾ ಧನ್ಯಸ್ತ್ವಮಿತಿ ತತ್ರ ಹಿ ।
ಸಾಕ್ಷಾದ್ಯತಸ್ತ್ವಯಾ ದೃಷ್ಟಂ ಮಹೇಶ್ವರಪದಾಂಬುಜಂ ॥೪೦॥

ತವ ಭಾಗ್ಯಸ್ಯ ನೇಯತ್ತಾ ತ್ವಯಾ ಧನ್ಯತಮಾ ವಯಂ ।
ಇತ್ಥಂ ಸ್ತುತಸ್ತದಾ ರಾಜಾ ಶಾಂಭವಾನ್ ಪೂಜ್ಯ ಭಕ್ತಿತಃ ॥೪೧॥

ಸ್ವದಾರಾಮಾತ್ಯಸಹಿತೋ ನತ್ವಾ ಸೋಮೇಶ್ವರಂ ತದಾ ।
ಸೈನ್ಯಭಾರಸಮಾಯುಕ್ತೋ ರಥಂ ಕುಂಜರವಾಜಿಭಿಃ ॥೪೨॥

ಸ್ವದೇಶಾಯ ಯಯೌ ರಾಜಾ ಪ್ರಾಪ್ತಸರ್ವಮನೋರಥಃ ॥೪೩॥

॥ ಸೂತ ಉವಾಚ ॥

ತದುಕ್ತ್ಯೈಷ್ವಮಿದಂ ಕ್ಷೇತ್ರಂ ಧನ್ಯಂ ಸೋಮೇಶ್ವರಾಹ್ವಯಂ ।
ದೇವೈರ್ದೇವೇನ ಕಥಿತಂ ಪಯೋಷ್ಣೀತೀರಸಂಸ್ಥಿತಂ ॥೪೪॥

---

ರನ್ನಾಗಿ ಮಾಡಲು ಸಮರ್ಥನಾದ ಆ ಶಂಕರನು ಅಂಬಿಕೆಯೊಡನೆ ಅಲ್ಲಿಯೇ ಕಣ್ಣಿಗೆ ಕಾಣಿಸದಂತಾದನು. ||೩೫-೩೬-೩೭-೩೮||

ಬಳಿಕ ಅಲ್ಲಿ ನೆರೆದಿದ್ದ ಎಲ್ಲಾ ಈಶ್ವರಭಕ್ತರೂ ರಾಜನೂ ನೋಡುತ್ತಿರುವಾಗಲೇ ಶಂಕರನು ಅದೃಶ್ಯನಾದುದರಿಂದ ಎಲ್ಲಾ ವೃತ್ತಾಂತವೂ ಸ್ವಪ್ನದ ಹಾಗೆ ಅವರಿಗೆ ಭಾಸವಾಯಿತು. ಬಳಿಕ ರಾಜನು ಅದನ್ನು ಕಂಡು ಆಶ್ಚರ್ಯಗೊಂಡನು. ಮತ್ತು ಅಲ್ಲಿರುವ ಹರಭಕ್ತರು "ಎಲೈ ರಾಜನೇ, ನೀನು ಧನ್ಯನು. ಶ್ರೀಶಂಕರನನ್ನು ಪ್ರತ್ಯಕ್ಷಮಾಡಿಕೊಂಡವನು ನೀನು. ನಿನ್ನ ಪುಣ್ಯಕ್ಕೆ ಇಷ್ಟೆಂದು ಒಂದು ಪರಿಚ್ಛೇದಕ ಮಾನವೇ ಇಲ್ಲ. ನಿನ್ನ ಸಹವಾಸದಿಂದ ನಾವೆಲ್ಲರೂ ಕೃತಾರ್ಥರಾದೆವು." ಈ ಹೊಗಳಿಕೆಯಿಂದ ಮತ್ತೂ ತುಷ್ಟನಾದ ಆ ದೊರೆಯು ಅಲ್ಲಿದ್ದ ಶಾಂಭವರನ್ನೆಲ್ಲಾ ಪೂಜಿಸಿ, ತನ್ನ ಮಂತ್ರಿಗಳೊಡನೆಯೂ ಆನೆ, ಕುದುರೆ, ರಥ ಇವುಗಳನ್ನೂ ಕರೆದುಕೊಂಡು ತನ್ನ ರಾಜಧಾನಿಗೆ ತೆರಳಿದನು. ||೩೯-೪೦-೪೧-೪೨-೪೩||

ಆದುದರಿಂದ ಈ ಕ್ಷೇತ್ರವು ಅತ್ಯಂತ ಮಹಿಮೆಯುಳ್ಳದ್ದು. ಇದು ಅತ್ಯಂತ ಧನ್ಯವಾದ ಸ್ಥಳ. ಹಿಂದೆ ದೇವತೆಗಳು ಈ ಕ್ಷೇತ್ರವನ್ನು ಸೋಮೇಶ್ವರಕ್ಷೇತ್ರವೆಂದು

ದರ್ಶನಾತ್ಸರ್ವಕಾಮಾನಾಂ ಸಿದ್ಧಿಸ್ಸ್ಯಾಚ್ಛಂಕರಾಜ್ಞಯಾ ।
ಸೌರಾಷ್ಟ್ರಮೇತದ್ದೇಶಾನಾಂ ಪುಣ್ಯದೇಶೋಯಮುತ್ತಮಃ ॥೪೫॥

ಸೋಮನಾಥಾಖ್ಯಲಿಂಗೇನ ಪುನರ್ಭೂಯೋ ವಿರಾಜತೇ ।
ಸೋಮನಾಥಂ ಮಹಾದೇವಂ ಪ್ರದೋಷೇ ಯಸ್ತು ಪಶ್ಯತಿ ॥೪೬॥

ಬಿಲ್ವೀದಳಾದಿಭಿಃ ಪೂಜ್ಯ ಸ ಮೋಕ್ಷಮಧಿಗಚ್ಛತಿ ।
ಪಯೋಷ್ಣ್ಯಾಂ ಯಃ ಸಕೃತ್ ಸ್ನಾತ್ವಾ ಸೋಮನಾಥಂ ಪ್ರಣಮ್ಯ ಚ॥೪೭॥

ಸ ಮುಕ್ತಃ ಸರ್ವಪಾಪೇಭ್ಯೋ ಮೋದತೇ ದಿವಿ ದೇವವತ್
ಇಂದುಗ್ರಹೇ ಕುರುಕ್ಷೇತ್ರೇ ಯೋ ದದ್ಯಾದ್ಧೈ ಶತಂ ದ್ವಿಜೇ ॥೪೮॥

ಸಕೃದ್ದೃಷ್ಟ್ವಾ ಸೋಮನಾಥಂ ತತ್ಫಲಂ ಪ್ರಾಪ್ನುಯಾನ್ನರಃ ।
ಮಹಾಪಾತಾದಿವೇಳಾಸು ಅಯನೇ ವಿಷುವೇ ಸದಾ ॥೪೯॥

---

ಕರೆದರು. ಶ್ರೀಶಂಕರನ ಅನುಗ್ರಹದಿಂದ ಈ ಕ್ಷೇತ್ರವನ್ನು ದರ್ಶನಮಾಡುವುದರಿಂದಲೇ ಮನುಷ್ಯನು ಸಮಸ್ತ ಇಷ್ಟಾರ್ಥಗಳನ್ನು ಹೊಂದುವನು. ಈ ಕ್ಷೇತ್ರವು ಪಯೋಷ್ಣೀನದಿಯ ತೀರದಲ್ಲಿದೆ. ಈ ಸೌರಾಷ್ಟ್ರದೇಶವು ದೇಶಗಳಲ್ಲೆಲ್ಲಾ ಅತ್ಯಂತ ಪ್ರಸಿದ್ಧವಾದುದಾಗಿದೆ. ಉತ್ತಮವೂ ಎನಿಸಿದೆ. ॥೪೪-೪೫॥

ಈ ಸೌರಾಷ್ಟ್ರದೇಶವು ಸೋಮನಾಥಲಿಂಗದ ಸಾನ್ನಿಧ್ಯದಿಂದ ಮತ್ತು ಸುಂದರವಾಗಿ ಪ್ರಕಾಶಿಸುತ್ತದೆ. ಪ್ರದೋಷಕಾಲದಲ್ಲಿ ಯಾವನು ಬಿಲ್ವಪತ್ರೆ ಮೊದಲಾದವುಗಳಿಂದ ಮಹಾದೇವನಾದ ಸೋಮನಾಥೇಶ್ವರನನ್ನು ಪೂಜೆಮಾಡುವನೋ ಅವನು ಮೋಕ್ಷವನ್ನು ಹೊಂದುತ್ತಾನೆ. ಈ ಪಯೋಷ್ಣೀನದಿಯಲ್ಲಿ ಮಿಂದವನು ಸಮಸ್ತ ಪಾಪಗಳಿಂದಲೂ ಮುಕ್ತನಾಗಿ ಸ್ವರ್ಗದಲ್ಲಿ ದೇವತೆಯಂತೆ ವಿಹರಿಸುವನು. ಕುರುಕ್ಷೇತ್ರದಲ್ಲಿ ಚಂದ್ರಗ್ರಹಣಕಾಲದಲ್ಲಿ ಯಾವನು ಬ್ರಾಹ್ಮಣರಿಗೆ ನಾನಾವಿಧವಾದ ದಾನಮಾಡುವನೋ ಅದರ ಫಲವೆಲ್ಲಾ ಈ ಕ್ಷೇತ್ರದರ್ಶನದಿಂದಲೇ ಲಭಿಸುವುದು. ॥೪೬-೪೭-೪೮॥

ಮಹಾಪಾತ ಮೊದಲಾದ ಪುಣ್ಯಕಾಲಗಳಲ್ಲಿಯೂ ಮತ್ತು ಉತ್ತರಾಯಣ ದಕ್ಷಿಣಾಯಣಗಳಲ್ಲಿಯೂ, ಮೇಷ, ತುಲಾ ಸಂಕ್ರಾಂತಿಕಾಲಗಳಲ್ಲಿಯೂ ಪಂಚ

ಪರ್ವಕಾಲೇಷ್ವಥಾಷ್ಟಮ್ಯಾಂ ಯೋ ದೃಷ್ಟ್ವಾ ಪ್ರಣಮೇತ ಚ ।
ಸೋಮನಾಥಮಹಾಲಿಂಗಂ ಸ ವಸೇಚ್ಛಿವಲೋಕಗಃ ॥೫೦॥

ಸೋಮವಾರೇ ಸೋಮನಾಥಂ ರಾತ್ರೌ ಸಂಪೂಜ್ಯ ಭಕ್ತಿತಃ ।
ಬಿಲ್ವಪತ್ರೈಃ ಸಕೃದ್ಭಕ್ತ್ಯಾ ಸ ಜ್ಞಾನಂ ವಿಂದತೇ ಮಹತ್ ॥೫೧॥

ಸೋಽಪಿ ರಾಜಾಥ ಕಾಲೇನ ಪುತ್ರಂ ಭದ್ರಗುಣಾನ್ವಿತಂ ।
ಪ್ರಾಪ ನಾಮಾಪಿ ಚಕ್ರೇಽಥ ವಿದೂರಥ ಇತಿ ದ್ವಿಜಾಃ ॥೫೨॥

ಸೋಽಪಿ ಚಾಂತೇ ಶಿವಂ ಪ್ರಾಪ ಸದಾಢೋಽಥ ಬೃಹದ್ಬಲಂ ।
ಪಿತ್ರ್ಯಂ ರಾಜ್ಯಂ ತದಾ ಪ್ರಾಪ ವಿದೂರಥನೃಪಸ್ತದಾ ॥೫೩॥

ಸೋಮನಾಥಮಹಾಲಿಂಗೇ ತಸ್ಯಾಭೂದ್ಭಕ್ತಿರುತ್ತಮಾ ।
ಸೌರಾಷ್ಟ್ರಂ ಸಂಜಗಾಮಾಥ ಸಾಷ್ಟಾಂಗಸ್ಪೃಷ್ಟಭೂತಲಃ ॥೫೪॥

ಪರ್ವಗಳು ವಿಶೇಷವಾಗಿ ಅಷ್ಟಮೀತಿಥಿ ಇವುಗಳಲ್ಲಿ ಸೋಮೇಶ್ವರನ ದರ್ಶನ ಮಾಡಿದರೆ ಆತನು ತನ್ನ ದೇಹಾವಸಾನದಲ್ಲಿ ನಿಜವಾಗಿಯೂ ಶಿವಲೋಕವನ್ನು ಹೊಂದುವನು. ॥೪೯-೫೦॥

ಯಾವನು ಸೋಮವಾರ ರಾತ್ರಿ ಸೋಮೇಶ್ವರನನ್ನು ಬಿಲ್ವಪತ್ರೆಗಳಿಂದ ಒಂದುಸಲವಾದರೂ ಪೂಜಿಸುವನೋ, ಆತನು ದಿವ್ಯಜ್ಞಾನವನ್ನು ಹೊಂದುತ್ತಾನೆ. ಎಲೈ ಬ್ರಾಹ್ಮಣೋತ್ತಮರಿರಾ, ಆ ರಾಜನು ಬಳಿಕ ಕೆಲವು ಕಾಲದ ನಂತರ ಮಂಗಳಕರನಾದ ಮಗನನ್ನು ಹೊಂದಿದನು. ಆತನಿಗೆ ವಿದೂರಥನೆಂದು ಹೆಸರಿಟ್ಟನು. ॥೫೧-೫೨॥

ಆ ರಾಜನು ಕೊನೆಗೆ ಅನಂತ ಬಲದೊಡನೆ ಶಿವಸನ್ನಿಧಿಯನ್ನು ಸೇರಿದನು. ಬಳಿಕ ಆ ವಿದೂರಥನೆಂಬ ಅವನ ಮಗನು ತನ್ನ ತಂದೆಯ ರಾಜ್ಯಕ್ಕೆ ಅಧಿಪತಿಯಾದನು. ॥೫೩॥

ಆ ವಿದೂರಥ ರಾಜನಿಗೆ ಸೋಮನಾಥೇಶ್ವರನಲ್ಲಿ ವಿಶೇಷವಾಗಿ ಭಕ್ತಿಯಿತ್ತು. ಆತನು ಸೌರಾಷ್ಟ್ರದೇಶಕ್ಕೆ ಹೋಗಿ ಅಲ್ಲಿರುವ ಸೋಮನಾಥೇಶ್ವರನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಅತ್ಯಂತ ಭಕ್ತಿಯಿಂದ ಆ ರಾಜನು ಅನೇಕ ವಿಭವಗಳಿಂದ ಅತಿ ವಿಸ್ತಾರವಾಗಿ ಸೋಮನಾಥನನ್ನು ಪೂಜಿಸುತ್ತಾ ಅಲ್ಲಿಯೇ ನಿಂತನು.

ಸಂಪೂಜ್ಯ ಪರಯಾ ಭಕ್ತ್ಯಾ ನಾನಾವಿಭವವಿಸ್ತರೈಃ ।
ಉವಾಸ ರಾಜಾ ತತ್ರೈವ ಹೃಷ್ಟೋ ಧರ್ಮವಥಾಕರೋತ್ ॥೫೫॥

ಶೈವಾನ್ನೈವೇದ್ಯಕಾಶೀಭಿ ರ್ಭೋಜಯಾಮಾಸ ಕೋಟಿಶಃ ।
ಪಯೋಷ್ಣೀತೀರಬಂಧಂ ಚ ನಾನಾ ಸಂಸ್ಥಾನಮಂಡಪಾನ್ ॥೫೬॥

ಮಹಾರಥಂ ಮಹಾದೇವೇ ಮಂಟಿಪ್ರೋ ಧ್ಯಾನಗೋಚರಂ ।
ಪ್ರಾಕಾರಸಂಸ್ಥವೃಷಭಂ ಸಾಧು ಚಿತ್ರವಿಚಿತ್ರಿತಂ ॥೫೭॥

ಕಾರಯಾಮಾಸ ವಿಭವೈರ್ವಿಮಾನಂ ಛತ್ರಚಾಮರಂ ।
ಧೂಪದೀಪಾದಿ ಪಾತ್ರಾಣಿ ಸೌವರ್ಣಾನಿ ತದಾ ಕರೋತ್ ॥೫೮॥

ಶಿವಪೂಜಾಭಿವೃದ್ಧ್ಯರ್ಥಂ ದದೌ ಗ್ರಾಮಾನನೇಕಶಃ ।
ದ್ವಿಜಾನಾಂ ಶಾಂಭವಾನಾಂ ಹಿ ಗ್ರಾಮಾನ್ವಿಪ್ರಗ್ರಹೋಜ್ವಲಾನ್ ೫೯॥

ಕಾರಯಾಮಾಸ ನೃಪತಿರ್ಗೇಹೋಪಕರಣಾನ್ವಿತಾನ್ ।
ದದೌ ಸ ಶಾಂಭವಾನ್ ದೃಷ್ಟ್ವಾ ಸೋಮನಾಥಸ್ಯ ತುಷ್ಟಯೇ ॥೬೦॥

ಅತಿ ಸಂತುಷ್ಟನಾದ ಆ ದೊರೆಯು ಅನೇಕ ಶಂಕರಪೂಜಕರಿಗೆ ಅನ್ನದಾನಮಾಡಿದನು. ಪಯೋಷ್ಣೀನದಿಯ ತೀರದಲ್ಲಿ ದಿವ್ಯವಾದ ಮಂಟಪಗಳನ್ನು ಕಟ್ಟಿಸಿದನು. ||೫೪-೫೫-೫೬||

ಆ ವಿದೂರಥರಾಜನು ಮಹೇಶ್ವರನಿಗಾಗಿ ದಿವ್ಯರಥವನ್ನು ಕಟ್ಟಿಸಿದನಲ್ಲದೇ ಅನೇಕ ಗೋಪುರಗಳನ್ನೂ ನಿರ್ಮಿಸಿದನು. ಮತ್ತು ಆ ಸೋಮನಾಥೇಶ್ವರನಿಗೆ ಹೊರ ಪ್ರಾಕಾರಗಳನ್ನು ಹಾಕಿಸಿದನು. ಅವುಗಳೆಲ್ಲವೂ ಚಿತ್ರವಿಚಿತ್ರಗಳಾಗಿದ್ದುವು, ಹೊರ ಭಾಗದಲ್ಲಿ ಒಂದು ಬಸವ ವಿಗ್ರಹವನ್ನು ಸ್ಥಾಪಿಸಿದನು. ಒಂದು ವಿಮಾನವನ್ನೂ ಮತ್ತು ಛತ್ರಚಾಮರಾದಿಗಳನ್ನೂ ಮಾಡಿಸಿದನಲ್ಲದೇ, ಧೂಪ, ದೀಪ, ನೈವೇದ್ಯ ಪಾತ್ರೆಗಳನ್ನು ಬಂಗಾರದಿಂದ ಮಾಡಿಸಿ ದೇವರಿಗೆ ಸಮರ್ಪಿಸಿದನು. ||೫೭-೫೮||

ಮತ್ತು ಆ ವಿದೂರಥರಾಜನು ಶಿವಪೂಜೆಯನ್ನು ಅಭಿವೃದ್ಧಿಗೊಳಿಸುವುದಕ್ಕಾಗಿ ಅನೇಕ ಗ್ರಾಮಗಳನ್ನು ಶಾಂಭವರಾದ ದ್ವಿಜರಿಗೆ ದಾನವಾಗಿಬಿಟ್ಟನು. ಅಲ್ಲದೇ ಅಗ್ರಹಾರಗಳಿಂದ ರಂಜಿಸುವ ಊರುಗಳನ್ನು ಕಟ್ಟಿಸಿದನು. ಮತ್ತು ಗೃಹಗೃತ್ಯಕ್ಕೆ ಉಪಯುಕ್ತ ಸಾಮಗ್ರಿಗಳಿಂದ ತುಂಬಿದ ಆ ಊರುಗಳನ್ನೂ ಈಶ್ವರಾರಾಧಕರಿಗೆ

ಸ ಕೋಟಿಬಿಲ್ವಪತ್ರೈಶ್ಚ ಪೂಜಯಾಮಾಸ ಮಾಂ ಸದಾ ।
ಕೃಷ್ಣಗೋಘೃತದೀಪೈಶ್ಚ ದೀಪಯನ್ ಸ ಶಿವಾಲಯಂ ॥೬೧॥

ಧೂಪಧೂಮುಗನ್ಧೈರ್ಮಾಂ ಸಃ ಪೂಜಯಾಮಾಸ ಚಾಂಬಿಕೇ
ನೈವೇದ್ಯೈಶ್ಚ ಘೃತಾಪೂಪರಾಶಿಂ ಮಾಮುಪ್ಯನಿವೇದಯತ್ ॥೬೨॥

ಸ್ವಾದ್ವನ್ನರಾಶಿಭಿರ್ದೇವಿ ವಿದೂರಥಸಮಾಹ್ವಯಃ ।
ನಾಟ್ಯಕನ್ಯಾಃ ಸುಚಾರ್ವಂಗ್ಯಸ್ತೇನ ದತ್ತಾ ಮಹೇಶ್ವರಿ ॥೬೩॥

ವೇಣುವೀಣಾಮೃದಂಗಾಶ್ಚ ಶಂಖಕಾಹಲವಾದಕಾಃ ।
ಕಲ್ಪಿತಾಸ್ತೇನ ದೇವೇಶಿ ನಾದಿತಂ ಸ್ವಶಿವಾಲಯಂ ॥೬೪॥

ಸೋಮನಾಥೇ ಮಯಿ ತದಾ ತಸ್ಯ ಭಕ್ತಿಃ ಪರಾಽಭವತ್ ।
ತಯಾ ಭಕ್ತ್ಯಾ ಚಿರಂ ರಾಜ್ಯಂ ಭುಕ್ತ್ವಾ ಮಲ್ಲೋಕಮಾಗತಃ ॥೬೫॥

---

ದಾನಮಾಡಿದನು. ಇವೆಲ್ಲವನ್ನು ಸೋಮನಾಥೇಶ್ವರನ ಪ್ರೀತಿಗಾಗಿಯೇ ನಡೆಸಿದನು. ॥೫೯-೬೦॥

ಅಂಬಿಕೆಯೇ, ಆತನು ಒಂದು ಕೋಟಿ ಬಿಲ್ವಪತ್ರೆಗಳಿಂದ ನನ್ನನ್ನು ಅರ್ಚಿಸಿದನು. ಮತ್ತು ಕರಿಹಸುವಿನ ತುಪ್ಪವನ್ನು ಹಾಕಿಸಿ ಶಿವಾಲಯದಲ್ಲಿ ದೀಪವೊತ್ತಿಸಿದನು. ಆದರಿಂದ ಆ ಶಿವದೇವಾಲಯವೇ ಬೆಳಗಿತು. ಧೂಪ ಮತ್ತು ತುಪ್ಪದಿಂದಲೇ ಪಕ್ವಗಳಾದ ಕಜ್ಜಾಯಗಳನ್ನು ನಿವೇದಿಸಿ ಭಕ್ತಿಯಿಂದ ನನ್ನನ್ನು ಅರ್ಚಿಸಿದನು ॥೬೧-೬೨॥

ಕಾಂತೇ! ಮಹೇಶ್ವರಿ! ಆ ವಿದೂರಥರಾಜನೆಂಬ ಅರಸು ರುಚಿರುಚಿಯಾದ ಅನ್ನವನ್ನು ನೈವೇದ್ಯಮಾಡಿ. ಬಳಿಕ ನರ್ತನದಲ್ಲಿ ಪಟುಗಳಾದ ಕನ್ನಿಕೆಯರನ್ನು ನನಗರ್ಪಿಸಿದನು. ಅವರು ನಾಟ್ಯಮಾಡಿದರು. ಕೊಳಲು, ವೀಣೆ, ಮೃದಂಗ, ಕಹಳೆ, ಶಂಖ, ಇವೇ ಮೊದಲಾದ ವಾದ್ಯಗಳನ್ನು ಬಾರಿಸಿದರು. ಅವುಗಳ ಶಬ್ದಗಳಿಂದ ಆ ಶಿವದೇವಸ್ಥಾನವೆಲ್ಲಾ ಧ್ವನಿಸಿಗೊಂಡಿತು. ॥೬೩-೬೪॥

ಗೌರಿ! ಸೋಮನಾಥ ಸ್ವರೂಪಿಯಾದ ನನ್ನಲ್ಲಿ ಆತನಿಗೆ ಅತಿಯಾಗಿ ಭಕ್ತಿ ಉಂಟಾಯಿತು. ಆ ತೆರನಾದ ಭಕ್ತಿಯಿಂದ ಆತನು ಬಹುಕಾಲ ರಾಜ್ಯವನ್ನು ಆಳಿ, ಬಳಿಕ ನನ್ನ ಲೋಕವನ್ನು ಹೊಂದಿದನು. ॥೬೫॥

ತಸ್ಯ ಪುತ್ರಶತಂ ಚಾಸೀತ್ ಸರ್ವಂ ಮದ್ಭಕ್ತಿಭಾವಿತಂ ।
ಧನುಷ್ಮಂತಂ ಮಹಾಬಾಹುಂ ಪರವೀರ್ಯನಿಬರ್ಹಣಂ ॥೬೬॥

ಕ್ಷಯದ್ವೀರಪರಂ ಸರ್ವಂ ನಾನಾ ಶಸ್ತ್ರಾಸ್ತ್ರಮಂಡಲಂ
ತಸ್ಯ ಜ್ಯೇಷ್ಠಸುತಸ್ತ್ವಾಸೀತ್ ಮಹಾರಥ ಇತಿ ಶ್ರುತಃ ॥೬೭॥

ಸೋಽಪಿ ಸೋಮೇಶ್ವರೇ ಭಕ್ತಃ ಸೌರಾಷ್ಟ್ರೇ ಸೋಮವಚ್ಛಿವೇ ।
ಪಿತುಃ ಶತಗುಣಂ ತೇನ ಕೃತಾ ಮೇಽಪಚಿತಿಃ ಶಿವೇ ॥೬೮॥

ತಸ್ಮಿನ್ ಶಾಸತಿ ಭೂಲೋಕಂ ಶೈವಾ ಏವ ಸದಾ ಜನಾಃ ।
ಭಸ್ಮರುದ್ರಾಕ್ಷಹೀನಾಂಗಾನ್ ಶಾಸ್ತಿ ಭೂಪೋಯಮುತ್ತಮಃ ॥೬೯॥

ನಾರುದ್ರಾಕ್ಷಧೃಗತ್ರಾಸೀತ್ ನಾರುದ್ರಾಧ್ಯಾಯವರ್ಜಿತಃ ।
ಪಂಚಾಕ್ಷರವಿಹೀನಶ್ಚ ಶಿವಲಿಂಗಾರ್ಚನೋಜ್ಝಿತಃ ॥೭೦॥

---

ಆ ವಿಡೂರಥ ರಾಜನಿಗೆ ಒಂದು ನೂರು ಜನ ಮಕ್ಕಳಾದರು. ಅವರೆಲ್ಲರೂ ಧನುರ್ವಿದ್ಯೆಯಲ್ಲಿ ನಿಪುಣರಾದರು. ಮಹಾಬಲಶಾಲಿಗಳಾಗಿ ಶತ್ರುಗಳ ಶೌರ್ಯವನ್ನು ನಾಶಮಾಡತಕ್ಕವರಾದರು. ಅಲ್ಲದೇ ಹಗೆಗಳನ್ನು ನಾಶಗೊಳಿಸತಕ್ಕ ಅನೇಕ ವಿಧದ ಶಸ್ತ್ರಾಸ್ತ್ರಗಳನ್ನು ಹೊಂದಿದ್ದರು. ಅವರಲ್ಲಿ ಮಹಾರಥನೆಂಬುವವನು ಆ ರಾಜನಿಗೆ ಹಿರಿಯಮಗನು. ॥೬೬-೬೭॥

ಆ ಮಹಾರಥನೂ ಸಹ ಸೋಮೇಶ್ವರನಲ್ಲಿ ಹೆಚ್ಚು ಭಕ್ತಿಯನ್ನಿಟ್ಟಿದ್ದನು. ಸೌರಾಷ್ಟ್ರದೇಶವು ಅವನ ವಸತಿಯಾಗಿತ್ತು. ತನ್ನ ತಂದೆಗಿಂತಲೂ ನೂರರಷ್ಟು ಹೆಚ್ಚು ಪಾಲು ನನ್ನನ್ನು ಆತನು ಆರಾಧಿಸುತ್ತಿದ್ದನು. ಆತನು ಭೂಲೋಕವನ್ನು ಆಳುವಾಗ ಭಸ್ಮ, ರುದ್ರಾಕ್ಷ ಮೊದಲಾದ ಚಿಹ್ನೆಗಳನ್ನು ಧರಿಸದವರನ್ನು ದಂಡಿಸುತ್ತಿದ್ದನು. ॥೬೮-೬೯॥

ಆತನು ರಾಜ್ಯವಾಳುವಾಗ ರುದ್ರಾಕ್ಷಿಯನ್ನು ಧರಿಸದವನಿರಲಿಲ್ಲ. ಮತ್ತು ರುದ್ರಾಧ್ಯಾಯವನ್ನು ಪಾರಾಯಣ ಮಾಡದವನೂ ಕಾಣುತ್ತಿರಲಿಲ್ಲ. ಪಂಚಾಕ್ಷರ ಜಪಹೀನನೂ ಇರಲಿಲ್ಲ. ಶಿವಲಿಂಗಪೂಜೆ ಬಿಟ್ಟವನಂತೂ ಇರಲೇ ಇಲ್ಲ. ಪ್ರತಿಯೊಬ್ಬನೂ ಹಣೆಯಲ್ಲಿ ಭಸ್ಮವನ್ನು ಧರಿಸದೇ ಇರುತ್ತಿರಲಿಲ್ಲ. ಆತನಿಂದ ಸಮಸ್ತ

ನಾಭಸ್ಮೃಥಾಲಿಸ್ತತ್ರಾಸೀತ್ ತಸ್ಮಿನ್ ರಾಜನಿ ಶಾಸತಿ ।
ಸಮರ್ಯಾದಮಭೂತ್ತೇನ ಕ್ಷ್ಮಾತಲಂ ತೇನ ಸುಂದರಂ ॥೭೧॥

ಯಥಾ ವಿದ್ಯೋತತೇ ಭಾನುಃ ಸ್ವಾಂಶುಭಿರ್ನಾಶಯನ್ ತಮಃ ।
ತಥಾ ವೇದೋದಿತಾಚಾರೈರ್ಜಗತ್ತ್ರಾಸಮಪಾಕರೋತ್ ॥೭೨॥

ಈಶ್ವರ ಉವಾಚ ।

ಇತ್ಯೇತತ್ತೇ ಮಯಾ ಖ್ಯಾತಂ ತವಾದ್ಯೇದಂ ಕಥಾನಕಂ ।
ಸೋಮನಾಥಮುಪೇತಸ್ಯ ಶ್ರುತ್ವಾ ಪಾಪೈರ್ವಿಮುಚ್ಯತೇ ॥೭೩॥

ಯ ಏತತ್ಕಥಯೇನ್ನಿತ್ಯಂ ಸದಾ ಪರ್ವಣಿ ಪರ್ವಣಿ ।
ಬ್ರಾಹ್ಮಣೋ ನಿಯತಂ ದೇವಿ ಮುಕ್ತಿಮಂತೇ ಪ್ರಯಾತಿ ಚ ॥೭೪॥

ಶಂಭುಸ್ತ್ವೇನ ಶಿವಾಹಮಂಡಲಗತಂ ಸ್ವಾಂತಸ್ಥಹೃತ್ಪದ್ಮಗಂ ।
ಕೋಶಾತೀತಮನಂತಮವ್ಯಯಮಜಂ ಸ್ವಾತ್ಮಾನಮೇಕೋಽದ್ವಯಂ ।
ವಿಶ್ವಾತೀತಮನೇಕವಿಶ್ವಜನಕಂ ಗೌರ್ಯಾ ಸಮಾಲಿಂಗಿತಂ
ಧ್ಯಾತ್ವಾ ಶೋಕಕಶತ್ರೈರ್ವಿಮುಕ್ತಹೃದಯೋ ಸದ್ಯೋ ಭವತ್ಯಂಬಿಕೇ ॥೭೫॥

ಭೂಮಿಯೂ ಕೂಡ ಈ ಗೌರವಕ್ಕೆ ಪಾತ್ರವಾಗಿತ್ತು. ಮೇಲಿನ ಸಕಲ ಕಾರ್ಯಗಳೂ ಅಲ್ಲಿ ನಿಯಮ ಪೂರ್ವಕವಾಗಿದ್ದುವು. (೭೦-೭೧)

ಸೂರ್ಯನು ತನ್ನ ಕಿರಣಗಳಿಂದ ಕತ್ತಲೆಯನ್ನು ಓಡಿಸುತ್ತಾ ಪ್ರಕಾಶಿಸುವ ಹಾಗೆ, ಆ ರಾಜನು ವೇದೋಕ್ತವಾದ ಆಚಾರಗಳನ್ನು ನಡೆಸುತ್ತಾ ಪ್ರಪಂಚದ ಕಷ್ಟಗಳನ್ನು ನೀಗಿಸುತ್ತಿದ್ದನು. (೭೨)

ದೇವಿ! ಈ ರೀತಿಯಾಗಿ ಸೋಮೇಶ್ವರನ ಮಹಿಮಾ ರೂಪವಾದ ಕಥೆಯನ್ನು ನಿನಗೆ ಹೇಳಿದೆನು. ಇದನ್ನು ಯಾವ ಮನುಷ್ಯನು ಪ್ರತಿ ಪರ್ವತಿಥಿಗಳಲ್ಲಿಯೂ ಹೇಳುವನೋ, ಅಂತಹ ಬ್ರಾಹ್ಮಣನು ದೇಹತ್ಯಾಗಮಾಡಿದ ನಂತರ ನಿಶ್ಚಯವಾಗಿಯೂ ಸ್ಥಿರಮುಕ್ತಿಯನ್ನು ಹೊಂದುತ್ತಾನೆ. (೭೩-೭೪)

ಅಂಬಿಕೆಯೇ, ಮಂಗಳಕರನಾದ ಶಂಕರನು ಅನ್ನಮಯಾದಿ ಪಂಚಕೋಶಗಳಿಗಿಂತಲೂ ಹೊರಗೆ ಇರತಕ್ಕವನು. ಆತನಿಗೆ ಜನನವಿಲ್ಲ. ಭೂತ, ಭವಿಷ್ಯದ್ವರ್ತಮಾನಕಾಲಗಳಲ್ಲಿಯೂ ನಾಶವನ್ನು ಹೊಂದದೇ ಏಕರೂಪನಾಗಿ ಕಾಣುವನು.

ಇತಿ ಶ್ರೀಶಿವರಹಸ್ಯೇ ಭವಾಖ್ಯೇ ಪಂಚಮಾಂಶೇ ನಂದಿಕೇಶ ಬೃಹದ್ಬಲ
ಸಂವಾದೇ ಸೋಮನಾಥಮಹಿಮಾವರ್ಣನಂ ನಾಮ
ಷೋಡಶೋಽಧ್ಯಾಯಃ

ಈ ಶಂಕರನಿಗಿಂತ ಪರಮಶುದ್ಧವಾದ ವಸ್ತುವು ಬೇರೊಂದಿಲ್ಲ. ಆತ್ಮನೂ ಅನಾತ್ಮನೂ ಕೂಡ ಅವನೇ. ಸಾಮಾನ್ಯ ಜನರಿಗೆ ಆತನು ಗೋಚರಿಸಲಾರನು. ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳು ಆತನಿಗೆ ಅಧೀನಗಳಾಗಿವೆ. ಪ್ರಪಂಚದ ವಿಷಯಾದಿಗಳಲ್ಲಿ ಆತನಿಗೆ ಆಸಕ್ತಿ ಇಲ್ಲ. ಆದರೂ ಗೌರಿಯೊಡನೆ ಯಾವಾಗಲೂ ರಮಿಸುತ್ತಿರುವನು. ಇಂತಹ ವಿಲಕ್ಷಣ ಪುರುಷನನ್ನು ಯಾವ ಮನುಷ್ಯನು ಧ್ಯಾನಿಸುತ್ತಾನೋ ಅವನು ಸಂಸಾರ ದುಃಖವನ್ನು ನೀಗುವನಲ್ಲದೇ ಶಾಶ್ವತವಾದ ಮುಕ್ತಿಯನ್ನು ಹೊಂದುವನು. ಎಂದು ಈಶ್ವರನು ನುಡಿದುದನ್ನು ಸೂತರು ಶೌನಕಾದಿ ಮಹಾಮುನಿಗಳಿಗೆ ವಿವರವಾಗಿ ತಿಳಿಸಿದನು. ||೭೫||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಭವನೆಂಬ ಪಂಚಮಾಂಶದಲ್ಲಿ ನಂದಿಕೇಶ್ವರ ಬೃಹದ್ಬಲ
ಇವರ ಸಂವಾದದೊಳಗೆ ಸೋಮನಾಥಮಹಿಮಾವರ್ಣನವೆಂಬ
ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಭರ್ಗಾಖ್ಯೇ

## ಸಪ್ತಮಾಂಶೇ

## ಅಷ್ಟಾದಶೋಽಧ್ಯಾಯಃ

॥ ಈಶ್ವರ ಉವಾಚ ॥

ಅನಘೋಕಂ ಮಹಾಪುಣ್ಯಂ ಕ್ಷೇತ್ರಮಸ್ತ್ಯೇಕಮಂಬಿಕೇ ।
ನಾಗನಾಥಾಹ್ವಯಂ ಲಿಂಗಂ ಯತ್ರಾಸ್ತಿ ಭುವನೇಶ್ವರಿ ॥೧॥

ತತ್ರತ್ಯಸಿಕತಾಃ ಸರ್ವಾಃ ಲಿಂಗರೂಪಾಸ್ತು ಕೇವಲಂ ।
ತತ್ರ ಸಂತಿ ಮಹಾತ್ಮಾನಃ ನಾಗನಾಥಾರ್ಚನೇ ರತಾಃ ॥೨॥

ಭಸ್ಮರುದ್ರಾಕ್ಷಸಂಪನ್ನಾಃ ಶಿವಧ್ಯಾನಪರಾಯಣಾಃ ।
ರುದ್ರಾವರ್ತನಶೀಲಾಶ್ಚ ರುದ್ರಲಿಂಗೈಕಪೂಜಕಾಃ ॥೩॥

### ಹದಿನೆಂಟನೆಯ ಅಧ್ಯಾಯ

ಎಲೌ ಅಂಬಿಕೆಯೇ, ಮಹಾಪುಣ್ಯಪ್ರದವಾದ ಅನಘೋಕವೆಂಬ ಪ್ರಸಿದ್ಧವಾದ ಒಂದು ಕ್ಷೇತ್ರವಿದೆ. ಅದು ಅತ್ಯುತ್ತಮವಾದದ್ದು. ಅಲ್ಲಿ ನಾಗನಾಥನೆಂಬ ಹೆಸರುಳ್ಳ ಶಿವಲಿಂಗವು ಪ್ರಸಿದ್ಧವಾಗಿದೆ. ॥೧॥

ಅಲ್ಲಿರುವ ಮರಳುಪ್ರದೇಶಗಳೆಲ್ಲಾ ಲಿಂಗಮಯಗಳಾಗಿವೆ. ಅಲ್ಲಿ ಅತ್ಯುತ್ತಮರಾದ ಈಶ್ವರಭಕ್ತರು ವಾಸಿಸುತ್ತಾರೆ. ಅವರೆಲ್ಲರೂ ನಾಗನಾಥೇಶ್ವರನನ್ನು ಪೂಜಿಸುವುದರಲ್ಲಿ ನಿರತರಾಗಿರುವರು. ॥೨॥

ಆ ಈಶ್ವರಪೂಜಕರು ಭಸ್ಮ, ರುದ್ರಾಕ್ಷ ಇವುಗಳಿಂದಲಂಕೃತರಾಗಿ ಶಿವನ ಧ್ಯಾನದಲ್ಲಿಯೇ ನಿರತರಾಗಿರುವರು. ಅಲ್ಲಿರುವವರು ರುದ್ರಾಧ್ಯಾಯವನ್ನು ಪಾರಾಯಣ ಮಾಡುತ್ತಾ ಕೇವಲ ಶಿವಲಿಂಗಪೂಜೆಯಲ್ಲಿ ನಿಷ್ಠಮನಸ್ಕರಾಗಿರುವರು. ॥೩॥

ಮನ್ನಾಮನಿರತಾ ನಿತ್ಯಮನ್ಯನಾಮಪರಾಙ್ಮುಖಾಃ ।
ಮಲ್ಲಿಂಗಾಲೋಕನೇನೈವ ತೇಷಾಂ ಪ್ರೀತಿರಹರ್ನಿಶಂ ॥೪॥

ಕಾಮುಕಃ ಕಾಮಿನೀಂ ದೃಷ್ಟ್ವಾ ಯಥಾ ಕಾಮೋ ಭವೇಚ್ಛಿವೇ ।
ಮಮ ಲಿಂಗಂ ತಥಾ ಶೈವಾ ಬಿಲ್ವಸಂಪೂಜಿತಂ ಮುದಾ ॥೫॥

ನಾಗನಾಥಂ ಸ್ತುವಂತ್ಯೇವ ವೀಕ್ಷ್ಯಂತಿ ಪ್ರಣಮಂತಿ ಚ ।
ವಸಂತಿ ತತ್ರ ಮುನಯೋ ವಿನಯೋಜ್ವಲವಿಗ್ರಹಾಃ ॥೬॥

ನಾಗನಾಥಂ ಮಹಾದೇವಂ ಪೂಜಯಂತಿ ಗಣೇಶ್ವರಾಃ ।
ನಾಗಕುಂಡಮಿತಿ ಖ್ಯಾತಂ ಪಾತಾಳವಿವರಂ ಮಹತ್ ॥೭॥

ತನ್ಮಾರ್ಗೇಣ ಸಮಾಗತ್ಯ ಶೇಷೋನಂತಫಣೀಮುಖಃ ।
ಸ್ವಮೌಳಿರತ್ನಜಾಲೈರ್ಮಾಂ ಪೂಜಯತ್ಯೇವ ಶಂಕರಿ ॥೮॥

---

ಅಲ್ಲಿ ಎಲ್ಲರೂ ನನ್ನ ನಾಮವನ್ನು ಉಚ್ಚರಿಸುತ್ತಿರುವರಲ್ಲದೇ ಇತರ ದೇವತೆಗಳ ನಾಮೋಚ್ಚಾರವನ್ನು ಬಹಿಷ್ಕರಿಸಿರುವರು. ಪ್ರತಿನಿತ್ಯವೂ ಶಿವಲಿಂಗದರ್ಶನದಿಂದ ಪ್ರೀತಿಯನ್ನು ಹೊಂದುವರು. ಹಾಗೆಯೇ ಹಗಲಿರುಳೂ ಆನಂದಿಸುವರು. ॥೪॥

ಕಾಮುಕನು ಕಾಮಿನಿಯ ಅವಲೋಕನದಿಂದ ರತಿಯನ್ನು ಹೊಂದುವಂತೆ ಅಲ್ಲಿರುವ ಶಿವಪೂಜಕರು ಶಿವಲಿಂಗದ ದರ್ಶನಮಾತ್ರದಿಂದಲೇ ಪರಮೇಶ್ವರನಲ್ಲಿ ಭಕ್ತಿಭಾವವನ್ನು ಹೊಂದುವರು. ಅಲ್ಲಿ ಆ ಶಾಂಭವರು ಶಿವಲಿಂಗವನ್ನು ಬಿಲ್ವ ಮೊದಲಾದುವುಗಳಿಂದ ಸದಾ ಅರ್ಚಿಸುವರು. ॥೫॥

ಅಲ್ಲಿರುವ ಆ ಪರಮೇಶ್ವರಭಕ್ತರು ನಾಗನಾಥೇಶ್ವರನನ್ನು ಸದಾ ದರ್ಶನ ಮಾಡುತ್ತಾರೆ. ಮತ್ತು ನಮಸ್ಕಾರಮಾಡುತ್ತಾರೆ. ಅಲ್ಲಿ ಅತಿ ವಿನಯಶಾಲಿಗಳಾಗಿಯೂ ತೇಜಸ್ವಿಗಳಾಗಿಯೂ ಇರುವ ಮುನಿಗಳು ವಾಸಿಸುವರು. ಗಣಶ್ರೇಷ್ಠರೂ ಕೂಡ ಅಲ್ಲಿ ನಾಗನಾಥಸ್ವರೂಪಿಯಾದ ಶಿವನನ್ನು ಪೂಜೆಮಾಡುತ್ತಾರೆ. ಅಲ್ಲಿ ನಾಗಕುಂಡವೆಂಬ ಹೆಸರುಳ್ಳ ಒಂದು ಪಾತಾಳರಂಧ್ರವಿರುತ್ತದೆ. ॥೬-೭॥

ಎಲೌ ಪ್ರಿಯಳೇ, ಆ ಪಾತಾಳರಂಧ್ರವಾದ ನಾಗಕುಂಡದ ಮಾರ್ಗವಾಗಿ ಅನಂತನೆಂಬ ಮಹಾಶೇಷನು ಅಲ್ಲಿಗೆ ಬರುವನು (ಪಾತಾಳದಿಂದ). ಆತನು ತನ್ನ ಫಣಾಮಣಿಗಳಿಂದ ಶಿವನ ಪಾದಗಳನ್ನು ಅಲಂಕರಿಸಿ ಪೂಜಿಸುವನು. ॥೮॥

ಕಿಂ ನಾಮ ಕ್ರಿಯತೇ ದೇವಿ ಪೂಜಯಾ ವಾ ಶಿವೇ ಸುಮ್ನೈಃ ।
ಲೋಕಸಂರಕ್ಷಣಾರ್ಥಾಯ ಲಿಂಗೇ ಗೃಹ್ಣಾಮಿ ಪೂಜನಂ ॥೧೪॥

ಭಕ್ತೈರ್ನಾಮ ಕೃತಾ ಪೂಜಾ ತುಷ್ಟ್ಯೈ ಭವತಿ ಶೋಭನೇ ।
ಸೂಕ್ಷ್ಮಂ ಮದೀಯಂ ಲಿಂಗಂ ತತ್ಪಶ್ಯಂತಿ ಶಿವಯೋಗಿನಃ ॥೧೫॥

ಕಥಮನ್ಯೇಪಿ ಪಶ್ಯಂತಿ ನಾನಾಕಾಮ್ಯೈಕಗಾಮಿನಃ ।
ಸ ಖಂಡಾನ್ಯನ್ಯಲಿಂಗಾನಿ ಚಾಖಂಡಂ ವ್ಯಾಪಕಂ ಮಮ ॥೧೬॥

ಲಿಂಗಮೇತನ್ಮಹಾದೇವಿ ಜ್ಞಾನಹೀನೋ ನ ಪಶ್ಯತಿ ।
ನತ್ವಾ ತಂ ವೇದವಾಕ್ಯೈಶ್ಚ ಜಾಯತೇ ಮತ್ಕೃಪಾಬಲಾತ್ ॥೧೭॥

ಕಸ್ಯಚಿದ್ಭೂರಿಭಾಗ್ಯೇನ ಸಭಾಗ್ಯಸ್ಯೈವ ಶಂಕರಿ ।
ನಿರ್ಭಾಗ್ಯಾನಾಮಹಂ ದೇವಿ ತಜ್ಞಾನಂ ನೈವ ಜಾಯತೇ ॥೧೮॥

ಕೇವಲ ಹೂಗಳಿಂದ ಎಷ್ಟು ತಾನೇ ಪೂಜೆಮಾಡಿ ನನ್ನನ್ನು ತೃಪ್ತಿಗೊಳಿಸಲಾದೀತು? ನಾನು ಲೋಕಗಳನ್ನು ರಕ್ಷಿಸುವುದಕ್ಕಾಗಿ ನನ್ನರೂಪವಾದ ಲಿಂಗಕ್ಕೆ ಮಾಡಿದ ಪೂಜೆಯನ್ನು ಸ್ವೀಕರಿಸುತ್ತೇನೆ. ಭಕ್ತರು ಮಾಡಿದ ಪೂಜೆಯಿಂದ ನಾನು ತೃಪ್ತನಾಗುವೆನು. ಶಿವಯೋಗಿಗಳು ಕೇವಲ ಯೋಗಗಮ್ಯವಾದ ನನ್ನ ಸೂಕ್ಷ್ಮ ಲಿಂಗದ ಸ್ವರೂಪವನ್ನು ಮನಸಾ ಸಾಕ್ಷಾತ್ಕರಿಸುವರು. ॥೧೪-೧೫॥

ದೇವಿ! ಕೇವಲ ಸ್ವಾರ್ಥಿಗಳಾಗಿ ಬಗೆಬಗೆಯ ಕಾಮನೆಯುಳ್ಳ ಪುರುಷರು ಶಿವಲಿಂಗವನ್ನು ಸಾಕ್ಷಾತ್ಕರಿಸಲಾರರು. ಸಖಂಡ ಅಥವಾ ಅಖಂಡವಾದ ನನ್ನ ಲಿಂಗವು ಸಮಸ್ತ ಜಗತ್ತನ್ನೂ ಆವರಿಸಿರುತ್ತದೆ. ಮಹೇಶ್ವರಿ! ಈ ಲಿಂಗವನ್ನು ಆಧ್ಯಾತ್ಮಿಕಜ್ಞಾನವಿಲ್ಲದವನು ದರ್ಶನ ಮಾಡಲಾರನು. ಯಾವನು ವೇದವಾಕ್ಯಗಳನ್ನುಚ್ಚರಿಸಿ ನಮಸ್ಕರಿಸುವನೋ ಅಂತಹವನಿಗೆ ನನ್ನ ದಯೆಯು ಸುಲಭವಾಗಿ ದೊರೆಯುವುದು. ॥೧೬-೧೭॥

ಯಾವನೋ ಒಬ್ಬನು ಅನೇಕ ಪುಣ್ಯಕರ್ಮಗಳ ಫಲದಿಂದ ನನ್ನ ಶಿವಲಿಂಗವನ್ನು ಸಾಕ್ಷಾತ್ಕಾರಮಾಡಿಕೊಂಡಾನು. ಅದೃಷ್ಟಹೀನರಾದ ಪಾಮರರಿಗೆ ಲಿಂಗಸ್ವರೂಪಸಾಕ್ಷಾತ್ಕಾರವೆಲ್ಲಿಯದು? ಕೇವಲ ಭಕ್ತನ ಶರೀರ ಒಂದೇ ನನ್ನ ಕೃಪೆಗೆ

ಮತ್ಪ್ರಿಯಾಪಾತ್ರಮೇಕಂ ಹಿ ಸ್ವೀಯಗಾತ್ರಂ ಗಿರೀಂದ್ರಜೇ ।
ಶೈವಃ ಶಿವೈಕಶರಣಃ ಶಿವಲಿಂಗಾರ್ಚನಪ್ರಿಯಃ ॥೨೯॥

ಶಿವಕ್ಷೇತ್ರರತೋ ನಿತ್ಯಂ ಶ್ರೀರುದ್ರಜಪತತ್ಪರಃ ।
ಭಸ್ಮರುದ್ರಾಕ್ಷಸಂಪನ್ನಃ ಷಡಕ್ಷರಜಪಾದರಃ ॥೩೦॥

ಶೈವಸಂಪೂಜಕೋ ನಿತ್ಯಂ ಶಿವನೈವೇದ್ಯಭೋಜನಃ ।
ಮನ್ನಾಮಪರಮೋ ನಿತ್ಯಂ ತ್ಯಕ್ತ್ವಾನ್ಯಸುರಕೀರ್ತನಂ ॥೩೧॥

ಶಿವ ಶಂಭೋ ಮಹಾದೇವ ಪ್ರಸೀದೇತಿ ವದನ್ಮುದಾ ।
ಆಪಾದಮಸ್ತಕಂ ಭಸ್ಮ ಸಮುದ್ಧೂಲ್ಯ ಯಥಾವಿಧಿ ॥೩೨॥

ರುದ್ರಾವರ್ತನಶೀಲೋ ಯಃ ಸ ಮೇ ಭಕ್ತಃ ಸದಾಂಬಿಕೇ ।
ವೇದವೇದಾಂಗವಾಕ್ಯೈಶ್ಚ ಬೋಧಜ್ಞಾನಪರಃ ಸದಾ ॥೩೩॥

ಪಾತ್ರವಾಗಿದೆ. ಏಕೆಂದರೆ ನನ್ನ ಭಕ್ತನು ಶಿವನನ್ನಲ್ಲದೆ ಇತರರನ್ನು ಶರಣ ರಕ್ಷಕನೆಂದು ಭಾವಿಸುವುದಿಲ್ಲ. ಮತ್ತು ಆತನು ಶಿವಲಿಂಗಾರ್ಚನೆಯನ್ನು ಮಾಡುವುದರಲ್ಲಿ ಹೆಚ್ಚು ಆಸಕ್ತಿಯುಳ್ಳವನಾಗುವನು. (೨೯)

ಶಿವಭಕ್ತನು ಯಾವಾಗಲೂ ಈಶ್ವರಸಂಬಂಧವಾದ ತೀರ್ಥಕ್ಷೇತ್ರಗಳಿಗೇ ಯಾತ್ರೆಮಾಡುತ್ತಾನೆ. ಮತ್ತು ನಿತ್ಯವೂ ರುದ್ರಜಪವನ್ನು ಜಪಿಸುವನು. ಭಸ್ಮ ರುದ್ರಾಕ್ಷಿಗಳಿಂದ ಆತನು ಸದಾ ಶೋಭಿಸುವನು. ಅಲ್ಲದೇ ಷಡಕ್ಷರಮಂತ್ರ ಜಪದಲ್ಲಿ ಆತನಿಗೆ ತುಂಬಾ ಆದರವುಂಟು. ನಿತ್ಯವೂ ಈಶ್ವರನನ್ನು ಅರ್ಚಿಸುತ್ತಾ ಶಿವನೈವೇದ್ಯವನ್ನು ಭಕ್ತಿಯಿಂದ ಭುಂಜಿಸುವನು. ಇತರ ದೇವತಾನಾಮಗಳನ್ನು ತೊರೆದು ಆತನು ಈಶ್ವರನ ಕೀರ್ತನೆಯನ್ನೇ ಸದಾ ಮಾಡುತ್ತಿರುವನು. (೩೦-೩೧)

ಈಶ್ವರಭಕ್ತನೆನಿಸಿದವನು ಶಿವನೇ ಶಂಭೋ, ಶಂಕರ, ಪ್ರಸನ್ನನಾಗು ಎಂದು ಸದಾ ಕೊಂಡಾಡುತ್ತಿರುವನು. ವಿಧ್ಯುಕ್ತರೀತಿಯಿಂದ ಆತನು ಪಾದದಿಂದ ಶಿರಸ್ಸಿನವರೆಗೂ ಭಸ್ಮವನ್ನು ಲೇಪಿಸಿಕೊಳ್ಳುತ್ತಾನೆ. ಯಾವ ಮನುಷ್ಯನು ಶ್ರೀರುದ್ರವನ್ನು ಆವರ್ತಿಸುತ್ತಾನೋ ಆತನು ನನಗೆ ತುಂಬಾ ಇಷ್ಟನು. ಅಂತಹ ಭಕ್ತನಿಗೆ ವೇದಶಾಸ್ತ್ರಗಳಿಂದ ನಿರ್ಣಯಿಸಲ್ಪಟ್ಟ ದಿವ್ಯಜ್ಞಾನವು ಲಭಿಸುತ್ತದೆ. ಇತರ ಅನೇಕ ಕರ್ಮಾಚರಣೆಯಿಂದ ಅಂತಹ ಅಸಾಧಾರಣವಾದ ದಿವ್ಯಜ್ಞಾನವು ಉಂಟಾಗಲಾರದು. (೩೨-೩೩)

ತಸ್ಯೈವ ಜಾಯತೇ ಜ್ಞಾನಂ ನಾನ್ಯಥಾ ಕರ್ಮಕೋಟಿಭಿಃ ।
ಅಸತ್ಯಮಿತರತ್ ಸರ್ವಂ ತ್ರೈಗುಣ್ಯಂ ಪರಮೇಶ್ವರಿ ॥೨೪॥

ಅವಿದ್ಯಕಾನಿ ಶಾಸ್ತ್ರಾಣಿ ಮಿಥ್ಯಾಜ್ಞಾನಪ್ರದಾನಿ ಹಿ ।
ಪುಚ್ಛಾಪ್ರಂ ಸತ್ಯಮೇವೇದಂ ಬ್ರಹ್ಮೈವೇದಮಿತಿ ಶ್ರುತಿಃ ॥೨೫॥

ಆತ್ಮೈವೇವಮಿದಂ ದೃಶ್ಯಂ ತಸ್ಮಿನ್ ಜಗದಿದಂ ಮೃಷಾ ।
ಜಗತ್ಪ್ರರೋಚನಾಶಾಸ್ತ್ರಂ ಸತ್ಸತ್ವೇ ಕಲ್ಪಯಿಷ್ಯತಿ ॥೨೬॥

ಅಂತಹ ಪರಮಶೈವನಿಗೆ ಮಾತ್ರ ದಿವ್ಯಜ್ಞಾನರೂಪವಾದ ಬ್ರಹ್ಮಸಾಕ್ಷಾತ್ಕಾರ ವಾಗುವುದು. ಇತರ ಅನೇಕ ಕರ್ಮಗಳ ಅನುಷ್ಠಾನದಿಂದ ಖಂಡಿತವಾಗಿಯೂ ಮೋಕ್ಷ ಸಿದ್ಧಿಸಲಾರದು. ಇತರ ಎಲ್ಲ ಕರ್ಮಾದಿಗಳು ಸುಳ್ಳು. ಮತ್ತು ಅವೆಲ್ಲವೂ ಸತ್ವರಜಸ್ತಮೋರೂಪಗಳಾದ ತ್ರಿಗುಣಗಳಿಂದ ಕೂಡಿರುತ್ತವೆ. ಶಾಸ್ತ್ರಗಳು ಕೇವಲ ಮಾಯಾ ಅಂದರೆ ಅಜ್ಞಾನಪ್ರದಗಳಾಗಿವೆ. ಅವೆಲ್ಲವೂ ಮಿಥ್ಯಾಜ್ಞಾನವನ್ನು ಹುಟ್ಟಿಸುತ್ತವೆ. ಶಿವಲಿಂಗಸ್ವರೂಪಜ್ಞಾನವಾದರೋ ಸತ್ಯವಾದದ್ದು. ಇದೇ ಅನಶ್ವರ ವಾದ ಬ್ರಹ್ಮವಸ್ತುವೆಂದು ವೇದಾಂತವಾಕ್ಯಗಳು ಸಾರಿರುತ್ತವೆ. ||೨೪-೨೫||

ನಮ್ಮ ಕಣ್ಣಿಗೆ ಗೋಚರವಾಗುವ ವಸ್ತುವೆಲ್ಲವೂ ಆತ್ಮವೇ ಆಗಿದೆ. ಆ ಪರಮಾತ್ಮನಲ್ಲಿ ಅಡಕವಾಗಿರುವ ಈ ಜಗತ್ತು ಮಿಥ್ಯಾ. ಕೇವಲ ಜನರನ್ನು ಮೋಹಗೊಳಿಸುವುದಕ್ಕಾಗಿ ವಿಧಿನಿಯಮಾದಿಗಳು ನಿಯಮಿಸಲ್ಪಟ್ಟಿವೆ. ವಸ್ತುತಃ ವಿಚಾರಮಾಡಿದರೆ ಶಾಸ್ತ್ರಗಳು ಕೇವಲ ಮಿಥ್ಯಾಜ್ಞಾನವನ್ನು ಹುಟ್ಟಿಸುತ್ತವೆ. ಸತ್ಯ ವಾದದ್ದು ಶಿವನ ಸಾಕ್ಷಾತ್ಕಾರವೊಂದೇ.

ನಮ್ಮ ಕಣ್ಣಿಗೆ ತೋರುವ ಸಕಲ ಪದಾರ್ಥಗಳೂ ಕೂಡ ವಿಭುವಾದ ಅಂದರೆ ಸಮಸ್ತವನ್ನೂ ವ್ಯಾಪಿಸಿಕೊಂಡಿರುವ ಆತ್ಮ, ಗಿಡ, ಮರ, ಮಠ, ಘಟ, ಪಟ ಹೀಗೆ ಉಪಾಧಿಭೇದಗಳಿಂದ ಭಿನ್ನವಾದ ಪದಾರ್ಥಗಳು. ವಸ್ತುತಃ ಏಕರೂಪ ನಾದ ಆತ್ಮನರೂಪಾಂತರಗಳೇ ಹೀಗೆ. ಸಕಲವೂ ಆತ್ಮಮಯವೆಂದು ತಿಳಿದು ಬಂದಾಗ ಆ ಜ್ಞಾನದಲ್ಲಿ ಸ್ಥಾವರ ಜಂಗಮಾತ್ಮಕವಾದ ಜಗತ್ತು ಕನ್ನಡಿಯಲ್ಲಿ ಪ್ರತಿಬಿಂಬಿಸಿರುವ ಪಟ್ಟಣದಂತೆ ಸುಳ್ಳು ಎಂದು ಕಾಣುವುದು. ಅಂದರೆ ಅವೆಲ್ಲ ಅಪಾರಮಾರ್ಥಿಕಗಳು ಎಂದು ಮೇಲೆ ಜಗತ್ತೆಲ್ಲಾ ಸುಳ್ಳಾದರೆ ಅದರಲ್ಲಿ ಭಾಸಮಾ ನಗಳಾದ ಘಟಪಟಾದಿಗಳನ್ನು ಬೋಧಿಸುವ ಶಾಸ್ತ್ರವು ಶಾಖಾಚಂದ್ರಮನ್ಯಾಯ

ದೃಷ್ಟ್ವಾ ಸಪರ್ವತವನಾಂ ಸಾಬ್ಧಿದ್ವೀಪೋರುಪತ್ತನಾಂ ।
ವಿಷಾದಮಗಮತ್ತೀವ್ರಂ ಶೇಷೋ ಮಾಂ ಶರಣಾಗತಃ ॥೩೦॥

ಆವಡ್ಢಕಮಿದಂ ಕ್ಷೇತ್ರಂ ಪ್ರಾಪ್ಯ ಕುಂಡಂ ತಥಾಕರೋತ್ ।
ನಾಗಕುಂಡಮಿತಿ ಖ್ಯಾತಂ ತತ್ತೀರೇ ತಪಸಿ ಸ್ಥಿತಃ ॥೩೧॥

ಸ್ವಪುಚ್ಛವೇಷ್ಟನೈರ್ಭೂಮಿಮುಧಿಷ್ಠಾಯೋಚ್ಛ್ರಯನ್ ಫಣಾಃ ।
ಮಾಂ ವಿಲೋಕ್ಯ ಮಹಾದೇವಿ ಭಸ್ಮರುದ್ರಾಕ್ಷಭೂಷಣಃ ॥೩೨॥

ರುದ್ರಮಾವರ್ತಯನ್ ತಸ್ಥೌ ಶರದಾಂ ಶತಮುತ್ತಮಂ ।
ಲಿಂಗಂ ಸುಚಕ್ಷುಷಾ ಪಶ್ಯನ್ ಚಕ್ಷುಷಾ ಸಂಶ್ರುಯನ್ ಕಥಾಃ ॥೩೪॥

ಶೇಷಃ ಪಠನ್ ಮನುಂ ನಿತ್ಯಂ ತಪಸಾ ಶೋಷಯನ್ ತನುಂ ।
ಗ್ರೀಷ್ಮೇ ಕುಸರಿತಂ ಭಾನುಶ್ಚಂಡಭಾನುಕರೈರ್ಯಥಾ ॥೩೫॥

ಬ್ರಹ್ಮಾದ್ಯಾಃ ದೇವತಾಃ ಸರ್ವಾ ದ್ರಷ್ಟುಂ ತಂ ತಪಸಿ ಸ್ಥಿತಂ ।
ಸಮಾಗತಾಸ್ತದಾ ದೇವಿ ತಾನ್ ಸರ್ವಾನ್ ಕುಂಡಲೀಶ್ವರಃ ॥೩೬॥

ಕಡಲು, ದ್ವೀಪ, ಪಟ್ಟಣ, ಇವುಗಳಿಂದ ಕೂಡಿದ ಅತಿಮಹತ್ತಾದ ಭೂಮಿಯನ್ನು ನೋಡಿ ವಿಷಾದ ಹೊಂದಿ ಬಳಿಕ ನನ್ನ ಮೊರೆಹೊಕ್ಕನು. ॥೩೦-೩೧॥

ಮಹಾದೇವಿ! ಬಳಿಕ ಆ ಮಹಾಶೇಷನು ಆವಡ್ಢಕವೆಂಬ ಕ್ಷೇತ್ರವನ್ನು ಹೊಂದಿದನು. ಅದಕ್ಕೆ ಈಗಲೂ ನಾಗಕುಂಡವೆಂದು ಪ್ರಸಿದ್ಧಿಯಿದೆ. ಆ ನಾಗಕುಂಡದ ತೀರದಲ್ಲಿ ತಪಸ್ಸುಮಾಡಲು ಆರಂಭಿಸಿದನು. ಆಗ ತನ್ನ ಬಾಲವನ್ನು ಭೂಮಿಯ ಮೇಲೆ ಗುಂಡಾಗಿ ಹರಡಿಕೊಂಡು ತಲೆಯನ್ನು ಮೇಲಕ್ಕೆ ಎತ್ತಿಕೊಂಡನು. ಮೈಗೆ ವಿಭೂತಿಯನ್ನು ಲೇಪಿಸಿಕೊಂಡನು. ರುದ್ರಾಕ್ಷಮಾಲಿಕೆಯನ್ನು ಧರಿಸಿದನು. ರುದ್ರಾಧ್ಯಾಯಗಳನ್ನು ಆವೃತ್ತಿ ಹೇಳುತ್ತಾ ಅನೇಕ ವರ್ಷಗಳು ಅಲ್ಲಿಯೇ ನಿಂತನು. ಯಾವಾಗಲೂ ತನ್ನ ನೇತ್ರದಿಂದ ಶಿವಲಿಂಗವನ್ನೇ ನೋಡುತ್ತಾ ತನಗೆ ನೇತ್ರೇಂದ್ರಿಯವೇ ಶ್ರೋತ್ರೇಂದ್ರಿಯವಾಗಿರುವುದರಿಂದ ತನ್ನ ನೇತ್ರಗಳಿಂದ ಶಿವಕಥೆಗಳನ್ನು ಕೇಳುತ್ತಿದ್ದನು. ॥೩೨-೩೩-೩೪॥

ಮಹಾಶೇಷನು ಮಂತ್ರಗಳನ್ನು ಪಠಿಸುತ್ತಾ ತನ್ನ ಶರೀರವನ್ನು ತಪಸ್ಸಿನಿಂದ ಒಣಗಿಸಿದನು. ಬೇಸಗೆ ಕಾಲದಲ್ಲಿ ಪ್ರಚಂಡವಾದ ಬಿಸಲಿನಲ್ಲಿ ನಿಂತು ತಪಿಸಿದನು.

ದಕ್ಷಾಶ್ವಮೇಧವಿಧಿಶಿಕ್ಷಣಕಾಮಶತ್ರೋ
ಸುತ್ರಾಮವಜ್ರಕರದಾರಣಚಂಡಿಕೇಶ ।
ಗೋತ್ರಾತ್ಮಜಾಸಖಸುಜಾತ ಪುರಾಂ ನಿಹಂತಃ
ಮಾಮೀಶ ಮಾಮುಕಧಿಯಾ ಪರಿಪಾಹಿ ಶಂಭೋ ॥೪೧॥

ಪಿನಾಕವಿಲಸತ್ಕರಂ ದಿವಸನಾಯಕಾಂತರ್ಗತಂ
ವಿನಾಯಕಸುತಪ್ರಿಯಂ ಭಜತ ನಾಕನಾಥಸ್ತುತಂ ।
ಯಾಮಿನೀರಮಣಶೋಭಿಮಸ್ತಕಂ ಭಾಮಿನೀವಿಧೃತಸಾಮಿವಿಗ್ರಹಂ
ಯೋಗಿನೀಗಣಕೃತಸ್ತುತಿಪ್ರಿಯಂ ಮೋಹಿನೀಪತಿಮುಪಾಸ್ಮಹೇ ಶಿವಂ॥೪೨

ಚಾರುಭೂಧರಸುತಾವಿಹಾರಿಣಂ
ಭೋಗಿಭೋಗಕೃತಕಂಠಭೂಷಣಂ ।
ಕ್ಷಿಪ್ರದಗ್ಧಪುರಕಾಮವೈರಿಣಂ
ಚಂದ್ರಚೂಡಚರಣಂ ಭಜೇನ್ನಹಂ ॥೪೩॥

ಎಲೈ ಮಹಾದೇವ, ನೀನು ದಕ್ಷನ ಅಶ್ವಮೇಧಯಾಗ ವಿಧಿಯನ್ನು ನಾಶಪಡಿಸಿರುವೆ. ತುಂಟನಾದ ಕಾಮನಿಗೆ ಹಗೆಯು ನೀನು. ಪಾರ್ವತಿಗೆ ಪ್ರಾಣ ನಾಥನಾದ ನೀನು ತ್ರಿಪುರರನ್ನು ಸಂಹಾರಮಾಡಿರುವೆ. ಹೇ ಶಂಕರ, ಮೂಢನಾದ ನನ್ನನ್ನು ಕಾಪಾಡು. ॥೪೧॥

ಪಿನಾಕಪಾಣಿಯಾದ ಶಂಕರನನ್ನು ಭಜಿಸೋಣ. ಶಂಕರನು ಸೂರ್ಯಸ್ವರೂಪ ನಾಗಿರುವನು. ಆತನಿಗೆ ವಿನಾಯಕನೆಂಬ ಮಗನಿರುವನು. ದೇವತೆಗಳು ಶ್ರೀಮಹಾ ದೇವನಾದ ಶಂಕರನನ್ನು ಹೊಗಳುತ್ತಿರುವರು. ಚಂದ್ರನಿಂದ ಕೂಡಿದ ಜಟಾಜೂಟ ದಿಂದ ಈತನು ಮನೋಹರನಾಗಿರುವನು. ಸಮಸ್ತ ಯೋಗಿಗಳೂ ಈತನನ್ನು ಸ್ತುತಿಸುತ್ತಿರುವರು. ಅವರ ಸ್ತುತಿಗಳಿಂದ ಈತನು ಪ್ರಸನ್ನನಾಗುವನು. ಇಂತಹ ಸಮಸ್ತ ಗುಣಗಳಿಂದ ಕೂಡಿದ ಮೋಹಿನೀ ಪತಿಯಾದ ಶಂಕರನನ್ನು ಸೇವೆ ಮಾಡೋಣ. ॥೪೨॥

ಶ್ರೀಶಿವನು ಮನೋಹರಳಾದ ಗಿರಿಜೆಯೊಡನೆ ವಿಹರಿಸುತ್ತಿರುವನು. ಆದಿಶೇಷನನ್ನೇ ಹಾರವನ್ನಾಗಿ ಕಂಠದಲ್ಲಿ ಧರಿಸಿರುವವನು. ಅರೆಗಳಿಗೆಯಲ್ಲಿ ತ್ರಿಪುರರು ಮತ್ತು ಮನ್ಮಥನೆಂಬ ಹಗೆಗಳನ್ನು ಸುಟ್ಟು ನಾಶಗೊಳಿಸಿದನು. ಚಂದ್ರನನ್ನು ತನ್ನ

ಇತಿ ಸ್ತುತೋಽಹಂ ಶೇಷೇಣ ಭಕ್ತಿಯುಕ್ತೇನ ಶಂಕರಿ ।
ಧರಾಧರಣಸಾಮರ್ಥ್ಯಂ ಮಯಾ ದತ್ತಂ ತದಾಂಬಿಕೇ ॥೪೪॥

ತೇನ ಸಂಪ್ರಾರ್ಥಿತಂ ಚಾಪಿ ಸ್ವಕುಂಡಂ ಖ್ಯಾತಿಮೇಷ್ಯತು ।
ನಾಗಕುಂಡಮಿತಿ ಖ್ಯಾತಂ ಸರ್ವಪಾಪಹರಂ ಶುಭಂ ॥೪೫॥

ತಸ್ಮಿನ್ ಕುಂಡವರೇ ಸ್ನಾತ್ವಾ ನಾಗನಾಥಂ ಪ್ರಣಮ್ಯ ಚ ।
ವಿಷಚೋರಭಯಂ ತಸ್ಯ ಕದಾಚಿನ್ನೈವ ಜಾಯತೇ ॥೪೬॥

ತರ್ಪಯಿತ್ವಾ ತು ತತ್ತೋಯೈಃ ಪಿತೄನ್ ಪ್ರೀಣಾತಿ ಮಾನವಃ ।
ಸ್ನಾತ್ವಾತಿರಾತ್ರಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥೪೭॥

ಏವಂ ಮತ್ತೋ ವರಂ ಲಬ್ಧ್ವಾ ಸ ಶೇಷೋ ವಿವರಂ ಯಯೌ ।
ಸಪರ್ವತನದೀಯುಕ್ತಾಂ ದಧ್ರೇ ಭೂಮಿಂ ತದಾಂಬಿಕೇ ॥೪೮॥

ಜಟೆಯಲ್ಲಿ ಅಲಂಕರಿಸಿಕೊಂಡಿರುವನು. ಇಂತಹ ಶ್ರೀಶಿವನ ಪಾದವನ್ನು ನಾನು ಯಾವಾಗಲೂ ಸೇವಿಸುವೆನು, ಎಂದು ಮಹಾಶೇಷನು ಸ್ತುತಿಸಿದನು. ॥೪೩॥

ಹೀಗೆ ಭಕ್ತಿಯಿಂದ ಶೇಷನು ನನ್ನನ್ನು ಸ್ತೋತ್ರಮಾಡಿದ ಬಳಿಕ ಸಂತಸಗೊಂಡು, ನಾನು ಆತನಿಗೆ ಭೂಮಿಯನ್ನು ಧರಿಸಲು ಶಕ್ತಿಯನ್ನು ಕೊಟ್ಟೆನು. ॥೪೪॥

ಬಳಿಕ ಆ ಮಹಾಶೇಷನು ಈ ಕುಂಡವು ನಾಗಕುಂಡವೆಂದು ಹೆಸರುವಾಸಿಯನ್ನು ಪಡೆಯಲಿ ಎಂದು ಪ್ರಾರ್ಥಿಸಿಕೊಂಡನು. ಆತನ ಪ್ರಾರ್ಥನೆಯಂತೆ ಇದು ಸಮಸ್ತ ಪಾಪಗಳನ್ನೂ ನಾಶಮಾಡತಕ್ಕ ನಾಗಕುಂಡವೆಂದು ಹೇಳಿಸಿಕೊಂಡಿದೆ. ॥೪೫॥

ಈ ಕುಂಡದಲ್ಲಿ ಸ್ನಾನಮಾಡಿ ಶ್ರೀ ನಾಗನಾಥೇಶ್ವರನನ್ನು ದರ್ಶನಮಾಡಿದವನಿಗೆ ವಿಷ ಮತ್ತು ಕಳ್ಳರು ಇವರಾರಿಂದಲೂ ಭಯವುಂಟಾಗುವುದಿಲ್ಲ. ॥೪೬॥

ಯಾವನು ಆ ನಾಗಕುಂಡದ ಜಲದಿಂದ ಪಿತೃಗಳಿಗೆ ತರ್ಪಣಕೊಡುತ್ತಾನೋ ಅವನು ಅತಿರಾತ್ರಾದಿ ಯಜ್ಞಗಳ ಫಲವನ್ನು ಹೊಂದುವನು. ॥೪೭॥

ಹೀಗೆ ಆ ಮಹಾಶೇಷನು ನನ್ನಿಂದ ವರವನ್ನು ಹೊಂದಿ ಹಾಗೆಯೇ ಪಾತಾಳಕ್ಕೆ ಹೋದನು. ಅಲ್ಲಿ ಧೀರನಾಗಿ ಬೆಟ್ಟನದಿಗಳಿಂದ ತುಂಬಿದ ಭೂಮಿಯನ್ನು ಧರಿಸಿದನು. ॥೪೮॥

॥ ಈಶ್ವರ ಉವಾಚ ॥

ಕದ್ರೂಸ್ಸುಪರ್ಣ್ಯೌ ಚ ಪುರಾ ವಿವದೇತೇ ಪರಸ್ಪರಂ ।
ಅಶ್ವವಾಲಾಂಸ್ತದಾ ಶ್ವೇತಾನ್ ಕೃಷ್ಣಾಂಶ್ಚಕ್ರೇ ವಿಷಾಗ್ನಿನಾ ॥೪೯॥

ದಾಸ್ಯಂ ಸಪತ್ನ್ಯಾಃ ಪುರಾ ಕೃತ್ವಾ ಅಮೃತೇನೈವ ಸಾ ಪುರಾ ।
ತತ್ಪಾಪಾನುತ್ತಯೇ ಗೌರಿ ನಾಗನಾಥಂ ಪ್ರಣಮ್ಯ ಸಾ ॥೫೦॥

ಸಾ ಪುತ್ರಾನ್ ಮೋಚಯಾಮಾಸ ಸುಪರ್ಣಭಯಪೀಡಿತಾನ್ ।
ಭೂಷಣಾರ್ಥಂ ಮತಂಗಾನಾಂ ಪುತ್ರಾನ್ ದತ್ತವತೀ ತದಾ ॥೫೧॥

ಕಂಬಲಾಶ್ವತರೌ ನಾಗೌ ಕರ್ಣಕುಂಡಲತಾಂ ಗತೌ ।
ವಾಸುಕಿಸ್ತಕ್ಷಕಶ್ಚೈವ ಮದ್ಬಾಹುವರಕಂಕಣಾ ॥೫೨॥

ಮತ್ಪಾದನೂಪುರೌ ದೇವಿ ಶಂಖಪಾಲೇನ ಪತ್ರಕಃ ।
ಸತ್ಕಂಠಹಾರಶೋಭಾಯೈ ಧೃತರಾಷ್ಟ್ರಃ ಪಿಲಿಪ್ಪಿಲಃ ॥೫೩॥

---

ಹಿಂದೆ ಕದ್ರೂ, ಸುಪರ್ಣಾ ಎಂಬ ಸವತಿಯರು ಇದ್ದರು. ಅವರಿಬ್ಬರಿಗೂ ಆಗಾಗ ಪರಸ್ಪರ ವಿವಾದ ಜರುಗುತ್ತಿತ್ತು. ಉಚ್ಚೈಶ್ರವಾಶ್ವದ ಬಾಲವು ಬೆಳ್ಳಗೆಂದು ಸುಪರ್ಣಾದೇವಿಯೂ, ಕಪ್ಪೆಂದು ಕದ್ರೂದೇವಿಯೂ ವಿವಾದಮಾಡಲು ಕದ್ರುವು ವಿಷಾಗ್ನಿಯಿಂದ ಆ ಅಶ್ವದ ಬಾಲವು ಕಪ್ಪಾಗುವಂತೆ ಮಾಡಿದಳು. ಸವತಿಯಾದ ಸುಪರ್ಣೆಗೆ ಕದ್ರುವು ಮಾತಿನಂತೆ ದಾಸ್ಯವನ್ನು ಒಪ್ಪಿಸಿ, ತತ್ಪರಿಹಾರಕ್ಕಾಗಿ ಅಮೃತ ವನ್ನೂ ಪಾನಮಾಡಿದಳು. ಹೀಗೆ ಮಾಡಿದ ಮೋಸದ ಪಾಪವನ್ನು ಪರಿಹರಿಸಿ ಕೊಳ್ಳಲು ಆಕೆ ನಾಗನಾಥನ ದರ್ಶನಮಾಡಿ ಶಿವನನ್ನು ನಮಸ್ಕರಿಸಿದಳು.॥೪೯-೫೦॥

ನಾಗನಾಥನನ್ನು ವಂದಿಸಿ ಆ ಕದ್ರುವು ಸುಪರ್ಣಾಪುತ್ರನಿಂದ ಹೆದರಿದ ತನ್ನ ಮಕ್ಕಳನ್ನು ಬಿಡಿಸಿಕೊಂಡಳು. ಆಗ ಆಕೆಯು ನಾಗನಾಥನಿಗೆ ಆಭರಣಾರ್ಥವಾಗಿ ತನ್ನ ಮಕ್ಕಳನ್ನೇ ಕೊಟ್ಟಳು. ಕಂಬಲ ಮತ್ತು ಅಶ್ವತರ ಎಂಬ ಹಾವುಗಳು ನನಗೆ ಕರ್ಣಕುಂಡಲಗಳಾದುವು. ವಾಸುಕಿ, ತಕ್ಷಕ ಇವರಿಬ್ಬರೂ ನನ್ನ ಬಾಹುವಿಗೆ ಕಂಕಣಗಳಾಗಿ ನಿಂತರು. ॥೫೧-೫೨॥

ಎಲೌ ದೇವಿಯೇ, ನನ್ನ ಪಾದಗೆಜ್ಜೆಗಾಗಿ (ಕಾಲುಂಗುರ) ಶಂಖಪಾಲನೆಂಬ ಹಾವನ್ನೂ, ಕಂಠಹಾರಕ್ಕಾಗಿ ಧೃತರಾಷ್ಟ್ರ, ಪಿಪ್ಪಿಲ ಎಂಬ ಇಬ್ಬರು ಮಕ್ಕಳನ್ನೂ

ಪುತ್ರಾನ್ ಮಹ್ಯಂ ತದಾ ದತ್ವಾ ಸಾ ಕದ್ರೂರ್ವೀತಕಲ್ಮಷಾ ।
ನಾಗನಾಥಂ ತದಾ ಮಾಂ ಸಾ ತುಷ್ಟಾವಾಥ ಕೃತಾಂಜಲಿಃ ॥೩೪॥

॥ ಕದ್ರೂರುವಾಚ ॥

ಪುತ್ರಸ್ತೇಽಶ್ವಪತಿರ್ಮಹೀಸುರವರಂ ಮಲ್ಲಂ ನಿಹತ್ಯಾದರಾತ್
ದೇವಾನಾಮಭಯಂ ದದೌ ಸ ಗತವಾಂಸ್ವರ್ಲೋಕವಾಸಂ ಚಿರಂ ।
ಶಕ್ರಾದ್ಯೈರಮರಪುಂಗವೈಃ ಸಹ ತದಾ ತ್ವತ್ಪಾದಪೂಜಾಬಲೇ
ರ್ಜಾನುರ್ಮ್ಯೋ ಕೃತಿಕೇತನಸ್ತುತಿಪರಸ್ತಾಂ ಸೇವತೇ ಸರ್ವದಾ ॥೩೫॥

ಕುಮಾರಶಿರಸಾ ನಮೋ ಧೃತವರೋರುಶಕ್ತೇಶ ಯಃ
ಸ ತಾರಕಮುಖಾಸುರಾನ್ ನಿಖಿಲಶೂರಪದ್ಮಾದಿಕಾನ್ ।
ನಿಹತ್ಯ ನಿಖಿಲೈಃ ಸುರೈರಮರಸೈನ್ಯನಾಥೋ ಭವತ್
ತ್ವದೀಯಪದಸೇವಯಾ ಶಿವಸುನಾಗನಾಥ ಪ್ರಭೋ ॥೩೬॥

ನೀಲಕಂಠಕೃತವಾಹನಮುಖ್ಯಃ ತಾರಕಾರಿರಖಿಲಾಸುರವಂದ್ಯಃ ।
ಸದ್ಯ ಏವ ಕುರುತೇಽಹ್ಯಘನಾಶಂ ಸೈನ್ಯನಾಯಕ ಇತಿ ಶ್ರುತಿಪೂಕ್ತಃ ॥೩೭॥

ಆ ಕದ್ರೂವು ಅರ್ಪಿಸಿದಳು. ಆದರಿಂದ ಆಕೆಯ ಪಾಪವು ನಾಶವಾಯಿತು. ಬಳಿಕ ನಾಗನಾಥನಾದ ನನ್ನನ್ನು ಈ ರೀತಿ ಸ್ತೋತ್ರಮಾಡಿದಳು. ॥೩೩-೩೪॥

"ನಾಗನಾಥನೇ, ಹಿಂದೆ ನಿನ್ನ ಮಗನಾದ ಅಶ್ವಪತಿಯು ಬ್ರಾಹ್ಮಣಶ್ರೇಷ್ಠನಾದ ಮಲ್ಲನನ್ನು ಕೊಂದು, ದೇವತೆಗಳಿಗೆ ಅಭಯಪ್ರದಾನಮಾಡಿದನು. ಬಳಿಕ ಆತನು ಸ್ವರ್ಗಕ್ಕೆ ತೆರಳಲು ಇಂದ್ರಾದಿದೇವತೆಗಳು ಆತನಿಗೆ ಪೂಜೆಯನ್ನು ಎಸಗಿದರು. ಅಂತಹ ಸಾಮರ್ಥ್ಯವು ಅವನಿಗೆ ಬಂದುದು ನಿನ್ನ ಪಾದಪೂಜಾಬಲದಿಂದಲೇ ಅಲ್ಲವೆ? ॥೩೫॥

ತಾರಕನೇ ಮೊದಲಾದ ದುಷ್ಟ ರಾಕ್ಷಸರನ್ನೂ, ಪದ್ಮಾದಿ ಮಹಾಶೂರರನ್ನೂ ನಾಶಮಾಡಿದ ಕುಮಾರಸ್ವಾಮಿಯು, ಅನಂತ ಶಕ್ತ್ಯಾಯುಧದಿಂದ ಕೂಡಿ, ಕೊನೆಗೆ ದೇವಸೇನಾಪತಿಯಾದುದೂ ನಿನ್ನ ಪಾದಸೇವಾ ಫಲವಲ್ಲವೆ! ಅಂತಹ ಮಹಾಮಹಿಮನಾದ ಸುನಾಗನಾಥನೇ, ನಿನಗೆ ವಂದನೆ. ॥೩೬॥

ಮಯೂರಾರೂಢನಾಗಿ ತಾರಕಾಸುರನನ್ನು ವಧಿಸಿದ ಸೇನಾನಿಯು ಎಲ್ಲಾ ದೇವತೆಗಳಿಗೂ ವಂದ್ಯನಾಗಿರುವನು ಮತ್ತು ದೇವಸೇನಾಪತಿಯೂ ಆಗಿರುವನು.

ಮೋರೇಶ್ವರಕ್ಷೇತ್ರನಿವಾಸಶೀಲಃ
ಶೂಲಾಂಕಸೂನುಃ ಪ್ರಥಿತೋರುಶುಂಡಃ ।
ತ್ವತ್ಪಾದಪದ್ಮಪ್ರಣತೋರುಗಂಡೋ
ಗಂಡಸ್ಥಲಾಂದೋಲಿತಪದ್ಮಷಂಡಃ ॥೫೮॥

ತ್ವಂ ಗಣಾಧಿಪತಿರೀಶ ಪಾಹಿ ಮಾಂ ತ್ವತ್ಸುತೋ ಗಣಪತಿಃ ಶ್ರುತಿಶ್ರುತಃ ।
ವಿಘ್ನಜಾಲದುರಿತಂ ಮಮ ಹನ್ಯಾತ್ ದಂಡಿತಾಖಿಲಸುರಾರಿಸಮೂಹಃ॥೫೯॥

ಇತಿ ಸ್ತುತ್ವಾ ತದಾ ಕದ್ರೂರ್ಯಯೌ ಸಾ ಕಾಶ್ಯಪಂ ಮುನಿಂ ।
ನಾಗನಾಥಂ ಗಣಸ್ಯೇಶಂ ಬಿಲ್ವಪತ್ರೈಃ ಸಮರ್ಚ್ಯತ ॥೬೦॥

ನಾಗನಾಥಂ ಮಹಾಲಿಂಗಂ ದರ್ಶನಾತ್ ಸ್ವರ್ಗಮೋಕ್ಷದಂ ।
ತಲ್ಲಿಂಗಮಹಿಮಾ ದೇವಿ ತ್ವಯಿ ಸಂಕೀರ್ತಿತೋ ಮಯಾ ॥೬೧॥

---

ಆತನು ಸದ್ಯದಲ್ಲಿಯೇ ಭಕ್ತರ ಪಾಪವನ್ನು ನಾಶಮಾಡುವನೆಂದು ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿದೆ. ॥೫೭॥

ಮೋರೇಶ್ವರಕ್ಷೇತ್ರನಿವಾಸಿಯಾದ ಮತ್ತು ಶೂಲಾಯುಧವನ್ನು ಧರಿಸಿದ ಶಂಕರನ ಮಗನೆಂದೆನಿಸಿದ ಶ್ರೀವಿನಾಯಕನಿಗೆ ನಮಿಸುತ್ತೇನೆ. ಆತನು ಶುಂಡಾ ದಂಡದಿಂದ ಪದ್ಮವನ್ನು ಧರಿಸಿರುವನು. ಸದಾ ನಿನ್ನ ಪಾದಪದ್ಮಾರಾಧನೆಯಲ್ಲಿ ನಿರತನಾದವನು. ಅಂತಹವನಿಗೆ ಸಮಸ್ಕಾರ. ॥೫೮॥

ಶಂಕರನೇ, ನೀನು ದೇವಗಣಗಳಿಗೆ ಒಡೆಯನಾಗಿರುವೆ. ನಿನ್ನ ಮಗನು ಗಣೇಶನೆಂದು ಪ್ರಸಿದ್ಧನಾಗಿರುವನು. ನೀನು ನನ್ನ ಸಕಲ ವಿಘ್ನಗಳನ್ನು 'ನಾಶ ಮಾಡು. ಸಮಸ್ತ ದೈತ್ಯರನ್ನೂ ನಾಶಮಾಡಿದವನು ನೀನಾಗಿದ್ದೀಯೆ." ॥೫೯॥

ಹೀಗೆ ಕದ್ರೂದೇವಿಯು ಗಣಗಳಿಂದೊಡಗೂಡಿದ ನಾಗನಾಥೇಶ್ವರನನ್ನು ಬಿಲ್ವಾದಿಗಳಿಂದ ಪೂಜಿಸಿದಳು. ಅನಂತರ ಕಶ್ಯಪರಲ್ಲಿಗೆ ಹೋದಳು. ॥೬೦॥

ದೇವಿಯೇ, ಈಗ ನಾನು ನಾಗನಾಥಲಿಂಗದರ್ಶನದಿಂದ ಮನುಷ್ಯನು ಸ್ವರ್ಗವನ್ನು ಹೊಂದುವನೆಂದು ಆ ಲಿಂಗದ ಮಹಿಮೆಯನ್ನು ನಿನಗೆ ಹೇಳಿರು ತ್ತೇನೆ. ॥೬೧॥

ಶೃಣ್ವನ್ ವದಂಶ್ಚ ಮೇಧಾವೀ ಮಮ ಭಕ್ತಿಪರೋ ಭವೇತ್ ।
ತತ್ರ ಬಿಲ್ವವನೇ ದೇವಿ ಮಲ್ಲಿಂಗಪರಿಶೋಂಬಿಕೇ ॥೩೨॥

ಶಿವಧ್ಯಾನಪರಾಃ ಶೈವಾಸ್ತಿಷ್ಠಂತೇ ಮತ್ಪದಾಶ್ರಯಾಃ ।
ಏತತ್ತೇಽಭಿಹಿತಂ ಪುಣ್ಯಂ ಸ್ವರ್ಗ್ಯಂ ಪುತ್ರಪ್ರದಂ ನೃಣಾಂ ॥೩೩॥

ದರ್ಶನಾತ್ತಸ್ಯ ಲಿಂಗಸ್ಯ ಮೋಕ್ಷಭಾಗೀ ಭವೇನ್ನರಃ ॥೩೪॥

॥ ಈಶ್ವರ ಉವಾಚ ॥

ತಸ್ಮಿನ್ ಪಾವನಪಾವನೇ ಹಿ ವಿಪಿನೇ ಮಾಲೂರಸಂಘಾವೃತೇ
ತತ್ಪುಷ್ಪೋತ್ಥಮರಂದಸುಂದರರಜೋಗುಂಫೀಕೃತೈಸ್ತುಂದಿಲೈಃ ।
ತದ್ವಾತೈಃ ಸುಖಶೀತಲೈಃ ಫಣಿಫಣಾಫೂತ್ಕಾರತಾಪಾಪಹೈಃ
ಶೀತೀಕೃತ್ಯ ಮಮಾಂಗಗಂಧಮಖಿಲಂ ಜಿಘ್ರನ್ನಸಾಮ್ಯಂಬಿಕೇ ॥೩೫॥

ತದ್ದಗ್ಧಂ ವನಮಿತ್ಯನೈಮಿ ಸತತಂ ಯಸ್ಮಿನ್ನ ಬಿಲ್ವೀದ್ರುಮಃ
ತಸ್ಮಿನ್ನೇವ ವಸಾಮಿ ಶಾಖಿಶತಕೈರ್ಯುಕ್ತೇಽಪಿ ಪುಷ್ಪಾನ್ವಿತೈಃ ।

ಆ ನಾಗನಾಥನ ಮಹಿಮೆಯನ್ನು ಕೇಳಿದವನೂ, ಹೇಳಿದವನೂ ಕೂಡ ನನ್ನಲ್ಲಿ ಅತಿಶಯವಾದ ಭಕ್ತಿಯುಳ್ಳವನಾಗುವನು. ದೇವಿಯೇ, ಕೇಳು. ಅಲ್ಲಿ ಒಂದು ಬಿಲ್ವವನವಿದೆ. ॥೩೨॥

ಆ ಬಿಲ್ವವನದಲ್ಲಿ ಅನೇಕ ಈಶ್ವರಭಕ್ತರು ನನ್ನ ಧ್ಯಾನದಲ್ಲಿ ಆಸಕ್ತರಾಗಿರುವರು. ಹೀಗೆ ನಿನಗೆ ಎಲ್ಲವನ್ನೂ ಹೇಳಿರುವೆ. ಇದು ಮನುಷ್ಯನಿಗೆ ಸ್ವರ್ಗಪ್ರದವೂ, ಪುತ್ರಪ್ರದವೂ ಆಗಿರುತ್ತದೆ. ಆ ನಾಗನಾಥನ ದರ್ಶನಮಾತ್ರದಿಂದ ಮನುಷ್ಯನು ಶಾಶ್ವತವಾದ ಮೋಕ್ಷವನ್ನು ಹೊಂದುವನು. ॥೩೩-೩೪॥

ಪಾರ್ವತಿಯೇ, ಆ ವನವು ಅತ್ಯಂತ ಪವಿತ್ರವಾದುದು. ಅಲ್ಲದೆ ಮಾಲೂರ (ಬಿಲ್ವ) ವೃಕ್ಷಗಳಿಂದ ನಿಬಿಡವಾಗಿ ಪ್ರಕಾಶಿಸುತ್ತಿರುವುದು. ಅದರ ಹೂವಿನ ಪರಾಗಗಳಿಂದ ತುಂಬಿದ ಶೀತಲಮಾರುತವು ಸರ್ಪಗಳ ಫೂತ್ಕಾರದಿಂದ ಒದಗುವ ತಾಪವನ್ನು ಪರಿಹರಿಸುತ್ತಾ, ದಿವ್ಯಗಂಧಲೇಪಿತವಾದ ನನ್ನ ದೇಹವನ್ನು ಶೀತಲವನ್ನಾಗಿ ಮಾಡುತ್ತಾ, ನನ್ನನ್ನು ಆನಂದಗೊಳಿಸುತ್ತಿರುವುದು. ॥೩೫॥

ಎಲೌ ದೇವಿಯೇ, ಯಾವ ವನದಲ್ಲಿ ಬಿಲ್ವವೃಕ್ಷವು ಬೆಳೆದಿರುವುದಿಲ್ಲವೋ,

ಶೂಲೇ ವಾಪಿ ಮರುಸ್ಥಲೇಪಿ ನಿವಸೇತ್ಸೂರ್ಯಾನುಜಃ ಕೇವಲಂ
ತನ್ಮೂಲೇ ಶಿವಲಿಂಗಸಂಗತವಪುಸ್ತುಷ್ಟೋ ವಸಾಮ್ಯಂಬಿಕೇ ॥೬೭॥

ಶ್ರೀವೃಕ್ಷಪ್ರಭವೈರ್ನವಾರುಣದಲೈರ್ಯಸ್ಸಾಯಮಭ್ಯರ್ಚಯೇತ್
ರೇವಾಲಿಂಗವರಂ ಪ್ರದೋಷಸಮಯೇ ಸನ್ನಾರ್ಮದೇನಾಂಭಸಾ ।
ತಸ್ಯಾಹಂ ವಿತರಾಮಿ ಭುಕ್ತಿಮಖಿಲಾಂ ಮುಕ್ತಿಂ ತಥಾಂತೇಂಬಿಕೇ
ತ್ರಿಃಕೃತ್ವಃ ಪ್ರವದಾಮಿ ಸತ್ಯಮಧುನಾ ಸಮ್ಯಕ್ ಶೃಣುಷ್ವಾದರಾತ್ ॥೬೭॥

ಇತಿ ಶ್ರೀ ಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ನಾಗನಾಥಮಹಿಮಾ
ವರ್ಣನಂ ನಾಮ ಅಷ್ಟಾದಶೋಽಧ್ಯಾಯಃ

ಅಂತಹ ವನವು ದಗ್ಧಪ್ರಾಯವಾದುದೆಂದು ತಿಳಿ. ಆ ಅರಣ್ಯದಲ್ಲಿ ಎಷ್ಟೆ ಮನೋಹರ ಗಳಾದ ವೃಕ್ಷಗಳ ಗುಂಪೇ ಕಂಡು ಬಂದರೂ ಅದು ನನಗೆ ಹಿತವೆನಿಸಲಾರದು. ಬಿಲ್ವವೃಕ್ಷವು ಮುಳ್ಳುಗಳ ಮಧ್ಯದಲ್ಲಿದ್ದರೂ, ಮರುಭೂಮಿಯಲ್ಲೇ ಬೆಳೆದಿದ್ದರೂ ಆ ವೃಕ್ಷದಲ್ಲಿ ಶೀತಲನಾದ ಚಂದ್ರನ ಸಾನ್ನಿಧ್ಯವಿರುವುದೆಂದು ತಿಳಿ. ಬಿಲ್ವವೃಕ್ಷವು ಎಲ್ಲಿದ್ದರೂ ನಾನು ಅದರ ಮೂಲದಲ್ಲಿ ಶಿವಲಿಂಗಾಕಾರದಿಂದ ನೆಲಸಿ ತೃಪ್ತನಾಗಿ ವಾಸಿಸುವೆನು. ॥೬೭॥

ಗಿರಿಜೆಯೇ, ಯಾರು ಪ್ರದೋಷಕಾಲದಲ್ಲಿ ನರ್ಮದಾ ಲಿಂಗವನ್ನು ನರ್ಮದೋದಕದಿಂದ ಅಭಿಷೇಕಮಾಡಿ, ಬಿಲ್ವವೃಕ್ಷದ ಕೆಂಪಾದ ಎಳೆಚಿಗುರಿನಿಂದ ಪೂಜಿಸುವರೋ, ಅಂತಹವರಿಗೆ ನಾನು ಅತಿಶಯವಾದ ಭುಕ್ತಿಯನ್ನೂ (ಸುಖಾನುಭವವನ್ನೂ) ಶಾಶ್ವತವಾದ ಮುಕ್ತಿಯನ್ನೂ ಅನುಗ್ರಹಿಸುವೆನು. ಇದು ನಿಜ. ಇದೇ ಮಾತನ್ನು ನಾನು ಶಪಥರೂಪವಾಗಿ ಬೇಕಾದರೂ ಹೇಳಬಲ್ಲೆನು. ಇದನ್ನು ನಂಬಿ ನನ್ನ ಭಕ್ತರು ಅದರಂತೆ ಆಚರಿಸಿ ಸ್ಥಿರವಾದ ಆನಂದವನ್ನು ಪಡೆಯಲಿ. ಎಂದು ಪರಶಿವನು ಪಾರ್ವತಿಗೆ ನಾಗನಾಥೇಶ್ವರ ಲಿಂಗಮಹಿಮೆಯನ್ನು ಹೇಳಿದನು. ॥೬೭॥

ಇಲ್ಲಿಗೆ ಶ್ರೀ ಶಿವರಹಸ್ಯದ ಭರ್ಗನಾಮಕವಾದ ಐದನೆಯ ಅಂಶದಲ್ಲಿ
ನಾಗನಾಥೇಶ್ವರ ಮಹಿಮಾ ವರ್ಣನೆಯೆಂಬ
ಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ಏಕೋನವಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ಅಸ್ತ್ಯೇಕಂ ಕ್ಷೇತ್ರಮಚಲೇ ಘುಸೃಣೇಶ್ವರಸಂಜ್ಞಿತಂ ।
ಜ್ಯೋತಿರ್ಲಿಂಗಂ ಮಹಾದೇವಿ ಶೃಣು ತನ್ಮಹಿಮಾಂ ಪುನಃ ॥೧॥

ಹೃತರತ್ನಾಃ ಪುರಾ ಸರ್ವೇ ಕ್ಷೀರಸಾಗರಪೂರ್ವಕಾಃ ।
ಸಮುದ್ರಾಸ್ತೇ ತು ಸಂಭೂಯ ತಪಸ್ತಪ್ಯಂತ ದಾರುಣಂ ॥೨॥

ಪರಿಮ್ಲಾನಮುಖಾಸ್ಸರ್ವೇ ವೇಲಾಕಲ್ಲೋಲವರ್ಜಿತಾಃ ।
ಹೃತಮಂಡಂ ಯಥಾ ಭಾತಿ ದಧಿಭಾಂಡಂ ಸುರಾಧಿಪೇ ॥೩॥

---

## ಹತ್ತೊಂಬತ್ತನೆಯ ಅಧ್ಯಾಯ

ಎಲೌ ದೇವಿಯೇ, ಭೂಲೋಕದಲ್ಲಿ ಘುಸೃಣೇಶ್ವರನಾಮಕವಾದ ಒಂದು ಜ್ಯೋತಿರ್ಲಿಂಗವಿರುವುದು. ಅದು ನೆಲಸಿರುವ ಕ್ಷೇತ್ರದ ಮಹಿಮೆಯನ್ನು ಈಗ ವಿವರಿಸುವೆನು ಕೇಳು.

ಹಿಂದೆ ಕ್ಷೀರಸಾಗರವೇ ಮೊದಲಾದ ಸಕಲ ಸಮುದ್ರಗಳು, ದುಷ್ಟರಿಂದ ತಮ್ಮ ರತ್ನಗಳನ್ನೆಲ್ಲಾ ಕಳೆದುಕೊಂಡು, ದುಃಖಪೀಡಿತಗಳಾಗಿ, ಕೊನೆಗೆ ಅಲ್ಲಿ ಭಯಂಕರವಾದ ತಪಸ್ಸನ್ನಾಚರಿಸಲಾರಂಭಿಸಿದುವು. ॥೧-೨॥

ಆಗ ಆ ಸಾಗರದ ಮುಖಗಳೆಲ್ಲವೂ ಒಣಗಿಹೋಗಿದ್ದುವು. ಹಿಂದಿನಂತೆ ಅಲೆಗಳ ಹೊಡೆದಾಟವೇ ಕಾಣುತ್ತಿರಲಿಲ್ಲ. ಮರಿಗಳನ್ನು ಕಳೆದುಕೊಂಡ ಹಕ್ಕಿಗಳಂತೆ

ನಿಸ್ಸಾರಭೂತಾಭಿಸ್ಸಾರಾಸ್ಸಾಗರಾ ಮಾಮುಪಾಯಯುಃ ।
ಭಸ್ಮನೋದ್ಧೂಲ್ಯ ಸರ್ವಾಂಗಂ ರುದ್ರಾಕ್ಷವರಕಂಕಣಾಃ ॥೪॥

ಜಪಂತಶ್ಶತರುದ್ರೀಯಂ ಪಂಚಾಕ್ಷರಪರಾಯಣಾಃ ।
ಲಿಂಗಪೂಜಾಪರಾ ನಿತ್ಯಂ ಘುಸೃಣೇಶಾರ್ಚನೇ ರತಾಃ ॥೫॥

ಬಿಲ್ವಪತ್ರೈಶ್ಚ ಕಮಲೈಃ ರಕ್ತನೀಲೋತ್ಪಲೈರಪಿ ।
ತತಃ ಕಾಲಾಂತರೇ ದೇವಸ್ತೇಷಾಂ ಪ್ರಾದುರಭೂತ್ಪರಃ ॥೬॥

॥ ಸಾಗರಾ ಊಚುಃ ॥

ದೃಷ್ಟ್ವಾ ಶಿವಂ ತುಷ್ಟುವುಸ್ತೇ ಸಮುದ್ರಾ ಮಾಂ ತದಾಂಬಿಕೇ ॥೭॥

ಪುಣ್ಯಮಾಪುಃ ಪುರಾರಾತಿಮರತಿಂ ಮನ್ಮಥಸ್ಯ ಚ ।
ಅಂತಕಸ್ಯ ಚ ದೇವೇಶಂ ಮಹೇಶಂ ವೃಷಭಧ್ವಜಂ ॥೮॥

ಅಂಧಕಾಂತಕಮಾಶಾಸ್ಯಂ ತ್ರ್ಯಂಬಕೇಶಮುಮಾಸಖಂ ।
ಪ್ರಣಮಾಮೋ ಮಹಾದೇವಮುದಾರಾಂಗಂ ಕಪರ್ದಿನಂ ॥೯॥

ಮಂಕಾಗಿ, ನಿಸ್ಸಾರವಾದ ಅಂತರಂಗವುಳ್ಳವುಗಳೆನಿಸಿ, ಕೊನೆಗೆ ಭಸ್ಮರುದ್ರಾಕ್ಷಗಳಿಂದ ಅಲಂಕೃತರಾಗಿ ನನ್ನ ಸಮೀಪಕ್ಕೆ ಬಂದರು. ॥೩-೪॥

ಶತರುದ್ರಾಧ್ಯಾಯವನ್ನು ಜಪಿಸುತ್ತಾ, ಶಿವಪಂಚಾಕ್ಷರ ಮಂತ್ರವನ್ನು ಪಠಿಸುತ್ತಾ, ಘುಸೃಣೇಶ್ವರಲಿಂಗವನ್ನು ಬಿಲ್ವಪತ್ರೆ, ಕಮಲ, ನೈದಿಲೆ ಮೊದಲಾದುವುಗಳಿಂದ ಅರ್ಚಿಸಿ, ಕೊನೆಗೆ ನನ್ನನ್ನು ಪ್ರತ್ಯಕ್ಷಮಾಡಿಕೊಂಡರು. ॥೫-೬॥

ಆಕಸ್ಮಾತ್ತಾಗಿ ದೃಗ್ಗೋಚರನಾದ ನನ್ನನ್ನು ನೋಡಿ ಆನಂದದಿಂದ ಆ ಸಾಗರಗಳು ಹೀಗೆ ಸ್ತುತಿಸಿದುವು. ॥೭-೮॥

"ತ್ರಿಪುರಗಳಿಗೂ, ಮನ್ಮಥನಿಗೂ, ಯಮನಿಗೂ ಭಯಪ್ರದನಾಗಿರುವ ವೃಷಭವಾಹನನೆನಿಸಿದ ಮಹೇಶ್ವರನೇ ನಿನಗೆ ವಂದನೆ. ಅಂಧಕಾಸುರನನ್ನು ನಾಶಮಾಡಿ, ತ್ರಿಲೋಚನನೆನಿಸಿ, ಭಕ್ತರಿಗೆ ವರಪ್ರದನಾದ ಗೌರೀವಲ್ಲಭನೇ, ನಿನಗೆ ನಮಸ್ಕಾರ. ಉದಾರವಾದ ಅವಯವವುಳ್ಳವನೂ, ಜಟಾಧಾರಿಯೂ ಆದ ಪರಶಿವನೇ, ನಿನಗೆ ಶಿರಸಾ ವಂದಿಸುವೆವು. ॥೯॥

ಮಹೋದಾರಸದ್ರತ್ನಹಾರೋಽಜುಕಂಠಂ
ಭುಶುಂಡೀಕರಾಬ್ಜಂ ಗರಾನ್ನೀಲಕಂಠಂ ।
ಗೃಣದ್ರುದ್ರಜಾಪ್ಯಾಘಧಾರಂ ಹರಂತಂ
ಮಹಾಕಾಮಟೆ (?) ತ್ವಕ್ಪರೀಶಂ ಲುಠಂತಃ ॥೧೦॥

ಸದಾ ನೋ ಭವಾಬ್ಧೌ ಪರಿತ್ರಾಹಿ ಶಂಭೋ ॥೧೧॥

ತವಾಂಘ್ರಿದ್ವಂದ್ವಾರ್ಚಾವಿಧಿನಿಯತಭಾರಾತ್ಮಕತಯಾ
ಸದಾನೇಶಿಷ್ಟಶ್ಚೇತ್ತ್ವಯಿ ಚ ಸ್ವಹಿತೋಪಾಸನಪರಃ ।
ಸ ಏವಾನುಗ್ರಾಹ್ಯಸ್ತವ ಹಿ ಸತತಂ ಹೃದ್ಯತಮ ಇತ್ಯಹೋ
ಭಾವೋ ಭಾನ್ಯೈರ್ಭವಹರಭವಾಬ್ಧಿಂ ಸ ತರತೇ ॥೧೨॥

ತವ ಗುಣಗಣನಾ ವಾ ಕೇನ ಕಾರ್ಯಾ ಮಹೇಶ
ಶ್ರುತಿಶಿಖರನಿವಿಷ್ಟಃ ಶಾಂತಚಿತ್ತೈಕಗಮ್ಯಃ ।
ಭುವನಭವನಮಧ್ಯೇ ಕಶ್ಚಿದಸ್ತ್ಯೇವ ಶಂಭೋ
ತವ ಪದಕಮಲೋತ್ಥಾಮೋದಸಂಮೋದಿತಾತ್ಮಾ ॥೧೩॥

---

ಮಹೇಶ್ವರನೇ, ನಿನ್ನ ಕಂಠವು ಅಮೂಲ್ಯವಾದ ರತ್ನಹಾರದಿಂದ ಶೋಭಿತವಾಗಿದೆ. ಕೈಯ್ಯಲ್ಲಿ ಭುಶುಂಡಿಯೆಂಬ ಆಯುಧವೂ, ಕತ್ತಿನಲ್ಲಿ ವಿಷಚಿಹ್ನೆಯೂ ವಿರಾಜಿಸುತ್ತಿವೆ. ರುದ್ರಾಧ್ಯಾಯವನ್ನು ಜಪಿಸುವವರ ಪಾಪಗಳನ್ನೆಲ್ಲಾ ನಿರ್ಮೂಲಗೊಳಿಸುತ್ತಿರುವೆ. ಇಂತಹ ಮನ್ಯುಧ್ವಂಸಕನಾದ ನಿನಗೆ ವಂದನೆ. ॥೧೦॥

ಎಲೈ ಪರಶಿವನೇ, ನಮ್ಮನ್ನು ಈ ದುಃಖಸಾಗರದಿಂದ ಉದ್ಧರಿಸು. ಯಾರು ಸದಾ ನಿನ್ನ ಪಾದಕಮಲಗಳ ಅರ್ಚನೆಯೆಂಬ ಭಾರವನ್ನು ಸಹಿಸಿದವರಾಗಿ, ಸರ್ವದಾ ನಿನ್ನ ಸಾನ್ನಿಧ್ಯದಲ್ಲಿಯೇ ನೆಲಸಿರುವರೋ, ಅವರಿಗೆ ನೀನು ಸುಲಭಗೋಚರನೆನಿಸುವೆ. ಅವರನ್ನು ನೀನು ಅನುಗ್ರಹಿಸುತ್ತಾ ಅವರ ಪರಭಕ್ತಿಗೆ ಮೆಚ್ಚಿ ಅವರಿಗೆ ಆಗಾಗ ಒದಗುವ ಸಂಸಾರದುಃಖಗಳನ್ನು ನಿವಾರಿಸುವವನಾಗುವೆ. ॥೧೧-೧೨॥

ಮಹೇಶನೇ, ಯಾರು ವೇದವೇದಾಂತಗಳನ್ನು ಪೂರ್ಣವಾಗಿ ಅರಿತು ತನ್ಮೂಲಕ ಚಿತ್ತಶುದ್ಧಿಯನ್ನು ಸಂಪಾದಿಸಿ, ಸರ್ವದಾ ನಿನ್ನ ಪಾದಕಮಲಗಳ

ಅಸ್ಮಿನ್ ಮಹತ್ಯರ್ಣವಗಸ್ತ್ವಮೀಯಃ
ವಿಶ್ವೇಶ ಆಶಾಸ್ಯ ಇತಿ ಪ್ರಸಿದ್ಧಃ ।
ನಿಷಂಗಭೂತಾನ್ ಭವತಶ್ಚ ಸಾಗರಾನ್
ಅಸ್ಮಾನಥೋ ಪಾಹಿ ಮಹೇಶದೃಷ್ಟ್ಯಾ ॥೧೪॥

ಇತಿ ಸಾಗರವಾಕ್ಯಾನಿ ಶ್ರುತ್ವಾಹಂ ಗಿರಿಜೇ ತದಾ ।
ತೇಷಾಂ ಪ್ರಸನ್ನೋ ಹ್ಯಭವಂಸ್ತಾಸ್ತದಾ ಪೂರಯಾಮಿ ವೈ ॥೧೫॥

ರತ್ನೈರನರ್ಘ್ಯೈಶ್ಶತಶಸ್ತಿಮಿಂಗಿಲಗಣೈಸ್ತದಾ ।
ಪುರಾಂಧಕಾಸುರಂ ಹತ್ವಾ ತದ್ರಕ್ತಾಕ್ತಕರಂ ಮಮ ॥೧೬॥

ನ ಧಾರ್ಯಮಿತಿ ದೇವೇಶಿ ಭೂಮೌ ಶೂಲಂ ಮಹತ್ತರಂ ।
ತತ್ಸಾಗರಜಲೈಃ ಪೂರ್ಣಂ ಶೂಲಪಾತಮಹತ್ಸರಃ ॥೧೭॥

ಧ್ಯಾನದಲ್ಲಿಯೇ ಕಾಲಕಳೆಯುವರೋ ಅವರು ಮಾತ್ರ ನಿನ್ನ ಗುಣಗಣಗಳನ್ನು ವಿವರಿಸಲು ಶಕ್ತರಾಗುವರು. ಇತರರಿಗೆ ನಿನ್ನ ಗುಣರಾಶಿಯ ಪರಿಜ್ಞಾನವು ಹೇಗೆ ತಾನೆ ಲಭಿಸೀತು? ॥೧೩॥

ಸಂಸಾರಸಾಗರದಲ್ಲಿ ಮುಳುಗಿರುವವನು ಆ ಸಾಗರದ ದಡವನ್ನು ಕಾಣಲು ವಿಶ್ವೇಶ್ವರನನ್ನು ಆರಾಧಿಸಬೇಕು ಎಂದು ಹೇಳುವರು. ಅಂತಹ ಮಹಾದೇವನೆನಿಸಿದ ನಿನಗೆ ನಾವೆಲ್ಲರೂ ಬತ್ತಳಿಕೆಯಂತೆ ಆಗಿದ್ದವು ಅಲ್ಲವೆ? (ತ್ರಿಪುರಾಸುರರ ಹನನ ಕಾಲದಲ್ಲಿ) ಅಂತಹ ನಮ್ಮನ್ನು ಈಗ ನೀನು ಕೃಪಾದೃಷ್ಟಿಯಿಂದ ಉದ್ಧರಿಸು."॥೧೪॥

ಎಂದು ವಿಧವಿಧವಾಗಿ ಸ್ತುತಿಸಿದ ಸಾಗರಗಳ ಮಾತುಗಳನ್ನು ಕೇಳಿ ನಾನು ಸುಪ್ರೀತನಾಗಿ ಅವರ ಇಷ್ಟದಂತೆಯೇ ಸಮುದ್ರಗಳಲ್ಲಿ ನಾನಾವಿಧವಾದ ರತ್ನಗಳನ್ನೂ ತಿಮಿಂಗಿಲಾದಿ ದೊಡ್ಡ ದೊಡ್ಡ ಪ್ರಾಣಿಗಳನ್ನೂ ಸೃಷ್ಟಿಸಿದೆನು. ಅಲ್ಲದೆ ದುಷ್ಟನಾಗಿದ್ದ ಅಂಧಕಾಸುರನನ್ನು ಕೊಂದೆನು. ಆಗ ಅವನ ರಕ್ತದಿಂದ ನನ್ನ ಕೈಯೆಲ್ಲವೂ ರಕ್ತಮಯವಾಯಿತು. ॥೧೫-೧೬॥

ಅಂತಹ ಕೈಯ್ಯಲ್ಲಿ ಪವಿತ್ರವಾದ ತ್ರಿಶೂಲವನ್ನು ಹಿಡಿಯಬಾರದೆಂದು ತಿಳಿದು, ಒಡನೆಯೇ ನೆಲದಮೇಲಕ್ಕೆ ತ್ರಿಶೂಲವನ್ನು ಬಿಟ್ಟುಬಿಟ್ಟೆನು. ಆ ಪ್ರದೇಶವು ಶೂಲದ ಭಾರಕ್ಕೆ ಒಂದು ಹಳ್ಳದಂತಾಯಿತು. ಆ ಹಳ್ಳದಲ್ಲಿ ಸಮುದ್ರದಿಂದ ಬಂದ

ವಸಂತಿ ಶೈವಾ ನಿಯುತಂ ಶೂಲಪಾತಸರಸ್ತಟೇ ।
ಪಂಚಾಗ್ನಿನಿರತಾಶ್ಚಾನ್ಯೇ ವಾಯುಭಕ್ಷಾಸ್ತಥಾಪರೇ ॥೧೯॥

ಅಶ್ಮಕುಟ್ಟಾ ಮಹಾದೇವಿ ದಂತೋಲೂಖಲಿನಸ್ತಥಾ ।
ಸರ್ವೇ ಮಲ್ಲಿಂಗಪೂಜಾಭಿರ್ನಯಂತ್ಯಾಯುರ್ಮುನೀಶ್ವರಾಃ ॥೨೦॥

ಭಸ್ಮಾಭ್ಯಕ್ತಾಸ್ಸದಾ ಗೌರಿ ಶಿವನಾಮಜಪಾದರಾಃ
ತತ್ರ ತಾನ್ ಸತತಂ ದೃಷ್ಟ್ವಾ ನಿಲಿಂಪಾಭಯಕಂಪಿತಾನ್ ॥೨೧॥

ಇಂದ್ರೋಪೇಂದ್ರಾ ವಂಚಯಿತ್ವಾ ವಿಷ್ಣೋರ್ದೇವಪದೇಷು ಚ ।
ತೇಷಾಂ ವಾಂಛಾ ನೈವ ಗೌರಿ ಮತ್ಪಾದಾರ್ಚಾಪರಾಯಣಾಃ ॥೨೨॥

ತೃಣಾಯ ತೇ ಮಹೇಶಾನಿ ವಿಷ್ಣ್ವಾದೀನಾಂ ಪದಂ ಶುಭಂ ।
ಮತ್ಪಾದಧ್ಯಾನಸಕ್ತಾನಾಂ ಭಾವಾನಾಂ ಭೂತಯಸ್ಸದಾ ॥೨೩॥

ಪದೇ ಪದೇ ಭವಿಷ್ಯಂತಿ ಭಾವುಕಾನಾಂ ನ ಸಂಶಯಃ ।
ಭವಾನಿ ನಿಯತಂ ಸತ್ಯಂ ಮಮ ಭಕ್ತಸ್ಯ ಕೇವಲಂ ॥೨೪॥

---

ನೀರು ತುಂಬಿಹೋಯಿತು. ಆ ಸರೋವರವೇ ಈಗ ಪಂಚಾಗ್ನಿಮಧ್ಯೆ ತಪಸ್ಸು ಮಾಡುವವರಿಗೂ, ಅನಿಲಾಹಾರದಿಂದ ದೇವಧ್ಯಾನಮಾಡುವವರಿಗೂ ಸಿದ್ಧಿಪ್ರದವಾಗಿದೆ. ॥೧೮-೧೯॥

ಕಲ್ಲಿನ ಹೊಡೆತದಿಂದಲೂ, ಒರಳಿನಲ್ಲಿ ತಲೆಯಿಟ್ಟು ದೇವಧ್ಯಾನಮಾಡುವುದರಿಂದಲೂ, ಭಸ್ಮಸ್ನಾನಾದಿಗಳಿಂದಲೂ, ಶಿವನಾಮಗಳನ್ನು ಜಪಿಸುವವರು ಸರ್ವದಾ ಅಲ್ಲಿಯೇ ಕಾಲಕಳೆಯುತ್ತಾ, ದೇವತೆಗಳಿಗೂ ಭಯಪ್ರದರಾಗಿ ಜೀವಿಸುತ್ತಿರುವರು. ॥೨೦-೨೧॥

ಅಲ್ಲಿ ನೆಲಸಿ ತಪಸ್ಸುಮಾಡುತ್ತಿರುವವರು ಸರ್ವದಾ ನನ್ನ ಪಾದಧ್ಯಾನದಲ್ಲಿಯೇ ಮಗ್ನರಾಗಿದ್ದು, ಇಂದ್ರ, ಉಪೇಂದ್ರಾದಿಗಳ ಪದವಿಯನ್ನೂ, ವಿಷ್ಣ್ವಾದಿಗಳ ಸ್ಥಾನವನ್ನೂ ಕೂಡ ತೃಣದಂತೆ ಭಾವಿಸುವರು. ಸದಾ ಶಂಕರನ ಪಾದಧ್ಯಾನವೇ ತಮಗೆ ಸಕಲ ನಿಧಿಯೆಂದೂ ಅರಿತಿರುವರು. ॥೨೨-೨೩॥

ಅಂತಹ ನನ್ನ ಭಕ್ತರಿಗೆ ಸಕಲ ಸನ್ಮಂಗಳಗಳೂ ತಾವಾಗಿಯೇ ಲಭಿಸುವುವು. ಇದು ಸತ್ಯ. ಹದಿನಾಲ್ಕು ಲೋಕಗಳಲ್ಲಿಯೂ ನನ್ನ ಭಕ್ತರು ವ್ಯಾಪಿಸಿ

ಮದ್ಭಕ್ತೈರ್ವರ್ಯೈರ್ಕೃತ್ಯೈಸ್ತಾ ಲೋಕಾಃ ಸರ್ವೇ ಚತುರ್ದಶ ।
ಅಗಸ್ತ್ಯೇನಾಪಿ ಭಕ್ತೇನ ಸ ಯಜ್ಞಾಃ ಶ್ರುತಿಕೀರ್ತಿತಾಃ ॥೨೫॥

ವೀರಭದ್ರಗಣೇನಾಪಿ ಬ್ರಹ್ಮವಿಷ್ಣ್ವಾದಯಸ್ಸುರಾಃ ।
ದಕ್ಷಯಜ್ಞೇ ತದಾ ಗೌರಿ ಶಿಕ್ಷಿತಾಶ್ಚಾಪಿಖಂಡಿತಾಃ ॥೨೬॥

ಏತಾದೃಶಾನಾಂ ಭಕ್ತಾನಾಂ ಸುರೇಷು ಗಣನಾಪಿ ನ ।
ಕಿಂ ಚತುರ್ದಶಲೋಕೋತ್ಥಾಃಶ್ರಿಯೋ ತೇಷಾಂ ಭವಿಷ್ಯತಿ ॥೨೭॥

ಆಪಾತಮಧುರಾ ಸಾ ಶ್ರೀಃ ಸಂಯೋಗಾ ಹಿ ವಿಯೋಗಜಾಃ ।
ಧನಧಾನ್ಯಾನಿ ಸರ್ವಾಣಿ ರತ್ನಾನಿ ವಿವಿಧಂ ವಸು ॥೨೮॥

ನಶ್ವರಾಣ್ಯತಿದುಃಖಾನಿ ಭಯಮೂಲಾನಿ ಶಂಕರಿ ।
ಮಮ ಭಕ್ತಿಸ್ಸದಾಗೌರಿ ಸರ್ವಾಪನ್ನಿಲಯಂ ಸದಾ ॥೨೯॥

ಮುಕ್ತಯೇ ಮಮ ಭಕ್ತಿಶ್ಚ ಬಂಧಾಯ ನರಕಾಯ ಚ ।
ಧನಂ ತದ್ಭೌತಿಕಂ ಗೌರಿ ಸರ್ವಾಪನ್ನಿಲಯಂ ಸದಾ ॥೩೦॥

---

ಅಲ್ಲೆಲ್ಲಾ ಭಯಂಕರವಾದ ಮತ್ತು ಮಹಿಮಾಪೂರ್ಣವಾದ ಕಾರ್ಯಗಳನ್ನೆಸಗಿರುವರು. ಅದಕ್ಕೆ ನಿದರ್ಶನವಾಗಿ ಅಗಸ್ತ್ಯಮುನಿಯೊಬ್ಬನೇ ಶ್ರುತಿಪ್ರಚೋದಿತವಾದ ಸಕಲ ಯಾಗವಿಧಿಗಳನ್ನೂ ಉಪಪಾದಿಸಿರುವನು. ॥೨೪-೨೫॥

ದಕ್ಷಯಜ್ಞಸಮಾರಂಭದಲ್ಲಿ ನನ್ನ ಭಕ್ತನಾದ ವೀರಭದ್ರನು ಬ್ರಹ್ಮಾದಿ ಸಕಲ ದೇವತೆಗಳನ್ನೂ ಶಿಕ್ಷಿಸಿ ಸೋಲಿಸಿದನು. ಇಂತಹ ಅಗಾಧಕೃತ್ಯಗಳನ್ನು ಮಾಡುವ ನನ್ನ ಭಕ್ತರು ದೇವತೆಗಳಲ್ಲಿ ಬಹುಮುಂದಿಯಿರುವರು. ಅಂತಹವರಿಗೆ ಚತುರ್ದಶಲೋಕಗಳ ಐಶ್ವರ್ಯವೆಲ್ಲಾ ಸುಲಭವಾಗಿ ದೊರಕುವುದು. ॥೨೬-೨೭॥

ಆದರೆ ಸಂಯೋಗದಿಂದ ಮತ್ತು ವಿಯೋಗದಿಂದ ಒದಗುವ ಸಕಲ ಸಂಪತ್ತುಗಳೂ ಕ್ಷಣಕಾಲ ರಮಣೀಯವಾದವುಗಳು ಮತ್ತು ನಶ್ವರವಾದವುಗಳು, ಮತ್ತು ಭಯಜನಕವಾದವುಗಳು. ಅಂತಹ ಐಶ್ವರ್ಯದಿಂದ ಸಕಲವಿಪತ್ತುಗಳೂ ಸಂಭವಿಸುವುವು. ನನ್ನ ಭಕ್ತಿಯೊಂದು ಮಾತ್ರ ನಶ್ವರವಲ್ಲದ್ದು. ಸ್ಥಿರವಾಗಿದ್ದು ಸುಖಪ್ರದವಾದದ್ದು. ಅದು ಶಾಶ್ವತವಾದ ಭುಕ್ತಿ ಮತ್ತು ಮುಕ್ತಿ ಇವುಗಳನ್ನು ಕೊಡಬಲ್ಲುದು. ॥೨೮-೨೯-೩೦॥

ಆನಂದಕಂದಾ ಮದ್ಭಕ್ತಿರ್ಮೋಕ್ಷದಾ ಕಾಮದಾ ಧ್ರುವಂ ।
ತಯಾ ಭಕ್ತ್ಯಾ ವಿರಾಜಂತೇ ಚಂದ್ರರೇಖೇವ ಶಾರದೀ ॥೩೧॥

ಮದ್ಭಕ್ತಾ ನಿಯತಾಸ್ಸರ್ವೇ ವಸಂತಿ ಶಿವಪೂಜಕಾಃ ।
ತೃಣೀಕೃತೇಂದ್ರಚಂದ್ರಾಣಾಂ ತೇಷಾಂ ಸ್ವರ್ಗಸ್ತು ತುಚ್ಛಕಃ ॥೩೨॥

ಅಚ್ಛಾನಾಂ ಚ ನಿರಿಚ್ಛಾನಾಂ ಮುಚ್ಛಾಸನಯತಾತ್ಮನಾಂ ।
ಆನಂದನಂದಿತಸ್ವಾಂತಾ ಆನಂದಘನಪೂಜಯಾ ॥೩೩॥

ತೇ ವೈ ಶಿವರಸಾಸ್ವಾದನಂದಿತಾಖಿಲವೃತ್ತಯಃ ।
ಘುಸೃಣೇಶಪದದ್ವಂದ್ವಪೂಜಾಕ್ಷಪಿತಕಲ್ಮಷಾಃ ॥೩೪॥

ವಸಂತಿ ಸತತಂ ಶೈವಾಸ್ತಸ್ಮಿನ್ ಕ್ಷೇತ್ರೇ ಗಿರೀಂದ್ರಜೇ ॥೩೫॥

ಕುತ್ರ ಕ್ಷೇತ್ರಮಿದಂ ಶಂಭೋ ತ್ರಿನೇತ್ರಪ್ರಿಯಕಾರಕಂ ।
ತತ್ಕ್ಷೇತ್ರಮಹಿಮಾಪಾರಕಥಾಶ್ರವಣಲಾಲಸಂ ॥೩೬॥

ಮಮ ಚಿತ್ತಮಭೂದ್ದೇವ ದಯಯಾ ತದ್ವದಸ್ವ ಮಾಂ ।
ಶಿವೋ ಗೌರೀವಚಶ್ಶ್ರುತ್ವಾ ತತ್ಕ್ಷೇತ್ರಂ ಪ್ರಾಹ ಶಂಕರಃ ॥೩೭॥

---

ನನ್ನ ವಿಷಯಕವಾದ ಭಕ್ತಿಯೆಂಬುದು ನನ್ನ ಭಕ್ತರಿಗೆ ಸ್ಥಿರವಾದ ಆನಂದದಾಯಕವಾಗುವುದಲ್ಲದೆ, ಅವರು ಯಾವುದನ್ನು ಅಪೇಕ್ಷಿಸುವರೋ, ಅದನ್ನು ಸುಲಭವಾಗಿ ಪಡೆಯುವವರಾಗುವರು. ಶರತ್ಕಾಲದ ಚಂದ್ರಕಾಂತಿಯಿಂದ ರಂಜಿಸುವಂತೆ, ಹರಭಕ್ತಿಯಿಂದ ನನ್ನ ಭಕ್ತರು ವಿರಾಜಿಸುವರು. ಅಲ್ಲದೆ ಅವರು ಇಂದ್ರಚಂದ್ರರನ್ನೂ, ಅವರ ಲೋಕವಾದ ಸ್ವರ್ಗವನ್ನೂ ಧಿಕ್ಕರಿಸುವರು. (೩೧-೩೨)

ನನ್ನಲ್ಲಿ ಅತಿಶಯವಾದ ಭಕ್ತಿಯನ್ನಿಟ್ಟಿರುವವರು, ಪುಣ್ಯಾತ್ಮರೇ ಆಗಲಿ, ಪಾಪಿಷ್ಠರೇ ಆಗಲಿ, ಅವರು ಆನಂದಮಯಸಾಗರದಲ್ಲಿ ಮುಳುಗುವರು. ಶಿವಭಕ್ತಿಯೆಂಬ ಆನಂದಾಮೃತಪಾನಮಾಡಿದವರು, ಘುಸೃಣೇಶ್ವರಪಾದದ್ವಂದ್ವಗಳ ಅರ್ಚನೆಯಿಂದ ತಮ್ಮ ಪಾಪಗಳನ್ನೆಲ್ಲಾ ಕಳೆದುಕೊಳ್ಳುವರು. (೩೩-೩೪)

ಹಾಗೆಯೇ ನನ್ನ ಕ್ಷೇತ್ರದಲ್ಲಿಯೇ ಸದಾ ಅವರು ವಾಸಮಾಡುತ್ತಾ ತಮ್ಮ ಆಯುಸ್ಸನ್ನು ಕಳೆಯುವರು. ಎಂದು ಶಂಕರನು ಹೇಳಲು, ಆಗ ಪಾರ್ವತಿಯು

ಭೀಮರಥ್ಯಾ ಉದಗ್ಭಾಗೇ ತ್ರಿಂಶತ್ಕ್ರೋಶೋಪರಿ ಸ್ಥಿತಃ ।
ಶೂಲಪಾತಸ್ತಥಾ ತೀರ್ಥಂ ತತ್ರಾಸ್ತ್ಯೇವ ಶಿವಾಲಯಃ ॥೩೮॥

ಶೂಲಪಾತಸರಸ್ತೀರೇ ತತಾಪ ಪರಮಂ ತಪಃ ।
ಉದ್ದಾಲಕೋ ಮುನಿರ್ನಾಮ್ನಾ ಜ್ಞಾನಾರ್ಥಂ ಶಂಕರಂ ತದಾ॥೩೯॥

ಸಮಭ್ಯರ್ಚ್ಯ ಮಹಾದೇವಂ ಬಿಲ್ವಪತ್ರೈರ್ಮಹೇಶ್ವರಂ ।
ಘುಸೃಣೇಶಂ ಮಹಾದೇವಂ ಮಾಂ ತುಷ್ಟಾವ ತದಂಬಿಕೇ ॥೪೦॥

ಘುಸೃಣೇಶ ಮಹೇಶ ಶಂಕರ
ಪ್ರಣತಾಮರಭೂರುಹ ಪ್ರಸೀದ ಶಂಭೋ ।
ದುರಿತಾಪಹಪಾದಪದ್ಮಮಾದ್ಯಂ
ಘುಸೃಣಾರುಣಮಾನತೋಽಸ್ಮಿ ತೇ ಪದಾಬ್ಜಂ ॥೪೧॥

---

ಮತ್ತೆ ಪರಶಿವನನ್ನು ಕುರಿತು "ಶಂಭುವೇ, ಅಂತಹ ಶಿವಕ್ಷೇತ್ರವು ಎಲ್ಲಿರುವುದು? ಅದರ ಅಪಾರವಾದ ಮಹಿಮೆಯನ್ನು ಕೇಳಲು ನನ್ನ ಚಿತ್ತವು ತವಕಪಡುತ್ತಿರುವುದು. ದಯೆಯಿಂದ ಅವೆಲ್ಲವನ್ನೂ ನನಗೆ ತಿಳಿಸಬೇಕು" ಎಂದು ಪ್ರಾರ್ಥಿಸಿದಳು. ||೩೫-೩೬-೩೭||

ಆಗ ಶಂಕರನು ಆ ಕ್ಷೇತ್ರದ ವಿಷಯವಾಗಿ ಹೀಗೆಂದನು. "ಭೀಮರಥೀ ನದಿಯ ತೀರದಲ್ಲಿ ಸುಮಾರು ಮೂವತ್ತು ಮೈಲಿಯ ದೂರದಲ್ಲಿ ಶೂಲಪಾತತೀರ್ಥವಿರುವುದು. ಅಲ್ಲಿಯೇ ಒಂದು ಶಿವಾಲಯವೂ ಕಾಣುವುದು. ಅದೇ ಶೂಲಪಾತ ತೀರ್ಥದ ಸಮೀಪದಲ್ಲಿ ಉದ್ದಾಲಕನೆಂಬ ಮಹರ್ಷಿಯು ಜ್ಞಾನಾರ್ಜನೆಗಾಗಿ ಶಂಕರನನ್ನು ಕುರಿತು ತಪಸ್ಸು ಮಾಡಿದನು. ||೩೮-೩೯||

ಅಲ್ಲದೆ ಅಲ್ಲಿರುವ ಘುಸೃಣೇಶ್ವರಲಿಂಗವನ್ನು ಬಿಲ್ವಪತ್ರಾದಿಗಳಿಂದ ಪೂಜಿಸಿ ಅಲ್ಲಿ ನನ್ನನ್ನು ಈರೀತಿಯಾಗಿ ಸ್ತುತಿಸಿದನು. ||೪೦||

ಎಲೈ ಘುಸೃಣೇಶ್ವರನೇ, ಮಹೇಶ್ವರನೇ, ನಿನ್ನನ್ನು ನಮಸ್ಕರಿಸುವ ದೇವತೆಗಳಿಗೆ ಕಲ್ಪವೃಕ್ಷದಂತೆ ಇಷ್ಟಾರ್ಥಗಳನ್ನೆಲ್ಲಾ ಅನುಗ್ರಹಿಸುವವನೇ, ನೀನು ಭಕ್ತರ ಸಕಲ ಪಾಪರಾಶಿಯನ್ನೂ ನಾಶಗೊಳಿಸುವವನಲ್ಲವೇ. ಇಂತಹ ನಿನ್ನ ಪಾದಪದ್ಮಗಳಿಗೆ ವಂದಿಸುವೆನು. ||೪೧||

ಮರಣಾವಸರೇ ನ ಕೋಽಪಿ ಶಂಭೋ
ವಿನಿವಾರಕ ಇತ್ಯವೈಮಿ ಬುದ್ಧ್ಯಾ ।
ಶರಣಂ ಚರಣಂ ಶಿವ ತ್ವದೀಯಂ
ಘುಸೃಣೇಶಾನ ನತೋಽಸ್ಮಿ ದುಃಖನಾಶಂ ॥೪೨॥

ಕರುಣಾಕರ ದೇವ ದೀನಬಂಧೋ
ಸರಣಿಂ ದೇಹಿ ವಿಮುಕ್ತಿಮಾರ್ಗಹೇತೋ ।
ಕರಣಂ ವಿನಿವೇಶಯಾಶು ತೇ ಪದಾಬ್ಜೇ
ಘುಸೃಣೇಶಾನ ನತೋಽಸ್ಮಿ ಭಕ್ತಿಯುಕ್ತಃ ॥೪೩॥

ಉತ್ಥಾಲಕಜಟೇನ್ನೈವಂ ಮುನಿನೋದ್ದಾಲಕೇನ ಚ ।
ಸಂಸ್ತುತಃ ಪರಮೇಶಾನಸ್ತಸ್ಯ ದೃಷ್ಟಿಪಥಂ ಗತಃ ॥೪೪॥

ಪ್ರಣತೋತ್ಥಾಪಿತೋ ದೋರ್ಭ್ಯಾಂ ಪಾದಯೋಃ ಪತಿತೋ ಮುನಿಃ ।
ವರೇಣ ಛಂದಿತಶ್ಚಾಪಿ ಸ ಉವಾಚ ಕೃತಾಂಜಲಿಃ ॥೪೫॥

ಎಲೈ ಶಂಭುವೇ, ಮರಣಕಾಲದಲ್ಲಿ ಪ್ರಾಣಿಗಳಿಗೆ ನಿನ್ನ ನಾಮಸ್ಮರಣೆಯೊಂದೇ ಜನ್ಮತಾರಕವೆನಿಸುವುದಲ್ಲವೆ! ಘುಸೃಣೇಶ್ವರನೇ, ದುಃಖನಾಶಕನೇ, ನಿನ್ನ ಪಾದಾರವಿಂದಗಳಿಗೆರಗಿ, ನಿನ್ನನ್ನೇ ಮೊರೆಹೊಕ್ಕಿರುವೆನು. ॥೪೨॥

ಎಲೈ ಕರುಣಾಕರನೇ, ದೀನರಕ್ಷಕನೇ, ನನಗೆ ಮುಕ್ತಿಮಾರ್ಗವನ್ನು ತೋರಿಸು. ನಿನ್ನ ಪಾದಕಮಲವು ಸದಾ ನನ್ನ ಹೃದಯದಲ್ಲಿ ನೆಲಸಿರುವಂತೆ ಅನುಗ್ರಹಿಸು. ಎಲೈ ಘುಸೃಣೇಶ್ವರನೇ, ನಾನು ಅತ್ಯಂತ ಭಕ್ತಿಯಿಂದ ನಿನ್ನ ಪಾದಗಳಿಗೆ ನಮಸ್ಕರಿಸುವೆನು. ॥೪೩॥

ಹೀಗೆ ಜಟಾಧಾರಿಯಾದ ಉದ್ದಾಲಕಮಹರ್ಷಿಯು ಈಶ್ವರನನ್ನು ಭಯಭಕ್ತಿಯಿಂದ ಸ್ತುತಿಸಲು, ಅವನ ಸ್ತುತಿಗೆ ಮೆಚ್ಚಿ ಶಂಕರನು ಪ್ರತ್ಯಕ್ಷನಾದನು. ಒಡನೆಯೇ ಋಷಿಯು ಸಾಷ್ಟಾಂಗ ನಮಸ್ಕಾರಮಾಡಿ, ತನ್ನ ಇಷ್ಟಾರ್ಥಪ್ರಾಪ್ತಿಗಾಗಿ ಈರೀತಿ ಪ್ರಾರ್ಥಿಸಿಕೊಂಡನು. ॥೪೪-೪೫॥

ಜ್ಞಾತುಮಿಚ್ಛಾಮಿ ತೇ ಜ್ಞಾನಂ ವೇದಾಂತೇದ್ಯ ಮಹೇಶ್ವರ ।
ನ ಜ್ಞಾನೇನ ವಿನಾ ಮುಕ್ತಿರಿತಿ ವೇದಾ ವದಂತಿ ಹಿ ॥೪೬॥

ಉದ್ದಾಲಕಸ್ಯ ವಚಸಾ ತತ್ಸ್ತುತ್ಯಾಹಂ ಸುತೋಷಿತಃ ।
ತಮವೋಚಂ ತದಾ ದೇವಿ ಪ್ರಾಂಜಲಿಂ ಪುರತಸ್ಸ್ಥಿತಂ ॥೪೭॥

ವತ್ಸೋದ್ದಾಲಕ ತೇ ಸ್ತುತ್ಯಾ ಭಕ್ತ್ಯಾ ಚಾನನ್ಯಯಾ ತವ ।
ತದ್ ಜ್ಞಾನಂ ದಾತುಮಿಚ್ಛಾಮಿ ಕಿಂ ತ್ವೇಕಂ ವಚ್ಮಿ ತಚ್ಛೃಣು॥೪೮॥

ನಾವಿರಕ್ತಸ್ಯ ಸಂಸಾರಾದುಕ್ತಂ ತಜ್ಜ್ಞಾನಮುತ್ತಮಂ ।
ನೋ ಬೋಧ್ಯಂ ಚ ಭವೇ ದೇವಿ ವಿರಕ್ತಸ್ಯ ತು ಸಂಸೃತೌ ॥೪೯॥

ಪ್ರಸರತ್ಯಖಿಲಂ ಜ್ಞಾನಂ ನಿಮ್ನಮಾಪೋ ಯಥಾ ಮುನೇ ।
ನಾವಿರತೋ ದುಶ್ಚರಿತಾದಿತ್ಯಾಹ ಶ್ರುತಿರಾದರಾತ್ ॥೫೦॥

ತಸ್ಮಾದ್ಭವವಿರಕ್ತ್ಯರ್ಥಂ ಭವದುಃಖಾನಿ ಮೇ ಶೃಣು ।
ಗರ್ಭಾಂತಾವಧಿದುಃಖಾನಾಂ ಶತಾನಿ ಮುನಿಪುಂಗವ ॥೫೧॥

---

ಸ್ವಾಮಿಯೇ, ದೇವದೇವನೇ, ಈಗ ನಾನು ನಿನ್ನ ವಿಷಯಕವಾದ ನಿಜ ಸ್ವರೂಪವನ್ನು (ಆತ್ಮಜ್ಞಾನವನ್ನು) ತಿಳಿಯಬಯಸುವೆನು. ಜ್ಞಾನದಿಂದಲೇ ಮುಕ್ತಿ ಯೆಂದು, ಸಕಲ ವೇದಗಳೂ ಸಾರುತ್ತಿವೆ. ಅಂತಹ ಮುಕ್ತಿಪ್ರದವಾದ ಜ್ಞಾನವನ್ನು ನನಗೆ ತಿಳಿಯಹೇಳಬೇಕು" ಎಂದು ಪ್ರಾರ್ಥಿಸಲು, ಎಲೌ ದೇವಿಯೇ, ನಾನು ಅವನ ಭಕ್ತಿಭಾವಕ್ಕೆ ಮೆಚ್ಚಿ, ಅವನನ್ನು ಕುರಿತು ಹೀಗೆಂದೆನು. ॥೪೬-೪೭॥

" ಎಲೈ ಉದ್ದಾಲಕನೇ, ನಿನ್ನ ಭಕ್ತಿಗೂ, ಸ್ತುತಿಗೂ ಮೆಚ್ಚಿರುವೆನು. ನಿನ್ನ ಕೋರಿಕೆಯಂತೆ ಮುಕ್ತಿಪ್ರದವಾದ ದಿವ್ಯಜ್ಞಾನವನ್ನು ಉಪದೇಶಿಸುವೆನು. ಸಂಸಾರಿ ಯಾದವನು ವೈರಾಗ್ಯವನ್ನು ಪಡೆಯದಿದ್ದರೆ ಅವನಿಗೆ ಎಂದೂ ಮೋಕ್ಷವು ದೊರೆಯ ಲಾರದು. ಮೊದಲು ಸಂಸಾರಿಗೆ ವೈರಾಗ್ಯವನ್ನುಪದೇಶಿಸಬೇಕು. ॥೪೮-೪೯॥

ಸಂಸಾರದಲ್ಲಿ ಜಿಹಾಸೆಯನ್ನು ಪಡೆದವನಲ್ಲಿ ಸಕಲ ಜ್ಞಾನವೂ ಆಶ್ರಯವನ್ನು ಪಡೆಯುವುದು. ಹಳ್ಳದಲ್ಲಿ ನೀರು ನಿಲ್ಲುವಂತೆ ಸಕಲ ಶಿವಜ್ಞಾನವೂ ಅವನಲ್ಲಿ ದೃಢವಾಗಿ ನಿಲ್ಲುವುದು. ಆದಕ್ಕಾಗಿ ಮೊದಲು ಸಂಸಾರಿಗೆ ಒದಗುವ ಕ್ಲೇಶಗಳನ್ನು ಅರಿತು ಅದನ್ನು ತಪ್ಪಿಸಿಕೊಳ್ಳಲು ಯತ್ನಿಸಬೇಕು. ಪ್ರಾಣಿಗಳು ಗರ್ಭವಾಸದಿಂದ

ಇತ್ಥಂ ಸಂಬೋಧಿತೋದ್ದಾಲೋ ಪ್ರಾಹೇತಿ ಸ ಶಿವೋಽವದತ್ ।
ತದೇತಚ್ಛೃಣು ದೇವೇಶಿ ಸಾವಧಾನಮನಾಸ್ಸುಖಂ ॥೩೨॥

ಶೃಣೂದ್ದಾಲಕ ದುಃಖಾನಿ ಸಂಸಾರಸ್ಯ ವಿಶೇಷತಃ ।
ಮಾಮಪ್ರಾಪ್ಯ ನರೋ ಬಾಢಂ ದುಃಖಾನ್ಯತ್ಯಂತಮಶ್ನುತೇ ॥೩೩॥

ಗರ್ಭಪೇಶೀಗತೋ ಜಂತುರ್ಮಾಂ ಸದಾ ಸ್ಮರತಿ ಮೋಚಕಂ ।
ತದ್ದುಃಖಾನಿ ಶೃಣುಷ್ವಾರ್ಯೇ ವೈರಾಗ್ಯಾರ್ಥಂ ಶಿವೇ ಸದಾ ॥೩೪॥

ಹಾ ಹಾ ಗರ್ಭನಿವಾಸದುಃಖಮಧುನಾ ವಕ್ತುಂ ನ ವೈ ತತ್ಕ್ಷಮಂ
ಕಃ ಸೋಢಾ ನರಕಾಗ್ನಿದುಃಖಶತಕಂ ಭೋಕ್ತುಂ ನ ಮೇ ಕಾಲತಃ ।
ಕುಂಭೀಪಾಕಾಸಿಪತ್ರೈಃ ಪಟುತರಗದಯಾ ತಾಡನೈ ಸ್ತಪ್ತಮಾರ್ಗೈಃ
ಸಂತಪ್ತಭ್ರಾಷ್ಟ್ರಜಾಲೈರ್ಮಲಜಲವಸಪೂಯಾದಿಕುಂಡೋತ್ಥಕೀಟೈಃ
॥೩೫॥

ಹಿಡಿದು ಕೊನೆಯವರೆಗೂ ಅನುಭವಿಸುವ ದುಃಖಪರಂಪರೆಗಳನ್ನು ಮೊದಲು ತಿಳಿಸುವೆನು. ಕೇಳು. ॥೩೦-೩೧॥

ಎಂದು ಉದ್ದಾಲಕನಿಗೆ ನಾನು ಹೇಳಿದ ಭವದುಃಖಗಳನ್ನು ಎಲೌ ದೇವಿಯೇ, ನಿನಗೆ ಈಗ ತಿಳಿಸುವೆನು. ಸಾವಧಾನ ಚಿತ್ತಳಾಗಿ ಕೇಳು. ಎಂದು ಶಂಕರನು ದೇವಿಗೆ ಅದೇ ವಿಷಯವನ್ನು ಮತ್ತೆ ವಿವರಿಸತೊಡಗಿದನು. ॥೩೨॥

" ಎಲೈ ಉದ್ದಾಲಕನೇ ಕೇಳು ; ಸಂಸಾರದಲ್ಲಿ ಸಿಕ್ಕಿ ನರಳುತ್ತಿದ್ದರೂ ಮನುಷ್ಯನು ನನ್ನನ್ನು ಸೇವಿಸದೆ ಅತ್ಯಂತ ಕಷ್ಟಗಳನ್ನನುಭವಿಸುವನು. ಮಾತೃಗರ್ಭದಲ್ಲಿ ಸಿಲುಕಿದ ಗರ್ಭಪಿಂಡವು ಆ ಯಾತನೆಯನ್ನು ಸಹಿಸಲಾರದೆ ದುಃಖಮೋಚಕನಾದ ನನ್ನನ್ನು ಆಗ ಸ್ಮರಿಸುತ್ತದೆ. ಆವರೆ ಮುಂದೆ ಅದಕ್ಕೆ ಒದಗುವ ಕಷ್ಟಗಳನ್ನು ವಿವರಿಸುವೆನು. ಕೇಳು. ॥೩೩-೩೪॥

ಆಗರ್ಭಪಿಂಡವು ಹೀಗೆ ಹೇಳುತ್ತದೆ " ಅಯ್ಯೋ, ಯಮನು ನರಕದಲ್ಲಿ ಪಾಪಿಗಳಿಗೆ ವಿಧಿಸುವ, ಕುಂಭೀಪಾಕವೆಂಬ ನರಕಗೃಹ, ಅಸಿಪತ್ರವೆಂಬ ಕತ್ತಿಯಂತೆ ಕಠಿನವಾದ ಎಲೆಗಳುಳ್ಳ ವೃಕ್ಷ, ಉಕ್ಕಿನ ಗದೆ, ಕಾದು ಸುಡುವಮಾರ್ಗ, ಉಕ್ಕಿನ ಕಾದ ಪಕ್ಷಿಗಳು, ಮಲಮೂತ್ರಗಳ ಮತ್ತು ರಕ್ತಕೀವುಗಳ ಬಾವಿ, ಅವುಗಳಲ್ಲಿ ಕಿತ್ತುತಿನ್ನುವ ಹುಳುಗಳು, ಇವೆಲ್ಲವುಗಳಿಂವಲೂ ಒದಗುವ ಯಾತನೆಗಳನ್ನು

ವಸ್ತುಂ ನೇಚ್ಛಾಮಿ ಗರ್ಭೇ ಮಲಜಲಕಲಿತಾಪಾರದುರ್ಗಂಧಿಪೂರೇ
ಮಾತುಃ ಕುಕ್ಷ್ಯಂತ್ರಘನಾಸ್ಥಿಕ್ರಕಚಕಿಣತನುಃ ಕೀಟದಂಷ್ಟ್ರಾದಿದಷ್ಟಃ ।
ಅಂತರ್ಜಾನ್ವರ್ಧಮಸ್ತಂ ಕಟುವಿದಹಿರಸೈರ್ಮಾತೃಭುಕ್ತ್ಯಾ ವಿದಗ್ಧೈಃ
ರಕ್ತೈಃ ಕ್ಲಿನ್ನಾಂತ್ರಬದ್ಧಂ ಶಿವಶಿವಶಿವ ಮಾಂ ಮೋಚಯಾದ್ಯಾಶು ಶಂಭೋ ॥೫೬॥

ಪಯೋಧರಪಯಶ್ಚಕೈರ್ನಿಭೃತಪೀತಕುಕ್ಷಿಹೃದೋ
ಮಹೇಶ ವಿವಿಧಾನ್ನಕೈಃ ಸಮಭಿಪೂರ್ಯಮಾಣೋದರಃ ।
ಅಧೋಮುಖವಿಲಂಬಿತಹೃದಯಕೋಶಪೇಶೀಗತಃ
ಕದಾ ಖಲು ಭವತ್ಪದಂ ಶಿವ ಭಜಾಮಿ ಯೋನ್ಯುಜ್ಝಿತಃ ॥೫೭॥

---

ವಿವರಿಸಲು ಯಾರಿಂದತಾನೇ ಸಾಧ್ಯವಾದೀತು? ಅಲ್ಲದೆ ಅದಕ್ಕಿಂತ ಹೆಚ್ಚಾಗಿ ಈ ಗರ್ಭದಲ್ಲಿ ಸಿಕ್ಕಿಕೊಂಡಿರುವ ನನಗೆ ಎಷ್ಟು ವ್ಯಥೆಯಿದೆ ಎಂಬುದನ್ನು ಹೇಳಲು ಸಾಧ್ಯವೇ?" ॥೫೫॥

ಆ ಗರ್ಭಪಿಂಡವು ಮಾತೃಜಠರದಲ್ಲಿ ನಿಂತು ಹೀಗೆ ವ್ಯಥೆಪಡುವುದು 'ಶಂಕರನೇ, ನಾನು ಈ ಅಶುಚಿಭೂಯಿಷ್ಠವಾದ ಪ್ರದೇಶದಲ್ಲಿ ವಾಸಮಾಡಲಾರೆ. ಈ ದೇಹದ ಮಲಮೂತ್ರಾದಿಗಳ ದುರ್ಗಂಧವನ್ನು ತಾಳಲಾರೆ. ತಾಯಿಯ ಹೃದಯಾಂತರಾಳದಲ್ಲಿರುವ ಮೂಳೆಗಳು ಗರಗಸದಂತೆ ನನ್ನನ್ನು ಕೊಯ್ಯುತ್ತಿವೆ. ಇದರಿಂದ ನನ್ನ ದೇಹವೆಲ್ಲಾ ಜಡ್ಡುಗಟ್ಟಿಹೋಗಿದೆ. ಕ್ರಿಮಿಕೀಟಗಳು ಬೇರೆ ನನ್ನನ್ನು ಕಚ್ಚುತ್ತಿವೆ. ನನ್ನ ಮೊಳಕಾಲುಗಳನ್ನು ನೀಡಿ ಮಲಗಲೂ ಸಹ ಇಲ್ಲಿ ಅವಕಾಶವಿಲ್ಲ. ತಾಯಿಯು ತಿನ್ನುವ ಕಹಿಯೋ, ಕಾರವೋ ಆದ ರಸಗಳ ರುಚಿಯನ್ನೂ ನಾನು ಅನುಭವಿಸಬೇಕಾಗಿದೆ. ತಾಯಿಯ ರಕ್ತ, ಕರುಳು ಇವುಗಳು ನನ್ನನ್ನು ಕಟ್ಟಿಹಾಕಿವೆ. ಶಂಭುವೇ, ಕಷ್ಟಕ್ಕೆ ಸಿಕ್ಕಿರುವ ನನ್ನನ್ನು ರಕ್ಷಿಸು' ಎಂದು ನಾನಾ ರೀತಿಯಲ್ಲಿ ವ್ಯಥೆಪಡುವುದು. ॥೫೬॥

ಮಹೇಶ್ವರನೇ, ತಾಯಿಯ ಸ್ತನ್ಯದಿಂದ ಪೂರಿತವಾದ ಹೃದಯವುಳ್ಳವನಾಗಿ ಮಾತೃಭುಕ್ತವಾದ ನಾನಾಹಾರಗಳ ಸವಿಯನ್ನು ನೋಡುತ್ತಾ, ಅಧೋಮುಖವಾಗಿ ತಾಯಿಯ ಗರ್ಭಕೋಶದಲ್ಲಿ ಬಂಧಿತನಾಗಿರುವೆನು. ಶಂಕರನೇ, ಯಾವಾಗ ಈ ಯೋನಿಯಿಂದ ಹೊರಗೆ ಹೊರಟು ನಿನ್ನ ಪಾದವನ್ನು ಸ್ವತಂತ್ರವಾಗಿ ಎಂದಿಗೆ ಸೇವಿಸುವೆನೋ ಕಾಣೆನಲ್ಲಾ! ॥೫೭॥

ಇತ್ಥಂ ಗರ್ಭಶತೇಷು ಮಾತೃಜನಿತಾಪಾರವ್ಯಥಾತಾಡಿತೋ
ವಾತೋತ್ಥಾಖಿಲವೇಗಪಂಡಿತತನುರ್ಯೋನ್ಯನ್ಮುಖಾನ್ನಿಸ್ಸೃತಃ ।
ಜ್ಞಾನಂ ತನ್ನಿಖಿಲಂ ಜಹಾತಿ ಶಿಶುರಾಜಾತಸ್ತನಂ ತತ್ಪಿಬನ್
ದುರ್ಗಂಧಾದಿಮಲಾವಿಲಾಖಿಲತನುಃ ಕ್ಲಾಂತೋಧಿಖಟ್ವಾಶಯಃ ॥೫೮॥

ಕ್ಷುತ್ಕಾಲಂ ನ ಚ ವೇತ್ತಿ ರೌತಿ ವಿವಶಶ್ಶೀತಾದಿತಾಪಾಸಹಃ
ಸ್ವಾದ್ವನ್ನಂ ಮುಹುರೀಕ್ಷತೇ ದೃಢತರಂ ನಾಶ್ನಾತಿ ಕೌಮಾರಕೇ ।
ಪಿತ್ರಾದ್ಯೈರ್ಗುರುಭಿಶ್ಚ ಸೋಕ್ಷರವಿಧೌ ಸಂತಾಡಿತೋ ಭೀತಿಭಾ
ಗ್ರೋಗಾದ್ಯೈಸ್ತದುಪಾಯಕಾರಿಭಿಷಜ್ಜೈಃ ಕಟ್ವಮ್ಲಕಾಷಾಯಭುಕ್ ॥೫೯॥

ಮಾರೋನ್ಮಾದಸರ್ಪೈರ್ವಿದಾರಿತತನುಃ ಕಾಂತಾಮುಖಂ ವೀಕ್ಷತೇ
ಸೋತ್ಸಾಹಂ ಶರದಿಂದುಕುಂದರದನಾವಕ್ತ್ರಂ ಜಗತ್ಪಶ್ಯತಿ ।

ಹೀಗೆ ಅನೇಕ ಜನ್ಮಗಳಲ್ಲಿ ತಾಯಿಯ ಗರ್ಭವ್ಯಥೆಯನ್ನು ಪಡೆಯುತ್ತಾ, ಕೊನೆಗೆ ತಾಯಿಯ ಹೃದಯವಾಯುವಿನ ರಭಸದಿಂದ ತಳ್ಳಲ್ಪಟ್ಟು ಯೋನಿಯ ಮೂಲಕ ಭೂಮಿಗೆ ಸೇರುವುದು. ಭೂಪತನವಾದೊಡನೆಯೇ ಗರ್ಭಸ್ಥವಾಗಿದ್ದ ಕಾಲದ ಪೂರ್ವಜ್ಞಾನವೆಲ್ಲಾ ಮರೆತುಹೋಗುವುದು. ಅನಂತರ ತಾಯಿಯಿಂದ ಪೋಷಿತವಾಗಿ ದುರ್ಗಂಧಭೂಯಿಷ್ಠವಾದ ಹಾಸಿಗೆಯನ್ನು ಹತ್ತಿ ಮಲಗುವುದು. ॥೫೮॥

ಆಗ ಅದಕ್ಕೆ ಹಸಿವು ಬಾಯಾರಿಕೆಯ ಅರಿವೇ ಇರುವುದಿಲ್ಲ. ಶೀತವಾತಾದಿಗಳಿಗೆ ಸಿಕ್ಕಿ ಪರಾಧೀನತೆಯಿಂದ ಒಳಲಿ ಹೇಗೋ ಬಾಲ್ಯವನ್ನು ಕಳೆಯುವುದು. ಅನಂತರ ಕುಮಾರಾವಸ್ಥೆಯನ್ನು ಪಡೆದು, ರುಚಿಕರವಾದ ತಿಂಡಿಗಳನ್ನು ಬಯಸುತ್ತಾ, ತಾಯಿತಂದೆಗಳಿಂದಲೂ, ಗುರುಜನರಿಂದಲೂ ಶಿಕ್ಷಿತವಾಗಿ ವಿದ್ಯಾಭ್ಯಾಸಕ್ಕಾಗಿ ಶ್ರಮಪಡುವುದು. ಮಧ್ಯೆಮಧ್ಯೆ ರೋಗಾದಿಗಳನ್ನು ಅನುಭವಿಸುತ್ತಾ, ಅದರ ನಿವಾರಣೆಗಾಗಿ ವೈದ್ಯರು ಕೊಡುವ ಕಹಿ, ಕಾರ, ಇವುಗಳಿಂದ ಕೂಡಿದ ಔಷಧಿಯನ್ನು ಕುಡಿದು ಹೇಗೋ ಜೀವಧಾರಣೆಮಾಡುವುದು. ॥೫೯॥

ಹಾಗೆಯೇ ಈ ಜೀವನು ಯೌವನವನ್ನು ಪಡೆದು, ಕಾಮಪರವಶನಾಗಿ ಸುಂದರ ಸ್ತ್ರೀಯರನ್ನು ಬಯಸುವನು. ಲೋಕವೆಲ್ಲಾ ಸ್ತ್ರೀಮಯವಾದಂತೆ ಭಾವಿಸುವನು. ಶರಚ್ಚಂದ್ರನಂತೆ ಹೊಳೆಯುವ ಸ್ತ್ರೀಮುಖವನ್ನೇ ಅನುಸಂಧಾನ

ತತ್ಪ್ರಾಪ್ತ್ಯೈರ್ಥಮುದಾರಹಾರವಲಯೋನ್ವಾಸಾಂಸಿ ಧಾನ್ಯಂ ಧನಂ
ಚೌರ್ಯೇಣಾಪಿ ಸಮಾರ್ಜಯತ್ಯತಿತರಾಂ ಸ್ರಗ್ಗಂಧತಾಂಬೂಲಕಂ ।೬೦॥

ನಿಷ್ಟಪ್ತಾಮಲಹೇಮಕುಂಭವಿಲಸತ್ಕಾಂತಾಕುಚಾಲಿಂಗನೈ
ರ್ಪೀನಶ್ರೋಣಿಕಟೀತಟಾಂತರಪಲೇ ದತ್ತೇಕ್ಷಣಃ ಕಾಮುಕಃ ।
ರಂಭಾಸ್ತಂಭನಿಭೋರುಭೋಗಕಲನೈಃ ಸಂಸಾರವಾರ್ತಾರಸೈಃ
ಪಾಪೈರ್ಧಾನ್ಯಧನಾರ್ಜನಾದಿ ವಿವಶಃ ಕಾಲಂ ನಯತ್ಯಾದರಾತ್ ॥೬೧॥

ಯಾತಾಯಾತಶತೈರ್ಧನಾರ್ಜನಪರೋ ನ ಕ್ವಾಪಿ ವಿಂದೇತ್ಸುಖಂ
ರಾಜ್ಞಾಂ ದ್ವಾರಿ ಸದಾ ನಿವಿಷ್ಟಹೃದಯೋ ದ್ವಾರ್ಸ್ಥಾನ್ ಸದಾಪಶ್ಯತಿ ।
ಕಾ ವೇಲಾ ಹಿ ಸದಾದ್ಯ ಕೋಽಪ್ಯವಸರೋ ನೂಂ ಜ್ಞಾಪಯೇತ್ಯೇವತಾಂ
ಸ್ತತ್ಕೋಪಾರುಣಲೋಚನೈಃ ಪ್ರತಿಪದಂ ಖಿದ್ಯಂತಿ ಹೃಷ್ಯಂತಿ ಚ ॥೬೨॥

---

ಮಾಡುತ್ತಾ ಹೊರಡುವನು. ಅಂತಹ ಸ್ತ್ರೀಯನ್ನು ಹೊಂದುವುದರಲ್ಲಿ ಪ್ರಯತ್ನಿಸುವನು. ಆದಕ್ಕಾಗಿ ಒಳ್ಳೆಯ ಆಭರಣಗಳು, ವಸ್ತ್ರಗಳು, ಮುಂತಾದ ಸಾಮಗ್ರಿಗಳನ್ನು ಹೊಂದಲಿಚ್ಛಿಸಿ ಕೊನೆಗೆ ಕಳ್ಳತನದಿಂದಲಾದರೂ ಸಂಪಾದಿಸಿ ಅದರಿಂದ ಹೂವು, ಗಂಧ, ತಾಂಬೂಲ ಇವುಗಳನ್ನು ಪಡೆದು ಸ್ತ್ರೀಸೌಖ್ಯವನ್ನು ಹೊಂದುವನು. ॥೬೦॥

ಸ್ತ್ರೀಯ ಸುಂದರವಾದ ಮತ್ತು ಸುವರ್ಣಘಟದಂತೆ ದುಂಡಾದ ದಪ್ಪವಾದ ಸ್ತನಗಳನ್ನು ಗಾಢವಾಗಿ ಆಲಿಂಗಿಸುವನು. ಹಾಗೆಯೇ ಸ್ತ್ರೀಯ ಸುಂದರ ಶ್ರೋಣಿಯ ಮಧ್ಯಭಾಗವನ್ನು ನೋಡಲು ಯತ್ನಿಸಿ ತನ್ನ ಕಾಮಪಿಪಾಸೆಯನ್ನು ತೀರಿಸಿಕೊಳ್ಳುವನು. ಬಾಳೆಯಮರದಂತೆ ದುಂಡಾದ ತೊಡೆಗಳ ಸ್ಪರ್ಶಸುಖವನ್ನು ಪಡೆದು, ತನ್ಮೂಲಕ ಸಂಸಾರದ ಕಷ್ಟಸುಖಗಳಿಗೆ ಒಳಗಾಗಿ ಸಂಸಾರಕ್ಕೆ ಬೇಕಾದ ಧನಧಾನ್ಯಪ್ರಾಪ್ತಿಗಾಗಿ ಪಾಪಕರ್ಮಗಳಿಗೆ ತೊಡಗುವನು. ॥೬೧॥

ಧನಾರ್ಜನಾಸಕ್ತನಾಗಿ ಎಲ್ಲೆಲ್ಲೂ ಅಲೆದಾಡುವನು. ಇಷ್ಟಪೂರ್ತಿಯಾದ ದ್ರವ್ಯವು ಕೊನೆಗೂ ಲಭಿಸದೆ ರಾಜರ ಅಥವಾ ಶ್ರೀಮಂತರ ಮನೆಯ ಬಾಗಿಲನ್ನು ಕಾಯುವನು. ಅಲ್ಲಿ ಕಾವಲುಗಾರರಿಂದ ಶ್ರೀಮಂತರ ಸಮಯಾದಿಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸುವನು. ಹಾಗೆಯೇ ಅವರ ಕೋಪಕ್ಕೆ ಪಾತ್ರನಾಗಿ ಅವರಿಂದ ತಿರಸ್ಕೃತನಾಗುವನು. ಆದಕ್ಕಾಗಿ ದುಃಖಿಸಿದರೂ ಮತ್ತೆ ಅವರ ಪ್ರಸನ್ನತೆಗಾಗಿ ಸಂತೋಷವನ್ನು ನಟಿಸುವನು. ॥೬೨॥

ಹೃಷ್ಟೋ ರಾಜಾ ಧನಾಢ್ಯೋ ದ್ರವಿಣಗಣಚಯಂ ಪ್ರಾಪ್ಯ ತಸ್ಮಾತ್ಕೃತಾರ್ಥೋ
ಲಬ್ಧ್ವಾ ತದ್ಧನಧಾನ್ಯಕಂ ಜನಿಜರಾರೋಗೋತ್ಥಭೈಷಜ್ಯಕೈಃ ।
ಚೋರೈರ್ವಾ ಕೃಷಿತೋ ವಿನಶ್ಯತಿ ಧನಂ ಪಾಪಾದಿಪುಣ್ಯೈಃ ಪರಂ
ವಿಷ್ಟಬ್ಧಃ ಸುತದಾರಪೀಡಿತತನುರ್ದಾರಿದ್ರ್ಯಪಂಕಾಪ್ಲುತಃ ॥೬೩॥

ವೇದಾನುಚ್ಚೈರಧೀತೇ ಮೃತತಿಥಿವಿಧಿಭುಕ್ ಪಾತ್ರತಾಂ ಪೂರ್ಯತೇಸೌ
ಯಾಜ್ಯಾ ಯಾಜಯತಿ ಪ್ರಕೃಷ್ಟವಚಸಾ ಬೋಧಂ ವದನ್ ದ್ರವ್ಯಭಾಕ್ ।
ಕೇಚಿನ್ಮಾಂತ್ರಿಕಯಾಂತ್ರಿಕಾಗ್ರಹಗತಿಮತಯೋ ಗೀತವಾದ್ಯೈಃ ಕಥಾಭೀ
ರೋಗಾರ್ತಾನ್ ಭಿಷಜೋ ಧನಾದಿಭಿರಹೋ ಪೂಜಾಭಿರತ್ಯಾದರಾತ್ ।
ವಿತ್ತತ್ಯಾಗನಿವಾರಣೇಷು ಚತುರಾನ್ ಪಶ್ಯನ್ ಪರಂ ಧ್ಯಾಯತಿ ॥೬೪॥

ಕಿಂ ವಾ ಸ್ತ್ರೀಸ್ತನಯೈಸ್ಸುಖೇಷು ಸುಖಿದೈರ್ದುಃಖೇಷು ನಿಂದಾಯುತೈಃ
ಕಿಂ ವಾ ಬಂಧುಗಣೈಃ ಕೃತಪ್ರತಿಕೃತೈರಾಮಂತ್ರಣಾದ್ಯುತ್ಸುಕೈಃ ।

---

ಪುಣ್ಯವಿಶೇಷದಿಂದ ರಾಜನೆನಿಸಿದವನು, ಹಣಗಾರನಾಗಿ ಸುವರ್ಣಾದಿಗಳನ್ನು ಸಂಪಾದಿಸಿ, ತನ್ಮೂಲಕ ಧನಧಾನ್ಯಾದಿಗಳನ್ನು ಹೆಚ್ಚಿಸಿಕೊಳ್ಳುವನು. ಆದರಿಂದ ಉನ್ಮತ್ತನಾಗಿ ಕೊನೆಗೆ ನಾನಾವಿಧವಾದ ರೋಗಾದಿಗಳಿಗೂ, ಕಳ್ಳಕಾಕರ ಹಿಂಸೆಗೂ ಸಿಕ್ಕಿ ಅನೇಕ ದ್ರವ್ಯಗಳನ್ನು ಕಳೆದುಕೊಳ್ಳುವನು. ವ್ಯವಸಾಯಾದಿಗಳಿಂದಲೂ ಹಣವನ್ನು ಕೆಲವು ಕಡೆ ಕಳೆದುಕೊಂಡು, ಕ್ಷೀಣವಿತ್ತನಾಗಿ ಕೊನೆಗೆ ದಾರಿದ್ರ್ಯಕೂಪದಲ್ಲಿ ಮುಳುಗಿ ಮತ್ತೆ ಸಂಕಟಕ್ಕೆ ಗುರಿಯಾಗುವನು. ॥೬೩॥

ಜೀವನಲಾಭಕ್ಕಾಗಿ ಕೆಲವರು ವೇದಮಂತ್ರಗಳನ್ನು ಗಟ್ಟಿಯಾಗಿ ಉಚ್ಚರಿಸುತ್ತಾ ಶ್ರಾದ್ಧಭೋಜನಾದಿಗಳಿಗೆ ತಾವೇ ಸತ್ಪಾತ್ರರೆಂದು ನಟಿಸುವರು. ಮತ್ತೆ ಕೆಲವರು ಪುರಾಣಪಠನಾದಿಗಳಿಂದ ತಾವು ಪ್ರಜಾಹಿತವನ್ನು ಉಪದೇಶಿಸುವರೆಂದು ಪ್ರಚಾರಮಾಡುವರು. ಹಲವರು ಯಂತ್ರ, ಮಂತ್ರ, ತಂತ್ರ ಇವುಗಳಿಂದಲೂ, ಗೀತವಾದ್ಯಾದಿಗಳಿಂದಲೂ, ಜನರ ರೋಗಾದ್ಯುಪದ್ರವಗಳನ್ನು ಹೋಗಲಾಡಿಸುತ್ತೇವೆಂದು ತನ್ಮೂಲಕ ಧನಾರ್ಜನೆಮಾಡುವರು. ಹೀಗೆ ನಾನಾರೀತಿಯ ಚಾತುರ್ಯದಿಂದ ಧನವನ್ನಾರ್ಜಿಸುತ್ತಾ ಹೇಗೋ ಕಾಲಕಳೆಯುವರು. ॥೬೪॥

ಎಲೌ ಶಿವೆಯೇ, ಲೋಕದಲ್ಲಿ ಹೆಂಡತಿ ಮಕ್ಕಳು ಸುಖಕಾಲದಲ್ಲಿ ನಗಿಸುವರು. ಹಾಗೆಯೇ ಬಂಧುವರ್ಗದವರಂತೂ ವಿವಾಹಾದಿ ಉತ್ಸವಕಾಲಗಳಲ್ಲಿ ಮಾತ್ರ

ಕಿಂ ವಾ ವಿಪ್ರಗಣಾತಿಥೇಯನಿರತೈಃ ಪಾತ್ರೈಃ ಪರಂ ನಿರ್ಮಿತೈ
ರ್ಭೃತ್ಯೈರ್ವ್ಯರ್ಥಭವಕಾಮುಕೈರ್ನತು ಶಿವೇ ನ ಕ್ವಾಪಿ ತುಷ್ಟೋ ಜನಃ ॥೬೫॥

ಶಸ್ತ್ರಾಸ್ತ್ರೈರ್ಜ್ವಲಿತಾಮ್ಯದಿಷ್ಟಕಲಹಾಭೃತ್ಯಾಸ್ತಥಾ ಯೇ ನರಾ
ನಾನಾಕಾರ್ಯಶತೇಷು ಸಕ್ತಮತಯೋ ದಾರಾ ಸುತಾರ್ಥಾಪ್ತಯೇ ।
ಲೋಕಾಶ್ಯೋಕವಿದಗ್ಧಕಷ್ಟಹೃದಯಾಃ ಪಶ್ಯಾಧುನಾ ಶೈಲಜೇ
ವಿಷ್ಟಬ್ಧಂ ಜಠರಾದಿಪೂರ್ತಿವಿವಶಂ ದುಃಖೋತ್ಥಸೌಖ್ಯಕ್ಷಣಂ ॥೬೬॥

ಅನ್ಯೇ ಕ್ಷುತ್ತೃಷ್ಣಮುದಗ್ಧಾ ರವಿಕರನಿಕರೈಶ್ಶೀತವಾತಾದಿವರ್ಷೈಃ
ಪಂಕೈಃ ಕ್ಲಿಷ್ಟೋರುಕಾಷ್ಠೈಸ್ತೃಣಭರಭರಣೈಃ ಕಷ್ಟತಃ ಪುಷ್ಟಗಾವಃ ।
ಕೇಚಿದ್ವೈ ಧನಿನಾಂ ಗೃಹೇಷು ಸುಭೃತಾ ಭೃತ್ಯಾಸ್ತಥಾ ಶಿಕ್ಷಿತಾ
ಸ್ತತ್ಕೋಪಪ್ರಭವಪ್ರಸಾದಮುಖರಾಸ್ತತ್ಕಾರ್ಯಲೋಲಾಸ್ಸದಾ ॥೬೭॥

---

ಓಡಾಡುತ್ತಾ ಸ್ವಪ್ರಯೋಜನವನ್ನೇ ನಿರೀಕ್ಷಿಸುತ್ತಿರುವರು. ಉಳಿದ ವಿಪ್ರರೇ ಮೊದಲಾದ ಅತಿಥಿಗಳು ತಮ್ಮ ತೃಪ್ತಿಯಲ್ಲಿಯೇ ನೆಟ್ಟಮನಸ್ಸುಳ್ಳವರಾಗಿ ಕಾಲಕಳೆಯುವರು. ಸೇವಕರಾದರೋ ತಾವು ಯಜಮಾನರಂತೆ ಎಂದಿಗೆ ಧನಿಕರಾಗುವೆವೋ ಎಂದು ನಿರೀಕ್ಷಿಸುವರು. ಹೀಗಿರುವುದರಿಂದ ಯಾರಿಂದಲೂ ಮನುಷ್ಯನಿಗೆ ನಿಜವಾದ ಸುಖವು ಲಭಿಸಲಾರದು. ॥೬೫॥

ತಮ್ಮ ಹೆಂಡತಿ ಮಕ್ಕಳ ಪೋಷಣಾರ್ಥವಾಗಿ ದ್ರವ್ಯಾರ್ಜನೆ ಮಾಡಲಿಷ್ಟವುಳ್ಳ ಜನರು ಶಸ್ತ್ರಾಸ್ತ್ರಗಳನ್ನು ಹಿಡಿದು ಯೋಧರಾಗಿ ನಿಂತು ಯುದ್ಧಮಾಡುವರು. ಅಲ್ಲದೆ ಇನ್ನೂ ಅನೇಕ ಕ್ರೂರ ಕಾರ್ಯಗಳಲ್ಲಿ ಉದ್ಯುಕ್ತರಾಗಿ ಓಡಾಡುವರು. ತನ್ಮೂಲಕವಾಗಿ ಬಂದ ಅನೇಕ ಕಷ್ಟಪರಂಪರೆಗಳಿಗೆ ಸಿಕ್ಕಿ ನರಳುವರು. ಕೇವಲ ಹೊಟ್ಟೆಪಾಡಿಗಾಗಿ ದುಡಿದು, ದುಃಖಸಮುದ್ರದಲ್ಲಿ ಬಹುಕಾಲ ಕಷ್ಟವನ್ನು ಸಹಿಸುತ್ತಾ ಅಲ್ಪಸುಖದಿಂದ ಕಾಲಕಳೆಯುವರು. ದೇವಿಯೇ, ಇಂತಹ ಮಾನವ ವರ್ಗಕ್ಕೆ ಸುಖವೆಲ್ಲಿ ಬಂದೀತು ? ॥೬೬॥

ಇನ್ನೂ ಅನೇಕರು ಹಸಿವು ಬಾಯಾರಿಕೆಗಳಿಂದಲೂ, ಶೀತವಾತಾತಪಗಳಿಂದಲೂ ಬಳಲಿ, ಸೌದೆ, ಹುಲ್ಲು ಮುಂತಾದ ವಸ್ತುಗಳನ್ನು ಹೊತ್ತು ತಂದು ಸಂಸಾರವನ್ನು ಸಾಗಿಸುವರು. ಹಾಗೆಯೇ ದನಕರುಗಳನ್ನು ಸಾಕುವುದು, ಶ್ರೀಮಂತರ ಮನೆಯನ್ನು ಚೋರಾದಿಗಳಿಂದ ರಕ್ಷಿಸುವುದು, ಯಜಮಾನನ ಕೋಪವನ್ನೇ

ನಾನಾಕರ್ಮವಿಚಿತ್ರಚಿತ್ರಗತಿಭಿಃ ಪಶ್ಯಾಧುನಾ ಶೈಲಜೇ
ಭಾಗ್ಯಂ ಭೋಕ್ತುಮನೀಶ್ವರಾಗದಶತೈರ್ಭೋಕ್ತಾ ನ ಚಾನ್ನಂ ಲಭೇತ್ ।
ಪುತ್ರಾದಿಶ್ಚ ಸದೈವ ತಸ್ಯ ತನಯಾನಂದಾದ್ವಿಹೀನೋ ಧನೀ
ಪಾಂಡಿತ್ಯೇ ಚ ದರಿದ್ರತಾ ವಿಧಿವಶಾನ್ಮೂಢೋ ನ ಮೋಕ್ಷಾರ್ಥಭಾಕ್ ॥೬೮॥

ದಾತಾ ವಾಥ ಚ ಯಾಚಕೋ ಧನಪರಸ್ತ್ವೇವಂ ಜಗಚ್ಚಾದ್ರಿಜೇ
ವೇದಜ್ಞಾಶ್ಚ ಬಹುಶ್ರುತಾಶ್ಚ ಸತತಂ ತದ್ದ್ವಾರಿ ತಿಷ್ಠಂತ್ಯಹೋ ।
ಪುಣ್ಯೇಚ್ಛೋರ್ನಭವೇದ್ಧನಂ ಧನಯುತೇ ಪಾತ್ರಾರ್ಪಣೇ ನೋ ಮನೋ
ರೂಪಿಣ್ಯಾಂ ನ ಚ ಸಂತತಿಶ್ಚ ಗಿರಿಜೇ ರೂಪಾದಿಹೀನೇ ಪ್ರಜಾಃ ॥೬೯॥

---

ಅನುಗ್ರಹವೆಂದು ಭಾವಿಸುವುದು, ಯಜಮಾನನ ಕಾರ್ಯವನ್ನೇ ಸ್ವಕಾರ್ಯವೆಂದು ಭಾವಿಸಿ ಅದನ್ನು ಸಾಧಿಸುವುದು, ಇವೇ ಮೊದಲಾದುವುಗಳಿಂದ ಜೀವನಯಾತ್ರೆಯನ್ನು ಮುಂದುವರಿಸುವರು. ॥೬೭॥

ಹಾಗೆ ನಾನಾ ವಿಧವಾದ ಕ್ರಿಯೆಗಳಿಂದ ಸಂಪಾದಿಸಿದ ಐಶ್ವರ್ಯವನ್ನೂ ಸಹ ಅನುಭವಿಸಲಾರದೆ ಮನುಷ್ಯನು ಅನೇಕ ರೋಗಾದಿಗಳಿಂದ ಪೀಡಿತನಾಗಿ ಹೊಟ್ಟೆ ತುಂಬ ಆಹಾರವನ್ನು ಸಹ ತಿನ್ನಲಾರನು. ಕೆಲವರು ಮಕ್ಕಳನ್ನೇ ಪಡೆಯಲಾರರು. ಮತ್ತೆ ಕೆಲವರು ಮಕ್ಕಳಿದ್ದರೂ, ಸೌಖ್ಯವನ್ನು ಹೊಂದಲಾರರು. ಹಲವರು ವಿದ್ಯೆಯಿಲ್ಲದವರೂ ದರಿದ್ರರೂ ಎನಿಸಿ, ಮುಕ್ತಿಮಾರ್ಗವನ್ನೇ ಬಯಸದೆ ಹಾಗೆಯೇ ಅಂತ್ಯಕಾಲವನ್ನು ಕಾಣುವರು. ॥೬೮॥

ಒಂದು ಕಾಲದಲ್ಲಿ ದಾನಮಾಡುವ ಶಕ್ತನು ಮರುವರ್ಷದಲ್ಲೇ ಯಾಚಕನಾಗುವನು. ಹಾಗೆಯೇ ಯಾಚಕನಾಗಿದ್ದವನು ದಾತೃವೂ ಆಗುವನು. ಶ್ರೀಮಂತನೆನಿಸಿದರೆ ದ್ರವ್ಯದ ಆಸೆಯಿಂದ ಅವನ ಮನೆಯ ಬಾಗಿಲನ್ನು, ವೇದಜ್ಞರೂ, ವಿದ್ಯಾಪಾರಂಗತರೂ ಸದಾ ಕಾಯುತ್ತ ನಿಲ್ಲುವರು. ಪುಣ್ಯಕರ್ಮವೆಸಗಬೇಕೆಂದಿರುವವನಿಗೆ ಹಣದ ಸಹಾಯವಿರುವುದಿಲ್ಲ. ಹಣಗಾರನಿಗೆ ತ್ಯಾಗಮಾಡುವ ಬುದ್ಧಿಯೇ ತೋರುವುದಿಲ್ಲ. ಸುರೂಪಿಣಿಯಾದ ಹೆಂಗಸಿಗೆ ಮಕ್ಕಳೇ ಇರುವುದಿಲ್ಲ. ಮಕ್ಕಳುಳ್ಳವಳು ಸುಂದರಿಯೆನಿಸಲಾರಳು. ಹೀಗೆ ಒಂದಿದ್ದರೆ ಒಂದಿಲ್ಲವಂತೆ ಜನರು ಯಾವುದಾದರೊಂದು ಕಷ್ಟಕ್ಕೀಡಾಗಿಯೇ ಕಾಣುತ್ತಿರುವರು. ॥೬೯॥

ಷಂಡೋದಾರಶತಂ ಸುಯೌವನಜನೇ ನಾಸ್ತ್ಯೇವ ದಾರಸ್ಪೃತಿಃ
ಏವಂ ದುಃಖಸಹಸ್ರಕಂ ಭವಶತೇ ನಾಸ್ತ್ಯೇವ ಸೌಖ್ಯೈಕಭಾಕ್ ।
ಪುತ್ರೇಣಲ್ಪಪರಿಶ್ರಮ್ಯೈರ್ವಿಧಿವಶಾಜ್ಜಾತೇ ಸದಾರಾವೃತೋ
ವೃದ್ಧಾಂ ಸ್ವಾಂ ಜನನೀಂ ತಥೈವ ಪಿತರಂ ಸದ್ಮಾಗತಾನ್ ಭರ್ತ್ಸಯೇತ್॥೭೦

ಭಾರ್ಯಾಶ್ಚಾಪಿ ಪತೀಂಸ್ತ್ಯಜಂತಿ ವಿವಶಾ ದಾರಿದ್ರ್ಯಕಾಮಾಶಯಾಃ
ಕಶ್ಚಿತ್ಸರ್ವಜನಾನುರಕ್ತಹೃದಯಃ ಪುತ್ರೋ ಭವೇಚ್ಛಾಂಭವಿ ।
ರಾಜಾ ಚೇತ್ಸಕಲಾಪ್ತಕಾರ್ಯಕರಣೋ ಭೃತ್ಯೈಃ ಸದಾ ಜೀವತಿ
ಪಾತುಂ ಚಾತ್ತುಮಹೋ ಶಿವೇ ಸಮುರುತಂ ಸ್ವಪ್ನಂ ನಚೈಷ ಪ್ರಭುಃ॥೭೧॥

ರಾಜ್ಯಾಂಗಾನಿ ಸದೈಕಕಷ್ಟಹೃದಯೋ ವೀಕ್ಷನ್ ಸುದುಃಖೋರುಭಾಕ್ ।
ರಾಜಾಸ್ಮೀತಿ ಮದಾಂಧಲೋಕನಯನಃ ಸೌಖ್ಯಭ್ರಮಂ ಯಾತಿ ಹಿ ॥೭೨॥

---

ನಪುಂಸಕನಿಗೆ ಅನೇಕ ಪತ್ನಿಯರಿರುವರು. ಸರಿಯಾದ ಯುವಕನಿಗೆ ಪತ್ನಿಯರೇ ದೊರಕಲಾರರು. ಅನೇಕ ವ್ರತಾದಿಗಳಿಂದ ಒಬ್ಬ ಪುತ್ರನನ್ನು ಒಂದು ವೇಳೆ ಪಡೆದರೂ, ಆತನು ಬಾಲ್ಯದಲ್ಲಿ ಪೋಷಿತನಾಗಿ ಅನಂತರ ತನ್ನ ಹೆಂಡತಿ ಮಕ್ಕಳಿಂದ ಕೂಡಿ, ಕೊನೆಗೆ ತನ್ನ ವೃದ್ಧರಾದ ತಂದೆತಾಯಿಗಳನ್ನು ನಿಂದಿಸಿ ಮನೆಯಿಂದ ದೂರಮಾಡುವನು. ಹೀಗೆ ಅನೇಕ ಯಾತನೆಗಳು ಪ್ರತಿಮಾನವವರ್ಗಕ್ಕೂ ಪ್ರತಿಜನ್ಮದಲ್ಲಿಯೂ ಒದಗುತ್ತಿರುವುವು. ಹೀಗೆ ಮಾನವಜನ್ಮವು ದುಃಖಭೂಯಿಷ್ಠವಾದುದೆಂಬುದನ್ನು ಅರಿಯುವವಳಾಗು. ॥೭೦॥

ಹೆಂಡತಿಯರು ತಮ್ಮ ಪತಿಯಲ್ಲಿ ಅಶಕ್ತಿಯನ್ನಾಗಲಿ, ಬಡತನವನ್ನಾಗಲಿ ನೋಡಿದರೆ ಒಡನೆಯೇ ಪತ್ಯಂತರದಲ್ಲಿ ಮನಸ್ಸಿಡುವರು. ಒಂದುವೇಳೆ ಮಗನೆನಿಸಿದವನು ಸರ್ವಜನರಲ್ಲಿಯೂ ಪ್ರಸಿದ್ಧನೆನಿಸಿದರೂ, ರಾಜನೇ ಆದರೂ, ಕೀರ್ತಿಯನ್ನು ಸಂಪಾದಿಸಲೋಸುಗ ಅಹೋರಾತ್ರಿ ದುಡಿಯುತ್ತಾ ನಿದ್ರಾಹಾರಾದಿಗಳನ್ನೂ ಮನಃಪೂರ್ವಕವಾಗಿ ನಡೆಸದೆ ತೊಳಲುವನು. ಹೇಗೆ ನೋಡಿದರೂ ಮನುಷ್ಯಜನ್ಮಕ್ಕೆ ಕಷ್ಟವಿದ್ದೇ ಇರುವುದು. ॥೭೧॥

ರಾಜನಾಗಿ ಜನಿಸಿದರೂ ತನ್ನ ರಾಜ್ಯದ ಸಪ್ತಾಂಗಗಳನ್ನು ಸರಿಪಡಿಸುವ ಶ್ರಮದಲ್ಲಿಯೇ ನಿರತನಾಗುವನು. ಅಲ್ಲದೆ ತಾನು ರಾಜನಾಗಿರುವೆನೆಂಬ ಅಹಂಕಾರದಿಂದ ತಾನು ಅನುಭವಿಸುವುದೆಲ್ಲಾ ಸುಖವೆಂದೇ ಭ್ರಾಂತಿಗೊಳ್ಳುವನು. ಶುದ್ಧಕ್ಷತ್ರಿಯ

ಸತ್ಕ್ಷತ್ರಿಯೋಽಪ್ಯಾಪಿ ರಣೇ ತ್ಯಜಂಸ್ತ್ವಸೂಂ
ಸ್ತ್ವಪುತ್ರದಾರಾನಿವ ಮುಕ್ತಿಸಿದ್ಧ್ಯೈ ।
ಮೃತೋ ಹಿ ಕಃ ಕೇನ ಸುಖೇನ ಜಂತು
ರ್ಲಭೇತ ಸೌಖ್ಯಂ ಸ ಹಿ ಮೂಢವತ್ತರಃ ॥೭೩॥

ವೈಶ್ಯೋಽಪಿ ಗೋರಕ್ಷಣಪಣ್ಯವಿಕ್ರಯೇ
ಲಾಭಾದಿಲಾಭೇ ಚ ಧನೇಷು ವೃದ್ಧಿಭಾಕ್ ।
ನ್ಯಾಸಕ್ಷಯೇ ವೃದ್ಧಿವಿಪರ್ಯಯೇ ವಾ
ಪರಾರ್ಘ್ಯಕಾಲೇ ನ ಹಿ ತಸ್ಯ ಸೌಖ್ಯಂ ॥೭೪॥

ರತ್ನಾನಾಂ ಚ ಪರಿಕ್ರಯೇ ಪಟಗಣೇ ಧಾನ್ಯೇ ಧನೇ ವಾ ಶಿವೇ ।
ನಿತ್ಯಂ ಸ್ಯಾತ್ಕಲಹಾನುರಕ್ತಹೃದಯೋ ರಾಜ್ಞಾ ಸದಾ ಭರ್ತ್ಸಿತಃ ॥೭೫॥

ಚಾತುರ್ವರ್ಣ್ಯಾಶ್ರಮೋಽಪಿ ಫಲಜನಿತಮಹಾಕಾಮಪಾಶೈಶ್ಚ ಪುಣ್ಯಂ
ಸೇವಂಶ್ಚೇ ವೈ ಯಮಿತಕರಣಾ ದುಃಖರೂಪಕ್ರಿಯಾಭಿಃ ।

---

ರಾದವರೋ ಯುದ್ಧದಲ್ಲಿ ಅಭಿಮಾನವುಳ್ಳವರಾಗಿ ವೀರಾವೇಶದಿಂದ ಹೆಂಡತಿ ಮಕ್ಕಳ ಆಸೆಯನ್ನು ತೊರೆದು ವೀರಸ್ವರ್ಗವನ್ನು ಪಡೆಯಲು ಯತ್ನಿಸುವರು. ಸುಮ್ಮನೆ ಮೃತನಾದವನು ಯಾವರೀತಿಯಿಂದ ತಾನೇ ಮುಂದೆ ಸ್ಥಿರಸುಖವನ್ನು ಪಡೆದಾನು? ಆ ನಂಬಿಕೆಯುಳ್ಳವನು ಶುದ್ಧಮೂರ್ಖನಲ್ಲವೇ. ॥೭೨-೭೩॥

ವೈಶ್ಯನಾದವನು ಗೋರಕ್ಷಣಾದಿಗಳನ್ನು ಮಾಡಿಕೊಂಡು, ವ್ಯಾಪಾರದಲ್ಲಿ ಉದ್ಯುಕ್ತನಾಗಿ ಲೇವಾದೇವಿಯಿಂದ ಬಡ್ಡಿಯನ್ನು ಕೂಡಿಹಾಕುತ್ತಾ ತನ್ನ ಸುಖವನ್ನು ಸಹ ಎಣಿಸುವುದಿಲ್ಲ. ಇಟ್ಟಿದ್ದ ದ್ರವ್ಯವು ಕಾರಣಾಂತರದಿಂದ ನಾಶವಾದಾಗಲೂ, ಬಡ್ಡಿಯ ವರಮಾನವು ಕಮ್ಮಿಯಾದಾಗಲೂ ಆತನಿಗೆ ಉಂಟಾಗುವ ವ್ಯಥೆಯನ್ನು ಎಷ್ಟೆಂದು ಹೇಳೋಣ? ॥೭೪॥

ಅದೂ ಅಲ್ಲದೆ ರತ್ನಗಳು, ವಸ್ತ್ರಗಳು, ಧನಧಾನ್ಯಗಳು ಇವುಗಳ ಕ್ರಯ ವಿಕ್ರಯಾದಿಗಳಲ್ಲಿ ತೊಡಗಿದವರು, ಸದಾ ಪ್ರತಿಕಕ್ಷಿಯೊಡನೆ ಹೋರಾಡುತ್ತಾ, ರಾಜಕೋಪಕ್ಕೂ ಪಾತ್ರರೆನಿಸಿ ಬಹು ಕಷ್ಟದಿಂದ ಜೀವಿಸುವರು. ॥೭೫॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚತುರ್ವರ್ಣದವರಲ್ಲಿಯೂ ಕಾಮಕ್ರೋಧಾದಿಗಳು ಮುಂದುವರಿಯುತ್ತಲೇ ಇರುವುವು. ತನ್ನಿವಾರಕವಾಗಿ

ಪ್ರಾಯಶ್ಚಿತ್ತಭಯಂ ಸದಾ ದ್ವಿಜಗಣೇ ಪಾತಿತ್ಯಮುಷ್ಮಂತತಃ
ಶೂದ್ರಃ ಸರ್ವಜನಾರ್ಚನಾದಿವಿವಶೋ ನ ಕ್ವಾಪಿ ಸೌಖ್ಯಂ ಜನೇ ॥೭೬॥

ಯದ್ಯಂಗನಾಜನ್ಮ ಸಮಾಪ್ನುಯಾದುಮೇ
ಸಾಪತ್ನ್ಯ ವೈಧವ್ಯಮಥಾಪ್ರಜತ್ವಂ ।
ದಾರಿದ್ರ್ಯಪೀಡಾ ಪತಿಕೋಪತಾಡನಂ
ಗರ್ಭೇ ಪ್ರಸೂತೌ ತದಪಾರದುಃಖಂ ॥೭೭॥

ವಿಯೋಗಸಂಯೋಗನ್ಯೃತಾಸುಗಮ್ಯತಾ ।
ಪಾಕಕ್ರಿಯಾಶ್ಚಾಥ ಬಹುಪ್ರಜಾತತಾ
ಕನ್ಯಾಪ್ರಸೂತಿಃ ಶಿಶುರೋಗವೀಕ್ಷಣಂ
ನ ಕ್ವಾಪಿ ಸೌಖ್ಯಂ ಶೃಣು ದೇವಿ ಸರ್ವಥಾ ॥೭೮॥

ಅವರು ಪುಣ್ಯಕರ್ಮಗಳನ್ನು ಆಚರಿಸುವರು. ಬ್ರಾಹ್ಮಣನು ಅಕಾರ್ಯಾದಿಗಳನ್ನಾಚರಿಸಿ ಪ್ರಾಯಶ್ಚಿತ್ತವನ್ನು ನಡೆಸಿಕೊಳ್ಳಲಾರದೆ ಅದನ್ನು ಮುಚ್ಚಿ ಪತಿತನೆನಿಸುವನು. ಶೂದ್ರನಾದರೋ, ಸರ್ವಜನರಿಗೂ ತೃಪ್ತಿಯನ್ನುಂಟುಮಾಡುವನಂತೆ ನಡೆಯುತ್ತಾ ಅನೇಕ ಕ್ಲೇಶಾದಿಗಳಿಗೆ ಪಾತ್ರನಾಗುವನು. ಅಂತೂ ಒಟ್ಟಿನಲ್ಲಿ ಯಾರಿಗೂ ಸೌಖ್ಯವಿರುವುದಿಲ್ಲ. ॥೭೬॥

ಸ್ತ್ರೀಜನ್ಮವನ್ನು ತಾಳಿದವರಿಗಂತೂ ಸುಖಲೇಶವೂ ಇರುವುದಿಲ್ಲ. ಸವತಿಯರ ಕಾಟ, ವೈಧವ್ಯದುಃಖ, ಮಕ್ಕಳಿಲ್ಲದಿರುವ ಕೊರತೆ, ದಾರಿದ್ರ್ಯಪೀಡೆ, ಪತಿಕೋಪ ಸಹನೆ, ತಾಡನಾದಿಗಳ ಭಯ, ಪ್ರಸವವೇದನೆ ಮುಂತಾದ ಅನೇಕ ಕ್ಲೇಶಗಳು ಅವರನ್ನು ಹಿಂಸಿಸುತ್ತಲೇ ಇರುವುವು. ॥೭೭॥

ಸ್ತ್ರೀಯರಿಗೆ ಪತಿವಿಯೋಗವಾದರೂ ದುಃಖ, ಸಂಯೋಗವಾದರೂ ಶ್ರಮ, ಇದಲ್ಲದೆ ಅಡಿಗೆಯ ಕೆಲಸ, ಅನೇಕ ಮಕ್ಕಳ ಕಾಟ, ಅಲ್ಲದೆ ಮಕ್ಕಳ ರೋಗರುಜಿನಾದಿಗಳನ್ನು ನೋಡಿಕೊಳ್ಳುವುದು, ಮೃತಪತಿಯೊಡನೆ ಸಹಗಮನ ಇವುಗಳನ್ನೆಲ್ಲಾ ಯೋಚಿಸಿದರೆ ಸ್ತ್ರೀಯರಿಗೆ ಎಂದಿಗೂ ಸುಖವೇ ತೋರಲಾರದು. ॥೭೮॥

ಚರಾಚರಶರೀರಿಣಾಂ ರವಿಕರೈಶ್ಚ ವಾತಾದಿಭಿಃ
ಕುಠಾರಕೃತವೃಕ್ಷತೋ ವಿಪಿನಶೀತದಾವಾದಿಭಿಃ ।
ವಿಯೋಗವಧಬಂಧನೈರ್ಮೃಗಖಗಾದಿಜನ್ಮಸ್ವಪಿ
ಸದಾ ಹಿ ಸುಖಮಲ್ಪಕಂ ನ ಭವತೀತಿ ಮನ್ಯೇ ಶಿವೇ ॥೭೯॥

ಖರಸೃಣಿಮುಖಾಹತೈರ್ಭಿನ್ನಕುಂಭಾ ಗಜೇಂದ್ರಾಃ
ಸರಣಿಗತರುತಜ್ಞಾ ಯಂತ್ರಿತಾ ಯಂತ್ರಿಭಿಸ್ತೇ ।
ಸಬಲಮಲಿವಿಮೂಢಾಃ ಶೃಂಖಲಾಬದ್ಧಪಾದಾಃ
ಸುದೃಢಕಠಿನಕಾಯಾ ನಿತ್ಯಮಾಮ್ಲಾನಸಂಸ್ಥಾಃ ॥೮೦॥

ತುರಗನಿವಹದುಃಖಂ ಸಾದಿಪಾದೈಃ ಕುಶಾಗ್ರ್ಯೈಃ
ಖರತರಖಲಿನಾಸ್ಯೈಃ ಘರ್ಮಜಚರ್ಮಾದ್ರ್ರರಕ್ತೈಃ
ವಿವಿಧಗತಿವಿಧಿಜ್ಞಾ ನಿತ್ಯಶೋ ಡಿಂಡತಿಸ್ಮ ॥೮೧॥

ಇನ್ನು ಪಕ್ಷಿ, ಮೃಗಾದಿಗಳ ಜನ್ಮವಾದರೋ ಇನ್ನೂ ಕಷ್ಟಗಳನ್ನು ಹೊಂದ ತಕ್ಕದ್ದು. ಅವು ಸೂರ್ಯನ ಬಿಸಿಲಿಗೂ, ಮಳೆಯ ಏಟಿಗೂ, ಗಾಳಿಯ ಹೊಡೆತಕ್ಕೂ ಸಿಕ್ಕಿ ಸದಾ ನರಳುತ್ತಿರುವುವು. ಕೊಡಲಿಯಿಂದ ಕತ್ತಿರಿಸಿದ ಮರಗಳಲ್ಲಿ ವಾಸಿಸುತ್ತಾ ಯಾವಾಗಲೂ ವಧ, ಬಂಧನ ಮೊದಲಾದ ದುಃಖಗಳಿಗೆ ಸಿಲುಕಿ ಸರ್ವದಾ ಸುಖವನ್ನೇ ಕಾಣದೆ ನರಳುತ್ತಿರುವುವು. ॥೭೯॥

ಆನೆಗಳಾಗಿ ಜನಿಸಿದವರೋ ಮಾವಟಿಗರ ಅಂಕುಶದ ತುದಿಯಿಂದ ಚುಚ್ಚಲ್ಪಟ್ಟು, ಕುಂಭಸ್ಥಳದಲ್ಲೆಲ್ಲಾ ಗಾಯಹೊಂದಿ, ಮಾವಟಿಗರ ಧ್ವನಿಗೆ ಹೆದರಿ, ಅವರ ಸೂಚನೆಯಂತೆ ತಮ್ಮ ನಡಗೆಯನ್ನು ಸರಿಪಡಿಸಿಕೊಳ್ಳುವುವು. ದುಂಬಿಗಳು ಅವುಗಳ ಕುಂಭಸ್ಥಳದಮೇಲೆಲ್ಲಾ ಮುತ್ತಿಪೀಡಿಸುವುವು. ಆ ಆನೆಗಳನ್ನು ದೊಡ್ಡ ದೊಡ್ಡ ಸರಪಣಿಗಳಿಂದ ಕಟ್ಟಿಹಾಕುವರು. ಅಷ್ಟು ದೊಡ್ಡ ದೇಹವನ್ನು ಹೊಂದಿದ್ದರೂ ಸಹ ಅವು ಸದಾ ನಿರ್ಬಂಧದಲ್ಲಿಯೇ ಇದ್ದು ತಮ್ಮ ಜೀವನಯಾತ್ರೆಯನ್ನು ನಡೆಸುವುವು. ॥೮೦॥

ಇನ್ನು ಕುದುರೆಗಳ ಸಮೂಹವಾದರೋ ಸವಾರರ ಕಾಲಿನಿಂದ ತುಳಿಯಲ್ಪಟ್ಟು, ಅವರು ಹಾಕಿದ ಕಡಿವಾಣವನ್ನು ಕಡಿಯುತ್ತಾ, ಅವರ ಚಾವಟಿಯ

ಶಕಟಹಲಮುಖೋತ್ಥೈಃ ಧುರ್ಯಯುಕ್ತಾಸು ಗೋಣೀ
ಭರವರಪರಿಖಿದ್ಯತ್ ಸ್ಕಂಧಪೃಷ್ಠಾಸ್ಥಿಸಂಘಾಃ ।
ಮುಖವಿವೃತಿವಿನಿರ್ಯತ್ ಸ್ಥೂಲದಂತೋರುಜಿಹ್ವಾ
ವೃಷಖರಮಹಿಷೋಷ್ಟ್ರಾ ಭಿನ್ನನಾಸೋರುಸೂತ್ರಾಃ ॥೮೨॥

ಉರಗಖಗಪಿಕಾದ್ಯಾ ಭಿನ್ನದಂಷ್ಟ್ರೋರುಶಜ್ಞಾಃ
ಕಪಿವೃಷನಕುಲಾದ್ಯಾಃ ಮತ್ಸ್ಯಗೋಧಾದಯೋಹ್ಯಾಃ ।
ಪರಭೃತಬಲಿಭೋಜ್ಯಾ ಕೂರ್ಮಚಾಷಾ ಮಯೂರಾಃ
ವನಹರಿಣಶಶಾದ್ಯಾ ಭೇಕಭಲ್ಲೂಕಕೋಲಾಃ ॥೮೩॥

ಮನುಜಕರಿನಹಸ್ತೈಸ್ತಾಡಿತಾ ನಿತ್ಯಭೀತಾ ।
ನಿಯತಸುಖಲವಾಸ್ತೇ ನಿತ್ಯದುಃಖಾಭಿತಪ್ತಾಃ ॥೮೪॥

ಏಟನ್ನು ತಿನ್ನುತ್ತಾ, ಜೀನನ್ನು ಹೊರುತ್ತಾ, ವೈಬೆಪರಿ ಸವಾರರ ಇಷ್ಟದಂತೆ ಚಿತ್ರ ನಡಗೆಯುಳ್ಳದ್ದಾಗಿ ಸಂಚರಿಸುತ್ತವೆ ||೮೧||

ಎತ್ತುಗಳೇ ಮೊದಲಾದ ಪ್ರಾಣಿಗಳು, ಜನರ್ಕ ಹೆಗಲಮೇಲಿಡುವ ನೇಗಿಲು, ಗಾಡಿಯ ನೊಗ ಇವುಗಳನ್ನು ಎಳೆದು, ಭಾರವನ್ನು ಹೊತ್ತು ಬೆನ್ನು ಮೂಳೆಗಳು ಬಗ್ಗುವವರೆಗೂ ದುಡಿಯುತ್ತವೆ. ಅಲ್ಲದೆ ತಮಗೆ ಹೊರಿಸಿರುವ ಭಾರವನ್ನು ಸಹಿಸಲಾರದೆ, ಮತ್ತು ಮೂಗಿಗೆ ರಂಧ್ರಮಾಡಿ ಪೋಣಿಸಿರುವ ಮೂಗುದಾರದಿಂದ ಎಳೆಯಲ್ಪಟ್ಟವುಗಳಾಗಿ, ಎತ್ತು, ಎಮ್ಮೆ, ಕತ್ತೆ, ಒಂಟಿ ಮೊದಲಾದ ಪ್ರಾಣಿಗಳು ಸದಾ ಕಷ್ಟವನ್ನನುಭವಿಸುತ್ತಲೇ ಇರುವುವು. ||೮೨||

ಇನ್ನು ಹಾವು, ಕೋಗಿಲೆಯೇ ಮೊದಲಾದ ಹಕ್ಕಿಗಳು, ಕಪಿಗಳು, ಗೂಳಿಗಳು, ಮುಂಗುಸಿ, ಮೀನು, ನರಿ, ಹೆಬ್ಬಾವು, ಕಾಗೆ, ಆಮೆ, ಗುಬ್ಬಚ್ಚಿ, ನವಿಲು, ಜಿಂಕೆ, ಮೊಲ, ಕಪ್ಪೆ, ಕರಡಿ, ಹಂದಿ ಇವೇ ಮೊದಲಾದ ಪ್ರಾಣಿಗಳು, ಮನುಷ್ಯರ ಕೈಗೆ ಸಿಕ್ಕಿ ತಮ್ಮ ಹಲ್ಲುಗಳನ್ನೆಲ್ಲಾ ಮುರಿಸಿಕೊಂಡು, ಅವರ ಏಟಿಗೆ ಹೆದರಿ ಸ್ವಲ್ಪ ಸುಖವನ್ನೂ ಕಾಣದೆ ನಿತ್ಯದುಃಖಿಗಳಾಗಿ ಜೀವಿಸುವುವು. ||೮೩-೮೪||

ವರ್ಣೀ ಸ್ವರ್ಣಾನುರಕ್ತೋ ಭವಜನಿತಕಥಾಸಾರಧಾರಾನುರಕ್ತೋ
ಭಿಕ್ಷುರ್ಭಕ್ಷ್ಯೇಷು ಸಕ್ತೋ ವಿಪಿನಭುವಿಗತೋ ಗ್ರಾಮತಷ್ಠೋತ್ಥಹರ್ಷಃ ।
ಸ್ವಸ್ಯಾಶಿಖ್ಯಾಪನಾರ್ಥಂ ಮಖಮುಖವಿಧಯೇ ದೀಕ್ಷಿತೈರ್ಮಂತ್ರಹೀನಃ
ಕಾಲೋ ಬಾಲಾಸು ಪ್ರಚರತಿ ತರುಣೀ ವೃದ್ಧರುಗ್ಣಾನ್ ವಿಹಾಯ ॥೮೫॥

ಧನಿನಾಂ ನ ಸುಖಾಯ ತೇ ಧನಂ
ತನಯೈರ್ಬಾಂಧವದಾರಚೋರರಾಜ್ಞಾ ।
ನ ಸುಖಾಯ ಭವೇಜ್ಜನಸ್ಯ ತತ್
ಸತತಂ ಭೀತಿಕರಂ ಹಿ ಯಾಚಕೇಭ್ಯಃ ॥೮೬॥

ಪಶುಕನಕಧನಾಂಗನಾಭಿರೇತತ್
ಜಗತೋ ಜಾಲಮಮೋ ನಿಬದ್ಧತೃಷ್ಣಂ ।
ನ ಸುಖಾಯ ಭವೇದ್ಧಿ ಕಸ್ಯಚಿತ್
ಮಮ ಭಕ್ತಿಃ ಶಮನಾಪ್ನುಯಾತ್ಸುಖಾಯ ॥೮೭॥

---

ಬ್ರಹ್ಮಚಾರಿಯೆನಿಸಿದವನು ಸಂಸಾರದ ವಿಷಯಸುಖಗಳಲ್ಲಿ ಅನುರಕ್ತನಾಗಿ ಸುವರ್ಣಾರ್ಜನೆಗೆ ನಿಂತುಬಿಡುವನು. ಭಿಕ್ಷುಕನಾಗಿ ರುಚಿರುಚಿಯಾದ ತಿಂಡಿಗಳಲ್ಲಿ ಅಪೇಕ್ಷೆ ಇಟ್ಟು ಕಾಡಿನ ಮಧ್ಯದಲ್ಲಿ ವಾಸಿಸುತ್ತಾ ಗ್ರಾಮಸ್ಥರನ್ನು ವಂಚಿಸಿ ಆಹಾರವನ್ನು ಸಂಪಾದಿಸುವನು. ಮಂತ್ರವಿದ್ಯೆಯನ್ನೇ ಅರಿಯದ ಮೂಢನು ತಾನು ಯಜ್ಞಯಾಗಾದಿಗಳಲ್ಲಿ ದೀಕ್ಷಿತನಂತೆ ನಟಿಸಿ ದ್ರವ್ಯಾರ್ಜನೆಮಾಡುವನು. ಬಾಲಿಕೆಯಾದವಳು ತನ್ನ ಪತಿಯು ವೃದ್ಧನೋ, ರೋಗಿಯೋ ಆಗಿರುವನೆಂದು ಅವನನ್ನು ತಿರಸ್ಕರಿಸಿ ಅಂತಹ ಯುವಕನನ್ನು ಅರಸಲು ಹೊರಡುವಳು. ॥೮೫॥

ಶ್ರೀಮಂತರು ಸಂಪಾದಿಸಿ ಇಟ್ಟುಕೊಂಡಿರುವ ಹಣವು ಅವರಿಗೆ ಎಂದಿಗೂ ಸುಖವನ್ನು ದೊರಕಿಸಲಾರದು. ಮಕ್ಕಳೋ, ನೆಂಟರಿಷ್ಟರೋ, ಕೊನೆಗೆ ಕಳ್ಳಕಾರರು, ಹೆಂಡತಿಯ ಕಡೆಯವರು, ರಾಜಸಂಬಂಧಿಗಳು ಇವರಿಂದ ಅಪಹೃತವಾಗುವುದು. ದ್ರವ್ಯವೆಂಬುದು ಜನಕ್ಕೆ ಎಂದೂ ಸುಖವನ್ನು ಒದಗಿಸಲಾರದು. ಭಿಕ್ಷುಕರಿಗಂತೂ ಹಣವೆಂಬುದು ಸದಾ ಭೀತಿಕರವಾದದ್ದೆಂದೇ ತಿಳಿಯಬೇಕು. ॥೮೬॥

ಪಶುಗಳು, ಸುವರ್ಣ, ಹಣ, ಸ್ತ್ರೀಯರು ಇವು ತಮಗೆ ಸುಖಸಾಧಕಗಳೆಂದು ನಂಬಿ ಜನರು ಅದರಲ್ಲಿಯೇ ಮೋಹಗೊಂಡು ಅದರ ಪ್ರಾಪ್ತಿಗಾಗಿಯೇ ಸದಾ

ದುಃಖೇನ ಧಾನ್ಯಧನತಾಂ ಸಮವಾಪ್ಯ ಮಂದೋ
ದಾರಾಸುತಾಪ್ತನಿಜಬಂಧುಜನಂ ಚ ಹಿತ್ವಾ ।
ಮರ್ತ್ಯಸ್ಯ ಮೃತ್ಯುಭವನೇ ಸುಖದೋಽಸ್ತಿ ಕಶ್ಚಿತ್
ತಸ್ಯಾಖಿಲಂ ಧನಮುಮೇ ಪರಕೀಯಭೋಗಃ ॥೮೮॥

ನ ಶಿವಾಲಯಕಲ್ಪನೇನ ವಾ
ಸತತಂ ಶಾಂಭವಹಸ್ತದಾನತೋ ವಾ ।
ಮಖಜಾತವಿಧಿಪ್ರಚಾರತೋ ವಾ
ನ ಹಿ ತಸ್ಯಾಸ್ತಿ ರುಚಿರ್ಮುದಾ ಭವಾನಿ ॥೮೯॥

ದುರದೃಷ್ಟದಶಾನ್ನಿಕೃಷ್ಟಭಾವಃ
ಸತತಂ ಕಷ್ಟಜಭೋಗಸಕ್ತತುಷ್ಟಃ ।
ಕಚಕುಚಜಘನೇಷು ದತ್ತದೃಷ್ಟಿ
ವನಿತಾಯಾವಸತೋಽರುಮೂಲಭಾಗೇ ॥೯೦॥

ಪ್ರಯತ್ನಿಸುವರು. ಆದರೆ ಅವಾವುವೂ ಮನುಷ್ಯರಿಗೆ ಸುಖವನ್ನು ಒದಗಿಸಲಾರವು. ನನ್ನ ಭಕ್ತನೊಬ್ಬನು ಮಾತ್ರ ಸ್ಥಿರಶಾಂತತೆಯನ್ನು ಪಡೆದು ಸುಖಿಸುವನು. ॥೮೭॥

ಮೂಢನಾದವನು ಕಷ್ಟದಿಂದ ಧಾನ್ಯ, ಧನ, ಹೆಂಡತಿ, ಮಕ್ಕಳು, ನೆಂಟರಿಷ್ಟರು ಮೊದಲಾದವರನ್ನೆಲ್ಲಾ ಸಂಪಾದಿಸಿ, ಮರಣಕಾಲದಲ್ಲಿ ಎಲ್ಲವನ್ನೂ ಬಿಟ್ಟು ಮೃತ್ಯುಗೃಹವನ್ನು ಹೊಂದುವರು. ಆಗ ಮೇಲೆ ಹೇಳಿದ ಯಾರೂ ಬಂದು ಇವನನ್ನು ರಕ್ಷಿಸಲಾರರು. ಇವನು ಸಂಪಾದಿಸಿದ ಹಣದಿಂದ ಇತರರು ಸುಖಪಡುವರು. ॥೮೮॥

ಹಣಗಾರನಾದ ಮೂಢನು, ತನ್ನ ಹಣದಿಂದ ಈಶ್ವರಾಲಯನಿರ್ಮಾಣದಲ್ಲಾಗಲಿ ಅಥವಾ ಈಶ್ವರಭಕ್ತರಿಗೆ ದಾನಮಾಡುವುದರಲ್ಲಾಗಲಿ, ಯಜ್ಞಯಾಗಾದಿ ಸತ್ಕಾರ್ಯಗಳಲ್ಲಾಗಲಿ ತಮ್ಮ ಹಣವನ್ನು ವಿನಿಯೋಗಿಸಲು ಇಷ್ಟಪಡುವುದಿಲ್ಲ. ॥೮೯॥

ಇನ್ನೂ ಪಾಪಿಗಳೆನಿಸಿದವರು, ತಮ್ಮ ದುಷ್ಕರ್ಮ ಪರಿಪಾಕದಿಂದ, ಸರ್ವದಾ ದುಃಖಕರವಾದ ಭೋಗದಲ್ಲಿಯೇ ಆಸಕ್ತರಾಗಿ, ಸ್ತ್ರೀಯರ, ಕೂದಲು, ಗುಹ್ಯಸ್ಥಳ ಸ್ತನ ಮುಂತಾದ ವಸ್ತುಗಳಲ್ಲಿಯೇ ದೃಷ್ಟಿಯುಳ್ಳವರಾಗಿ, ಸರ್ವದಾ ಅವರ ದೇಹದ ಮೇಲೆಯೇ ಮನಸ್ಸುಳ್ಳವರಾಗಿ ಕಾಲಕಳೆಯುವರು. ॥೯೦॥

ಭಾರ್ಯಾಪುತ್ರಸುಬಂಧು ಮಿತ್ರಜನವಿಯೋಗಾರ್ತೋ ರುದನ್ನಸ್ತಧೀಃ
ದೌರ್ಭಾಗ್ಯಂ ಮಮದೈವತೈಃ ಕೃತಮಿವೇತ್ಯುತ್ಕೃಷ್ಟಕರ್ಮಣಂ(?) ಶಪನ್ ।
ಹಾ ಕಷ್ಟಂ ಮಮ ಜೀವಿತೇ ನ ಕರುಣಾವಿಷ್ಟಃ ಸದಾ ಯಾಚತೇ
ಲೋಕೇ ಮುಹ್ಯತಿ ಶಂಕರಾದ್ಯಶರಣೋ ವೃದ್ಧಸ್ಸದಾ ಕಷ್ಟಭಾಕ್ ॥೯೧॥

ದೃಷ್ಟಿರ್ನಶ್ಯತಿ ಕಾಶಪುಷ್ಪಸಮಿತೈಃ ಕೇಶೈಃ ಪ್ರಕಂಪಾಂಗಕೋ
ಲಾಲಾಜಾಲವಿದೂಷಿತೋರುವದನೋ ಜಿಹ್ವಾಚಲದ್ದಂತಕಃ ।
ರೋಗೈಃ ಪಿತ್ತಕಫಾನಿಲೋತ್ಥಿತಮಹಾಹಿಕ್ಕಾದಿಸಂಘೂರ್ಣವಾಕ್
ತಲ್ಪೇನಲ್ಪವಿಚಾರಯುಕ್ತಹೃದಯೋ ಮೃತ್ಯೋರ್ಮುಖಂ ಗಚ್ಛತಿ ॥೯೨॥

ನ ಮೇ ಪುತ್ರಃ ಪೌತ್ರೋ ಗೃಹಮಪಿ ಚ ಜೀರ್ಣಂ ಚ ಧನಕಂ
ಕೃಷಿರ್ನಷ್ಟಾ ವೃಷ್ಟ್ಯಾ ಧನಮಪಿ ಚ ದತ್ತಂ ಚ ನ ಪುನಃ ।

ಕೊನೆಗೆ ಸಂಸಾರದಲ್ಲಿ ಬಳಲಿ ಬೇಸತ್ತು ಕಾರಣಾಂತರಗಳಿಂದ ಹೆಂಡತಿ, ಮಕ್ಕಳು, ಬಂಧುಗಳು, ಮಿತ್ರರು ಇವರನ್ನು ಕಳೆದುಕೊಂಡು, ‘ ಅಯ್ಯೋ ನನ್ನ ದುರದೃಷ್ಟವೇ ? ನಾನು ಎಂತಹ ಪಾಪಿಷ್ಠನು ? ನನ್ನ ಮೇಲೆ ಯಾವದೇವರಿಗೂ ಕರುಣೆಯೇ ಇಲ್ಲವಲ್ಲಾ! ಎಂದು ಗೋಳಿಡುವನು. ವೃದ್ಧನಾದರೂ ಸಹ ಇದೇ ರೀತಿ ಅಳುತ್ತಾ, ಕಡೆಗೂ ಈಶ್ವರನನ್ನು ಮೊರೆಹೋಗದೆ ಸದಾ ಕಷ್ಟವನ್ನನುಭವಿಸುತ್ತಲೇ ಕಾಲಕಳೆಯುವನು. ॥೯೧॥

ವೃದ್ಧನಾಗುತ್ತಾ ಮನುಷ್ಯನಿಗೆ ದೃಷ್ಟಿಮಾಂದ್ಯವೊದಗುವುದು. ಕಾಶಪುಷ್ಪದಂತೆ ತಲೆಗೂದಲು ಬೆಳ್ಳಗಾಗುವುದು. ಅಂಗಾಂಗಗಳು ನಡುಗುವುವು. ಬಾಯಿಯಲ್ಲಿ ಜೊಲ್ಲು ಸುರಿಯುವುದು. ಹಲ್ಲುಗಳು ನಾಲಿಗೆಗೆ ತಾಕಿ ಅಲ್ಲಾಡುತ್ತಿರುವುವು. ಪಿತ್ತ, ಕಫ, ವಾತಗಳ ಪ್ರಕೋಪದಿಂದ ಬಿಕ್ಕಳಿಕೆಯೇ ಮೊದಲಾದ ರೋಗಗಳು ಉಂಟಾಗಿ, ಸಂಪೂರ್ಣವಾಗಿ ಮಾತನ್ನು ಆಡಲಾರದೆ ಹಾಸಿಗೆಯ ಮೇಲೆಯೇ ಮಲಗಿಕೊಂಡು, ಅಲ್ಲಿಯೂ ಸಾಂಸಾರಿಕವಾದ ಯೋಚನೆಗಳನ್ನೇ ಮಾಡುತ್ತಾ ಕೊನೆಗೆ ಮರಣ ಹೊಂದುವನು. ॥೯೨॥

ನನಗೆ ಮಕ್ಕಳು ಮೊಮ್ಮಕ್ಕಳು ಆಗಲಿಲ್ಲ. ಮನೆಯೆಲ್ಲಾ ಹಳೆಯದಾಯಿತು. ಹಣವು ಮುಗಿಯಿತು. ಮಳೆಯಿಲ್ಲದೆ ಬೆಳೆಯೆಲ್ಲಾ ಹೋಯಿತು. ಹಣವನ್ನು

ಸ ವೈ ದಾತುಂ ಶಕ್ತೋ ಮಮ ತು ಗೃಹಿಣೇ ಬಾಲತನಯಾ
ತಥಾ ಗೌಶ್ಚಾಪಿ ಪ್ರತಿಪದಘಟೋಧ್ನೀ ನ ತೃಣಕೈಃ ॥೯೩॥

ಮಯಾ ಪುಷ್ಟಾ ರುಷ್ಟೋ ಮಯಿ ತರುಣಿ ಪುತ್ರೋದ್ಯ ಹಿ ಕಥಂ
ಶಯಾನಂ ತಲ್ಪೇ ತಂ ವಿವಿಧಭವಚಿಂತಾಬ್ಧಿವಿವಶಂ ।
ಮುಹುಃ ಪುತ್ರಾನ್ ದಾರಾನ್ ತರಳನಯನಾಪಾಂಗಜಜಲೈಃ
ಸ್ಖಲಲ್ಲಾಲಾಹಿಕ್ಕಾಘನಿಘುರುಘುರೋತ್ಕಂಠಜರವೈಃ ॥೯೪॥

ಚಲಚ್ಛ್ವಾಸೈರ್ಬಂಧೂನ್ನಹಿ ಖಲು ವಿಜಾನಾತಿ ವಿವಶೋ
ಮುಹುಃ ಕರ್ಣೇ ಪೃಷ್ಟೋಽಪ್ಯಮಿತರುದಿತಾಕ್ರಂದನರವೈಃ ।
ಅಹೋ ಜಾನಾಸೀಮಂ ಜನಮಿತಿ ಮುಹುರ್ಬಂಧುನಿವಹೈಃ
ಶಿವೇ ಗಾಢಂ ವಿದ್ಧೋ ವ್ರಣಸುಷಿರತ್ರುಟ್ಯತ್ಸ್ವರಮುಖೈ ।
ರ್ಮುಹುಸ್ಸೂಚೀಜಾಲೈಶ್ಶತಗುಣಿತದುಃಖಂ ಸ ಲಭತೇ ॥೯೫॥

ಸಾಲವಾಗಿ ಕೊಟ್ಟದ್ದು ಹಿಂದಕ್ಕೆ ಬರಲಿಲ್ಲ. ನನ್ನ ಹೆಂಡತಿಯಿನ್ನೂ ಚಿಕ್ಕವಳು ನಮ್ಮ ಹಸುವು ಗಡಿಗೆ ತುಂಬ ಹಾಲನ್ನು ಕೊಡುವುದಾಗಿದ್ದರೂ, ಹುಲ್ಲಿಲ್ಲದೆ ಹಾಲಿಲ್ಲದಂತಾಗಿದೆ. ॥೯೩॥

ನನ್ನಿಂದ ರಕ್ಷಿತರಾಗಿ ಹೆಂಡತಿ ಮಕ್ಕಳು ನನ್ನ ಮೇಲೆಯೇ ರೇಗಿಬೀಳುತ್ತಿರುವರು. ಇವೇ ಮುಂತಾದ ಯೋಚನೆಗಳಿಂದ ಹಾಸಿಗೆಯಲ್ಲಿ ಮಲಗಿರುವ ಮುದುಕನೂ ವ್ಯಥೆಪಡುವನು. ಹಾಗಿದ್ದರೂ, ಮರಣಕಾಲದಲ್ಲಿ ಕಫಾದಿಗಳಿಂದ ಗಂಟಲು ಕಟ್ಟಿ, ಜೊಲ್ಲು ಸುರಿಯುತ್ತಾ, ಗರಗರ ಶಬ್ದಮಾಡುತ್ತಾ ನರಳುವಾಗಲೂ, ಹೆಂಡತಿ ಮಕ್ಕಳನ್ನು ಸ್ಮರಿಸಿಕೊಂಡು ಕಣ್ಣೀರಿಡುವನು. ಪಾರ್ವತಿಯೇ, ಇಷ್ಟು ಅಜ್ಞಾನದಿಂದ ಕೂಡಿರುವ ಮಾನವವರ್ಗಕ್ಕೆ ಸೌಖ್ಯವೆಲ್ಲಿಂದ ಬರಬೇಕು? ॥೯೪॥

ಮರಣಕಾಲದಲ್ಲಿ ಶ್ವಾಸೋಚ್ಛ್ವಾಸಗಳ ವ್ಯತ್ಯಾಸದಿಂದ ಮನುಷ್ಯನು ತನ್ನ ನೆಂಟರಿಷ್ಟರನ್ನು ಗುರುತಿಸಲಾರನು. ಕಿವಿಯ ಹತ್ತಿರ ನಿಂತು ಪ್ರಶ್ನಿಸಿದರೂ, ಗಟ್ಟಿಯಾಗಿ ಅತ್ತರೂ ಅವನಿಗೆ ಗೊತ್ತಾಗುವುದಿಲ್ಲ. ಆಗ, ಇವನು ಯಾರು? ನಾನು ಯಾರು? ಅವನು ಯಾರು? ಎಂಬುದಾಗಿ ಎಲ್ಲರೂ ಅವನನ್ನು ಪ್ರಶ್ನಿಸುವರು. ಆದರೂ ಅವನಿಗೆ ಅರಿವಿಲ್ಲದೆ, ವ್ರಣದ ಮೇಲೆ ನೂರಾರು ಸೂಜಿಗಳನ್ನು

ಯಾವನ್ನ ವಾಙ್ಮನಸಿ ಸಂಕ್ರಮತೇ ಮುಮೂರ್ಷೋ
ಸ್ತಾವತ್ಸದಾರತನಯಾನ್ ಸ ಹಿ ವೇತ್ತಿ ದೇವಿ ।
ಪ್ರಾಣೇ ಮನಸ್ಯಸ್ತಮಿತಿ ಚ ತೇಜ
ಸ್ಯಂಧೇನ ಜಾನಾತಿ ಸ ವೈ ಮನುಷ್ಯಃ ॥೯೬॥

ಅನ್ನಪ್ರಾಣಮನಾ(?)ದಿಕೋಶನಿವಹೈರ್ವಿಜ್ಞಾನಮೋದಾತ್ಮಕೈ
ರ್ಭೂತೈಃ ಪಂಚ ವಿಲೋಲಿತೇಂದ್ರಿಯಗಣೈರ್ವ್ಯಾಪಾರಹೀನೈಃ ಶಿವೇ ।
ಬದ್ಧೋತ್ತುಂಗತರಂಗ ವಲ್ಗಿತಮಹೀಪೃಷ್ಠೋತ್ಥಶಂಕೂನಿಭೈಃ
ಪ್ರಾಣೈರ್ಮರ್ಮವಿಘಟ್ಟನೋತ್ಥಿತಕಚೋ ದೇಹಾತ್ಸ ನಿಷ್ಕ್ರಾಮತಿ ॥೯೭॥

ದೇಹೇಹಂ ಮಾನತೋತ್ಥೈಃ ಪ್ರತಿಭಟಸುಕೃತೈಃ ಪಾಪಜಾಲೈರನೇಕೈ
ರ್ವಿದ್ಯಾಕರ್ಮನಿಬದ್ಧಪೂರ್ವಕೇತನುಂ ಪ್ರಜ್ಞಾನ್ವಿತಸ್ಸಜ್ಜತಿ ।
ಯಾತ್ಯನ್ಯಂ ಕುಣಪಂ ತೃಣಾಗ್ರಗತಿಕಃ ಕೀಟೋ ಯಥಾನ್ಯಂ ತ್ಯಜೇ
ತ್ತದ್ವದ್ದೇಹಶತಾನಿ ಸಂಕ್ರಮತಿ ವೈ ಸೂಕ್ಷ್ಮೇಂದ್ರಿಯೈರ್ದೇಹಿಕೈಃ ॥೯೮॥

ಚುಚ್ಚಿದರೆ ಎಷ್ಟು ನೋವಾಗುವುದೋ ಅದರ ನೂರರಷ್ಟು ಬಾಧೆಯನ್ನು ಆತನು ಸಹಿಸುವನು. ॥೯೫॥

ಎಲ್ಲಿನವರೆಗೆ ತನ್ನ ಮನಸ್ಸು ತನ್ನ ಮಾತು ತನ್ನ ಅಧೀನದಲ್ಲಿರುವುದೋ, ಅಲ್ಲಿಯವರೆಗೆ ಆತನು ತನ್ನ ಹೆಂಡತಿ ಮಕ್ಕಳನ್ನು ಸ್ಮರಿಸಿಕೊಳ್ಳುವನು. ಎಲ್ಲಿಗೆ ಮನೋವ್ಯಾಪಾರವು ನಿಂತುಹೋಗುವುದೋ, ಆಗ ಆತನು ಕೇವಲ ಕುರುಡನಂತೆ ಯಾರನ್ನೂ ಗುರುತಿಸಲಾರನು. ಅಂಧಕಾರದಲ್ಲಿ ಮುಳುಗುವನು. ॥೯೬॥

ಕೊನೆಗೆ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ಪಂಚಕೋಶಗಳೂ, ಪೃಥಿವ್ಯಾದಿ ಪಂಚಭೂತಗಳೂ, ಪಂಚೇಂದ್ರಿಯಗಳೂ, ವ್ಯಾಪಾರ ಹೀನಗಳಾಗಿ ನಿಂತು ಬಿಡುವುವು. ಒಡನೆಯೇ ಭೂಮಿಯ ಮೇಲೆ ಬಿದ್ದ ಮರದ ತುಂಡು ಅಲೆಗಳ ಹೊಡೆತಕ್ಕೆ ಸಿಕ್ಕಿ ತೇಲಿಹೋಗುವಂತೆ ಪ್ರಾಣಗಳು ಅವನ ದೇಹದ ಮರ್ಮಸ್ಥಾನದಿಂದ ಕಿತ್ತು ಹಾರಿಹೋಗುವುವು. ॥೯೭॥

ದೇಹವೇ ಆತ್ಮವು ಎಂದು ಅಹಂಬುದ್ಧಿಯನ್ನು ಕೇವಲ ಶರೀರದಲ್ಲಿಯೇ ಇಟ್ಟು ಮಾಡಿದ ಸಕಲ ಪಾಪಕರ್ಮಗಳಿಂದಲೂ ಸಂಪಾದಿಸಿದ ಪಾಪರಾಶಿಯಿಂದ

ಕರಾಳದಂಷ್ಟ್ರೈರ್ವಿಕಟೋರುದಂಡ
ಕಶಾದಿಪಾತ್ರೈರ್ಯಮದೂತಪಾಶೈಃ ।
ಪಾಪಾನ್ವಿತೋ ಯಾತಿ ಯಮಸ್ಯ ಸದ್ಮ ತತ್
ಪ್ರಕೃಷ್ಟದುಃಖಾನಿ ಸದೈವ ಭುಂಕ್ತೇ ॥೯೯॥

ವಿಮಾನವರ್ಯೇಣ ಮನೋಹರೇಣ
ಸಂಪೂಜಿತೋ ವೀಜಿತಚಾಮರೌಘೈಃ ।
ಸಂಪೂಜಿತೋ ಯಾತಿ ಸುರೇಂದ್ರಸದ್ಮ
ತತ್ಸ್ವರ್ಗೇಷ್ಟಭೋಗಾನಿ ಸುಖಾನಿ ಭುಂಕ್ತೇ ॥೧೦೦॥

ತತ್ಕರ್ಣಕಂಠ ಕಟಿಭಾಗಗತಂ ಹಿರಣ್ಯ
ವಾಸೋ ಹರಂತಿ ಮೃತಸಾ ಇವ ಬಾಂಧವಾಸ್ತೇ ।
ತಂ ನಿರ್ಹರಂತಿ ಚ ಗೃಹಾತ್ಪಿತೃಕಾನನಾಯ
ದುಃಖಾನುಯಾನಮಬಲಾಜನಬಾಲಸಂಘೈಃ ॥೧೦೧॥

---

ಅವನಿಗೆ ಅದಕ್ಕೆ ತಕ್ಕಂತಹ ಜನ್ಮವೊಂದು ಒಡನೆಯೇ ಸೃಷ್ಟವಾಗುವುದು. ಒಂದು ಹುಲ್ಲು ಕಡ್ಡಿಯ ತುದಿಯಲ್ಲಿರುವ ಹುಳುವು ಒಂದನ್ನು ಬಿಟ್ಟು ಮತ್ತೊಂದನ್ನು ಆಶ್ರಯಿಸುವಂತೆ ದೇಹಸ್ಥವಾಗಿದ್ದ ಸೂಕ್ಷ್ಮೇಂದ್ರಿಯಗಳು ಒಂದು ಹೆಣವನ್ನು (ದೇಹವನ್ನು) ಬಿಟ್ಟು ಮತ್ತೊಂದು ಶರೀರವನ್ನು ಹೊಂದುವುವು. ||೯೮||

ಮತ್ತೂ ಪಾಪಿಷ್ಠನಾದವನನ್ನು ಕೋರೆಹಲ್ಲುಗಳಿಂದ ಭಯಂಕರರಾಗಿರುವ ಯಮದೂತರು ದಂಡಗಳಿಂದಲೂ, ಚಾವಟಿಗಳಿಂದಲೂ ಹೊಡೆಯುತ್ತಾ ಯಮನ ಮನೆಗೆ ಎಳೆದೊಯ್ಯುವರು. ಅಲ್ಲಿ ಅವನು ಅನೇಕ ದುಃಖಪರಂಪರೆಗಳನ್ನು ಅನುಭವಿಸುತ್ತಾ ತನ್ನ ಪಾಪವನ್ನು ಸವೆಸುವನು. ||೯೯||

ಸುಕೃತಿಯಾದವನು ಮೃತನಾದೊಡನೆಯೇ ದೇವಲೋಕದಿಂದ ಕಳುಹಿಸಲ್ಪಟ್ಟ ವಿಮಾನದಲ್ಲಿ ಕುಳಿತವನಾಗಿ, ಅಪ್ಸರಸ್ತ್ರೀಯರ ಚಾಮರಾದಿಗಳಿಂದ ಸೇವಿತನಾಗಿ ದೇವಲೋಕವನ್ನು ಸೇರುವನು. ಅಲ್ಲಿ ಅನೇಕ ಸೌಖ್ಯಗಳನ್ನನುಭವಿಸುತ್ತಾ ತಾನು ಸಂಪಾದಿಸಿದ ಪುಣ್ಯವನ್ನು ಸವೆಸುವನು. ||೧೦೦||

ಮನುಷ್ಯನು ಮೃತನಾದೊಡನೆಯೇ ಆತನ ಕತ್ತಿನಲ್ಲಿ, ಕಿವಿಯಲ್ಲಿ, ಸೊಂಟದಲ್ಲಿರುವ ಸಕಲಾಭರಣಗಳನ್ನೂ ಅವನ ಬಾಂಧವರು ಕಸಿದುಕೊಳ್ಳುವರು.

ಹಾ ಹಾ ತಾತ ಪಿತಸ್ತ್ವಂ ಜನಮಿಮಮಧುನಾ ಕ್ವಾದ್ಯ ತ್ಯಕ್ತ್ವಾ ಗತೋಽಸಿ
ಬಂಧೋ ಪುತ್ರ ಕ್ವ ಮಿತ್ರ ಸತ್ತಮ ಇತಿ ಕ್ರಂದಂತಿ ತೇ ಬಾಂಧವಾಃ ।
ಚಿಂತಾಶತವಿದೀಪಿತಂ ನರಕಪಾಲದಗ್ಧಾಸ್ಥಿಕಂ
ಸ್ಮಶಾನಭಸಿತೋತ್ಥಿತಶ್ವಗಣಕಾಕಗೃಧ್ರಾರವಂ ॥೧೦೨॥

ಅಹೋ ಪ್ರಿಯತಮೋರಿತಃ ಕುಲಕರಾಬ್ಜ ಮಿತ್ರೇತ್ಯಯಂ
ಜನೋತ್ಥರುದಿತಾರ್ಭಟೇ ಘಟಿಕಪಾಲದಗ್ಧೋಽಲ್ಮುಕಂ ।
ವಿದಗ್ಧಕುಣಪಂ ತದಾ ಮಹದಪಾರಕಷ್ಟೋತ್ಥಿತೈ
ರ್ಜ್ವಲಚ್ಛಿಖಿಶಿಖಾಗಣೈರ್ಹರಿತಪೀತಧೂಮಾರುಣೈಃ ॥೧೦೩॥

ವಸಾವಿದಹಚೀತ್ಕೃತೈರ್ಮುಹುರನೀಕ್ಷರೈರ್ಬಾಂಧವೈಃ ।
ಸ ಏವ ಕಿಲ ಗಚ್ಛತಿ ನ ಚ ಸ ದೃಶ್ಯತೇ ಭಸ್ಮಭಾಕ್ ॥೧೦೪॥

---

ಒಡನೆಯೇ ಆ ಶವವನ್ನು ಅನುಸರಿಸಿ, ಹೆಂಗಸರು ಮಕ್ಕಳೆಲ್ಲರೂ ಗುಂಪಾಗಿ ಅಳುತ್ತಾ ಸ್ಮಶಾನದವರೆಗೆ ಹೋಗುವರು. ॥೧೦೧॥

ಹಾಗೆ ಸ್ಮಶಾನವನ್ನು ತಲಪಿ ಎಲೈ ತಂದೆಯೇ, ನನ್ನನ್ನು ಕೈಬಿಟ್ಟೆಯಲ್ಲಾ ಎಂದು ಮಕ್ಕಳೂ, ಎಲೈ ಸ್ನೇಹಿತನೇ ನನ್ನನ್ನು ದೂರಮಾಡಿದೆಯಲ್ಲಾ ಎಂದು ಸ್ನೇಹಿತರೂ, ಬಂಧುವೇ ನಮ್ಮನ್ನು ತ್ಯಜಿಸಿದೆಯಲ್ಲಾ ಎಂದು ನೆಂಟರಿಷ್ಟರೂ ಗೋಳಿಡುವರು. ಅಲ್ಲದೇ ಹೆಣದ ಬೂದಿಯಿಂದ ತುಂಬಿರುವ ಕಾಕಗೃಧ್ರಗಳ ರವದಿಂದ ಧ್ವನಿತವಾಗುತ್ತಿರುವ ಸ್ಮಶಾನನಲ್ಲಿಯೇ ಬಹಳಹೊತ್ತು ಕಾಲಕಳೆಯುವರು. ॥೧೦೨॥

ಕೊನೆಗೆ ಹೆಣವನ್ನು ಚಿತೆಯಮೇಲಿಟ್ಟು ಅದರ ತಲೆಬುರುಡೆಯು ಸಿಡಿಯುವ ವರೆಗೂ, ಅಯ್ಯೋ ಮಿತ್ರನೇ, ಕುಲದೀಪಕನೇ ನಾಶವಾದೆಯಾ ಎಂದು ಬಡಿದು ಕೊಳ್ಳುತ್ತಿರುವರು. ಆಗ ಈ ಶವವಾದರೋ ಬೆಂಕಿಯ ಬೇಗೆಗೆ ಸಿಕ್ಕಿ, ಹಸುರು, ಹಳದಿ ಮುಂತಾದ ಬಣ್ಣಗಳಿಂದ ಹೊಗೆಯ ಆಕಾರದಲ್ಲಿ ಪರಿಣಾಮಗೊಳ್ಳುತ್ತಿರುವುದು. ॥೧೦೩॥

ಆ ಶವದಹನವನ್ನು ನೋಡುತ್ತಾ ಬಂಧುವರ್ಗದವರು ಕುದಿಯುವ ರಕ್ತದಿಂದ ಚೀತ್ಕಾರಮಾಡುತ್ತಾ ಹೊರಳಾಡುವರು. ಹೀಗಾಗಿ ಮಾನವನು ಬೂದಿಯ ರಾಶಿಯಾಗಿ ನಿಂತು ಹೋಗುವನು. ॥೧೦೪॥

ನ ರುದ್ರಾಕ್ಷಮಾಲಾಭಿರೇಕಸ್ಯ ದೇಹಂ
ನ ಭಸ್ಮೈ(?)ರ್ವಿಲಿಂಪಂತಿ ಮೂಢಾಸ್ತದೀಯೋಃ ।
ನ ಶರ್ವಾರ್ಪಿತಂ ಬಿಲ್ವಪತ್ರಂ ತದೀಯೇ
ಶಿಖಾಯಾಂ ನಿಬಧ್ನಂತಿ ದುಃಖೈಕಲೋಲಾಃ ॥೧೦೫॥

ನ ಚೇಶಾನ ಶಂಭೋ ಶಿವೇಶೇತಿ ಕರ್ಣೇ ।
ಜಪಂತೋ ಮುಖೇನಾ ನ ದಾಸ್ಯಂತಿ ತೀರ್ಥಂ (ಮದೀಯಂ) ॥೧೦೬॥

ಪ್ರಾಯಶ್ಚಿತ್ತಶತಾದಿನೈವ ಪವಯೇದ್ಗೋದಾನಭೂದಾನಕಂ
ಸತ್ಯಂ ಮೃತ್ಯುಮುಖೇ ಸ್ಥಿತಸ್ಯ ಹಿ ಶಿವೇ ಮನ್ನಾಮ ಚೈಕಂ ಪರಂ ।
ಮುಕ್ತಿಂ ತದ್ವಿತನೋತಿ ಪಾಪಮಖಿಲಂ ತನ್ನಾಶಯೇತ್ಸರ್ವಥಾ
ಭಸ್ಮಾಭ್ಯಕ್ತತನುಸ್ತ್ರಿಪುಂಡ್ರನಿಟಿಲೋ ರುದ್ರಾಕ್ಷಮಾಲಾಧರಃ ॥೧೦೭॥

ಪ್ರಾಪ್ನೋತ್ಯೇವ ಮದೀಯಲೋಕಮಧುನಾ ಪಾಪಾನ್ವಿತೋಽಪಿ ಪ್ರಿಯೇ
ಯಾತಾಯಾತಭವೋತ್ಥಿತಾಖಿಲಗತಿರ್ಮುಕ್ತಸ್ಯ ನೋ ವಿದ್ಯತೇ ।

---

ಮೂರ್ಖರಾದ ಜನರು ತಾವು ಬದುಕಿರುವವರೆಗೂ ಶಿವಪ್ರೀತಿಕರಗಳಾದ ರುದ್ರಾಕ್ಷಿ, ಭಸ್ಮಗಳಿಂದ ತಮ್ಮ ದೇಹವನ್ನು ಪವಿತ್ರಗೊಳಿಸುವುದಿಲ್ಲ. ಭಕ್ತಿಪೂರ್ವಕವಾಗಿ ಈಶ್ವರನಿಗೆ ಬಿಲ್ವಪತ್ರೆಯನ್ನು ಅರ್ಪಿಸುವುದಿಲ್ಲ. ಶಿವಪ್ರಸಾದವನ್ನು ತಲೆಗೆ ಮುಡಿಯುವುದಿಲ್ಲ. ಹಾಗೆಯೇ ತಮ್ಮ ಕಾಲವನ್ನೆಲ್ಲಾ ಕಳೆಯುತ್ತಾರೆ. ॥೧೦೫॥

ತಮ್ಮ ಕಿವಿಗಳಿಂದ ಶಿವನಾಮಗಳನ್ನು ಕೇಳುವುದಿಲ್ಲ. ಬಾಯಿಯಲ್ಲಿ ಶಿವಮಂತ್ರಗಳನ್ನು ಜಪಿಸಿ ತೀರ್ಥಪ್ರಾಶನವನ್ನೂ ಮಾಡುವುದಿಲ್ಲ. ॥೧೦೬॥

ಮನುಷ್ಯನು ತಾನು ಸಂಪಾದಿಸಿದ ಪಾಪಗಳನ್ನು ಅನೇಕ ಪ್ರಾಯಶ್ಚಿತ್ತಗಳಿಂದಾಗಲಿ, ಗೋದಾನ, ಭೂದಾನಗಳೆಂಬ ಮಹಾಮಹಾ ದಾನಗಳಿಂದಾಗಲಿ ಕಳೆದುಕೊಳ್ಳಲು ಸಾಧ್ಯವಿಲ್ಲ. ಆದರೆ ಮರಣಕಾಲದಲ್ಲಿ ಭಸ್ಮತ್ರಿಪುಂಡ್ರಧಾರಿಯಾಗಿ ರುದ್ರಾಕ್ಷಮಾಲಾಲಂಕೃತನಾಗಿ ನನ್ನ (ಶಿವ) ನಾಮೋಚ್ಚಾರಣೆ ಮಾಡಿದ ಮಾತ್ರದಿಂದಲೇ ಸಕಲ ಪಾಪನಿರ್ಮುಕ್ತನಾಗಿ ಮುಕ್ತಿಯನ್ನು ಪಡೆಯುವನು. ಇದರಲ್ಲಿ ಸಂಶಯವಿಲ್ಲ. ॥೧೦೭॥

ಮತ್ತು ಆತನು ಜನನಮರಣಾದಿರಹಿತವಾದ ಶಾಶ್ವತಮುಕ್ತಿಯನ್ನು ಸಂಪಾದಿಸುವನು. ಅವನ ಪ್ರಾಣಗಳಾದರೋ ಶುದ್ಧಗಳೆನಿಸುವುವು. ಆತನು ಗರ್ವಾದಿಗಳನ್ನು

**ತಸ್ಯ ಪ್ರಾಣಮನೂತ್ಕ್ರಮಂತ್ಯತಿತರಾಹಂ ಮಾನಗರ್ವೋಜ್ಝಿತಃ**
**ಕರ್ಮಸ್ಯಾಶ್ಚ(?)ಮಹೇಶ್ವರೇಶ್ವರಿ ತಥೈವೋಪಾಸಕಾನಾಂ ಗಣಾಃ ॥೧೦೮॥**

**ಧೂಮಾರ್ಚಾದಿ ಪ್ರಥಪ್ರಚಾರ ।**
**ಕುಶಲಾಸ್ತಲ್ಲೋಕನಿಷ್ಠಾ ಹಿ ತೇ ॥೧೦೯॥**

**ಪುಣ್ಯೈಸ್ತ್ರಿವಿಷ್ಟಪಗತೋಽಪಿ ಸದೈವ ಪಾಪಾತ್**
**ಭೀತಸ್ಸದಾ ಸುಕೃತನಾಶನಜಾತಖೇದಃ ।**
**ಪಾಪಾದವಶ್ಯಂ ನರಕಂ ವಿಚಿತ್ರಂ**
**ಸಮಾಪ್ನುಯಾತ್ಕರ್ಮಫಲೇನ ದೇಹೀ ॥೧೧೦॥**

**ತಿರ್ಯಕ್ಸ್ಥಾವರಮಾನುಷೇಷು ಬಹುಧಾ ಭ್ರಾಂತಸ್ಯವಿಪ್ರತ್ವತಾ**
**ತತ್ರಾಪಿ ಶ್ರುತಿವಾಕ್ಯದರ್ಶನಗತಂ ಜ್ಞಾನಂ ಪರಂ ಜಾಯತೇ ।**
**ಭಕ್ತಿಂ ಚಾಪಿ ಲಭೇತ್ಸ ವೈ ಮಮ ಚಿರಾತ್ಪುಣ್ಯೈರಗಣ್ಯೈಶಿವೇ**
**ತಸ್ಮಾಜ್ಜ್ಞಾನಮವಾಪ್ಯ ಮಯ್ಯನುಗತೋ ಮುಕ್ತೋ ನ ಸಂಸಾರ ಭಾಕ್ ॥೧೧೧॥**

ದೂರೀಕರಿಸಿ ನನ್ನಲ್ಲಿ ಐಕ್ಯನಾಗುವನು. ಮಹೇಶ್ವರಿಯೇ, ನನ್ನ ಉಪಾಸಕರಿಗೆ ನಾನು ಕರುಣಿಸುವ ವರವಿದೇ. ॥೧೦೮॥

ನನ್ನ ಉಪಾಸಕರು ಆರೀತಿ ನನ್ನನ್ನು ಅರ್ಚನಾಮಾರ್ಗದಿಂದ ತೃಪ್ತಿಪಡಿಸಿ, ಲೋಕದಲ್ಲಿ ಕುಶಲರೂ, ಆಚಾರಸಂಪನ್ನರೂ ಎಂಬ ಖ್ಯಾತಿಯನ್ನು ಪಡೆಯುವರು. ॥೧೦೯॥

ಅನೇಕ ಪುಣ್ಯಕರ್ಮಗಳಿಂದ ಸ್ವರ್ಗಸುಖವನ್ನು ಪಡೆಯಬಹುದು. ಆದರೆ ಅದು ನಶ್ವರ. ಪುಣ್ಯಕ್ಷಯವಾಗುವವರೆಗೆ ಅಲ್ಲಿದ್ದು ಅನಂತರ ತಮ್ಮ ಪಾಪಗಳನ್ನು ಸವೆಸುವುದಕ್ಕಾಗಿ ಮತ್ತೆ ಭೂಮಿಯನ್ನು ಹೊಂದಿಯೇ ಹೊಂದುವರು. ಇದು ನಿಜ. ॥೧೧೦॥

ಲೋಕದಲ್ಲಿ ಅನೇಕಸಾರಿ ಪ್ರಾಣಿವರ್ಗದಲ್ಲಿ, ಸ್ಥಾವರವರ್ಗದಲ್ಲಿ, ಜನ್ಮತಾಳಿ ಅನಂತರ ಅಲ್ಪಪುಣ್ಯಶೇಷದಿಂದ ಮನುಷ್ಯಜನ್ಮವು ಲಭಿಸುವುದು. ಅದರಲ್ಲಿ ಬ್ರಾಹ್ಮಣಜನ್ಮವಂತೂ ಅತಿ ದುರ್ಲಭ. ಆ ಬ್ರಾಹ್ಮಣನೂ ವೇದವೇದಾಂಗದಲ್ಲಿ ಪಾರಂಗತನೆನಿಸಿ ಜ್ಞಾನಿಯೆನಿಸುವುದಂತೂ ಅತಿವಿರಳ. ಅಂತಹ ಜ್ಞಾನದಿಂದ ನನ್ನ ವಿಷಯಕವಾದ ಭಕ್ತಿಯುದ್ಭವಿಸುವುದು. ಆ ಭಕ್ತಿಯಿಂದಲೇ ಆ ಮನುಜನು ಶಿವಸಾನ್ನಿಧ್ಯವನ್ನು

॥ ಈಶ್ವರ ಉವಾಚ ॥

ನ ಕೋಽಪಿ ಸುಭಗೇ ಶಿವೇ ಕುಮುದನಾಥಚೂಡಾರ್ಚನೇ
ನಿಶಾಸು ಸಿತಭಸ್ಮಧೃಕ್ಕಮಲಪುಷ್ಪಬಿಲ್ವಾದಿಭಿಃ ।
ಸಮುದ್ಯತಮನಾಸ್ಸದಾ ವಿವಿಧಕಷ್ಟಪುಷ್ಟಂ ಭವಂ
ಪ್ರಕೃಷ್ಟತರಮಶ್ನುತೇ ಮಯಿ ನಿವಿಷ್ಟಭಾವೇನ ತು ॥೧೧೨॥

ಶರನ್ನಿಶಿ ನಿಶಾಕರಸ್ಫುಟಕರೋರುದಿಗ್ಚಕ್ರಕೇ
ವಿಧೂತತಮಸಾಂ ಗಣೇ ವಿಧೃತಚಂದ್ರಮೌಳಿಂ ಶಿವಂ ।
ಸಮರ್ಚಯತಿ ಪುಣ್ಯಭಾಕ್ ಜನಿಜರಾದಿಹೀನೋ ಭವೇತ್
ನ ಕಾಲವರದಂಡನಂ ಭವತಿ ಸತ್ಯಮಸ್ಮಿನ್ ಶಿವೇ ॥೧೧೩॥

ಮಯೋಕ್ತಂ ಜಗತ್ಕಷ್ಟಮೇತದ್ವಿನಷ್ಟಂ
ಭವತ್ಯೇವ ಮದ್ಭಕ್ತಿನಿಷ್ಠಾ ಯದಿ ಸ್ಯಾತ್ ।
ವರಿಷ್ಠೋ ವಶಿಷ್ಠಃ ಕೃಪಾಪಾತ್ರಮಿಷ್ಟಂ
ಭವೇತ್ಸೋಽಪಿ ಲಿಂಗಾರ್ಚನಾತುಷ್ಟಚಿತ್ತಃ ॥೧೧೪॥

---

ಪಡೆಯುವನು. ಆದುದರಿಂದ ಜ್ಞಾನದಿಂದ ಲಭಿಸುವ ಈಶ್ವರಭಕ್ತಿಯೇ ಮೋಕ್ಷ ಸಾಧನವೆಂದು ತಿಳಿ. ॥೧೧೧॥

ಎಲೌ ದೇವಿಯೇ, ಯಾರು ಪ್ರತಿಪ್ರದೋಷಕಾಲದಲ್ಲಿಯೂ ಭಸ್ಮಧಾರಿಗಳಾಗಿ ಕಮಲ, ಬಿಲ್ವ ಮುಂತಾದ ಪೂಜಾಸಾಮಗ್ರಿಗಳಿಂದ ಚಂದ್ರಶೇಖರನೆನಿಸಿದ ನನ್ನನ್ನು ಪೂಜಿಸುವರೋ, ಅವರಿಗೆ ಸಂಸಾರಸಂಬಂಧವಾದ ಕಷ್ಟನಷ್ಟಗಳಾವುವೂ ಒದಗಲಾರವು. ನನ್ನಲ್ಲಿ ದೃಢಭಕ್ತಿಯಿಡುವುದರಿಂದಲೇ ನನ್ನ ಭಕ್ತನು ಅನಾಯಾಸವಾಗಿ ಕಷ್ಟಗಳಿಂದ ಪಾರಾಗಬಹುದು. ॥೧೧೨॥

ಚಂದ್ರನ ಕಿರಣಗಳಿಂದ ಪ್ರಕಾಶಮಾನವಾಗಿರುವ ಶರತ್ಕಾಲದ ರಾತ್ರಿಯಲ್ಲಿ ಚಂದ್ರಮೌಳಿಯೆನಿಸಿದ ನನ್ನನ್ನು ಭಯಭಕ್ತಿಯಿಂದ ಪೂಜಿಸಿದವರಿಗೆ ಯಮನ ಉಗ್ರವಾದ ಶಿಕ್ಷೆಯು ಎಂದಿಗೂ ಇಲ್ಲವೆಂಬುದನ್ನು ನಾನು ದೃಢವಾಗಿ ಹೇಳುವೆನು. ॥೧೧೩॥

ನಾನು ಹಿಂದೆ ಹೇಳಿದ ಲೋಕದ ಕಷ್ಟಗಳೆಲ್ಲಾ ನನ್ನ ಭಕ್ತನಿಗೆ ಒದಗಲಾರವು. ನನ್ನ ಕೃಪಾಪಾತ್ರನಾದ ವಸಿಷ್ಠಮಹರ್ಷಿಯು ಸಂಸಾರಿಯಾಗಿದ್ದೂ,

ಸ ತುಂಗೈರಭಂಗೈಸ್ಸಹಾಕರ್ಮಬಂಧೈ
ರ್ವಿಮುಕ್ತೋ ಭವತ್ಯೇವ ತುಷ್ಟ್ಯಾ ಮಮೈವ ।
ಜನಃ ಕೋಪಿ ಜಾನನ್ ಮಹಾಬಾಣಲಿಂಗೇ
ಸಮಭ್ಯರ್ಚ್ಯ ಬಿಲ್ವೈರ್ವಿಮುಕ್ತಿಂ ಪ್ರಯಾತಿ ॥೧೧೫॥

ಮದ್ಭಕ್ತಿವೈರಾಗ್ಯಯುತಸ್ಯ ಸೌಖ್ಯಂ
ಸಂಸ್ನಾಪ್ಯ ಲಿಂಗಾರ್ಚನಭಸ್ಮಧಾರಿಣಃ ।
ಸದಾ ವಿರಕ್ತಸ್ಯ ಶಿವೈಕಯೋಗೋ
ಭವೇತ್ಸದಾ ಗೌರಿ ಸುದುರ್ಲಭಸ್ಸ ಹಿ ॥೧೧೬॥

ಗರ್ಭೇ ಪೈತೃಕಶುಕ್ಲತೋತ್ಥತನುಭಾಗ್ದುಃಖೀ ಸದಾ ಪೂರುಷೋ
ದೇಹಾಂತಾವಧಿ ತದ್ವಿನಾಶನಪರಂ ಭಕ್ತ್ಯೈಕಗಮ್ಯಂ ಹಿ ಮಾಂ ।
ಪ್ರಾಪ್ಯಾನಂದಮಯೋ ಭವತ್ಯನುದಿನಂ ವಿಜ್ಞಾನಮಾಸಾದ್ಯ ಮೇ
ನಿತ್ಯೋ ಜನ್ಮಜರಾವಿನಾಶರಹಿತೋ ಮುಕ್ತೋ ಭವತ್ಯಂಬಿಕೇ ॥೧೧೭॥

ನನ್ನ ಪೂಜಾಬಲದಿಂದ ಆನಂದಮಯನಾಗಿ ಜೀವನವನ್ನು ಸಾಗಿಸಿ ಮುಕ್ತನಾದನು. ಒಟ್ಟಿನಲ್ಲಿ ಶಿವಭಕ್ತಿಯೇ ಶಾಶ್ವತಸುಖಪ್ರದವಾದುದು. ||೧೧೪||

ಬಾಣಲಿಂಗವೆನಿಸಿದ ನರ್ಮದಾಲಿಂಗದಲ್ಲಿ ನನ್ನನ್ನು ಯಾರು ಬಿಲ್ವಪತ್ರಾದಿಗಳಿಂದ ಪೂಜಿಸಿ ತೃಪ್ತಿಗೊಳಿಸುವರೋ, ಅಂತಹವರು ನಿಜವಾಗಿಯೂ ತಮ್ಮ ಕರ್ಮಬಂಧನಗಳಿಂದ ದೂರವಾಗುವರು. ಮತ್ತು ನಿತ್ಯತೃಪ್ತಿಯಿಂದ ತಾವು ಜನ್ಮಗಳನ್ನು ಕಳೆಯುವರು. ||೧೧೫||

ನನ್ನಲ್ಲಿಯೇ ದೃಢವಾದ ಭಕ್ತಿಯಿಟ್ಟು, ಇತರ ವಸ್ತುಗಳಲ್ಲಿ ವೈರಾಗ್ಯವನ್ನು ಪಡೆದಿರುವ, ಭಸ್ಮರುದ್ರಾಕ್ಷಧಾರಿಗಳಾದ ನನ್ನ ಭಕ್ತರಿಗೆ ಸಕಲ ಸೌಖ್ಯಗಳೂ ಲಭಿಸುವುವು. ಆದರೆ ಅಂತಹ ದೃಢಭಕ್ತಿಯು ಒದಗುವುದೇ ಮೊದಲು ಕಷ್ಟವೆಂದು ತಿಳಿ. ||೧೧೬||

ತಂದೆತಾಯಿಗಳ ಶುಕ್ಲಶೋಣಿತದಿಂದ ಜನ್ಮತಾಳಿದ ಮನುಜನು ಮರಣಪರ್ಯಂತವಾಗಿ ಅನೇಕ ದುಃಖಗಳನ್ನು ಅನುಭವಿಸುತ್ತಾ ಕಾಲಕಳೆಯುವನು. ಆಗ ಮನುಷ್ಯನು ನನ್ನ ವಿಷಯಕವಾದ ವಿಜ್ಞಾನವನ್ನು ಹೊಂದಿದರೆ ಅಂತಹ ದುಃಖಭೂಯಿಷ್ಠವಾದ ಜನ್ಮವೆಲ್ಲಾ ಆನಂದಮಯತೆಯಲ್ಲಿ ಪರಿಣಾಮಗೊಳ್ಳುವುದು

ಇತಿ ಪಶುಪತಿವಚನಾನ್ಮುನಿಃ ಪ್ರಹೃಷ್ಟಃ
ಪ್ರಣನಾಮಾಥ ಮಹೇಶ್ವರಸ್ಯ ಪಾದಂ ।
ಭವಭಕ್ತ್ಯಾ ವಿಶದೀಕೃತಾಂತರಾತ್ಮಾ
ಸಮುಪ್ರೋದ್ಯತ್ಪುಲಕೋ ಬಭಾಣ ದೇವಂ ॥೧೧೮॥

ಶಂಭೋ ತ್ವದೀಯಕೃಪಯಾ ಜಗತೋದ್ಯ ದುಃಖಂ
ಸಮ್ಯಕ್ ಶ್ರುತಂ ಮಮ ವಿರಾಗದಬುದ್ಧಿಬೋಧಂ ।
ಮಾಯಾಮಯೇನ ಗುಣಪಾಶಶತೇನ ಬದ್ಧಂ
ಮಾಯಿ ಭವಾನ್ ಪ್ರಣಮತಾಂ ವಿನಿವಾರಕೋಽಸಿ ॥೧೧೯॥

॥ ಈಶ್ವರ ಉವಾಚ ॥

ಗೋಕರ್ಣಮಾಗಚ್ಛ ಕೃತಪ್ರದಾರಃ
ಪುತ್ರಾನಥೋತ್ಪಾದ್ಯ ಸುಕನ್ಯಕಾಶ್ಚ ।
ಆಧಾಯ ಚಾಗ್ನೀನ್ಮಖಭಾಗಕ್ಲೃಪ್ತಾನ್
ದೇವಾನ್ ಸಮಭ್ಯರ್ಚ್ಯ ವಿಮುಕ್ತತರ್ಷಃ ॥೧೨೦॥

ಜನ್ಮಜರಾದಿಗಳಿಂದ ದೂರನಾಗಿ ಆತನು ಶಾಶ್ವತಮುಕ್ತಿಯನ್ನೇ ಸಂಪಾದಿಸುವನು. ॥೧೧೭॥

ಹೀಗೆ ಶಂಕರನು ಉಪದೇಶಿಸಿದ ಶುದ್ಧಜ್ಞಾನಮಾರ್ಗವನ್ನು ಹೊಂದಿ ಮಹರ್ಷಿಯು ಶಂಕರನ ಪಾದಪದ್ಮಗಳಿಗೆ ವಂದಿಸಿ, ಭಕ್ತಿಪರವಶತೆಯಿಂದ ಒದಗಿದ ರೋಮಾಂಚವುಳ್ಳವನಾಗಿ ಮಹಾದೇವನನ್ನು ಕುರಿತು ಮತ್ತೆ ಹೀಗೆಂದನು.॥೧೧೮॥

"ಶಂಭುವೇ, ನಿನ್ನ ದಯೆಯಿಂದ ಈಗ ನಾನು ಜಗತ್ತಿನಲ್ಲಿ ಜನರಿಗೆ ಒದಗುವ ದುಃಖಪರಂಪರೆಗಳನ್ನೆಲ್ಲಾ ತಿಳಿದುಕೊಂಡೆನು. ಆದರಿಂದ ನನಗೆ ಪೂರ್ಣ ವೈರಾಗ್ಯವುಂಟಾಗಿದೆ. ಲೋಕದಲ್ಲಿ ಗುಣಗಳೆಂದು ಕಾಣತಕ್ಕವುಗಳೆಲ್ಲಾ ಕೇವಲ ಮಾಯಾಪ್ರಚುರವಾದವುಗಳೇ. ಅಂತಹ ಮಾಯಾವರಣವು ನಮಗೆ ತಪ್ಪಬೇಕಾದರೆ ಮಾಯಿಯಾದ ಅಂದರೆ ಅಜ್ಞಾನನಾಶಕನಾಗಿ ಜ್ಞಾನಪ್ರದನಾದ ನಿನ್ನ ಧ್ಯಾನವೇ ಬೇಕು." ॥೧೧೯॥

ಎಂದು ಪ್ರಾರ್ಥಿಸಿದ ಮುನಿಯನ್ನು ನೋಡಿ ಶಂಕರನು "ಎಲೈ ಋಷಿವರ್ಯನೇ, ನೀನು ಭೂಲೋಕದಲ್ಲಿ ಪತ್ನಿಸಮೇತನಾಗಿದ್ದು ಪುತ್ರಪುತ್ರಿಯರನ್ನು

ನೈಷ್ಕರ್ಮ್ಯಮಾಸಾದ್ಯ ಮಯಿ ಪ್ರರೂಢಂ
ದೃಶ್ಯಂ ಜಗತ್ಪಶ್ಯಸಿ ಮಯ್ಯಥೋತ್ಥಿತಂ ।
ತಥೇತಿ ನತ್ವಾ ಭಗವಂತಮಾದರಾತ್
ಮುನಿರ್ಯಯೌ ದೇವಿ ತದಾ ಮುದಾಶ್ರಮಂ ॥೧೨೧॥

ಮಯಾ ಯಥೋಕ್ತಂ ಹಿ ತಥಾ ಚಕಾರ
ಗೋಕರ್ಣಮಾಸಾದ್ಯ ಸ ವೈ ಮುನೀಂದ್ರೈಃ ।
ಮಯಾ ಮಹಾದೇವಿ ತವೈತದಾದ್ಯಂ
ಪ್ರಜ್ಞಾನಮುಕ್ತಂ ಭುವಿ ದತ್ತಮಿಷ್ಟಂ ॥೧೨೨॥

ತೇನೈವ ನಷ್ಟಾಖಿಲಸಂಶಯಾಸ್ತೇ
ಮುಕ್ತಿಂ ಗತಾ ಮಯ್ಯಥ ಭಕ್ತಿಯೋಗಾತ್ ॥೧೨೩॥

ಪಡೆದು ಅಗ್ನಿಮುಖರಾಗಿರುವ ಸಕಲ ದೇವತೆಗಳನ್ನೂ ಆರಾಧನಾದಿಗಳಿಂದ ತೃಪ್ತಿ ಪಡಿಸಿ ಕೊನೆಗೆ ಗೋಕರ್ಣಕ್ಷೇತ್ರಕ್ಕೆ ಬರುವವನಾಗು. ॥೧೨೦॥

ಅಲ್ಲಿ ಕರ್ಮಾದಿಗಳಿಂದ ಚಿತ್ತಶುದ್ಧಿಯನ್ನು ಪಡೆದು ಜ್ಞಾನಿಯೆನಿಸುವೆ. ಆಗ ಜಗತ್ತೆಂಬುದು ಶಿವಮಯವಾದುದು; ಬ್ರಹ್ಮಮಯವೇ ಸಕಲವಸ್ತುಜಾಲ ಎಂಬ ದಿವ್ಯಜ್ಞಾನದಿಂದ ನನ್ನ ಸ್ವರೂಪವನ್ನು ಅರಿಯುವೆ. ಅದರಿಂದ ನಿನಗೆ ಮುಕ್ತಿಯು ದೊರಕುವುದು, ಎಂದು ಮುನಿಗೆ ವಿವರಿಸಿ ಹೇಳಲು ಆ ಋಷಿಯು ಹಾಗೆಯೇ ಆಗಲೆಂದು ನನಗೆ ಪದೇ ಪದೇ ವಂದಿಸಿ ಸಂತೋಷದಿಂದ ತನ್ನ ಆಶ್ರಮಕ್ಕೆ ತೆರಳಿದನು. ॥೧೨೧॥

ಅಲ್ಲದೆ ನಾನು (ಶಂಕರನು) ಹೇಳಿದಂತೆಯೇ ಕೆಲವುಕಾಲ ತನ್ನ ಆಶ್ರಮದಲ್ಲಿದ್ದು ಕೊನೆಗೆ ಅನೇಕ ಋಷಿಗಳೊಡನೆ ಗೋಕರ್ಣಕ್ಷೇತ್ರಕ್ಕೆ ಬಂದನು. ಅಲ್ಲಿ ಅವನಿಗೆ ನಾನು ನಿನ್ನ (ಪ್ರಕೃತಿ) ಸ್ವರೂಪವೆನಿಸಿದ ದಿವ್ಯಜ್ಞಾನವನ್ನು ಅನುಗ್ರಹಿಸಿದೆನು. ಅದು ಸಕಲ ಜಗತ್ತಿಗೂ ಇಷ್ಟವಾದದ್ದೇ ಅಲ್ಲವೇ? ॥೧೨೨॥

ಅದರಿಂದ ಅವರೆಲ್ಲರೂ ತಮ್ಮ ಸಂಶಯಮನೋಭಾವವನ್ನು ಕಳೆದುಕೊಂಡವರಾಗಿ ನನ್ನಲ್ಲಿಯೇ ಭಕ್ತಿಯಿಟ್ಟು ಕೊನೆಗೆ ಶಾಶ್ವತವಾದ ಮುಕ್ತಿಯನ್ನು ಪಡೆದರು. ॥೧೨೩॥

॥ ಸೂತ ಉವಾಚ ॥

ಶೂಲಪಾತಸರಸ್ತೀರೇ ಘುಸೃಣೇಶಂ ಮಹೇಶ್ವರಂ ।
ದೃಷ್ಟ್ವಾ ನತ್ವಾ ಚ ತಲ್ಲಿಂಗಂ ಮುಚ್ಯತೇ ಭವಬಂಧನಾತ್ ॥೧೨೪॥

ಚಂದ್ರೋಪೇಂದ್ರಾದಿವಿಬುಧೈರ್ಮುನಿಭಿಃ ಪೂಜಿತಂ ಸದಾ ।
ಪ್ರಾತಸ್ಸಂಗವಮಧ್ಯಾಹ್ನೇ ದೃಷ್ಟ್ವಾ ತು ಘುಸೃಣೇಶ್ವರಂ ॥೧೨೫॥

ಮಹಾಘಸಂಘೈರ್ಮುಕ್ತಶ್ಚ ಭಕ್ತಿಂ ಮಯಿ ಲಭೇತ ಸಃ ।
ಇತ್ಯೇತದ್ದೇವಿ ತೇ ಪ್ರೋಕ್ತೋ ಘುಸೃಣೇಶ್ವರವೈಭವಃ ॥೧೨೬॥

ಶೃಣ್ವನ್ ಪಠಿತ್ವಾ ಮನುಜೋ ಮಮ ಭಕ್ತಿರತೋ ಭವೇತ್ ।
ತತ್ರ ಮಾಂ ಸಮ್ಯಗಾರಾಧ್ಯ ವಸಂತಿ ಶಿವತತ್ಪರಾಃ ॥೧೨೭॥

ತೇಷಾಂ ಮಜ್ಜ್ಞಾನಮಖಿಲಂ ದಾತುಮಿಚ್ಛಾಸ್ತಿ ಮೇ ಶಿವೇ ।
ಜ್ಞಾನಂ ತಲ್ಲಭತೇ ಗೌರಿ ಘುಸೃಣೇಶ್ವರಪೂಜನಾತ್ ॥೧೨೮॥

ಏಕೇನ ಜನ್ಮನಾ ಮುಕ್ತಿರ್ಭವೇದಜ್ಞಾನನಾಶಿನೀ ॥೧೨೯॥

ಎಲೈ ಮುನಿಗಳೇ, ಶೂಲಪಾತಸರೋವರದ ದಡದಲ್ಲಿರುವ ಘುಸೃಣೇಶ್ವರ ಮೂರ್ತಿಯನ್ನು ದರ್ಶನಮಾಡಿದವರಿಗೆ ನಿಜವಾಗಿಯೂ ಭವಬಂಧನಗಳು ನಿವೃತ್ತಿಯಾಗುತ್ತವೆ. ಚಂದ್ರ, ಉಪೇಂದ್ರ ಮುಂತಾದವರು ಸಕಲ ಮುನಿಗಳೊಡನೆ ಪ್ರಾತಸ್ಸಂಗವಮಧ್ಯಾಹ್ನಕಾಲಗಳಲ್ಲಿ ತಪ್ಪದೆ ಘುಸೃಣೇಶ್ವರನನ್ನು ಅರ್ಚಿಸಿ ಪಾಪಸಂಘಗಳಿಂದ ದೂರರಾಗಿ ಮುಕ್ತರಾಗಿರುವರು. ॥೧೨೪-೧೨೫॥

ಘುಸೃಣೇಶ್ವರಲಿಂಗದ ದರ್ಶನದಿಂದ ನನ್ನಲ್ಲಿ ಅನನ್ಯವಾದ ಭಕ್ತಿಯೂ, ಪಾಪನಿವೃತ್ತಿಯೂ ಆಗುವುದೆಂದು ಪರಶಿವನೇ ಪಾರ್ವತಿಗೆ ಹೇಳಿರುವನು. ಅಲ್ಲದೆ ಘುಸೃಣೇಶ್ವರ ಮಹಿಮೆಯನ್ನು ಕೇಳಿದವರಿಗೂ, ಓದಿದವರಿಗೂ ಈಶ್ವರಭಕ್ತಿಯು ಅಧಿಕವಾಗಿ ಅವರು ಈಶ್ವರಾರಾಧನೆಯಲ್ಲಿ ನಿರತರಾಗುವರು ಎಂದು ಉಪದೇಶಿಸಿರುವನು. ॥೧೨೬-೧೨೭॥

ಮತ್ತು ಅಂತಹವರಿಗೆ ನಾನೇ ಶಿವಜ್ಞಾನವನ್ನು ಉಪದೇಶಿಸಬೇಕೆಂದೂ ನನಗೆ ಅಭಿಲಾಷೆಯಿರುವುದು. ಆದುದರಿಂದ ಘುಸೃಣೇಶ್ವರಪೂಜಾಮಹಿಮೆಯಿಂದ

॥ ಈಶ್ವರ ಉವಾಚ ॥

ಚಕ್ಷುಃಶ್ರೋತ್ರವಿಭೂಷಣೋತ್ತಮಕಥಾಪೀಯೂಷಪಾನಾದರಾ
ಹಾರಾ ಭಸ್ಮಕೃತತ್ರಿಪುಂಡ್ರನಿಟಿಲಾ ರುದ್ರಾಕ್ಷಮಾಲಾ ನರಾಃ ।
ರುದ್ರಾಧ್ಯಾಯಜಪಾದರಾಃ ಶಿವಮನುವ್ಯಾಹಾರಮಾತ್ರಾದರಾ
ಮಾಲೂರಪ್ರಭವೋರುಣೋತ್ತಮದಲೈರ್ಲಿಂಗಾರ್ಚನಾತ್ಯಾದರಾಃ ॥೧೩೦॥

ಇತಿ ಶ್ರೀಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ಘುಸೃಣೇಶಮಾಹಾತ್ಮ್ಯೇ
ಉದ್ದಾಲಕಂ ಪ್ರತಿ ಸಂಸಾರಕ್ಲೇಶಪರಂಪರಾವರ್ಣನಂ
ನಾಮೈಕೋನವಿಂಶೋಽಧ್ಯಾಯಃ

ನನ್ನ ಭಕ್ತರು ಒಂದೇ ಜನ್ಮದಿಂದಲೇ ಮುಕ್ತಿಯನ್ನು ಪಡೆಯಲು ಅರ್ಹರೆನಿಸುವರು ಎಂದು ಶಂಕರನು ಹೇಳಿರುವನು. ॥೧೨೮-೧೨೯॥

ಆ ಘುಸೃಣೇಶ್ವರನನ್ನು ಆರಾಧಿಸಲು ನನ್ನ ಭಕ್ತರು ಈರೀತಿ ವರ್ತಿಸುವರು. ಕಿವಿಯೇ ಕಣ್ಣಾಗಿ ಉಳ್ಳ ಸರ್ಪವನ್ನೇ ಆಭರಣವಾಗಿ ಧರಿಸಿದ ಈಶ್ವರಕಥೆಗಳನ್ನೇ ಕೇಳುತ್ತಾ ಕಾಲಕಳೆಯುವರು. ಭಸ್ಮತ್ರಿಪುಂಡ್ರಧಾರಿಗಳೆನಿಸಿ ರುದ್ರಾಕ್ಷಮಾಲಾಲಂಕೃತರಾಗಿ ರುದ್ರಾಧ್ಯಾಯವನ್ನೇ ಸರ್ವದಾ ಜಪಿಸುತ್ತಾ, ಶಿವಮಂತ್ರಪಾರಾಯಣದಲ್ಲಿಯೇ ಆಸಕ್ತರಾಗಿ, ಕೋಮಲವಾದ ಬಿಲ್ವಪತ್ರಾದಿಗಳಿಂದ ಘುಸೃಣೇಶ್ವರಲಿಂಗವನ್ನೇ ಅರ್ಚಿಸುತ್ತಾ ಮುಕ್ತಿಯನ್ನು ಸಂಪಾದಿಸುವರು ಎಂದು ಪರಮೇಶ್ವರನು ಪಾರ್ವತಿಗೆ ವಿವರಿಸಿದನೆಂದು ಸೂತಮಹರ್ಷಿಗಳು ವಾಜಶ್ರವಸಾದಿಗಳಿಗೆ ಹೇಳಿದರು. ॥೧೩೦॥

ಇಲ್ಲಿಗೆ ಶ್ರೀ ಶಿವರಹಸ್ಯದ ಭರ್ಗನಾಮಕವಾದ ಐದನೆಯ ಅಂಶದಲ್ಲಿ ಘುಸೃಣೇಶ್ವರ
ಮಹಿಮೆಯನ್ನು ವಿವರಿಸುವ ಉದ್ದಾಲಕಮುನಿ ಮತ್ತು ಈಶ್ವರ ಸಂವಾದ
ರೂಪದಲ್ಲಿ ಸಂಸಾರಕ್ಲೇಶಪರಂಪರೆಗಳನ್ನು ವಿವರಿಸುವ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಭರ್ಗಾಖ್ಯೇ

## ಪಂಚಮಾಂಶೇ

## ವಿಂಶೋಽಧ್ಯಾಯಃ

|| ಈಶ್ವರ ಉವಾಚ ||

ಶೃಣು ತ್ವಮಗಜೇ ಪುಣ್ಯಾಂ ಮಮಭಕ್ತಸ್ಯ ಸತ್ಕಥಾಂ ।
ಭಕ್ತಭಕ್ತಂ ಚ ಮಾಂ ವಿದ್ಧಿ ಭಾವವಶ್ಯೋಽಸ್ಮಿ ಶಂಕರಿ ॥೧॥

ಯಃ ಕಶ್ಚಿದಸ್ತು ಮದ್ಭಕ್ತಃ ಸ ಮೇ ಪ್ರಿಯತರೋಽಂಬಿಕೇ ।
ಭಕ್ತಃ ಪ್ರಿಯೋ ಮೇ ಸತತಂ ಚಂಡಾಲೋಽಸ್ತು ದ್ವಿಜೋಽಥ ವಾ ॥೨॥

ಭಕ್ತಾನ್ನಸ್ಯ ಕ್ಷುಧಾವಿಷ್ಟಃ ತ್ರಿಣೇತ್ರಃ ಪಾತ್ರಮಂಬಿಕೇ ।
ವನಖಂಡಮಿತಿ ಖ್ಯಾತಂ ಕ್ಷೇತ್ರಮತ್ಯುತ್ತಮೋತ್ತಮಂ ॥೩॥

ವೈದ್ಯನಾಥೋಽಪಮಮಲೇ ತಲ್ಲಿಂಗೇ ಸಂವಸಾಮ್ಯಹಂ ।
ಕಾಮಾರ್ಥಿಜನಕಾಮಾನಾಂ ಪೂರಕೋಽಹಂ ಸದಾಂಬಿಕೇ ॥೪॥

---

## ಇಪ್ಪತ್ತನೆಯ ಅಧ್ಯಾಯ

ಪರಶಿವನು ಪಾರ್ವತಿಯನ್ನು ಕುರಿತು "ಎಲೌ ನಗರಾಜಪುತ್ರಿಯೇ, ನನ್ನ ಪ್ರಿಯಭಕ್ತನ ಕಥೆಯೊಂದನ್ನು ಕೇಳು. ಅಲ್ಲದೆ ನಾನು ಭಕ್ತಪರಾಧೀನನೆಂಬು ದನ್ನು ತಿಳಿ. ನಾನು ಭಕ್ತಿಗೆ ಮೆಚ್ಚುವೆನು. ಭಕ್ತಿಯುಳ್ಳವನು ಜಾತಿಯಲ್ಲಿ ಚಂಡಾ ಲನೇ ಆಗಲಿ, ಬ್ರಾಹ್ಮಣನೇ ಆಗಲಿ ಆತನು ನನಗೆ ಪ್ರಿಯನೆನಿಸಿದವನೇ. ||೧-೨||

ಭಕ್ತನು ಕೊಡುವ ಆಹಾರವನ್ನೇ ಶಂಕರನು ನಿರೀಕ್ಷಿಸುತ್ತಾ ಹಸಿವಿನಿಂದಿರು ವನು. ಮತ್ತೊಂದು ವಿಷಯವನ್ನು ಹೇಳುವೆನು ಕೇಳು. ವನಖಂಡನೆಂಬ ಹೆಸರಿನ

ಅನನ್ಯಶರಣೋ ನಿತ್ಯಂ ವನಾನಾಂ ಪತಿರಸ್ಮ್ಯಹಂ ।
ಬ್ರಹ್ಮವಿಷ್ಣ್ವಾದಿಭಿರ್ದೇವೈರ್ಗಣವೃಂದೈಶ್ಚ ಸೇವಿತಃ ॥೫॥

ಪೂಜಿತೋ ಬಿಲ್ವಪತ್ರಾದ್ಯೈರ್ನಿವಸಾಮಿ ತ್ವಯಾ ಸಹ ।
ಬದರೀಖದಿರೈರ್ಬಿಲ್ವೈರ್ಹರೀತಕಬಿಭೀತಕೈಃ ॥೬॥

ವೈಕಂಕತೈಃ ಕೇತಕೈಶ್ಚ ವಂಶೈಃ ಕಂಟಕಿಭೂರುಹೈಃ ।
ಅನ್ಯೈಶ್ಚ ಶಾಖಿಶತಕೈಃ ಫಲಪುಷ್ಪವನಾದಿಭಿಃ ॥೭॥

ಸಂವೃತಂ ವನಮತ್ಯುಗ್ರಂ ಸಿಂಹವ್ಯಾಘ್ರರವಾಕುಲಂ ।
ವೇಣುಕ್ರೇಂಕಾರನಿನದೈರ್ಝಿಲ್ಲಿಕಾಗಣಕೂಜಿತೈಃ ॥೮॥

ಕೇಸರೀವಿಕಟಾರಾವಭೀತದಂತಿಜಬೃಂಹಿತೈಃ ।
ಘೂಕೋಲೂಕೋತ್ಥಘೂತ್ಕಾರಸಂವರ್ಧಿತದಿಗಂತರಂ ॥೯॥

ಕೇಕೀಕೋಕಿಲನಾದೈಶ್ಚ ಶಿವಾಕೋಲಜಘರ್ಘರೈಃ ।
ಭೀಷಣಂ ಭೀಷಣಸ್ಯಾಪಿ ತತ್ರಾರಣ್ಯಪತಿಸ್ತ್ವಹಂ ॥೧೦॥

---

ಪ್ರಸಿದ್ಧ ಕ್ಷೇತ್ರವೊಂದಿರುವುದು. ಅಲ್ಲಿ ನಾನು ವೈದ್ಯನಾಥಲಿಂಗದಲ್ಲಿ ನನ್ನ ಭಕ್ತರ ಇಷ್ಟವನ್ನು ಪೂರ್ತಿಗೊಳಿಸುತ್ತಾ ನೆಲಸಿರುವೆನು. ॥೩-೪॥

ಅಲ್ಲಿ ಮತ್ತೊಬ್ಬರ ಸಹಾಯವಿಲ್ಲದೆ ಅರಣ್ಯಭಾಗಕ್ಕೆ ಒಡೆಯನೆನಿಸಿ ಬ್ರಹ್ಮ ವಿಷ್ಣ್ವಾದಿದೇವತೆಗಳಿಂದಲೂ ಪ್ರಮಥಗಣಗಳಿಂದಲೂ ಪೂಜಿತನಾಗಿ ಅಲ್ಲಿರುವ ಬಿಲ್ವಪತ್ರೆ, ಬದರೀಫಲ, ಅಳಲೇಕಾಯಿ, ಬಿಭೀತಕ (ಕಿರಿಬಿಲ್ವ) ಮೊದಲಾದ ವೃಕ್ಷಗಳಿಂದ ತೃಪ್ತಿಪಡುತ್ತಾ ನಿನ್ನೊಡನೆ ವಾಸಿಸುವೆನು. ॥೫-೬॥

ಅರಣ್ಯದಲ್ಲಿ ಸೊಂಪಾಗಿ ಬೆಳೆದಿರುವ ವೈಕಂಕತ (ಲಕ್ಕಿಗಿಡ) ತಾಳೇ, ಬಿದಿರು, ಇನ್ನೂ ಅನೇಕ ವಿಧವಾದ ಮುಳ್ಳುಮರಗಳ ಗುಂಪಿನಿಂದಲೂ, ಅದರ ಲ್ಲೆಲ್ಲಾ ಕಂಡುಬರುವ ಫಲಪುಷ್ಪಾದಿಗಳಿಂದಲೂ ತೃಪ್ತನಾಗಿ, ನಾನು ಅಲ್ಲಿರುವ ಸಿಂಹಾದಿಗಳನ್ನೂ, ಬಿದಿರುಮೆಳೆಗಳ ಕ್ರೇಂಕಾರವನ್ನೂ, ಸಣ್ಣ ಹಕ್ಕಿಗಳ ಇಂಪಾದ ಧ್ವನಿಯನ್ನೂ ಕೇಳುತ್ತಿರುವೆನು. ॥೭-೮॥

ಸಿಂಹದ ಭೀಕರ ಧ್ವನಿಗೆ ಹೆದರಿ ಆನೆಗಳು ಕಿರಿಚಿಕೊಳ್ಳುವುದನ್ನೂ, ಗೂಬೆ, ಹದ್ದು ಇವು ದಿಗಂತವ್ಯಾಪಿಯಾಗುವಂತೆ ಅರಿಚಿಕೊಳ್ಳುವುದನ್ನೂ, ನವಿಲು,

ನಿವಸಾಮಿ ತ್ವಯಾ ಗೌರಿ ತದ್ವನೇ ಸಂಚರನ್ ಸದಾ ।
ಫಲಪುಷ್ಪಾಣ್ಯಪಾರಾಣಿ ಪಶ್ಯನ್ ಜಿಘ್ರನ್ ವನಸ್ಥಲೀಃ ॥೧೦॥

ಅರಣ್ಯಪತಿರೇವಾಹಂ ತದಾಹಿವನಗೋಚರಃ ।
ತತ್ರಾಸ್ತಿ ಭಿಲ್ಲರಾಟ್ಕೈಶ್ಚಿತ್ಸದಾತ್ಯಂತಸಖಾ ಮಮ ॥೧೨॥

ಭಕ್ತಶ್ಚ ಸತತಂ ದೇವಿ ಮಯಿ ಪ್ರೀತಿಸಮನ್ವಿತಃ ।
ಬದ್ಧಗೋಧಾಂಗುಲಿತ್ರಾಣೋ ಮೃಗಚರ್ಮಲಸತ್ಕಟಿಃ ॥೧೩॥

ವರಾಹಚರ್ಮಾದಿಕೃತಪಾದತ್ರಾಣಸಮನ್ವಿತಃ ।
ಮಾತಂಗಕೃತ್ತಿವಿಲಸತ್ಕಂಚುಕಾವೃತವಿಗ್ರಹಃ ॥೧೪॥

ಪಿನಾಕಸದೃಶಂ ತಸ್ಯ ಧನುರಸ್ತ್ಯೇಕಮುತ್ತಮಂ ।
ಮುಷ್ಟಿನಾ ಹಸ್ತಲಗ್ನೇನ ಧನುಷಾ ಸ ವಿರಾಜಿತಃ ॥೧೫॥

ತನ್ನಿಷಂಗಂ ಶರೈಃ ಪೂರ್ಣಂ ಧಾರಯಂತೀ ತದಂಗನಾ ।
ಸಪರ್ಣವಾಸಸಾ ತಂ ಹಿ ಸಮಾಯಾಸ್ಯತಿ ಪೃಷ್ಠತಃ ॥೧೬॥

---

ಕೋಗಿಲೆ ಮುಂತಾದ ಪಕ್ಷಿಗಳ ಇಂಚರವನ್ನೂ, ನರಿ, ಹಂದಿ, ಮುಂತಾದ ಘರ್ಘರ ಧ್ವನಿಯನ್ನೂ ಕೇಳುತ್ತಾ ಅವೆಲ್ಲಕ್ಕೂ ಭಯಪ್ರದನಾಗಿ ಅರಣ್ಯ ಪತಿಯೆನಿಸಿ ನೆಲಸಿರುವೆನು. ||೯-೧೦||

ಆ ಅರಣ್ಯದಲ್ಲಿರುವ ಸಕಲ ಪುಷ್ಪ ಫಲಗಳ ಸುವಾಸನೆಯನ್ನೆಲ್ಲಾ ಆಘ್ರಾಣಿಸುತ್ತಾ ಅರಣ್ಯಪತಿಯೆನಿಸಿ ನಿನ್ನೊಡನೆ ಸಂಚರಿಸುವೆನು. ಅಲ್ಲಿಯೇ ನನಗೆ ಅತ್ಯಂತ ಭಕ್ತನಾದ ಭಿಲ್ಲರಾಜನೊಬ್ಬನು ಇರುವನು. ||೧೧-೧೨||

ದೇವಿಯೇ, ಅವನು ನನ್ನಲ್ಲಿಯೇ ಹೆಚ್ಚು ಭಕ್ತಿಯನ್ನಿಟ್ಟು ಪೂಜಿಸುವನು. ಆತನು ಗೋಧಾ(ಉಡು) ಚರ್ಮದಿಂದ ಕೈಚೀಲವನ್ನೂ, ಜಿಂಕೆಯ ಚರ್ಮದಿಂದ ಮೇಲುಹೊದಿಕೆಯನ್ನು, ಹಂದಿಯ ಚರ್ಮದಿಂದ ಪಾದರಕ್ಷೆಯನ್ನೂ, ಆನೆಯ ಚರ್ಮದಿಂದ ಕವಚವನ್ನೂ ನಿರ್ಮಿಸಿಕೊಂಡಿರುವನು. ||೧೩-೧೪||

ಅವನಲ್ಲಿ ನನ್ನ ಪಿನಾಕಕ್ಕೆ ಸದೃಶವಾದ ಧನುಸ್ಸೊಂದಿರುವುದು. ಅದನ್ನು ಆತನು ಸದಾ ಧರಿಸಿರುವನು. ಅವನ ಬತ್ತಳಿಕೆಯು ಸರ್ವದಾ ಬಾಣಪೂರ್ಣವಾಗಿಯೇ

ಗುಂಜಾದಿವಿಧ್ಯತಾಪಾರಭೂಷಣಾವಳಿಭಾಸುರಾ ।
ಸ ಮೃಗಾಜಿನಸರ್ವಾಂಗೋ ಮಧುಪಿಂಗಲಲೋಚನಃ ॥೧೭॥

ತದ್ದೃಷ್ಟಿಪಾತಭೀತ್ಯೈವ ಪಲಾಯಂತೇ ಮೃಗಾಂಡಜಾಃ ।
ಕಿಂ ಪುನಸ್ತಚ್ಛರಾಘಾತಂ ಮೃಗಃ ಕಸ್ಸೋಢುಮರ್ಹತಿ ॥೧೮॥

ಮೃಗಂ ವಾ ಮಹಿಷಂ ವಾಪಿ ಸೃಮರಂ ಚಮರಂ ರುರುಂ ।
ಕೋಲಂ ಶಲಲಕಂ ಚೈವ ಶಶಂ ಖಡ್ಗಂ ಚ ವಿಧ್ಯತಿ ॥೧೯॥

ಕರೀಂದ್ರಶುಂಡಾಕಾಂಡಾನಿ ಗಿರೀಂದ್ರಶಿಖರಾಣ್ಯಪಿ ।
ಸ್ವಕಾಂಡಶರಕಾಂಡ್ಯೈಶ್ಚ ಖಂಡಯತ್ಯೇವ ಭಿಲ್ಲರಾಟ್ ॥೨೦॥

ವ್ಯಾಘ್ರಂ ವಾಪಿ ತರಕ್ಷುಂ ವಾ ಸ ವಿಧ್ಯತ್ಯೇವ ದುಸ್ಸಹಂ ।
ಸದಾ ಕಟಿತಟೋದ್ಭಾಸಿ ಖಡ್ಗಖೇಟಕಶೋಭಿತಃ ॥೨೧॥

ಆಖೇಟಕಪರೀವಾರೈರ್ಜಾಲಜಾಲ್ಯೈಃ ಸದಾ ವೃತಃ ।
ತ್ರಿಸಹಸ್ರಮಹಾಭಿಲ್ಲೈಃ ಕ್ರೂರಾತ್ಕ್ರೂರತರೈರ್ವೃತಃ ॥೨೨॥

ಇರುವುದು. ಅವನ ಪತ್ನಿಯೂ, ಸಹ ಎಲೆಗಳಿಂದ ನಿರ್ಮಿತವಾದ ವಸ್ತ್ರಗಳನ್ನು ಕಟ್ಟಿಕೊಂಡು ಯಾವಾಗಲೂ ಅವನ ಹಿಂದೆಯೇ ಇರುವರು. ॥೧೫-೧೬॥

ಗುಲಗಂಜಿಗಳಿಂದ ಮಾಡಿದ ಆಭರಣಗಳನ್ನು ಆಕೆಯು ಧರಿಸಿಕೊಂಡಿರುವಳು. ಜಿಂಕೆಯ ಚರ್ಮವನ್ನು ಅವರು ಹೊದೆದುಕೊಂಡಿರುವರು ಭಿಲ್ಲರಾಜನು ತನ್ನ ಕೆಂಗಣ್ಣುಗಳಿಂದ ನೋಡಿದೊಡನೆಯೇ ಮೃಗಪಕ್ಷಿಗಳು ಭಯದಿಂದ ಓಡುವುವು. ಹೀಗಿರುವಾಗ ಇನ್ನು ಅವರ ಬಾಣದ ಘಾತವನ್ನು ಹೇಗೆ ತಾನೇ ಸಹಿಸಿಯಾವು ? ॥೧೭-೧೮॥

ಆ ಭಿಲ್ಲನು ಜಿಂಕೆ, ಕಾಡೆಮ್ಮೆ, ಸೃಮರ (ದೊಡ್ಡ ಚಮರೀಮೃಗ) ಚಮರೀ ಮೃಗ, ಸಾರಗ, ಹಂದಿ, ಶಲಲಕ (ಕಾಡುಹಂದಿ) ಮೊಲ, ಖಡ್ಗಮೃಗ ಮೊದಲಾದ ಪ್ರಾಣಿಗಳನ್ನು ನಾಶಮಾಡುವನು. ಅಲ್ಲದೆ ತನ್ನ ಬಾಣಧಾರೆಗಳಿಂದ ಆನೆಯ ಸೊಂಡಿಲನ್ನೂ, ಬೆಟ್ಟಗಳ ಶಿಖರಗಳನ್ನೂ ತುಂಡುಮಾಡುವನು. ॥೧೯-೨೦॥

ಭಯಂಕರಗಳಾದ ಹುಲಿ, ಸಿಂಹ ಮುಂತಾದ ಪ್ರಾಣಿಗಳನ್ನು ಧ್ವಂಸಮಾಡಿ ಬಿಡುವನು. ಅವನ ಸೊಂಟದಲ್ಲಿ ಸರ್ವದಾ ಕತ್ತಿ ಗುರಾಣಿಗಳು ಶೋಭಿಸುತ್ತಲೇ

ತೇ ಸಿತ್ಯಂ ಶಸ್ತ್ರಸಾಷಾಣಖಡ್ಗಖೇಟಧರಾಸ್ಸದಾ ।
ಧನುಶ್ಶರಕರಾಶ್ಚಾನ್ಯೇ ನಿತ್ಯಂ ತಮನುಯಾಯಿನಃ ॥೨೩॥

ವ್ಯಾಘ್ರೈರ್ವೀರ್ಯೈಶ್ಚಭಿಶ್ಚೈವ ಕರಾಲೋನ್ನತದಂಷ್ಟ್ರಿಭಿಃ ।
ಕೂಜದ್ಭಿರನುಧಾವದ್ಭಿಸ್ತೈಸ್ಸಾಕಂ ವಕ್ರಪುಚ್ಛಕೈಃ ॥೨೪॥

ಜೃಂಭಮಾಣಲಲಜ್ಜಿಹ್ವಾದೀರ್ಘಶ್ರೋತ್ರೋರುಲೋಚನೈಃ ।
ನೀಲಪೀತಾರುಣೈರ್ವರ್ಣೈರ್ಲಾಲಾತಂತುಯುತೈರ್ಮುಖೈಃ ॥೨೫॥

ಶಶಾನ್ವರಾಹಾಂಶ್ಚ ಮೃಗಾನನುದ್ರುತ್ಯ ಪಶೂಂಸ್ತದಾ ।
ವಿದಾರಯಂತಿ ದಶನೈಸ್ತದ್ರಕ್ತಾಪೂರಿತೈರ್ಮುಖೈಃ ॥೨೬॥

ಮೃಗಾನ್ ಪಾರ್ಶ್ವೋದರಾಂತ್ರೇಷು ವ್ಯಕ್ತೈಶ್ಚ ವೃಷಣೈಸ್ತಥಾ ।
ಶರಪಾತಾತ್ಪೂರ್ವಮೇವ ಧಾವಂತೇ ತೇ ಸುದುಸ್ಸಹಾಃ ॥೨೭॥

---

ಇರುವುವು. ಅಲ್ಲದೆ ಗುರಾಣಿಯನ್ನು ಹಿಡಿದಿರುವ ಸೈನಿಕರು ಸರ್ವದಾ ಅವನನ್ನು ಹಿಂಬಾಲಿಸುತ್ತಿರುವರು. ಭಯಂಕರವಾದ ಆವನ ಭಿಲ್ಲಸೈನ್ಯವು ಸುಮಾರು ಮೂರು ಸಾವಿರದಷ್ಟು ತುಂಬಿರುವುದು. ॥೨೧-೨೩॥

ಅವರು ನಿತ್ಯವೂ ಶಸ್ತ್ರಗಳನ್ನೂ, ಕಲ್ಲಿನ ಕತ್ತಿಗಳನ್ನೂ, ಗುರಾಣಿಗಳನ್ನೂ, ಧನುರ್ಬಾಣಗಳನ್ನೂ ಹಿಡಿದು ಅವನನ್ನು ಹಿಂಬಾಲಿಸುತ್ತಲೇ ಇರುವರು. ಬಲಿಷ್ಠಗಳಾಗಿ ಕೋರೆದಾಡೆಗಳಿಂದ ಕ್ರೂರಗಳಾಗಿರುವ ಭಯಂಕರ ಹುಲಿಗಳನ್ನು ಹೆದರಿಸಿ ಬಾಲಗಳನ್ನೆತ್ತಿಕೊಂಡು ಓಡುತ್ತಿರುವ ಅವುಗಳನ್ನು ಹಿಂಬಾಲಿಸಿ ಇವರು ಓಡುತ್ತಿರುವರು. ॥೨೩-೨೪॥

ಅಲ್ಲಿ ಕೆಲವು ಹುಲಿಗಳು ತಮ್ಮ ಬಾಯಿಂದ ಬಣ್ಣಬಣ್ಣದ ಜೊಲ್ಲನ್ನು ಸುರಿಸುತ್ತಾ, ಹಂದಿ ಮೊಲ ಮುಂತಾದ ಪ್ರಾಣಿಗಳನ್ನು ಹಿಂಬಾಲಿಸಿ, ಅವುಗಳನ್ನು ತಮ್ಮ ಕೋರೆಹಲ್ಲುಗಳಿಂದ ಸೀಳಿ, ಆದೇ ರಕ್ತದಿಂದ ಭಯಂಕರವಾದ ಮುಖವುಳ್ಳವುಗಳಾಗಿ ಸಂಚರಿಸುತ್ತವೆ. ॥೨೫-೨೬॥

ಆ ಭಿಲ್ಲಸೈನಿಕರಾದರೋ ಅಕ್ಕಪಕ್ಕಗಳಲ್ಲಿ ಪ್ರಾಣಿಗಳ ಮಾಂಸಾದಿಗಳನ್ನು ಹೊತ್ತು ಹೊತ್ತು ತಮ್ಮ ಭುಜಗಳನ್ನು ಜಡ್ಡುಗಟ್ಟಿಸಿಕೊಂಡಿರುವರು. ಅಂತಹ ಭಿಲ್ಲರು ಪ್ರಾಣಿಗಳನ್ನು ಹಿಂಬಾಲಿಸಿ ತಮ್ಮ ಬಾಣಗಳು ಅವುಗಳನ್ನು ತಲಪುವುದ

ಭಿಲ್ಲಾನಾಂ ಪುರತೋ ದೇವಿ ತಸ್ಮಿನ್ ಸುಗಹನೇ ವನೇ ।
ಸಮುಷ್ಟಿಧೃತಚರ್ಮಸ್ಥೈಃ ಶ್ಯೇನೈರುಗ್ರಾರುಣಾಕ್ಷಿಭಿಃ ॥೨೮॥

ಪಕ್ಷಿಜಾಲಂ ನಿಹಂತಿ ಸ್ಮ ವಿಸೃಷ್ಟೈಕರಬಂಧನೈಃ ।
ಸಮಂಡಲಂ ಪರಿಭ್ರಶ್ಯನ್ ನಖತುಂಡೋರುಘಟ್ಟನೈಃ ॥೨೯॥

ಪಕ್ಷಪಾದಪ್ರಹಾರೈಸ್ತಾಂ ಬಲಾಕಾಪಂಕ್ತಿಮುತ್ಥಿತಾಂ ।
ನೀಲನೀರದಮಧ್ಯಸ್ಥತಟಿಲ್ಲೇಖೇವ ಸುಪ್ರಭಾಂ ॥೩೦॥

ಪಾತಯಂತಿ ಮಹೀಪೃಷ್ಠೇ ವಿಷ್ಟಬ್ಧವರಕಾರ್ಮುಕಾಃ ।
ಗಜನೀಲಾ ಮಹಾಭಿಲ್ಲಾಸ್ಸರ್ವೇ ಮಲ್ಲಿಂಗಪೂಜಕಾಃ ॥೩೧॥

ತೇಷಾಂ ಶ್ರೇಷ್ಠೋ ಯ ಮೇಧಾವೀ ಜವೋ ನಾಮ್ನಾ ಮಹಾಬಲಃ।
ಪತ್ನ್ಯಾ ಸಮನ್ವಿತೋ ನಿತ್ಯಂ ಝಷಾನ್ ಸರಸಿ ಹಂತ್ಯಪಿ ॥೩೨॥

ಹತ್ವಾ ವರಾಹಾನ್ ಪೃಷತಾನ್ ರುರೂನನ್ಯಾಂಛಶಾಂಸ್ತಥಾ ।
ಸುಸ್ವಾದುಮಾಂಸಮುತ್ಕೃತ್ಯ ವಿಪ್ರಸ್ವಾಸ್ವಾದ್ಯ ಶೋಭನೇ ॥೩೩॥

ರೊಳಗಾಗಿಯೇ ಅವುಗಳಿಗಿಂತ ವೇಗವಾಗಿ ಓಡಿಹೋಗಿ ಅವುಗಳನ್ನು ಮುತ್ತಿ ಕೊಳ್ಳುವರು. ಅದೇ ವನದಲ್ಲಿ ಉಗ್ರವಾದ ಕಣ್ಣುಗಳುಳ್ಳ ಗಿಡಗಗಳು ಭಿಲ್ಲರ ಮುಂದೆಯೇ ಓಡಾಡುತ್ತಾ ಇತರ ಪಕ್ಷಿಗಳನ್ನು ಹೊಡೆಯುವುವು. ಹಾಗೆಯೇ ಮೇಲೆ ಹಾರಿಹೋಗಿ ಮಂಡಲಾಕಾರವಾಗಿ ಸುತ್ತುತ್ತಾ ಮಿಂಚಿನ ಸಾಲಿನಂತೆ ಹೊಳೆಯುವ ನೀರುಕೊಕ್ಕರೆಗಳ ಸಾಲನ್ನು ತಮ್ಮ ಗರಿಗಳಿಂದಲೂ, ಕಾಲು ಗಳಿಂದಲೂ ಹೊಡೆದು ನೆಲಕ್ಕೆ ಉರುಳಿಸುತ್ತಿರುವುವು. ॥೨೭-೨೮-೨೯-೩೦॥

ಆನೆಯಂತೆ ಕಪ್ಪಾಗಿರುವ ಆ ಭಿಲ್ಲರು ಹಾಗೆ ತಮ್ಮ ಧನುರ್ಬಾಣಗಳಿಂದ ಇತರ ಪ್ರಾಣಿಗಳನ್ನು ಕೊಲ್ಲುತ್ತಿದ್ದರೂ, ಶಿವಲಿಂಗ ಪೂಜೆಯನ್ನು ಮಾತ್ರ ಬಿಟ್ಟವರಲ್ಲ. ಅವರಲ್ಲಿ ಶ್ರೇಷ್ಠನಾದ ಜವನೆಂಬವನು ಪತ್ನಿಯೊಡಗೂಡಿ ಸರ್ವದಾ ಸರೋವರದಲ್ಲಿ ಮೀನುಹಿಡಿಯುವವನಾಗಿದ್ದರೂ ಈಶ್ವರ ಭಕ್ತನಾಗಿ ಜೀವಿಸುತ್ತಿದ್ದನು. ॥೩೧-೩೨॥

ಆತನು ಅನೇಕ ಹಂದಿಗಳನ್ನೂ, ಜಿಂಕೆಗಳನ್ನೂ, ಮೊಲಗಳನ್ನೂ ಕೊಂದು, ಅದರ ರುಚಿಕರವಾದ ಮಾಂಸವನ್ನು ಬೇಯಿಸಿ, ತಿನ್ನುತ್ತಿದ್ದನು. ಹಾಗೆಯೇ

ಅನ್ಯದಾದಾಯ ಜಾಲೇನ ವಾರಯನ್ ಭೂರಿ ತದ್ಬಲಂ।
ಸಂಪ್ರೇಷಯತಿ ತದ್ಗ್ಗಾರಿ ಗೃಹಂ ಭಿಲ್ಲಗಣೈಸ್ತದಾ ॥೩೪॥

ಸುಸ್ವಾದುಮಾಂಸಂ ಪೇಶ್ಯಾಂ ಸ ನಿಕ್ಷಿಪ್ಯಾಯಾತಿ ಮಾಂ ಸದಾ।
ಭವರೋಗಹರಂ ನಾಮ್ನಾ ತೀರ್ಥಂ ತತ್ರಾಸ್ತಿ ಶೈಲಜೇ ॥೩೫॥

ಆಯುರ್ವೇದಃ ಪುರಾ ದತ್ತೋ ಮಯಾಶ್ವಿಭ್ಯಾಂ ಸುಪೂಜಿತಃ।
ಸ್ನಾತ್ವಾ ತಸ್ಮಿನ್ ಮಹಾತೀರ್ಥೇ ಪೂತೌ ದೇವಭಿಷಗ್ವರೌ ॥೩೬॥

ದೇವಪಂಕ್ತಿಂ ಗತೌ ಚಾಪಿ ಭವತಾಂ ಸೋಮಪೀಥಿನೌ।
ತಾಭ್ಯಾಂ ಸ್ತುತೋಽಹಂ ಕಲ್ಯಾಣಿ ತತ್ಸ್ತುತಿಂ ಶೃಣು ಶೈಲಜೇ ॥೩೭॥

ಪೂಜಿತೋಽಹಂ ಬಿಲ್ವಪತ್ರೈರ್ವೈದ್ಯನಾಥೋಽಹಮೀಶ್ವರಿ ॥೩೮॥

॥ ಅಶ್ವಿನಾವೂಚತುಃ ॥

ಭಿಷಗ್ವರಂ ದೇವವರಂ ಮಹೇಶಂ
ಗಂಗಾಧರಂ ಸೋಮಹುತಾಶನೇತ್ರಂ।

ರುಚಿಕರವಾದ ಮಾಂಸವನ್ನು ಪ್ರತ್ಯೇಕವಾಗಿ ತಂದು, ತನ್ನ ಸೈನ್ಯವನ್ನು ತಡೆಯುತ್ತಾ ಆ ಸೈನಿಕರನ್ನೆಲ್ಲಾ ಅವರವರ ಗೃಹಕ್ಕೆ ಕಳುಹಿಸುವನು. ॥೩೪॥

ತಾನು ಭುಂಜಿಸುವ ರುಚಿಕರವಾದ ಮಾಂಸವನ್ನು ಭಕ್ತಿಯಿಂದ ಈಶ್ವರನಿಗ ರ್ಪಿಸಿ ತಾನು ತೃಪ್ತಿಪಡುವನು. ಅಲ್ಲಿಯೇ ಭವರೋಗಹರವೆಂಬ ಉತ್ತಮವಾದ ತೀರ್ಥವೊಂದಿರುವುದು. ಅದೇ ಕೊಳದಲ್ಲಿಯೇ ನಾನು ಹಿಂದೆ ಅಶ್ವಿನೀದೇವತೆಗಳಿಗೆ ಆಯುರ್ವೇದವನ್ನು ಅನುಗ್ರಹಿಸಿಕೊಟ್ಟೆನು. ॥೩೫-೩೬॥

ಅನಂತರ ಅವರು ಸೋಮರಸಪಾನಮಾಡಿದವರಾಗಿ ದೇವತೆಗಳ ಪಂಕ್ತಿಗೆ ಸೇರಿದರು. ಅವರಿಂದ ಸ್ತುತಿಸಲ್ಪಟ್ಟ ನಾನು ಅಲ್ಲಿ ಬಹಳವಾಗಿ ಪೂಜಿಸಲ್ಪಟ್ಟೆನು. ದೇವಿಯೇ, ಅವರು ಆ ಕಾಲದಲ್ಲಿ ಮಾಡಿದ ಸ್ತುತಿಯನ್ನು ಕೇಳುವವಳಾಗು. ॥೩೭-೩೮॥

"ಎಲೈ ಪರಮೇಶ್ವರನೇ, ನೀನೇ ಭವರೋಗವೈದ್ಯನು. ಸಮಸ್ತ ದೇವತೆಗಳಲ್ಲಿಯೂ ಶ್ರೇಷ್ಠನೆನಿಸಿಕೊಂಡವನು. ಸೂರ್ಯ ಚಂದ್ರಾಗ್ನಿಗಳೇ ನಿನ್ನ ನೇತ್ರತ್ರಯ

ಸುಪದ್ಮಮಿತ್ರಾಂತರವರ್ತಿನಂ ತ್ವಾಂ
ಭಜಾವ ಶಂಭುಂ ಸುಹಿರಣ್ಯಬಾಹುಂ ॥೩೯॥

ದಶಶತವದನೇಕ್ಷಣೋರುಪಾದೈ
ರ್ದಶಶತನಯನೇನ ಸಂಸ್ತುತಾಂಘ್ರಿಂ ।
ದಶಶತರುದ್ರಗಣಾಭಿಪೂಜ್ಯ ಲಿಂಗಂ
ದಶಶತಕಿರಣಾಕ್ಷಿಮಾನತಾಸ್ಸ್ಮಃ ॥೪೦॥

ತಾಭ್ಯಾಂ ಸ್ತುತೋಽಹಂ ಕಲ್ಯಾಣಿ ಕೃತೌ ದೇವಭಿಷಗ್ವರೌ ।
ತೀರ್ಥೋತ್ತಮೇ ತದಾ ಸ್ನಾತ್ವಾ ಗೃಹ್ಣಾತ್ಯಾಸ್ಯೇನ ವೈ ಜಲಂ ॥೪೧॥

ದವಭಸ್ಮಾಂಕಿತಾಂಗಸ್ಸಃ ಪೃಷ್ಠಬದ್ಧಶರಾವರಃ ।
ಶಿಂಜಿನೀಸಹಿತೋದ್ಯಾಸ್ಯದುಪವೀತಶರಾಸನಃ ॥೪೨॥

ಬಿಲ್ವಪತ್ರಾಣ್ಯಥಾದಾಯ ಮಾಂಸಪೇಶೀಂ ತಥಾ ಕರೇ ।
ಸ ಸಮಾಯಾತಿ ಮಾಂ ಗೌರಿ ಪತ್ನ್ಯಾ ಚಾಪಿ ಸಮನ್ವಿತಃ ॥೪೩॥

---

ಗಳು. ಸೂರ್ಯಮಂಡಲ ವರ್ತಿಯಾಗಿ, ಹಿರಣ್ಯ ಬಾಹುವೆನಿಸಿದ ನಿನ್ನನ್ನು ಶಿರಸಾ ವಂದಿಸುವೆವು. ॥೩೯॥

ಪರಶಿವನೇ, ನಿನ್ನ ವದನಗಳು, ಕಣ್ಣುಗಳು, ಕಾಲುಗಳು ಸಹಸ್ರಾರು ಸಂಖ್ಯೆಯಲ್ಲಿ ಬಿಂಬಿಸುತ್ತಿವೆ. ಸಹಸ್ರಾಕ್ಷನಾದ ಇಂದ್ರನಿಂದಲೂ ನೀನು ಪೂಜಿತನಾಗಿರುವೆ. ಸಾವಿರಾರು ಸಂಖ್ಯೆಯ ಪ್ರಮಥಗಣಗಳು ನಿನ್ನ ಲಿಂಗವನ್ನು ಪೂಜಿಸುತ್ತಿರುವರು. ಇಂತಹ ಸಹಸ್ರಾರು ಕಿರಣಗಳಿಂದ ಕೂಡಿದ ನಿನ್ನನ್ನು ಶಿರಸಾ ನಮಸ್ಕರಿಸುವೆವು." ॥೪೦॥

ಹಾಗೆ ನಾನು ಅಲ್ಲಿ ಅಶ್ವಿನೀ ದೇವತೆಗಳಿಂದ ಸ್ತುತಿಸಲ್ಪಟ್ಟೆನು. ಆ ಭಿಲ್ಲಶ್ರೇಷ್ಠನು ಅಂತಹ ಕೊಳದಲ್ಲಿ ಸ್ನಾನಮಾಡಿ, ದವಭಸ್ಮವನ್ನು ಹಣೆಗೆ ಬಳಿದುಕೊಂಡು, ಬಾಣಗಳ ಬತ್ತಳಿಕೆಯನ್ನೂ ಬೆನ್ನಿಗೆ ಕಟ್ಟಿಕೊಂಡು, ಧನುಸ್ಸಿನ ಮೌರ್ವಿಯನ್ನೇ ಯಜ್ಞೋಪವೀತವನ್ನಾಗಿ ಧರಿಸಿ, ಅದೇ ಜಲವನ್ನು ತೀರ್ಥವನ್ನಾಗಿ ಪ್ರಾಶನಮಾಡಿದನು. ॥೪೧-೪೨॥

ಆತನು ಮಾಂಸದ ಉಂಡೆಯನ್ನೂ ಬಿಲ್ವಪತ್ರೆಗಳನ್ನೂ ತೆಗೆದುಕೊಂಡು ಪತ್ನಿಯೊಡಗೂಡಿ ಅಲ್ಲಿಗೆ ಬಂದು ಶಿವಲಿಂಗವನ್ನು ಪೂಜಿಸುವನು. ಹಿಂದೆ ದೇವತೆಗಳು

ಸುರೈಃ ಪೂರ್ವಂ ಕೃತಾಂ ಪೂಜಾಂ ರತ್ನೈರ್ಬಿಲ್ವೈಶ್ಚ ಶಂಕರಿ ।
ಪದತ್ರಾಣಪದಾ ಗೌರಿ ಸದಾ ದೂರೀಕರೋತಿ ಸಃ ॥೪೪॥

ಸ್ವಗಂಡೂಷಜಲೈಃ ಸ್ನಾಪ್ಯ ಲಿಂಗಂ ಮಂಗಳದಂ ಮಮ ।
ಪಾತಯಿತ್ವಾ ಬಿಲ್ವಪತ್ರಂ ತನ್ಮಾಂಸಂ ವಿನಿವೇದ್ಯ ಚ ॥೪೫॥

ಲಿಂಗಮೌಳಿಕರಾಭ್ಯಾಂ ಚ ಸ್ಪೃಷ್ಟ್ವಾ ಕ್ರೋಶತಿ ಭೈರವಂ ॥೪೬॥

॥ ಭಿಲ್ಲ ಉವಾಚ ॥

ಅಹೋ ಮಹಾದೇವ ಸದಾಶಿವೇಶ
ಪ್ರಸೀದ ಮಯ್ಯದ್ಯ ಮಹಾಘಪುಂಜೇ ।
ತ್ವತ್ಪಾದಭಕ್ತ್ಯಾ ಗಣಯಾಮಿ ನಾಮರಾನ್
ದ್ವಿಜಾನ್ ಮನುಷ್ಯಾಂಶ್ಚ ಕಿಯನ್ಮಹೇಶ್ವರ ॥೪೭॥

ಕಿಯಂತಿ ಪಾಪಾನಿ ಕೃತಾನಿ ಚೇತ್ಕಿಮು
ತ್ವಾಟಯೇಯುಶ್ಚ ಮದೀಯಶಷ್ಪಂ ।

ರತ್ನ ಬಿಲ್ವಗಳಿಂದ ನನ್ನನ್ನೂ ಪೂಜಿಸಿದ್ದರು. ಅಂತಹ ಪೂಜೆಯನ್ನೂ ಧಿಕ್ಕರಿಸುವಂತೆ ಆ ಭಿಲ್ಲನು ನನ್ನನ್ನು ಪಾದರಕ್ಷೆಯನ್ನು ಮೆಟ್ಟಿಯೇ ಅರ್ಚಿಸಿದನು. ॥೪೩-೪೪॥

ತನ್ನ ಬಾಯಿಯಲ್ಲಿ ತುಂಬಿ ತಂದಿದ್ದ ನೀರಿನಿಂದ ನನ್ನ ಲಿಂಗಕ್ಕೆ ಅಭಿಷೇಕಮಾಡಿ, ಬಿಲ್ವಪತ್ರೆಗಳನ್ನು ಅದರ ಮೇಲಿಟ್ಟು, ಮಾಂಸದ ಉಂಡೆಯನ್ನೇ ನಿವೇದಿಸಿ, ತನ್ನ ಎರಡು ಕೈಗಳಿಂದಲೂ ಲಿಂಗದ ಅಗ್ರಭಾಗವನ್ನು ಸ್ಪರ್ಶಿಸುತ್ತಾ ಭಯಂಕರವಾಗಿ ಹೀಗೆ ಪ್ರಾರ್ಥಿಸುವನು. ॥೪೫-೪೬॥

" ಮಹಾ ದೇವನೇ, ಸದಾಶಿವನೇ, ಮಹಾ ಪಾಪಿಷ್ಠನಾದ ನನ್ನಲ್ಲಿ ದಯೆಯನ್ನಿಡು. ನಿನ್ನ ಪಾದದ ಮೇಲಿಟ್ಟಿರುವ ಭಕ್ತಿಯಿಂದ ನನಗೆ ಅಸಾಧಾರಣವಾದ ಶಕ್ತಿಯೊದಗಿ, ಈಗ ನಾನು ಯಾವ ದೇವತೆಗಳನ್ನಾಗಲಿ, ಮನುಷ್ಯರನ್ನಾಗಲಿ ಲಕ್ಷ್ಯ ಮಾಡುವನಾಗಿಲ್ಲ. ॥೪೭॥

ಮಹಾದೇವನೇ, ನಾನು, ಎಷ್ಟು ಪಾಪಗಳನ್ನು ಮಾಡಿದರೂ ಸ್ಮರಾರಿಯಾದ ನಿನ್ನ ಪಾದಾರವಿಂದಧ್ಯಾನದ ಬಲದಿಂದ ನನಗೆ ಅವು ತೃಣಪ್ರಾಯಗಳಾಗಿ ಯಾವ

ಯದಿ ಸ್ಮರಾರೇಕ್ಷರಣಾರವಿಂದಂ
ಸ್ಮರಾಮಿ ತಸ್ಮಾನ್ನ ಭಯಂ ಮಮಾದ್ಯ ॥೪೮॥

ಇತ್ಥಂ ಮದ್ಭಕ್ತಿಗರ್ವೇಣ ಭಿಲ್ಲೋ ವದತಿ ಶಂಕರಿ ।
ಸುಪ್ರೀತೋಸಿ ಮಹಾದೇವ ಪೂಜಯಾ ಮಮ ಕೇವಲಂ ॥೪೯॥

ಇತಿ ಶ್ರುತ್ವಾಥ ತದ್ವಾಕ್ಯಂ ತದ್ಭಕ್ತ್ಯಾಹಂ ಸುತೋಷಿತಃ ।
ತ್ರಿರೋಂಕಾರಧ್ವನಿಯುತಂ ಪ್ರತಿಶಬ್ದಂ ದದಾಮ್ಯಹಂ ॥೫೦॥

ತಚ್ಛ್ರುತ್ವಾ ಪ್ರಣತೋ ಗೌರಿ ಭಿಲ್ಲೋ ಯಾತಿ ಸ್ವಕಂ ಗೃಹಂ ।
ಪತ್ನ್ಯಾ ತಯಾ ವಿಶಾಲಾಕ್ಷಿ ಸ ಭುಂಕ್ತೇ ಬಾಂಧವೈಸ್ಸಹ ॥೫೧॥

ಮೃಗಾಜಶಶಗೋಧಾನಾಂ ಮಾಂಸಂ ಸ್ವಾದು ನ ಸೇವತೇ ।
ಅತ್ಯಂತಂ ಘರ್ಮತಪ್ತೋಪಿ ವೃಷ್ಟಿಧಾರಾನ್ವಿತೋಪಿ ನ ॥೫೨॥

ಕ್ಷುಚ್ಛ್ರಾಂತೋಪಿ ಮಹಾದೇವಿ ನಿಯಮಾನ್ಮಮ ಪೂಜಕಃ ।
ಪ್ರತ್ಯಹಂ ಮಾಂಸಮಭ್ಯರ್ಚ್ಯ ಭುಂಕ್ತೇ ಮಾಂಸಾನಿ ಕೇವಲಂ॥೫೩॥

ತೊಂದರೆಯನ್ನೂ ಕೊಡಲಾರವು. ಆದರಿಂದ ನನಗೆ ಯಾವ ಭಯವೂ ತೋರಿ ಬರಲಾರದು. ॥೪೮॥

ಎಂದು ನನ್ನ ವಿಷಯಕವಾದ ಭಕ್ತಿಭಾವದಿಂದ ಕೂಡಿ ಆ ಭಿಲ್ಲನು "ಮಹಾದೇವನೇ, ನನ್ನ ಪೂಜೆಯಿಂದ ನೀನು ತೃಪ್ತನಾಗಿರುವೆಯಾ" ಎಂದು ಕೇಳಿಕೊಂಡನು. ಆಗ ನಾನು ಮೂರು ಸಾರಿ ಓಂಕಾರಧ್ವನಿಮಾಡಿ ನನ್ನ ಸಂತೋಷವನ್ನು ಅವನಿಗೆ ಆ ಮೂಲಕ ಸೂಚಿಸಿದೆನು. ॥೪೯-೫೦॥

ಆ ಶಬ್ದವನ್ನು ಕೇಳಿ ಭಿಲ್ಲನು ಸಂತೋಷದಿಂದ ಪತ್ನಿಯೊಡಗೂಡಿ ಮನೆಗೆ ಹೋಗಿ ಅಲ್ಲಿ ಬಂಧುಬಾಂಧವರೊಡಗೂಡಿ ಸುಖಭೋಜನ ಮಾಡುವನು. ಜಿಂಕೆ, ಮೊಲ, ಉಡ ಮುಂತಾದ ಸಾಧುಪ್ರಾಣಿಗಳ ಸ್ವಾದುಮಾಂಸವನ್ನು ಎಂದೂ ಭುಂಜಿಸುವುದಿಲ್ಲ. ಅವನಿಗೆ ಎಷ್ಟೇ ಹಸಿವಾಗಿದ್ದರೂ ಬಿಸಿಲಿನಿಂದ ಬಳಲಿದ್ದರೂ, ನನ್ನ ಪೂಜಾಕಾಲದ ನಿಯಮವನ್ನು ಮಾತ್ರ ಎಂದಿಗೂ ತಪ್ಪಲಾರನು. ಮೊದಲು ತಾನು ಭಕ್ಷಿಸುವ ಮಾಂಸವನ್ನು ನನಗೆ ನಿವೇದಿಸದೇ ತಾನು ಎಂದೂ ತಿನ್ನಲಾರನು. ॥೫೧-೫೨-೫೩॥

ಏವಂ ಸಂವಸತಸ್ತಸ್ಯ ಕಾಲೋ ಭೂಯಾನವರ್ತತ ।
ತದ್ಭೀತ್ಯಾ ವಾಯುರಪಿ ಜೇ ನ ವಾತಿ ಮನುಜಃ ಕಥಂ ॥೫೪॥

ಸಮಾಯಾಂತಿ ವನಂ ಗೌರಿ ಬ್ರಹ್ಮವಿಷ್ಣ್ವಾದಯಸ್ಸುರಾಃ ।
ನಿಶಿ ಪ್ರತ್ಯಹಮಾಗತ್ಯ ಸಾಂಗಂ ಕುರ್ವಂತಿ ಪೂಜನಂ ॥೫೫॥

ಪ್ರಾತಸ್ಸಂಗವಮಧ್ಯಾಹ್ನಕಾಲಾದಪಿ ಮಹೇಶ್ವರಿ ।
ಸಾಯಂಕಾಲೇ ಮಹಾದೇವಿ ಪೂಜಾ ಪ್ರಿಯಕರೀ ಮಮ ॥೫೬॥

ತತ್ರಾಪಿ ನಿಶಿ ಪೂಜಾ ಮೇ ದೇವಿ ಪ್ರೀತಿಕರೀ ಮಮ ॥೫೭॥

ನಿಶಾಸು ಸಿತಭಸ್ಮಧೃಗ್ವಿಮಲ ಶಂಗಲಿಂಗಾರ್ಚಕೋ
ಶಿವೇ ಭವತಿ ಭಾಗ್ಯಕೋ ಮುಹುರಪಾರ ಬಿಲ್ವಾರ್ಪಣೈಃ ।
ಸುಪೀತಕರಕೇತಕ್ಯೈಃ ಸಮಭಿಪೂಜ್ಯ ಮುಕ್ತೋ ಭವೇ
ನ್ನ ಯಾಮ್ಯಭವಯಾತನಾಮಪಿ ಸೃಣೋತಿ ತತ್ರಾರ್ಚಕಃ ॥೫೮॥

---

ಹೀಗೆಯೇ ಆತನು ಬಹಳ ಕಾಲ ಅಲ್ಲಿ ವಾಸಮಾಡುತ್ತಿದ್ದನು. ಅವನ ಭಯದಿಂದ ಅಲ್ಲಿ ವಾಯುವೂ ಸಹ ವೇಗವಾಗಿ ಬೀಸಲಾರದು. ಬ್ರಹ್ಮವಿಷ್ಣ್ವಾದಿ ಸಕಲ ದೇವತೆಗಳೂ ಸಹ ಅಲ್ಲಿಗೆ ರಾತ್ರಿಯ ವೇಳೆ ಬಂದು ಸಾಂಗವಾಗಿ ಪೂಜೆ ಮಾಡಿ ಹಿಂದಿರುಗುತ್ತಿರುವರು. ||೫೪-೫೫||

ಎಲೌ ದೇವಿಯೇ, ಪ್ರಾತಃ, ಸಂಗವ, ಮಧ್ಯಾಹ್ನ, ಸಾಯಂಕಾಲ, ಅರ್ಧ ರಾತ್ರಿ ಈ ಕಾಲಗಳಲ್ಲಿ ಮಾಡುವ ಲಿಂಗಾರ್ಚನೆಯು ನನಗೆ ಅತ್ಯಂತ ಪ್ರೀತಿಕರವಾದುದು. ಆದರಲ್ಲಿಯೂ ಅರ್ಧ ರಾತ್ರಿಯಲ್ಲಿ ನಡೆಸುವ ಪೂಜೆಯಂತೂ ನನಗೆ ಬಹು ಪ್ರಿಯವಾದುದೆಂದು ತಿಳಿ. ||೫೬-೫೭||

ಶುಭ್ರವಾದ ಭಸ್ಮಧಾರಣಾದಿಗಳಿಂದ ಅರ್ಧರಾತ್ರಿಯಲ್ಲಿ ಯಾರು ನನ್ನನ್ನು ಧ್ಯಾನಿಸಿ, ಬಿಲ್ವಪತ್ರಾದಿಗಳಿಂದ ಪೂಜಿಸುವರೋ, ಮತ್ತು ಹಳದಿಯ ಕೇತಕೀ ಪುಷ್ಪಗಳಿಂದ ನನ್ನನ್ನು ಅಲಂಕರಿಸುವರೋ, ಅಂತಹವರು ನಿಜವಾಗಿಯೂ ಮುಕ್ತರಾಗುವರು. ಅವರಿಗೆ ಎಂದೂ ಯಮಬಾಧೆಯು ಲಭಿಸಲಾರದು. ಅದನ್ನು ಕಿವಿಯಿಂದಲೂ ಕೇಳಲಾರರು. ||೫೮||

ಶೈವವರ್ಯಗಣಾಸ್ಸರ್ವೇ ಮುನಯೋ ಧೈರ್ಯತತ್ಪರಾಃ
ತಸ್ಯಾಜ್ಞಯಾ ಸಮಾಯಾಂತಿ ಪರ್ವಕಾಲೇಷು ಸಾದರಂ ।
ಸ್ನಾತ್ವಾ ತತ್ಸರಸಿ ಸ್ವಚ್ಛೇ ಭಸ್ಮರುದ್ರಾಕ್ಷಭೂಷಣಾಃ
ಹರಿದ್ವಾರಾತ್ಸಮಾನೀಯ ಶುಭಂ ಗಂಗಾಜಲಂ ಶಿವೇ ॥೬೦॥

ರುದ್ರಸೂಕ್ತೈರ್ಮಹಾದೇವಂ ವೈದ್ಯನಾಥಂ ತಥಾಂಬಿಕೇ ।
ತದಾ ಕಾರ್ಪಾಟಿಕಾಃ ಶೈವಾಃ ಮಲ್ಲಿಂಗಂ ಸೇಚಯಂತ್ಯುಮೇ ॥೬೧॥

ಪಂಚಾಮೃತೈಃ ಫಲೈಶ್ಚಾಪಿ ಗಂಧಾದ್ಯೈರ್ಬಿಲ್ವಪತ್ರಕೈಃ ।
ಪುಷ್ಪೈರ್ವನ್ಯೈರಪಾರೈಶ್ಚ ನೈವೇದ್ಯೈಃ ಫಲಕಲ್ಪಿತೈಃ ॥೬೨॥

ಪ್ರದಕ್ಷಿಣಪ್ರಣಾಮಾದ್ಯೈಃ ಸ್ತುವಂತಿ ತ್ವಮೀಶ್ವರಂ।
ವೈದ್ಯನಾಥಂ ಮಹಾಲಿಂಗಂ ಭವರೋಗಹರಂ ಶಿವಂ ॥೬೩॥

ತ್ವಾಮಾಲೋಕ್ಯ ಸುನಿರ್ವೃತಾ ಮುನಿಗಣಾಃ ಪ್ರಾಪ್ತಾಭಯಾಶ್ಶಂಕರಂ
ವಿಶ್ವೇಶಂ ಮದನಾಂತಕಂ ಸುರವರೈರ್ವೇದೈಶ್ಚತುರ್ಭಿಃ ಸ್ತುತಂ ।

ಅಂತಹ ಭಕ್ತನ ಅಪ್ಪಣೆಯಂತೆ ಅನೇಕ ಶಿವಪೂಜಾಧುರಂಧರರು ಧೈರ್ಯದಿಂದ ಪ್ರತಿಪರ್ವಕಾಲಗಳಲ್ಲಿಯೂ ಅಲ್ಲಿಗೆ ಬರುವರು. ಅವರು ಆ ಸ್ವಚ್ಛವಾದ ಕೊಳದಲ್ಲಿ ಭಸ್ಮ ರುದ್ರಾಕ್ಷಿಗಳನ್ನು ಧರಿಸಿಕೊಂಡು, ಹರಿದ್ವಾರದಿಂದ ತಂದ ಗಂಗೋದಕವನ್ನು ಶಿವಲಿಂಗಕ್ಕೆ ಅಭಿಷೇಕ ಮಾಡುವರು. ॥೬೦॥

ಅಲ್ಲಿಗೆ ಬಂದಿದ್ದ ಭಿಲ್ಲ ಶಿವಪೂಜಕರೆಲ್ಲಾ ವೈದ್ಯನಾಥೇಶ್ವರನಿಗೆ ರುದ್ರ ಸೂಕ್ತ ದಿಂದ ಪಂಚಾಮೃತಾದಿ ವಸ್ತುಗಳ ಅಭಿಷೇಕವನ್ನೂ ನೆರವೇರಿಸಿದರು. ಬಿಲ್ವಪತ್ರೆ, ಪುಷ್ಪ, ವನದಲ್ಲಿ ಬೆಳೆದ ನೈವೇದ್ಯಾದಿಗಳು ಇವುಗಳನ್ನೂ ಶಿವಲಿಂಗಕ್ಕೆ ಅರ್ಪಿಸಿದರು. ॥೬೧-೬೨॥

ಪ್ರದಕ್ಷಿಣ ನಮಸ್ಕಾರಾದಿಗಳಿಂದ ಮಹಾದೇವನನ್ನು ಭಜಿಸಿ, ಭವರೋಗ ಹರನಾದ ಮತ್ತು ಮಹಾಲಿಂಗವಾಸಿಯಾದ ವೈದ್ಯನಾಥನನ್ನೂ ಹೀಗೆ ಸ್ತೋತ್ರ ಮಾಡಿದರು. ॥೬೩॥

"ಮಹಾದೇವನೇ, ನಿನ್ನ ದರ್ಶನದಿಂದ ಸಕಲ ಮಹರ್ಷಿಗಳೂ ಅಭಯು ವನ್ನು ತಾಳಿರುವರು. ಮನ್ಮಥನಾಶಕನೂ, ಜಗತ್ಪತಿಯೂ ಆದ ನಿನ್ನನ್ನು ನಾಲ್ಕು

ಧಾತ್ರಾ ವೃತ್ರಹಣೇನ ಮಾರಜನಕೇನಾರಾಧಿತಸ್ತ್ವಂ ಸದಾ
ವಿಶ್ವಂ ತ್ವಂ ತಮಸಾಂ ಪರಶ್ರುತಿಶಿರೋವೈದ್ಯಸ್ತ್ವಮಾದ್ಯೋ ಭಿಷಕ್ ॥೬೪॥

ಯಾ ಚೋಮಾ ಭಗವನ್ ತ್ವದಂಕವಸತಿರ್ಯಸ್ಯಾಃ ಕೃಪಾಲೇಶತೋ
ಜಾತಂ ವಿಶ್ವಮಿದಂ ವಿಚಿತ್ರಜನಕಂ ಯಾ ಸಾ ಸ್ವಯಂ ಮೋಹಯೇತ್ ।
ಯಾಂ ದೇವಾ ಮುನಯೋಪ್ಯಮೀ ಸ್ತುತಿಶತೈಃ ಸ್ತುತ್ವಾ ತ್ವದೀಯಂ ಶುಭಂ
ವಿಜ್ಞಾನಂ ಸಮವಾಪ್ಯ ಮುಕ್ತಿಕರಣಾಮುಕ್ತಿಂ ಪ್ರಯಾಂತ್ಯೇವ ತೇ ॥೬೫॥

ಭಿಲ್ಲಾದಸ್ಮಾಚ್ಛಿವೋದ್ಯತ್ಕರಧೃತಧನುಷೋ ಭೀತಿರಸ್ಮಾಕಮುಗ್ರಾ
ನುಗ್ರಸ್ತ್ವಂ ಶೈವವರ್ಯೇ ತ್ವಯಿ ವಿತತಯಶಃ ಸೀಮ್ನಿ ವಿಸ್ತೀರ್ಣಧಾಮ್ನಿ ।
ಸುಧಾಧಾಮಾ ಮೂರ್ಧ್ನಾ ತ್ವಯಿ ತದುಭಯಂ ಭಿಲ್ಲಗಂಡೂಷವಾರಿ
ನೋ ಸಹ್ಯಂ ನೋ ಮಹೇಶ ಭವದಭಯಕೃಪಾಪಾತ್ರಭೂತಾನ್ ಪ್ರಸೀದ ॥೬೬॥

ವೇದಗಳೂ ಸರ್ವದಾ ಸ್ತೋತ್ರಮಾಡುತ್ತಿರುವುವು. ಅಲ್ಲದೆ ಬ್ರಹ್ಮ, ವಿಷ್ಣು, ಇಂದ್ರ ಮುಂತಾದವರಿಂದ ನೀನು ಪೂಜಿತನಾಗಿರುವೆ. ಮಾಯಾರಹಿತನಾಗಿ ಅಜ್ಞಾನಕ್ಕೆ ದೂರನೆನಿಸಿರುವೆ. ಮಾಯಾಸಾನ್ನಿಧ್ಯದಿಂದ ಅಖಿಲ ಜಗತ್ತಿನಂತೆಯೂ ತೋರಿ ಬರುವೆ. ಇಂತಹ ದೇವದೇವನೂ ಭವರೋಗವೈದ್ಯನೂ ಆದ ನಿನ್ನನ್ನು ಸರ್ವದಾ ಧ್ಯಾನಮಾಡುವೆವು. ॥೬೪॥

ಎಲೈ ಮಹಾತ್ಮನೇ, ನಿನ್ನ ತೊಡೆಯಮೇಲೆ ಸರ್ವದಾ ಮಂಡಿಸಿರುವ ಉಮಾದೇವಿಯ ಕೃಪಾತಿಶಯದಿಂದಲೇ ಈ ಅಖಿಲ ಜಗತ್ತೂ ಈಗ ನಿರ್ಮಾಣ ವಾಗಿರುವುದು. ಈ ಪ್ರಪಂಚದಲ್ಲಿ ಅಡಕವಾಗಿರುವ ಸಕಲ ಮುನಿವರ್ಗ ಮತ್ತು ದೇವತಾವರ್ಗವು ಆ ದೇವಿಯನ್ನೇ ಸರ್ವದಾ ಸ್ತುತಿಸುತ್ತಿರುವುದು. ಆ ದೇವಿಯನ್ನು ಆರಾಧಿಸಿಯೇ ಸಕಲ ಭಕ್ತರೂ ತಮ್ಮ ಅಜ್ಞಾನವನ್ನು ನೀಗಿಕೊಂಡು ಜ್ಞಾನದಿಂದ ಲಭ್ಯವಾಗುವ ಮುಕುತಿಯನ್ನು ಹೊಂದುವರು. ॥೬೫॥

ಪರಶಿವನೇ, ನಿನ್ನ ಭಕ್ತನಾದ ಈ ಭಿಲ್ಲನು ಎತ್ತರವಾದ ಧನುಸ್ಸನ್ನು ಹಿಡಿದು ನಿಂತಿದ್ದೇ ಆದರೆ ನಮಗೆ ಅತಿಯಾದ ಭಯವುಂಟಾಗುವುದು. ಆದರೆ ಕೃಪಾಶಾಲಿಯಾದ ನೀನು ಮಾತ್ರ ಆತನ ಭಕ್ತಿಗೆ ಮೆಚ್ಚಿ ಅತಿಯಾದ ತೇಜಸ್ಸನ್ನೂ ಶಕ್ತಿಯನ್ನೂ ದಯಪಾಲಿಸಿರುವೆ. ನಿನ್ನ ಭಕ್ತನ ಮೇಲಿನ ಅಭಿಮಾನದಿಂದ ಆತನ

ಇತ್ಥಂ ಸರ್ವಮುನೀಂದ್ರೈಶ್ಚ ಪ್ರಾರ್ಥಿತೋಽಹಂ ಸದಾಂಬಿಕೇ ।
ತದ್ಭಕ್ತಿದಾರ್ಢ್ಯಂ ವಿಜ್ಞಾತುಂ ತಾನ್ ಪ್ರದರ್ಶಯಿತುಂ ತದಾ ॥೬೭॥

ವಾತವೃಷ್ಟಿಸ್ಸಮಾನೀತಾ ಸ್ತನಯಿತ್ನುಪ್ರಗರ್ಜಿತೈಃ ।
ಶಿಲಾಪಾತೋಪಮಾಸಾರಶುಂಡಾಧಾರಾತಿವರ್ಷಣೈಃ ॥೬೮॥

ಮೇಘಮಾಲಾವೃತಂ ವ್ಯೋಮ ಸಮಭೂತ್ಸುರತಸ್ಕರಂ ।
ತದಾ ವೃಷ್ಟಿಭಯಾತ್ಸರ್ವೇ ವಿಲೀನಾಸ್ತೇ ಮದಾಲಯೇ ॥೬೯॥

ಭಿಲ್ಲಭೀತ್ಯಾ ವೃಷ್ಟಿಭಯಾಚ್ಛೈವಾಃ ಕಂಪಿತವಿಗ್ರಹಾಃ ।
ಏತಸ್ಮಿನ್ನಂತರೇ ಭಿಲ್ಲಃ ಪತ್ನ್ಯಾ ಸ್ನಾತ್ವಾ ಸಮಾಯಯೌ ॥೭೦॥

ಮಾಂಸಾನ್ಯಾದಾಯ ಹಸ್ತೇನ ಬಿಲ್ವಪತ್ರಾಣ್ಯಥೈಕತಃ ।
ಶರಾವರೇಣ ಧನುಷಾ ಪೃಷ್ಠಲಗ್ನೇನ ಶಾಂಕರಿ ॥೭೧॥

ಎಂಜಲುನೀರೇ ನಿನಗೆ ಅಮೃತಪ್ರಾಯವಾಗಿದೆ. ಮಹಾದೇವನೇ, ನಿನ್ನ ಕರುಣಾಮಯವಾದ ದೃಷ್ಟಿಗೆ ಪಾತ್ರರಾದ ನಮ್ಮನ್ನು ಸಲಹು.'' ॥೬೬॥

ಎಂದು ವಿಧವಿಧವಾಗಿ ಸ್ತುತಿಸಿದ ಮಹರ್ಷಿಗಳ ಮನಸ್ಸನ್ನು ಪರೀಕ್ಷಿಸಲೋಸುಗ, ಎಲೌ ಗಿರಿಜೆಯೇ, ಆಗ ಪ್ರಬಲವಾದ ವೃಷ್ಟಿಯನ್ನು ಸುರಿಸಿದೆನು. ಆ ಮಳೆಯ ರಭಸವು ಗಾಳಿಯಿಂದಲೂ ಸಿಡಿಲಿನ ಗರ್ಜನೆಯಿಂದಲೂ ಸಹಿಸಲಸಾಧ್ಯವಾಗಿದ್ದಿತು. ಒಂದೊಂದು ಹನಿಯೂ ಒಂದೊಂದು ಕಲ್ಲಿನ ಹಾಗೆ ಬೀಳುತ್ತಿದ್ದಿತು. ಸಂತತವಾರಿಧಾರೆಯಾದರೋ ಆನೆಯ ಸೊಂಡಲಿನಷ್ಟು ಗಾತ್ರವಾಗಿ ಕಾಣುತ್ತಿದ್ದಿತು. ॥೬೭-೬೮॥

ಆಕಾಶವೆಲ್ಲಾ ಮೇಘದಿಂದ ಪೂರಿತವಾಯಿತು. ಮಳೆಯು ಅತಿಯಾಗಿ ದೇವಲೋಕವನ್ನು ಮುಚ್ಚಿತು. ಆಗ ಋಷಿಗಳೆಲ್ಲರೂ ಹೆದರಿ ನನ್ನ ದೇವಾಲಯದೊಳಗೆ ಅಡಗಿಕೊಂಡರು. ಅವರು ಮಳೆಯಿಂದಲೂ, ಬೇಡರವನಿಂದಲೂ ಹೆದರಿ ನಡುಗುತ್ತಿದ್ದರು. ಅಷ್ಟರಲ್ಲಿ ಭಿಲ್ಲನು ಪತ್ನಿಯೊಡನೆ ಸ್ನಾನಮಾಡಿ ಅಲ್ಲಿಗೆ ಬಂದೇಬಿಟ್ಟನು. ॥೬೯-೭೦॥

ಬರುವಾಗ ಆತನು ಒಂದು ಕೈಯಲ್ಲಿ ಮಾಂಸವನ್ನೂ, ಮತ್ತೊಂದರಲ್ಲಿ ಬಿಲ್ವಪತ್ರೆಯನ್ನೂ ಹಿಡಿದಿದ್ದನು. ಹಿಂಭಾಗದಲ್ಲಿ ಬಿಲ್ಲುಬತ್ತಳಿಕೆಗಳು ಕಟ್ಟಲ್ಪಟ್ಟಿ

ಪಾದತ್ರಾಣೇನ ಚ ತದಾ ಗಂಡೂಷಪಯಸಾಪಿ ಚ ।
ವೈದ್ಯನಾಥಮಹಾಲಿಂಗೇ ಪಾದತ್ರಾಣಪದಾತ್ತದಾ ॥೭೨॥

ತಚ್ಛಾಂಭವಕೃತಾಂ ಪೂಜಾಂ ಬಿಲ್ವಪತ್ರಾಣ್ಯಪಾತಯತ್ ।
ಸ್ವಗಂಡೂಷಜಲೈಸ್ಸ್ನಾಪ್ಯ ತಲ್ಲಿಂಗಂ ಮಮ ಮುಕ್ತಿದಂ ॥೭೩॥

ಅಪಾತಯದ್ಬಿಲ್ವಪತ್ರಂ ಮಾಂಸಂ ತಚ್ಚ ನಿವೇದ್ಯ ಸಃ ।
ಧೃತ್ವಾ ಲಿಂಗಶಿರೋ ಭಿಲ್ಲ ಉದಕ್ರೋಶದ್ಯಥಾ ಪುರಾ ॥೭೪॥

ತದ್ಭಕ್ತಿದಾರ್ಢ್ಯಂ ಶೈವಾನಾಂ ಪ್ರದರ್ಶಯಿತುಮಂಬಿಕೇ ।
ಮಯಾ ನೋಚ್ಚಾರಿತಃ ಶಬ್ದಃ ತದಾ ಭಿಲ್ಲೋತಿದುಃಖಿತಃ ॥೭೫॥

ಸ್ಫುಟಿತಂ ಚಕ್ಷುರೇಕಂ ಮೇ ಸ್ರವದ್ರಕ್ತಂ ಚ ಲಿಂಗಗಂ ।
ತಸ್ಮೈ ಸಂದರ್ಶಯಾಮೀಶೇ ದೃಷ್ಟ್ವಾ ಮಾಂ ತಾದೃಶಂ ತದಾ॥೭೬॥

ಶಿಲೀಮುಖಮುಖೇನೈವ ಸ್ವನೇತ್ರಂ ಸ ತದೋತ್ಖನತ್ ।
ಉವಾಚ ದುಃಖಿತೋ ಭಿಲ್ಲಃ ಕೇನೈತತ್ಕೃತಮೀಶ್ವರ ॥೭೭॥

ದ್ದುವು. ಕಾಲಿಗೆ ಪಾದರಕ್ಷೆಯನ್ನೂ, ಬಾಯಲ್ಲಿ ನೀರನ್ನೂ ತುಂಬಿಕೊಂಡೇ ವೈದ್ಯನಾಥಲಿಂಗದ ಸಮೀಪಕ್ಕೆ ಹೋದನು. ॥೭೧-೭೨॥

ಹಾಗೆಯೇ ಇತರರು ಪೂಜೆಮಾಡಿದ ಬಿಲ್ವಪತ್ರೆಗಳನ್ನೆಲ್ಲಾ ತೆಗೆದು ಹಾಕಿ, ತನ್ನ ಬಾಯಿಯ ನೀರಿನಿಂದ ಮೊದಲು ಶಿವಲಿಂಗಕ್ಕೆ ಅಭಿಷೇಕಮಾಡಿದನು. ಬಿಲ್ವವನ್ನಿಟ್ಟನು. ಮಾಂಸವನ್ನು ನಿವೇದಿಸಿದನು. ಎಂದಿನಂತೆ ಗರ್ಜಿಸುತ್ತಾ 'ಮಹಾದೇವನೆ, ತೃಪ್ತನಾದೆಯಾ'! ಎಂದು ಅರಚಿದನು. ॥೭೩-೭೪॥

ಅವನ ಸ್ಥಿರಭಕ್ತಿಯನ್ನು ಅಲ್ಲಿದ್ದ ಋಷಿವರ್ಗಕ್ಕೆ ತೋರಿಸಬೇಕೆಂದು ನಾನು ಎಂದಿನಂತೆ ಓಂಕಾರಮಾಡಲಿಲ್ಲ. ಆಗ ಭಿಲ್ಲನಿಗೆ ಬಹಳ ದುಃಖವಾಯಿತು. ಒಡನೆಯೇ ನನ್ನ ಲಿಂಗದಲ್ಲಿದ್ದ ಒಂದು ಕಣ್ಣು ಒಡೆದು ಅದರಿಂದ ರಕ್ತವು ಸುರಿಯಲಾರಂಭಿಸಿತು. ಅದನ್ನು ಆ ಭಿಲ್ಲನು ಒಡನೆಯೇ ನೋಡಿ ಮತ್ತೂ ದುಃಖಿತನಾದನು. ॥೭೫-೭೬॥

ತತ್ಕ್ಷಣವೇ ಬಾಣದಿಂದ ತನ್ನ ಕಣ್ಣನ್ನು ಕಿತ್ತು ಆ ಲಿಂಗದ ಕಣ್ಣಿನಲ್ಲಿಟ್ಟು ದುಃಖದಿಂದ "ಎಲೈ ಪರಶಿವನೇ, ಯಾರು ಹೀಗೆ ನಿನ್ನ ಕಣ್ಣನ್ನು ಬಗೆದವರು?

ತಮದ್ಯ ಪಾತಯಿಷ್ಯಾಮಿ ಅಹೋ ಬತಬತೇತಿ ಚ ।
ತದ್ವತ್ತನೇತ್ರಗೋಲೇನ ಲಿಂಗಂ ನೇತ್ರೇಣ ಶೋಭಿತಃ ॥೭೮॥

ದ್ವಿತೀಯಂ ಮೇ ತದಾ ನೇತ್ರಂ ತದಾ ಸ್ಫುಟಿತಮೀಶ್ವರಿ ।
ಸ್ರವದ್ರಕ್ತಂ ದರ್ಶಯಾಮಿ ತಸ್ಮೈ ಭಿಲ್ಲವರಾಯ ಹಿ ॥೭೯॥

ತದಾ ಸ್ವನೇತ್ರಮುತ್ಫುಲ್ಲಂ ಶರಾಗ್ರೇಣ ಸಮುತ್ಪನತ್ ।
ಪಶ್ಯಂತಿ ಮುನಯಃ ಸರ್ವೇ ತದ್ಭಿಲ್ಲಕೃತಸಾಹಸಂ ॥೮೦॥

ಉವಾಚ ಭಿಲ್ಲೋ ಹೃಷ್ಟಸ್ಸನ್ ಪಾಣಿನಾ ನೇತ್ರಗೋಲಕೇ
ಪ್ರಗೃಹ್ಯ ವಿನಯೋಪೇತಃ ಪಶ್ಯಂತ್ಯಾ ಭಾರ್ಯಯಾ ತದಾ ॥೮೧॥

ತ್ವದೀಯಂ ಲೋಚನಂ ಕೇನ ಸ್ರವದ್ರಕ್ತಮಹೋ ಕೃತಂ ।
ತೇನ ತ್ವಂ ದುಃಖಿತೋಽಸೀತಿ ಕರೇಣಾಲಿಂಗ್ಯ ಮಾಂ ತದಾ ॥೮೨॥

ಗೃಹಾಣ ಮನ್ನೇತ್ರವರೇ ಫುಲ್ಲಾಂಬುಜಸಮಪ್ರಭೇ ।
ಇತಿ ತದ್ವಾಕ್ಯಮಾಕರ್ಣ್ಯ ತ್ವಯಾ ಸಹ ಸುಮಧ್ಯಮೇ ॥೮೩॥

ಅದನ್ನು ತಿಳಿಸಿದರೆ ಈಗಲೇ ಅವರನ್ನು ಧ್ವಂಸಮಾಡುವೆನು" ಎಂದು ಗರ್ಜಿಸಿದನು. ಆಗ ಅವನ ಒಂದು ಕಣ್ಣುಗುಡ್ಡೆಯು ಆ ಶಿವಲಿಂಗದಲ್ಲಿ ಅಂಟಿಕೊಂಡಿತು. ॥೭೭-೭೮॥

ಆಗ ನನ್ನ ಮತ್ತೊಂದು ಕಣ್ಣು ಒಡೆದು ರಕ್ತಸುರಿಯಲಾರಂಭಿಸಿತು. ಅದನ್ನು ನೋಡಿ ಆ ಭಿಲ್ಲನು ತನ್ನ ಎರಡನೆಯ ಕಣ್ಣನ್ನೂ ಕಿತ್ತು ಆ ಕಣ್ಣಿಗೆ ಬದಲಾಗಿ ಅಂಟಿಸಿದನು. ಈ ಮಹಾಶ್ಚರ್ಯವನ್ನು ಅಲ್ಲಿದ್ದ ಋಷಿಗಳೆಲ್ಲರೂ ನೋಡುತ್ತಲೇ ಇದ್ದರು. ॥೭೯-೮೦॥

ಆಗ ಆ ಭಿಲ್ಲನು ನನ್ನ ನೇತ್ರಗೋಲಕವನ್ನು ಕೈಯಿಂದ ಮುಟ್ಟಿ ತನ್ನ ಪತ್ನಿಯು ನೋಡುತ್ತಿರುವಂತೆಯೇ ಶಿವಲಿಂಗವನ್ನು ಆಲಿಂಗಿಸಿಕೊಂಡು ಹೀಗೆ ಹೇಳಿದನು. "ಮಹಾದೇವನೇ, ನಿನ್ನ ಕಣ್ಣುಗಳನ್ನು ಯಾವನು ಕಿತ್ತನೋ ಕಾಣೆನಲ್ಲ. ಅದರಿಂದ ನಿನಗೆ ಬಹಳ ದುಃಖವುಂಟಾಗಿರಬಹುದು. ॥೮೧-೮೨॥

ಮಹೇಶ್ವರನೇ, ಅರಳಿದ ಕಮಲದಂತೆ ವಿಶಾಲವಾಗಿರುವ ನನ್ನ ಈ ಕಣ್ಣುಗಳನ್ನು ನೀನು ಸ್ವೀಕರಿಸು" ಎಂದು ಪ್ರಾರ್ಥಿಸಿದನು. ಅದನ್ನು ನೋಡಿ

ಮಯಾ ಚಂದ್ರಕಲಾಮೌಳಿಂ ಮಹಾವೃಷಭಸಂಸ್ಥಿತಂ ।
ನೀಲಕಂಠಂ ವಿರೂಪಾಕ್ಷಂ ತಸ್ಮೈರೂಪಂ ವ್ಯಲೋಕಯಂ ॥೮೪॥

ಗಣೇಶ್ವರೈಃ ಪರಿವೃತಂ ವೃತಂ ಮುನಿಗಣೈಸ್ತದಾ ।
ದೃಷ್ಟ್ವಾ ಮಾಂ ಮುನಯಸ್ಸರ್ವೇ ಭಿಲ್ಲಸ್ಯ ಪುರತೋಽಂಬಿಕೇ ॥೮೫॥

ಅನ್ಯೋನ್ಯಂ ವೀಕ್ಷಯಂತಸ್ತೇ ಮಾಂ ಭಿಲ್ಲಂ ಚ ಮುಹುರ್ಮುಹುಃ ।
ಮತ್ಪಾಣಿಕಮಲೇನೇಶೀ ತನ್ಮುಖಂ ರಕ್ತಸಂವೃತಂ ॥೮೬॥

|| ಶೈವಾ ಊಚುಃ ||

ಸ್ಪೃಷ್ಟಂ ತಸ್ಯೇಕ್ಷಣೇ ದತ್ತೇ ಫುಲ್ಲಾಂಬುಜಸಮಪ್ರಭೇ ।
ಅತ್ಯಂತವಿಸ್ಮಯಾವಿಷ್ಟಾಃ ಶೈವಾ ಊಚುಃ ಪರಸ್ಪರಂ ॥೮೭॥

ಅಹೋಽಸ್ಯೈತಾದೃಶೀ ಭಕ್ತಿರ್ನ ದೃಷ್ಟಾ ಕ್ವಾಪಿ ನ ಶ್ರುತಾ ।
ದೃಷ್ಟ್ವಾಸ್ಯೈತಾದೃಶೀಂ ಭಕ್ತಿಂ ಸರ್ವಂ ಸಹತಿ ಶಂಕರಃ ॥೮೮॥

---

ನಾನು ಸಂತೋಷಪಟ್ಟು ಅವನಿಗೆ ಪ್ರತ್ಯಕ್ಷನಾದೆನು. ಉಮಾಸಮೇತನಾಗಿ, ಚಂದ್ರ ಕಲಾಧಾರಿಯಾಗಿ ನೀಲವರ್ಣದಿಂದ ಶೋಭಿಸುವ ಕಂಠಪ್ರದೇಶವುಳ್ಳವನಾಗಿ, ಮೂರು ಕಣ್ಣುಗಳಿಂದ ಕೂಡಿದ ನನ್ನ ದಿವ್ಯರೂಪವು ಅವನಿಗೆ ಗೋಚರವಾಗು ವಂತೆ ಮಾಡಿದೆನು. ||೮೩-೮೪||

ನನ್ನ ಪಕ್ಕದಲ್ಲಿ ಸಕಲ ಪ್ರಮಥಗಣಗಳೂ, ಮಹರ್ಷಿಗಳ ತಂಡವೂ ಗೋಚ ರಿಸಿತು. ಇದನ್ನು ಆ ಭಿಲ್ಲನು ಮಾತ್ರವಲ್ಲದೆ ಅಲ್ಲಿದ್ದ ಋಷಿಜನರೆಲ್ಲಾ ನೋಡುತ್ತಾ, ಅವರು ತಮ್ಮ ತಮ್ಮಲ್ಲಿಯೇ ಆಶ್ಚರ್ಯ ಹೊಂದಿ ಭಿಲ್ಲನನ್ನೇ ನೆಟ್ಟದೃಷ್ಟಿಯಿಂದ ನೋಡುತ್ತಿದ್ದರು. ಆಗ ನಾನು ಅಂಗೈಯಿಂದ, ರಕ್ತದಿಂದ ಆವೃತವಾಗಿದ್ದ ಆ ಭಿಲ್ಲನ ಮುಖಕಮಲವನ್ನು ಸ್ಪರ್ಶಮಾಡಿದೆನು. ||೮೫-೮೬||

ಒಡನೆಯೇ ಆತನಿಗೆ ಕಣ್ಣುಗಳು ಬಂದವು. ಅಲ್ಲಿದ್ದ ಋಷಿಜನರೆಲ್ಲಾ ಪರಸ್ಪರವಾದ ಆಶ್ಚರ್ಯದಿಂದ ಕೂಡಿ ಈ ರೀತಿ ಮಾತನಾಡಿಕೊಂಡರು. "ಅಯ್ಯೋ ಇಂತಹ ಅಸದೃಶವಾದ ಭಕ್ತಿಯನ್ನು ನಾವು ಎಲ್ಲೂ ನೋಡಲಿಲ್ಲವಲ್ಲಾ! ಇಂತಹ ಭಕ್ತಿಯಿಂದ ಶಂಕರನು ಮೆಚ್ಚಿ ಭಕ್ತನಿಗೆ ಸರ್ವವನ್ನೂ ದಯಪಾಲಿಸುವನಲ್ಲವೆ! ||೮೭-೮೮||

ಸಹಮಾನೋ ಮಹಾದೇವೋ ಭಕ್ತ್ಯಾ ಸರ್ವಂ ಸಹಿಷ್ಯತಿ ।
ಏತಾದೃಶಂ ಭಕ್ತಿಭಾಗ್ಯಂ ಪ್ರಾಪಾಯಂ ವನಗೋಚರಃ ॥೮೯॥

ಸಹಸ್ರಕಮಲೈರ್ಲಿಂಗಂ ಯದಾ ಸಂಪೂಜಯದ್ಧರಿಃ ।
ಸಹಸ್ರಗಣನಾಶೂನ್ಯೇ ಸ್ವನೇತ್ರಕಮಲೇನ ಹಿ ॥೯೦॥

ಹರಿಣಾ ಪೂಜಿತಶ್ಶಂಭುರಿತ್ಯೇವಂ ಶುಶ್ರುಮಃ ಕಥಾಂ ।
ನೇತ್ರದ್ವಯಮಯಂ ಪ್ರಾದಾದ್ವೈದ್ಯನಾಥಾಯ ಸತ್ತಮಃ ॥೯೦॥

ಹರೇರಪ್ಯಧಿಕಶ್ಚಾಯಂ ಭಕ್ತ್ಯಾ ಭಿಲ್ಲೋ ಗಣೋತ್ತಮಃ ।
ಧನ್ಯೋಽಯಂ ಕೃತಕೃತ್ಯೋಽಯಂ ಮಾನ್ಯೋಽಸ್ಮಾಕಮಹೋ ಸದಾ ॥೯೨॥

ಏತಾದೃಶೀ ಭಕ್ತಿರಪಿ ಅಸ್ಮಾಸ್ವದ್ಯ ನ ವಿದ್ಯತೇ ।
ಭಿಲ್ಲಮಾಲಿಂಗ್ಯ ತೇ ಶೈವಾಃ ಧನ್ಯೋ ಮಾನ್ಯೋಽಸಿ ನಃ ಸದಾ ॥೯೩॥

ತ್ವಮೇವ ಭಕ್ತವರ್ಯೋಽಸಿ ಧನ್ಯಂ ತ್ವತ್ಕುಲಮುತ್ತಮಂ ।
ಯೋಽಲ್ಪೋ ಭಕ್ತಿಯುಕ್ತಸ್ಸ್ಯಾದ್ದೇವದೇವೇ ಮಹೇಶ್ವರೇ ॥೯೪॥

ಮಹಾದೇವನು ತನ್ನ ಭಕ್ತರಿಗೆ ಅವರ ಭಕ್ತಿಗೆ ಅನುಸಾರವಾದ ಫಲಗಳೆಲ್ಲ ವನ್ನೂ ಕೊಡುತ್ತಿರುವನು. ಅಂತಹ ಭಾಗ್ಯವು ಈ ಭಿಲ್ಲನಿಗೆ ಮಾತ್ರ ಲಭಿಸಿತಲ್ಲವೇ? ಸಹಸ್ರ ಕಮಲಗಳಿಂದ ಅರ್ಚಿಸ ತೊಡಗಿದ ಮಹಾವಿಷ್ಣುವಿಗೆ ಕೊನೆಯಲ್ಲಿ ಒಂದು ಕಮಲವು ಸಾಲದೆ ಬರಲು ತನ್ನ ನೇತ್ರಕಮಲವನ್ನೇ ಶಂಕರನಿಗೆ ಅರ್ಪಿಸಿ ಬಿಟ್ಟನು. ||೮೯-೯೦||

ವಿಷ್ಣುವು ಒಂದು ಕಣ್ಣನ್ನು ಶಂಕರನಿಗೆ ಅರ್ಪಿಸಿದರೆ, ಈತನು ಎರಡು ಕಣ್ಣುಗಳನ್ನೂ ವೈದ್ಯನಾಥಲಿಂಗಕ್ಕೆ ಅರ್ಪಿಸಿದನು. ಇದರಿಂದ ವಿಷ್ಣುವಿಗಿಂತ ಭಕ್ತಿಯಲ್ಲಿ ಈತನೇ ದೊಡ್ಡವನೆನಿಸಿದನಲ್ಲವೆ! ಈತನೇ ಧನ್ಯ. ಈತನೇ ನಮ್ಮೆಲ್ಲರಿಗೂ ಮಾನ್ಯ. ಇವನ ಜನ್ಮವೇ ಸಾರ್ಥಕವೆನಿಸಿತು. ||೯೧-೯೨||

ಈ ಭಿಲ್ಲನಿಗಿರುವಷ್ಟು ದೃಢಭಕ್ತಿ ನಮಗಿಲ್ಲವಲ್ಲಾ ಎಂದುಕೊಂಡು ಆ ಋಷಿಗಳೆಲ್ಲರೂ ಭಿಲ್ಲನನ್ನು ಆಲಿಂಗಿಸಿಕೊಳ್ಳುತ್ತಾ, 'ಅಯ್ಯಾ ಭಕ್ತವರ್ಯನೇ, ನೀನೇ ಧನ್ಯ. ನಮಗೆ ಈಗ ನೀನೇ ಮಾನ್ಯನು. ನಿನ್ನ ಕುಲವೇ ಪವಿತ್ರವಾದುದು.

ಭಾಗ್ಯವಾನೇವ ಭೂಲೋಕೇ ಮಾನ್ಯೋ ದೇವಗಣೇಷ್ವಪಿ ।
ಯೋ ವೈ ಸಮುನ್ನತೋ ಹೀನೋ ಭಕ್ತ್ಯಾ ದೇವೇ ಮಹೇಶ್ವರೇ ॥೯೫॥

॥ ಶೈವಾ ಊಚುಃ ॥

ಮಾಂ ಪ್ರಣಮ್ಯಾಥ ತೇ ಸರ್ವೇ ತುಷ್ಟುವುಃ ಪ್ರಮಥಾಧಿಪಂ ॥೯೬॥

ತಾರಾನಾಥಸಹೋದರಾಪತಿಕೃತಾಪಾರಾಬ್ಜಪೂಜಾಂಘ್ರಿಕಂ
ಮಾರಾರಾತಿಮಪಾರದುಃಖಶಮನಂ ಘೋರಾದಿಪಾಪಾಪಹಂ ।
ಧೀರೋದಾರಕುಮಾರಶೂರಜನಕಂ ಕರ್ಪೂರಗೌರಂ ಹರಂ
ವಾರಂ ವಾರಮನುಸ್ಮರಾಮ ಹೃದಯೇ ವೀರಂ ಕೃಪಾಸಾಗರಂ ॥೯೭॥

ಇತಿ ಸ್ತುತ್ವಾ ತದಾ ಶೈವಾ ಮಾಂ ಸಂಸ್ಮೃತ್ಯ ತದಾ ಸ್ಥಿತಾಃ ।
ಸಾರೂಪ್ಯಂ ಚ ಮಯಾ ದತ್ತಂ ಗಣತ್ವಂ ತಸ್ಯ ಶಾಂಕರಿ ॥೯೮॥

ತಸ್ಮೈ ಭಿಲ್ಲಾಯ ಮಲ್ಲೋಕೇ ವಾಸೋ ದತ್ತಸ್ತದಾನಘೇ ।
ಪೂರ್ವಜ್ಞಾನವಿಹೀನಶ್ಚ ಸ ಮಾಂ ತುಷ್ಟಾವ ಹರ್ಷಿತಃ ॥೯೯॥

ದೇವದೇವನಾದ ಮಹೇಶ್ವರನಲ್ಲಿ ಅಲ್ಪಭಕ್ತಿಯುಳ್ಳವನಾದರೂ ಅವನೇ ಧನ್ಯನು. ॥೯೩-೯೪॥

ಯಾರು ಈಶ್ವರನಲ್ಲಿ ಭಕ್ತಿಯುಳ್ಳವರೋ, ಅವರೇ ಲೋಕದಲ್ಲಿ ಧನ್ಯರು. ಭಕ್ತಿಶೂನ್ಯರಾದವರು ನಿಜವಾಗಿಯೂ ಪಾಪಿಗಳೇ ಎಂದು ಹೇಳುತ್ತಾ ಆ ಋಷಿಗಳೆಲ್ಲರೂ ನನ್ನನ್ನು ಕುರಿತು ಈ ರೀತಿ ಸ್ತುತಿಸಿದರು. ॥೯೫-೯೬॥

ಚಂದ್ರನ ಜೊತೆಯಲ್ಲಿ ಜನಿಸಿದ ಲಕ್ಷ್ಮಿಗೆ ಪತಿಯೆನಿಸಿದ ಮಹಾವಿಷ್ಣುವಿನಿಂದ ಪೂಜಿತವಾದ ಪಾದಪದ್ಮವುಳ್ಳವನೇ, ಮನ್ಮಥನ ದುಃಖವನ್ನು ಸಂಪೂರ್ಣವಾಗಿ ನಾಶಮಾಡಿದವನೇ, ಭಯಂಕರವಾದ ಪಾಪರಾಶಿಯನ್ನೆಲ್ಲಾ ಧ್ವಂಸಮಾಡುವ ಶಕ್ತಿಯುಳ್ಳವನೇ, ಧೀರನೂ ಉದಾರನೂ ಆದ ಕುಮಾರಸ್ವಾಮಿಯ ಪಿತನೇ, ಕರ್ಪೂರದಂತೆ ಶುಭ್ರವಾದ ದೇಹವುಳ್ಳವನೇ, ದಯಾಸಮುದ್ರನಾದ ವೀರೇಶ್ವರನೇ, ನಿನ್ನನ್ನು ನಾವು ಮನಸಾಧ್ಯಾನಮಾಡುವೆವು. ॥೯೬-೯೭॥

ಹೀಗೆ ಆ ಋಷಿಜನರೆಲ್ಲರೂ ನನ್ನನ್ನೇ ಸ್ಮರಿಸುತ್ತಾ ಅಲ್ಲಿ ನಿಂತರು. ಆ ಭಕ್ತಾಗ್ರೇಸರನಾದ ಭಿಲ್ಲನಿಗೆ ನನ್ನ ಲೋಕದಲ್ಲಿಯೇ ವಾಸಮಾಡುವ ಅವಕಾಶ

ಪಲ್ಯಾತಯಾ ವಿಶಾಲಾಕ್ಷಿ ಸಗಣೋ ದೇವರೂಪಯಾ ॥೧೧೦॥

॥ ಭಿಲ್ಲ ಉವಾಚ ॥

ನಿಧನಪತಿಮನೀಶಂ ಶಾಸಿತಾರಂ ಪರೇಶಂ
ಗುರುಮಮರವರಾಣಾಂ ಚಾರಣಾನಾಂ ಚ ಶಂಭುಂ ।
ಭುವನಜನಕಮಾರಾದ್ವೇದಶೀರ್ಷೇಷು ಗಮ್ಯಂ
ಕನಕಗಿರಿನಿವಾಸಂ ವೈದ್ಯಮಾದ್ಯಂ ನತೋಽಸ್ಮಿ ॥೧೧೧॥

ಅಭೇದ್ಯಸ್ತ್ವಚ್ಛೇದ್ಯೋ ನಿಖಿಲಭವರೋಗಾದಿಹರಣೋ
ಮಹಾನಾದ್ಯೋ ವೇದ್ಯಸ್ತ್ವಮಸಿ ವಿಬುಧಾದ್ಯಾದ್ಯವಚಸಾಂ ।
ನಮೋಂತಾದ್ಯೈರ್ಮಂತ್ರೈಃ ಪ್ರಕಟಿತಯಜುರ್ವೇದತಿಲಕೈ
ರ್ಭವಾನ್ ಸ್ತವ್ಯಃ ಸೇವ್ಯೋ ಹರ ಹರಸಿ ಪಾಪಂ ಮಮ ವಿಭೋ ॥೧೧೨॥

ವನ್ನು ಕಲ್ಪಿಸಿಕೊಟ್ಟು, ಕೊನೆಗೆ ಸಾರೂಪ್ಯವನ್ನೇ ಅನುಗ್ರಹಿಸಿದೆನು. ಅದರಿಂದ ತೃಪ್ತನೂ, ಜ್ಞಾನಿಯೂ ಆದ ಆ ಭಿಲ್ಲನು ದೇವರೂಪವಾದ ಸ್ಥಾನವನ್ನು ಪಡೆದು ಹಿಂದಿನ ಸ್ಮರಣೆಯೇ ಇಲ್ಲದೆ ಹೀಗೆ ಸ್ತುತಿಸಿದನು. ॥೯೮-೯೯-೧೧೦॥

"ಲೋಕನಾಶಕ್ಕೆ ಮುಖ್ಯ ಯಜಮಾನನೂ, ಪ್ರಾಣಿವರ್ಗವನ್ನೆಲ್ಲಾ ಅವರವರ ಕರ್ಮಾನುಗುಣವಾಗಿ ಶಿಕ್ಷೆರಕ್ಷಾದಿಗಳಿಂದ ಶಿಕ್ಷಿಸುವವನೂ ಆದ ಶಂಕರನೇ, ನೀನು ಸಕಲ ದೇವತೆಗಳಿಗೂ ನಿಯಾಮಕನಲ್ಲವೆ! ನೀನೇ ಲೋಕದ ಸೃಷ್ಟಿ ಕರ್ತನು. ವೇದಾಂತಗಳೆಲ್ಲಾ ನಿನ್ನನ್ನೇ ಸರ್ವದಾ ಹೊಗಳುತ್ತಿರುವುವು. ಮೇರು ಪರ್ವತದಲ್ಲಿಯೇ ಸರ್ವದಾ ವಾಸಮಾಡುವ ಮಹಾದೇವನೇ, ನಿನಗೆ ವಂದನೆ. ॥೧೧೧॥

ಪರಬ್ರಹ್ಮವಸ್ತುವೆನಿಸಿದ ನಿನಗೆ ನಾಶವಿಲ್ಲ. ವಿಭಾಗವಿಲ್ಲ. ಸಮಸ್ತ ಭವ ರೋಗಗಳನ್ನೆಲ್ಲಾ ನಾಶಮಾಡುವವನಾಗಿರುವೆ. ನೀನು ಸಕಲ ವಸ್ತುಗಳಿಗೂ ಆದಿಭೂತನು. ಆದ್ಯಂತಗಳಲ್ಲಿ ನಮಃಶಬ್ದ ಬರುವ ಯಜುರ್ವೇದ ರುದ್ರವಾಕ್ಯ ಗಳಿಂದ ನೀನು ಸ್ತುತ್ಯನಾಗಿರುವೆ. ಸಂಸಾರನಾಶಕನಾದ ಮಹಾದೇವನೇ, ನನ್ನ ಸಕಲ ಪಾಪವನ್ನೂ ಪರಿಹರಿಸುವವನಾಗು. ॥೧೧೨॥

॥ ಈಶ್ವರ ಉವಾಚ ॥

ಇತಿ ಸ್ತುತ್ವಾ ತದಾ ಭಿಲ್ಲಃ ಸ್ವಭಿಲ್ಲೈರ್ಭಾರ್ಯಯಾ ತದಾ ।
ಗಣಾಧೀಶೋಽಭವದ್ದೇವಿ ವೈಕುಂಠೋಪರಿಕಲ್ಪಿತೇ ॥೧೦೩॥

ವಿಷ್ಣುಭೋಗಶತಾಧಿಕ್ಯೇ ಲೋಕೇ ವೈ ಸ್ಥಾಪಿತೋ ಮಯಾ ।
ಏತತ್ತೇಽಭಿಹಿತಂ ಗೌರಿ ವೈದ್ಯನಾಥಸ್ಯ ವೈಭವಂ ॥೧೦೪॥

ಯಃ ಶೃಣೋತಿ ಸದಾ ಭಕ್ತ್ಯಾ ಮಮ ಭಕ್ತಿಂ ಲಭೇತ್ಸ ವೈ ।
ಲಿಂಗಮೇತತ್ಸಕೃದ್ದೃಷ್ಟ್ವಾ ಸ್ನಾಪ್ಯ ಗಂಗಾಂಭಸಾ ನರಃ ॥೧೦೫॥

ಕೃತಕೃತ್ಯೋ ಭವೇದ್ಗೌರಿ ಸ ಸಾಕ್ಷಾದ್ಗಣಪೋ ಭವೇತ್ ।
ವೈದ್ಯನಾಥಂ ಮಹಾಲಿಂಗಂ ಸಕೃದ್ದೃಷ್ಟ್ವಾ ವಿಮುಚ್ಯತೇ ॥೧೦೬॥

ಅನಂತೈರಪಿ ಪಾಪೌಘೈಃ ಸದ್ಯ ಏವ ನ ಸಂಶಯಃ ।
ಶೈವಾಶ್ಚ ಸತತಂ ಭಕ್ತ್ಯಾ ಬಿಲ್ವೈರ್ಗಂಗಾಂಭಸಾ ಶಿವೇ ॥೧೦೭॥

ಎಂದು ನನ್ನನ್ನು ಬಹಳವಾಗಿ ಸ್ತುತಿಸಿದ ಆ ಭಿಲ್ಲನಿಗೆ ಗಣಾಧೀಶಪದವಿಯನ್ನು ಕೊಟ್ಟು, ವೈಕುಂಠಕ್ಕಿಂತಲೂ ಹೆಚ್ಚು ಸುಖಕರವಾದ ಸ್ಥಾನವೊಂದನ್ನು ಅನುಗ್ರಹಿಸಿದೆನು. ವೈದ್ಯನಾಥನ ವೈಭವವು ಈ ರೀತಿಯಿರುವುದು, ದೇವಿಯೇ, ಕೇಳು ಎಂದು ಈಶ್ವರನು ಪಾರ್ವತಿಗೆ ವೈದ್ಯನಾಥೇಶ್ವರ ಮಹಿಮೆಯನ್ನು ವಿವರಿಸಿ ಹೇಳಿದನು. ||೧೦೩-೧೦೪||

ಯಾವನು ಈ ವಿಷಯವನ್ನು ಭಕ್ತಿಯಿಂದ ಕೇಳಿ, ಅಂತಹ ಅನನ್ಯ ಸಾಧಾರಣವಾದ ಭಕ್ತಿಯನ್ನು ಸಂಪಾದಿಸುವನೋ, ಮತ್ತು ಈ ವೈದ್ಯನಾಥೇಶ್ವರನ ಸಮೀಪದಲ್ಲಿರುವ ಕೊಳದಲ್ಲಿ ಸ್ನಾನಮಾಡುವನೋ, ಅಂತಹವನು ಸಾಕ್ಷಾದ್ಗಣಾಧೀಶ್ವರನೇ ಆಗುವನು. ಅಲ್ಲದೆ ಈ ವೈದ್ಯನಾಥಲಿಂಗವನ್ನು ಒಂದಾವರ್ತಿ ಭಕ್ತಿಯಿಂದ ದರ್ಶನಮಾಡಿದರೂ ಅವನಿಗೆ ಮುಕ್ತಿಯು ಲಭಿಸುವುದು. ||೧೦೫-೧೦೬||

ಈ ವೈದ್ಯನಾಥೇಶ್ವರ ದರ್ಶನದಿಂದ ಅನಂತವಾದ ಪಾಪರಾಶಿಯೆಲ್ಲಾ ನಿರ್ಮೂಲವಾಗುವುದು. ಸಂಸಾರದ ನಿಜವಾದ ಬಂಧನದಿಂದ ಪಾರಾಗಬೇಕಾದರೆ, ಪ್ರತಿಮಾನವನೂ ಭವಬಂಧವಿಮುಕ್ತಿಗಾಗಿ ಈ ಲಿಂಗವನ್ನು ಗಂಗೋದಕದಿಂದಲೂ ಬಿಲ್ವಪತ್ರಾದಿಗಳಿಂದಲೂ ಅರ್ಚಿಸಬೇಕು. ||೧೦೭||

ತಲ್ಲಿಂಗಂ ಪೂಜಯಂತ್ಯೇವ ಭವಬಂಧ ವಿಮುಕ್ತಯೇ ॥೧೦೮॥

ಲಿಂಗಂ ಮಂಗಲದಂ ಮನೋಜ್ಞಮಮಲಂ ಶ್ರೀವೈದ್ಯನಾಥಾಭಿದಂ
ದೃಷ್ಟ್ವಾ ಸಂಪೂಜ್ಯ ಬಿಲ್ವೈಃ ಸಕೃದಪಿ ಚ ನರಃ ಪ್ರಾಪ್ನುಯಾನ್ಮುಕ್ತಿ
ಕಾಂತಾಂ ।
ತ್ಯಕ್ತ್ವಾ ಪಾಪೌಘತಾಪಂ ಜನಿಮೃತಿಗದಜಾಪಾರದುಃಖೈರ್ವಿಹೀನೋ
ಹೀನೋಽಪಿ ಸ್ಯಾದವಶ್ಯಂ ಭವಶತಜನಿತಂ ಭೂರಿ ಪುಣ್ಯಂ ಲಭೇತ ॥೧೦೯॥

ಇತಿ ಶ್ರೀ ಶಿವರಹಸ್ಯೇ ಭರ್ಗಾಖ್ಯೇ ಪಂಚಮಾಂಶೇ ವನಖಂಡವೈದ್ಯನಾಥ
ಮಾಹಾತ್ಮ್ಯೇ ಭಿಲ್ಲಭಕ್ತಿ ವರ್ಣನಂ ನಾಮ ವಿಂಶೋಽಧ್ಯಾಯಃ

ಈ ವೈದ್ಯನಾಥಲಿಂಗವನ್ನು ಬಿಲ್ವಾದಿಗಳಿಂದ ಪೂಜಿಸಿದವನು, ತನ್ನ ಸಮಸ್ತ ಪಾಪರಾಶಿಯನ್ನೆಲ್ಲಾ ಕಳೆದುಕೊಂಡು ಮುಕ್ತಿಕಾಂತೆಯನ್ನು ಅನಾಯಾಸ ವಾಗಿ ಪಡೆಯುವನು. ಜನನಮರಣದುಃಖಾದಿಗಳಿಂದ ದೂರನಾಗುವನು. ಜಾತ್ಯಾದಿ ಗಳಲ್ಲಿ ಹೀನನಾದವನೂ ಸಹ ನೂರಾರು ಜನ್ಮಗಳಿಂದ ಸಂಪಾದಿಸಲಾಗದ ಸುಕೃತ ವಿಶೇಷವನ್ನು ಅನಾಯಾಸವಾಗಿ ಪಡೆಯುವನು. ಎಂದು ಮಹೇಶ್ವರನು ಪಾರ್ವತಿಗೆ ಬೋಧಿಸಿದುದನ್ನು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಯಹೇಳಿದನು. ॥೧೦೯॥

ಇಲ್ಲಿಗೆ ಶ್ರೀಶಿವರಹಸ್ಯದ ಐದನೆಯ ಅಂಶದಲ್ಲಿ ಇಪ್ಪತ್ತನೆಯ ಅಧ್ಯಾಯವು
ಮುಗಿದುದು.

